# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಪ್ರಭಾಕರ ಹೆಚ್.ಎನ್.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೩-೧೪

ಬಾಹ್ಯ ಗ್ರಂಥ ವಿಲಾಸ
6 ಶ್ರೀ ...

591

# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು
**ಪ್ರಭಾಕರ ಹೆಚ್.ಎನ್.**

ಮಾರ್ಗದರ್ಶಕರು
**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ








ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪-೧೫

# ಪ್ರಮಾಣ ಪತ್ರ

**ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ರಚನೆ ಸ್ವರೂಪ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸಲು **ಡಾ. ವಿರೂಪಾಕ್ಷಿ ಪೂಜಾರಹಳ್ಳಿ**, ಸಹ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 16-01-15
ಸ್ಥಳ : ವಿದ್ಯಾರಣ್ಯ

Prabhakara. H.N.

**ಪ್ರಭಾಕರ ಹೆಚ್.ಎನ್.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ದೃಢೀಕರಣ ಪತ್ರ

ಪ್ರಭಾಕರ ಹೆಚ್.ಎನ್. ಅವರು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪುಠ್ಯಪುಸ್ತಕಗಳ ರಚನೆ ಸ್ವರೂಪ ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 16-1-15
ಸ್ಥಳ : ವಿದ್ಯಾರಣ್ಯ

ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು ಹಾಗೂ
ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಪರಿವಿಡಿ

ಅಧ್ಯಾಯ : ಒಂದು

**ಅಧ್ಯಯನ ಉದ್ದೇಶ, ಈವರೆಗೆ ನಡೆದಿರುವ ಅಧ್ಯಯಗಳ ಸಮೀಕ್ಷೆ, ಮಹತ್ವ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ** ೧ – ೧೪

ಅಧ್ಯಾಯ : ಎರಡು

**ಪಠ್ಯಪುಸ್ತಕದ ಪರಿಕಲ್ಪನೆ ಮತ್ತು ಸ್ವರೂಪ** ೧೫ – ೫೮

**೨.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮ**

೨.೧.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮಗಳ ಕುರಿತ ವಿದ್ವಾಂಸರ ಅಭಿಪ್ರಾಯಗಳು

೨.೧.೨. ಪಠ್ಯಪುಸ್ತಕದ ಅವಶ್ಯಕತೆ ಮತ್ತು ಉಪಯೋಗಗಳು

**೨.೨. ಭಾರತದಲ್ಲಿ ಚರಿತ್ರೆ ಬರವಣಿಗೆಯ ಪರಂಪರೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು**

೨.೨.೧. ಚರಿತ್ರೆ ಪಠ್ಯಪುಸ್ತಕಗಳ ಕುರಿತ ವ್ಯಾಖ್ಯೆಗಳು

೨.೨.೨. ಚರಿತ್ರೆ ಪಠ್ಯಪುಸ್ತಕದ ಗುಣಲಕ್ಷಣಗಳು

೨.೨.೩. ಚರಿತ್ರೆ ಪಠ್ಯಕ್ರಮ ರಚನೆಯ ತತ್ವಗಳು

೨.೨.೪. ಚರಿತ್ರೆ ಪಠ್ಯಕ್ರಮದಲ್ಲಿನ ತೊಡಕುಗಳು

ಅಧ್ಯಾಯ : ಮೂರು

**ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು** ೫೯ – ೯೨

೩.೧. ಪ್ರಾಚೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೩.೨. ಮಧ್ಯಕಾಲೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೩.೩. ಆಧುನಿಕ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೩.೪. ಶಾಲಾ ಪಠ್ಯ ರಚನೆಯ ಉಸ್ತುವಾರಿ ಮತ್ತು ರಾಜಕಾರಣ

ಅಧ್ಯಾಯ : ನಾಲ್ಕು

**ಶಿಕ್ಷಣ ತಜ್ಞರ ಚಿಂತನೆಗಳ ಹಿನ್ನೆಲೆಯಲ್ಲಿ ಚರಿತ್ರೆ ಪಠ್ಯಪುಸ್ತಕ** ೯೩ – ೧೩೭

೪.೧. ಪಾಶ್ಚಿಮಾತ್ಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

೪.೨. ಭಾರತೀಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

೪.೩. ಕರ್ನಾಟಕ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

ಅಧ್ಯಾಯ : ಐದು

**ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪ** ೧೩೮ – ೨೦೧

**೫.೧ ಸ್ವಾತಂತ್ರ್ಯಪೂರ್ವದ ಶೈಕ್ಷಣಿಕ ಬೆಳವಣಿಗೆಯ ಹಿನ್ನೋಟ**

೫.೧.೧. ಮೈಸೂರು ಪ್ರದೇಶ

೫.೧.೨. ಬಾಂಬೆ ಕರ್ನಾಟಕ ಪ್ರಾಂತ್ಯ

೫.೧.೩. ಮದ್ರಾಸ್ ಕರ್ನಾಟಕ ಪ್ರದೇಶ
೫.೧.೪. ಹೈದರಾಬಾದ್ ಕರ್ನಾಟಕ ನಿಜಾಮನ ಆಡಳಿತ ಪ್ರದೇಶ
**೫.೨. ಪಠ್ಯಪುಸ್ತಕಗಳ ರಚನಾ ಸ್ವರೂಪ**
**೫.೩. ಸ್ವಾತಂತ್ರ್ಯಪೂರ್ವದ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯ ಪುಸ್ತಕಗಳ ಸ್ವರೂಪ**
**೫.೪. ಸ್ವಾತಂತ್ರ್ಯೋತ್ತರ ಕರ್ನಾಟಕದ ಪ್ರಾಥಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ**
೫.೪.೧. ಮೂರನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ
೫.೪.೨. ನಾಲ್ಕನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ
**೫.೫. ಸ್ವಾತಂತ್ರ್ಯೋತ್ತರ ಕರ್ನಾಟಕದ ಮಾಧ್ಯಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ**
೫.೫.೧. ೫ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
೫.೫.೨. ೬ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
೫.೫.೩. ೭ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
೫.೫.೪. ೧೯೮೬ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಪಠ್ಯಕ್ರಮ

ಅಧ್ಯಾಯ : ಆರು
**ಕರ್ನಾಟಕದ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳ ರಚನೆ ಸ್ವರೂಪ : ಅವಲೋಕನ** ೨೦೨ – ೨೫೪
೬.೧. ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ
೬.೨. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು
೬.೩. ಚರಿತ್ರೆ ಪಠ್ಯಕ್ಕೆ ಸಂಬಂಧಿಸಿದಂತೆ ಶಿಕ್ಷಕರ ಅನುಭವಗಳು
೬.೪. ಪೋಷಕರ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು
೬.೫. ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರ ಅಭಿಪ್ರಾಯಗಳು

ಅಧ್ಯಾಯ : ಏಳು
**ಸಮಾರೋಪ** ೨೫೫ – ೨೬೬

**ಅನುಬಂಧಗಳು**

೧. **ಪರಾಮರ್ಶನ ಗ್ರಂಥಗಳು** ೨೬೭ – ೨೭೮
೨. **ವಕ್ತೃಗಳ ಮಾಹಿತಿ** ೨೭೯ – ೩೦೪
೩. **ನಕ್ಷೆ ಮತ್ತು ಛಾಯಾಚಿತ್ರಗಳು** ೩೦೫

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಈವರೆಗೆ ನಡೆದಿರುವ ಅಧ್ಯಯನ ಸಮೀಕ್ಷೆ, ಮಹತ್ವ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

### ಪ್ರಸ್ತಾವನೆ

ಚರಿತ್ರೆ ಕೇವಲ ಕಾಲಾನುಕ್ರಮದಲ್ಲಿ ಅಧ್ಯಯನ ಮಾಡುವ ಘಟನಾವಳಿಗಳ ಸಂಗ್ರಹ ಮಾತ್ರವಲ್ಲ! ಅದು ಅತ್ಯಂತ ಪ್ರಾಚೀನವೂ, ವ್ಯಾಪಕವೂ ಆಗಿರುವುದರಿಂದ ಮಾನವನ ಜೀವನ ಮತ್ತು ಸಾಧನೆಗಳನ್ನು ತಿಳಿಸುವ ವಿದ್ವತ್ ಪ್ರಪಂಚದಲ್ಲಿ ಉನ್ನತವಾದ ಸ್ಥಾನವನ್ನು ಪಡೆದುಕೊಂಡಿದೆ. ಚರಿತ್ರೆ ಸಿಂಹಾಸನದಿಂದ ಪ್ರವೇಶಮಾಡಿದರೂ (ಹಿಸ್ಟರೀ ಈಸ್ ಎಂಟರಿ ಫ್ರಾಮ್ ದ ರಾಯಲ್ ಥ್ರೋನ್) ಸಹಾ ಅದು ಮಾನವ ಸಮುದಾಯಕ್ಕೆ ಅಗತ್ಯವಾಗಿ ಬೇಕಾಗಿರುವ ಸಾಮಾಜಿಕ, ನೈತಿಕ, ಆರ್ಥಿಕ, ರಾಜಕೀಯ ಮೌಲ್ಯಗಳನ್ನು ನೀಡಿ ಮಾನವನ ಜ್ಞಾನಾವೃದ್ಧಿಗೆ ಚರಿತ್ರೆ ಸಹಕಾರಿಯಾಗಿದೆ. 'ನಾಗರಿಕತೆಯ ಏಳುಬೀಳಿನ ಕಥೆಯನ್ನು ಮಾತ್ರ ಅಭ್ಯಾಸ ಮಾಡುವುದು ಚರಿತ್ರೆಯ ಗುರಿ ಅಲ್ಲ, ಬದಲಾಗಿ ಅದು ಇಡೀ ಮನುಕುಲದ ಬೆಳವಣಿಗೆ, ವಿಕಾಸ, ಅಭಿವೃದ್ಧಿಯ ಅಧ್ಯಯನ ಮತ್ತು ದಾಖಲೆಯಾಗಿದೆ'. ಅದಕ್ಕಾಗಿಯೇ ಚರಿತ್ರೆಯನ್ನು ಭವಿಷ್ಯತ್ತಿನ ಮಾರ್ಗದರ್ಶಿ, ಸಮಾಜ ವಿಜ್ಞಾನಗಳ ರಾಣಿ ಅಥವಾ ತಾಯಿ ಎಂದು ಕರೆಯಲಾಗುತ್ತದೆ. ಆಧುನಿಕ ಶಿಕ್ಷಣ ಕ್ಷೇತ್ರದಲ್ಲಿ ಚರಿತ್ರೆ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ. ಇಂದಿನ ದಿನಗಳಲ್ಲಿ ಇತಿಹಾಸದ ಅಧ್ಯಯನವು ಮನುಷ್ಯನ ಪರಿಪೂರ್ಣ ಶಿಕ್ಷಣದ ಒಂದು ಅವಿಭಾಜ್ಯ ಅಂಗವೆಂದು ಪರಿಣಿಸಲಾಗಿದ್ದು, ಅದು ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಕರ್ನಾಟಕದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ ಬಹುಪ್ರಾಚೀನವಾದುದು. 'ಕಾವೇರಿಯಿಂದ ಗೋದಾವರಿವರೆಗೆ' ವಿಸ್ತಾರವಾಗಿ ಹರಡಿರುವ ಭೂ-ಭಾಗವನ್ನು ಕವಿರಾಜ ಮಾರ್ಗಕಾರ ಕರುನಾಡು, ಕಪ್ಪು ನಾಡು ಎಂದು ಗುರುತಿಸಿದ್ದಾನೆ. ಇದುವೇ ಕನ್ನಡ ನಾಡು, ಕರ್ನಾಟಕ ಎಂಬುದನ್ನು ಬಹುತೇಕರು ಒಪ್ಪಿಕೊಂಡಿದ್ದಾರೆ. ಇದು ಹಲವು ವೈಶಿಷ್ಟ್ಯತೆಗಳ ತವರುಮನೆಯಾಗಿದೆ. ಇಲ್ಲಿನ ಪಿಕ್ಲಿಹಾಳ್, ಮುದಗಲ್ಲು, ಮಸ್ಕಿ, ಹಂಪಿ, ಆನೆಗೊಂದಿ, ಚಿಕ್ಕರಾಂಪುರ, ಕಡೆಬಾಗಿಲು, ಸಂಗನಕಲ್ಲು, ಕಪ್ಪಗಲ್ಲು, ಬ್ರಹ್ಮಗಿರಿ, ಜಟ್ಟಂಗರಾಮೇಶ್ವರ, ತಲಕಾಡು, ಟಿ. ನರಸೀಪುರ, ರಾಜಘಟ್ಟ, ಮತಿಘಟ್ಟ, ಅಸಗೋಡು ಮೊದಲಾದಡೆ ಪ್ರಾಗೈತಿಹಾಸಿಕ ಕಾಲದ ಮಾನವ ಬದುಕಿ ಬಾಳಿದ ಕುರುಹುಗಳಿವೆ. ಇವುಗಳು ಈ ಭಾಗ ಪ್ರಾಗೈತಿಹಾಸಿಕ ಮಾನವನ ಆವಾಸತಾಣ

ವಾಗಿತ್ತೆಂಬುದರಲ್ಲಿ ಅನುಮಾನವಿಲ್ಲ. ಆದಿ ಇತಿಹಾಸ ಮತ್ತು ಚರಿತ್ರೆಯ ಕಾಲಘಟ್ಟದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ದ್ವಾರಸಮುದ್ರದ ಹೊಯ್ಸಳರು, ಕುಮ್ಮಟದುರ್ಗದ ಅರಸರು, ಕುರುಗೋಡಿನ ಸಿಂಧರು, ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ನೊಳಂಬ, ಕುರಗೋಡು ಸಿಂಧರು, ವಿಜಯನಗರ, ಪಾಳೆಯಗಾರರು ಮೈಸೂರು ಸುಲ್ತಾನರು ಮತ್ತು ಬ್ರಿಟಿಷರು ಮುಂತಾದವರು ಕ್ರಮವಾಗಿ ಇಲ್ಲಿ ಆಳ್ವಿಕೆಮಾಡಿ ತಮ್ಮದೇ ಆದ ಕೊಡುಗೆಗಳನ್ನು ಈ ಭೂ–ಭಾಗಕ್ಕೆ ನೀಡಿದ್ದಾರೆ. ಇಲ್ಲಿ ಆಳ್ವಿಕೆ ಮಾಡಿದ ವಿವಿಧ ಅರಸರು ಹಲವಾರು ಶಾಸನಗಳನ್ನು ಹೊರಡಿಸಿದ್ದಾರೆ. ಅವರು ಹೊರಡಿಸಿದ ಶಾಸನಗಳು ಗತಕಾಲದ ಪರಿಸ್ಥಿತಿ ಅರಿಯಲು ಏಕಮೇವ ಆಧಾರಗಳಾಗಿವೆ. ಹಾಗೆಯೇ ಪ್ರಾಚೀನ ಕಾಲದಿಂದಲೂ ಇಲ್ಲಿ ಆಳ್ವಿಕೆ ಮಾಡಿದ ರಾಜರು ಇಲ್ಲವೇ ಅವರ ಸಾಮಂತರು ಹಲವಾರು ದೇವಾಲಯಗಳನ್ನು ನಿರ್ಮಿಸಿ, ಮುಂದಿನ ಪೀಳಿಗೆಗೆ ಕಲಾ ಕಾಣಿಕೆಗಳಾಗಿ ಬಿಟ್ಟು ಹೋಗಿದ್ದಾರೆ. ಇವುಗಳು ಆ ಕಾಲದ ರಾಜರ ಇಲ್ಲವೆ, ಸಾಮಂತ ಅಧಿಕಾರಿಗಳ ಸೌಂದರ್ಯ ಪ್ರಜ್ಞೆಯ ದ್ಯೋತಕಗಳಾಗಿವೆ. ಒಟ್ಟಿನಲ್ಲಿ ಕರ್ನಾಟಕಕ್ಕೆ ಭಾರತದ ಇತಿಹಾಸದಲ್ಲಿ ತನ್ನದೇ ಆದ ಮಹತ್ವದ ಸ್ಥಾನವಿದೆ. ಇಂಥ ಅರಸರ/ರಾಜಮನೆತನಗಳ ಕೊಡುಗೆಗಳು ಚರಿತ್ರೆಯ ಪಠ್ಯದ ಭಾಗಗಳಾಗಿರುವುದು ಇಲ್ಲಿನ ವಿಶೇಷವಾಗಿದೆ.

ಪಠ್ಯಪುಸ್ತಕವು ಬೋಧನೆ ಮತ್ತು ಕಲಿಕೆ ಪ್ರಕ್ರಿಯೆಯ ಸಾಧನವಾಗಿದೆ. ಪಠ್ಯಮಸ್ತಕವು ಜ್ಞಾನದರ್ಪಣವಾಗಿದ್ದು, ಅದನ್ನು ಸರ್ವೇಸಾಮಾನ್ಯವಾಗಿ ಎಲ್ಲಾ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಬೋಧನೆಯ ಕಲಿಕಾ ಸಾಮಗ್ರಿಯಾಗಿ ಉಪಯೋಗಿಸುತ್ತಾರೆ. ಅದು ಅವರ ಪ್ರಮುಖ ಉಪಕರಣವೂ ಹೌದು. ಪ್ರಾಚೀನ ಕಾಲದ ಶಿಕ್ಷಣ ಪಠ್ಯಕ್ರಮಗಳಾದ ಧಾರ್ಮಿಕ ವಿಧಿಗಳ ಕುರಿತಾದ ವೇದ, ಉಪನಿಷತ್ತುಗಳೊಂದಿಗೆ ದಶಮಾಂಶ ಪದ್ಧತಿ, ಖಗೋಳಶಾಸ್ತ್ರ, ಕ್ಷಾತ್ರವಿದ್ಯೆ, ನೀತಿಶಾಸ್ತ್ರ, ತರ್ಕಶಾಸ್ತ್ರ, ಇತಿಹಾಸ, ಪುರಾಣಗಳು, ಸಂಗೀತ ಮುಂತಾದ ಅರವತ್ತಾನ್ನಾಲ್ಕು ವಿದ್ಯೆಗಳನ್ನು ಕಲಿಸಲಾಗುತ್ತಿತ್ತು. ಅಂತಹ ಪಠ್ಯಕ್ರಮಗಳಲ್ಲಿ ಚರಿತ್ರೆಯ ಪಠ್ಯ ಪುಸ್ತಕವು ಒಂದಾಗಿತ್ತು. ಹಿಂದಿನಿಂದಲೂ ಚರಿತ್ರೆಯನ್ನು ಒಂದು ಪಠ್ಯ ವಿಷಯವಾಗಿ ವಿದ್ಯಾಭ್ಯಾಸ ಮಾಡಿರುತ್ತಾರೆ.

ಶಿಕ್ಷಣ ತಜ್ಞರಾದ ಸಿ.ಪಿ.ಹಿಲ್ ಅವರು ಪಠ್ಯಮಸ್ತಕಗಳೆಂದರೆ 'ಕಂಠಪಾಠಕ್ಕಾಗಿ ಸಂಗತಿಗಳನ್ನು ಸಂಗ್ರಹಿಸುವುದ್ದಕಾಗಿ ಉಪಯೋಗಿಸುವುದಂತಹದಲ್ಲ. ಪಠ್ಯಮಸ್ತಕವೆಂಬುದು ವಿದ್ಯಾರ್ಥಿಗಳಿಗೆ ಅನೇಕ ತೆರನಾದ ವೈವಿಧ್ಯತೆಗಳನ್ನು ಉಪಯೋಗಿಸಬಲ್ಲ ಮೂಲ ಮಾಹಿತಿಯನ್ನು ಒಳಗೊಂಡ ಸಂಗ್ರಹಾಲಯ ಇದ್ದಂತೆ' ಎಂದಿದ್ದಾರೆ.

ಥಾಮಸ್ ಎಡಿಸನ್ ಅವರು 'ಪುಸ್ತಕಗಳು ಮಹಾಬುದ್ಧಿವಂತನು ಮಾನವರಿಗಾಗಿ ಬಿಟ್ಟು ಹೋದ ಉತ್ತರಾಧಿಕಾರಿಗಳಾಗಿವೆ. ಇವು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಸುರಕ್ಷಿತವಾಗಿ ತಲುಪಿಸಲ್ಪಡುತ್ತವೆ' ಎಂದು ತಿಳಿಸಿರುವುದು ಶ್ಲಾಘನೀಯ.

ಈ ಮೇಲಿನ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಪಠ್ಯಮಸ್ತಕವು ಒಂದು ನಿರ್ದಿಷ್ಟ ತರಗತಿಯ ಮಕ್ಕಳಿಗೆ, ನಿರ್ದಿಷ್ಟ ಉದ್ದೇಶಗಳಿಗೆ ಅನುಗುಣವಾಗಿ, ನಿರ್ದಿಷ್ಟ ವಿಷಯಗಳನ್ನು

ಅರ್ಥಬದ್ಧವಾಗಿ, ವ್ಯವಸ್ಥಿತವಾಗಿ ಮತ್ತು ತಾರ್ಕಿಕವಾಗಿ ಜೋಡಿಸಿ ಪರಿಣಿತರು ಎಚ್ಚರಿಕೆಯಿಂದ ತಯಾರಿಸಿದ ಕೃತಿ ಎನ್ನಬಹುದಾಗಿದೆ.

ಇಂದು ಚರಿತ್ರೆ ಪಠ್ಯಪುಸ್ತಕಗಳು ಹೇಗಿರುತ್ತವೆಂಬುದನ್ನು ಹೀಗೆ ನೋಡಬಹುದು. ಸ್ಥಳೀಯ ಚರಿತ್ರೆ, ಹಿಂದುಳಿದ ವರ್ಗ, ಮಹಿಳೆ, ಬುಡಕಟ್ಟು ಸಂಸ್ಕೃತಿ, ಗ್ರಾಮೀಣ ಜನರ ಬದುಕು ಮುಂತಾದ ಅನೇಕ ಅಂಶಗಳು ಅಲಕ್ಷ್ಯಕ್ಕೊಳಗಾಗಿದ್ದು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಎಲ್ಲಿಯೂ ದಾಖಲುಗೊಂಡಿಲ್ಲವೆಂಬುದು ಗೋಚರಿಸುತ್ತದೆ. ಇಂತಹ ಅಲಕ್ಷಿತ ವಿಷಯಗಳನ್ನು ಪ್ರಾಥಮಿಕ ಹಂತದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಸೇರ್ಪಡೆಗೊಳಿಸದಿರಲು ಕಾರಣಗಳೇನಿರಬಹುದು ಎಂಬುದರ ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಒಂದು ವ್ಯವಸ್ಥಿತ ಪಠ್ಯಪುಸ್ತಕಗಳಿರಲಿಲ್ಲ. ಅವು ಒಂದು ಸ್ವರೂಪ ಪಡೆದದ್ದು ಸ್ವಾತಂತ್ರ್ಯ ನಂತರದಲ್ಲಿ. ಹೀಗಾಗಿ ಕ್ರಿ.ಶ. ೧೯೬೪ ರಿಂದ ೨೦೦೯ರವರೆಗೆ ರಚಿತವಾದ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪದ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಈ ಬಗ್ಗೆ ಕರ್ನಾಟಕ ಮತ್ತು ಕನ್ನಡ ಮಾಧ್ಯಮದಲ್ಲಿ ಪಠ್ಯಪುಸ್ತಕದ ಬಗ್ಗೆ ಇಲ್ಲಿಯವರೆಗೂ ಯಾವ ಮಹತ್ವದ ಚಾರಿತ್ರಿಕ ಅಧ್ಯಯನಗಳು ನಡೆದಿಲ್ಲ. ಈ ಕೊರತೆಯನ್ನು ತುಂಬುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ರಾಜ್ಯದಲ್ಲಿ ೨೦೦೯ರವರೆಗೆ ಪ್ರಕಟವಾದ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳಿಗಾಗಿ ರಚನೆಗೊಂಡಿರುವ ಚರಿತ್ರೆ ಪಠ್ಯಪುಸ್ತಕಗಳ ವೈಶಿಷ್ಟ್ಯ, ಲೇಖಕರ ಮನೋಭಾವ, ಅವುಗಳ ಬರವಣಿಗೆಯ ವಿಧಾನ, ಶೈಲಿ, ವಸ್ತುವೈಶಿಷ್ಟ್ಯತೆ ತಜ್ಞರ ಅಭಿಪ್ರಾಯ ಇತ್ಯಾದಿಗಳ ಕುರಿತು ಈ ಅಧ್ಯಯನದಲ್ಲಿ ತಿಳಿಸುವ ಪ್ರಯತ್ನವಿದೆ.

## ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಭಾರತ ಮತ್ತು ಕರ್ನಾಟಕದಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೇ ಅಧ್ಯಯನಗಳು ಇಲ್ಲಿಯವರೆಗೆ ನಡೆದಿವೆ. ಅವುಗಳಲ್ಲಿ ಪ್ರಮುಖವಾದವುಗಳು ಇಂತಿವೆ: ಸಂಜೀವ ಕುಮಾರ (೨೦೦೧) **ಪೂರ್ವ ಪರೀಕ್ಷೆಯಲ್ಲಿ ನಿಯಂತ್ರಿತ ಗುಂಪು ಮತ್ತು ಪ್ರಾಯೋಗಿಕ ಗುಂಪಿನ ತರಗತಿ ವಾತಾವರಣಕ್ಕೆ ಸಂಬಂಧಿಸಿದಂತೆ ಸಮಾಜ ವಿಜ್ಞಾನ ವಿಷಯದಲ್ಲಿ ಮಾಡ್ಯೂಲರ್ ಪಠ್ಯಕ್ರಮದ ಪರಿಣಾಮದ ಬಗ್ಗೆ ಅಧ್ಯಯನ**, ಶ್ರೀನಿವಾಸನ್ ಟಿ. ಮತ್ತು ಅರಿಯದಪ್ಪನ (೨೦೦೨) **ತಮಿಳುನಾಡಿನ ನೀಲಗಿರಿ ಜಿಲ್ಲೆಯ ೮ನೇ ತರಗತಿ ಮಕ್ಕಳ ಸಮಾಜ ವಿಜ್ಞಾನ ಪಠ್ಯಪುಸ್ತಕದ ಆಸಕ್ತಿಯ ಮಟ್ಟವನ್ನು ಅಳೆಯುವ ಒಂದು ಅಧ್ಯಯನ**, ಶ್ರೀವಾಸ್ತವ ಎನ್.ಪಿ. (೧೯೬೯) ಅವರು **ಉತ್ತರ ಪ್ರದೇಶದ ಪ್ರೌಢ ಶಾಲೆಗಳಲ್ಲಿ ಸಾಮಾಜಿಕ ಅಧ್ಯಯನಗಳು ಎಂಬ ಪಠ್ಯಪುಸ್ತಕಗಳ ಕುರಿತು ಅಧ್ಯಯನ ಮಾಡಿದ್ದಾರೆ.** ಗುಪ್ತ ಬಿ.ಪಿ. (೧೯೮೩) ಇವರು **ಹಿಮಾಚಲ ಪ್ರದೇಶದಲ್ಲಿ ಪ್ರೌಢಶಾಲಾ ಹಂತಕ್ಕೆ ವಿಶೇಷವಾಗಿ ಸಂಬಂಧಪಟ್ಟಂತೆ ಸಾಮಾಜಿಕ ಅಧ್ಯಯನ ಪಠ್ಯಕ್ರಮದ ವಿಮರ್ಶಾತ್ಮಕ ಅಧ್ಯಯನ ಮಾಡಿದ್ದಾರೆ.** SaroJ Pandey - 1996- **Contructivism and the Pedagogy of Education for Peace - A Reflection on School Education Curriculum Reform NCF-2005,**

V.K. Sunwani, Ph.D.-2007- **Revisiting School Education in India - National Curriculum Framework-2005(NCERT),** ಬೇಬಿ ಸುನೀತ ಕೆ., (೨೦೦೪), **೭ನೇ ತರಗತಿ ಸಮಾಜ ವಿಜ್ಞಾನ ಸಾಧನೆಯನ್ನು ಉತ್ತಮಪಡಿಸುವಲ್ಲಿ ಅನ್ವೇಷಣಾ ಮಾದರಿ ಬೋಧನೆಯ ಪರಿಣಾಮ ಅಧ್ಯಯನ,** ದಾವಣಗೆರೆ ವಿಶ್ವವಿದ್ಯಾಲಯದ ಶಿಲ್ಪ ಗರಪಟ್ಟಿಯವರು (೨೦೧೨-೧೩) **ಎನ್.ಸಿ.ಎಫ್. ೨೦೦೫ರ ಆಧಾರದ ಮೇಲೆ ರಚಿತವಾದ ೫ನೇ ತರಗತಿಯ ಸಮಾಜ ವಿಜ್ಞಾನ ಪಠ್ಯಪುಸ್ತಕದ ವಿಮರ್ಶಾತ್ಮಕ ಅಧ್ಯಯನ ಮಾಡಿದ್ದಾರೆ.** ಪಿರೇಸ್ ಇ.ವಿ. ಮತ್ತು ಕಟಿಯಾಲ ಕೆ. (೧೯೫೭) ಇವರು ಸಿ.ಐ.ಇ. **ಮೂಲ ಶಾಲೆಗಳಿಗೆ ಸಾಮಾಜಿಕ ಅಭ್ಯಾಸಗಳ ಪಠ್ಯಕ್ರಮದ** ವಿಕಸನದ ಬಗ್ಗೆ **ಅಧ್ಯಯನ ಮಾಡಿದ್ದಾರೆ.** ಗಂಗಯ್ಯ (೧೯೯೩) ಅವರು **ಪ್ರಾಥಮಿಕ ಏಳನೇ ತರಗತಿ ವಿದ್ಯಾರ್ಥಿಗಳಿಗೆ ದೃಕ-ಶ್ರವಣ ಸಾಧನಗಳ ಮೂಲಕ ಸಮಾಜ ವಿಜ್ಞಾನ ಬೋಧನೆಗಳ ಒಂದು ಅಧ್ಯಯನ ವಿಷಯ ಕುರಿತು ಅಧ್ಯಯನ ಮಾಡಿದ್ದಾರೆ.** ರಿಪುಟನ್ನೀಸ್ (೧೯೯೩) ಅವರು **೮ನೇ ತರಗತಿಯಲ್ಲಿ ಹೊಸತಾಗಿ ಅಳವಡಿಸಿರುವ ಸಾಮಾಜಿಕ ಅಧ್ಯಯನಗಳ ಪಠ್ಯಪುಸ್ತಕದ ಬಗ್ಗೆ ಪ್ರೌಢಶಾಲಾ ಅಧ್ಯಾಪಕರುಗಳ ಅಭಿಪ್ರಾಯಗಳ ಒಂದು ಅಧ್ಯಯನ (ಬೆಂಗಳೂರು ನಗರ ಅನುಲಕ್ಷಿಸಿ)** ಎಂಬ ಸಂಶೋಧನಾ ಪ್ರಬಂಧಗಳಲ್ಲಿ ಸಮಾಜವಿಜ್ಞಾನ ಪಠ್ಯಪುಸ್ತಕದಲ್ಲಿ ಚರಿತ್ರೆಯನ್ನೊಳಗೊಂಡಂತೆ ಅಧ್ಯಯನಗಳನ್ನು ಕೈಗೊಂಡಿದ್ದಾರೆ. ಈ ಸಂಶೋಧನಾ ಪ್ರಬಂಧಗಳಲ್ಲಿ ಪಠ್ಯಪುಸ್ತಕಗಳಲ್ಲಿ ಚಾರಿತ್ರಿಕ ಹಿನ್ನೆಲೆಯನ್ನಿಟ್ಟು ಕೊಂಡು ನೋಡುವ ಪ್ರಯತ್ನಗಳು ನಡೆದಿಲ್ಲ.

ಶ್ರೀ ಆರ್.ಎಸ್. ಪಂಚಮುಖಿ, ಶ್ರೀ ಪಿ.ಬಿ. ದೇಸಾಯಿ, ಶ್ರೀ ಸಾಲೆತೊರೆ, ಶ್ರೀ ಜಿ.ಎಸ್. ದಿಕ್ಷೀತ್ ಮತ್ತು ಬಾ.ರಾ. ಗೋಪಾಲ, ಡಾ. ಸೂರ್ಯನಾಥ ಕಾಮತ್, ಡಾ. ಎಸ್. ಚಂದ್ರಶೇಖರ್, ಡಾ. ಎಸ್. ಶೆಟ್ಟರ್, ಡಾ. ಮಹೇಶ್ವರಭಟ್ಟ, ಶ್ರೀ ಓಬಳೇಶ ಘಟ್ಟಿ, ಶ್ರೀ ಎಸ್. ರಾಜಶೇಖರ್, ಶ್ರೀ ರಘುನಾಥ ಭಟ್ಟ ಅವರುಗಳು ಪಠ್ಯಪುಸ್ತಕಗಳ ಬಗ್ಗೆ ನಡೆಸಿರುವ ಚಿಂತನೆಗಳು ಕೂಡ ಇಲ್ಲಿ ಪ್ರಸ್ತುತವಾಗಿವೆ. ಇವುಗಳಲ್ಲದೇ ಅನಸೂಯ ವಿ. ಪರಗಿ, **ಮಾತೃಭಾಷೆ ಕನ್ನಡ, ತತ್ವ ಮತ್ತು ಬೋಧನಾ ಮಾರ್ಗ,** ಅಶೋಕ ಜಿ.ಎಸ್., **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ,** ಓಬಳೇಶ್ವರ ಘಟ್ಟಿ ಆರ್., **ವಿಷಯಾಧಾರಿತ ಬೋಧನಾ ಪದ್ಧತಿ, ಸಮಾಜ ವಿಜ್ಞಾನ,** ಕೊಂಗವಾಡ ಎನ್.ಬಿ. ಅವರ **ಇತಿಹಾಸ ಮತ್ತು ಪೌರನೀತಿ ಬೋಧನೆ** ಮತ್ತು **ಕರ್ನಾಟಕದ ಶೈಕ್ಷಣಿಕ ಇತಿಹಾಸ,** ಗುಡ್ಡಳ್ಳಿ ಎಸ್.ಎಂ., **ಶಿಕ್ಷಣದ ಆಧಾರಗಳು,** ಗೋಪಾಲಕೃಷ್ಣಯ್ಯ ಕೆ.ಎಲ್., **ಇತಿಹಾಸದ ರಾಜಕೀಯ,** ಗೋಪಾಲರಾವ್ ಎಚ್.ಎಸ್., **ಇತಿಹಾಸದ ಪರಾಮರ್ಶೆ,** ಚಂದ್ರಶೇಖರ ಟಿ.ಆರ್., **ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ,** ಜಗನ್ನಾಥರಾವ್ ಡಿ., **ಕರ್ನಾಟಕದಲ್ಲಿ ಶಿಕ್ಷಣದ ಅವಲೋಕನ,** ಜಯಣ್ಣ ಸಿ.ವಿ. ಮತ್ತು ವಿ.ಸಿ. ರುದ್ರಾಣಿ, **ಪಠ್ಯಕ್ರಮ ಕಾರ್ಯಾಚರಣೆ ತತ್ವಗಳು,** ಜಯಣ್ಣ ಸಿ.ವಿ., **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ,** ಜೇವೂರ ಎಸ್.ವಿ., ೧೯೫೨, **ಕರ್ನಾಟಕದ ಶೈಕ್ಷಣಿಕ ಇತಿಹಾಸ,** ದೊಡ್ಡಣ್ಣವರ, **ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ವಿವೇಚಕರು** ಎಂಬ ಕೃತಿಗಳಲ್ಲಿಯೂ ಕೂಡ ಪಠ್ಯಪುಸ್ತಕಗಳನ್ನು ಕುರಿತು ಸಾಕಷ್ಟು ವಿವರವಾಗಿ ಬೆಳಕುಚೆಲ್ಲುವ ಪ್ರಯತ್ನಗಳನ್ನು ಮಾಡಿದ್ದಾರೆ.

ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ **ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ಪಠ್ಯಪುಸ್ತಕಗಳು** ಎನ್ನುವ ಲೇಖನದಲ್ಲಿ ಪಠ್ಯಪುಸ್ತಕಗಳ ಸ್ವರೂಪ ಕುರಿತು ವಿವರಿಸಿದ್ದಾರೆ. ಅದೇ

ರೀತಿ ಡಾ. ಸಿ.ಆರ್. ಗೋವಿಂದರಾಜು ಅವರು **ಚರಿತ್ರೆ ಪಠ್ಯಪುಸ್ತಕ, ಕೇಸರೀಕರಣ ಸಂಶೋಧನೆಗಳು** ಎನ್ನುವ ಲೇಖನದಲ್ಲಿ ಚರಿತ್ರೆ ಪಠ್ಯಗಳು ಹೇಗೆ ಮೂಡಿಬರಬೇಕೆಂಬ ವಿವರವನ್ನು ದಾಖಲಿಸಿದ್ದಾರೆ. ಜೊತೆಗೆ ಸುರೇಶ್ ಭಟ್ ಬಾಕರಬೈಲ್‌ರವರ **ಪ್ರಸಕ್ತ ಶಿಕ್ಷಣ ನೀತಿಯ ಹುಳುಕುಗಳು** ಎನ್ನುವ ಕೃತಿಯಲ್ಲಿ ಪ್ರಸಕ್ತ ಶೈಕ್ಷಣಿಕ ವ್ಯವಸ್ಥೆಯ ಗೊಂದಲಗಳ ಕುರಿತು ಚರ್ಚಿಸಿದ್ದಾರೆ. ಅದೇ ರೀತಿ ಸೋಮಶೇಖರ ಯಡವಟ್ಟಿಯವರ **ಪಠ್ಯಪುಸ್ತಕ ರಚನೆಯ ಬದಲಾವಣೆಯಲ್ಲಿ ಸರ್ಕಾರದ ಮೊಂಡುವಾದ** ಎಂಬ ಲೇಖನದಲ್ಲಿ ಸರ್ಕಾರದ ಪ್ರತಿಷ್ಠೆಗಳು ಪಠ್ಯ ರಚನೆಯ ಹಿಂದೆ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಟಿ.ಎಂ. ಕುಮಾರ್‌ರವರ **ಪಠ್ಯ ರಾಜಕೀಯ** ಎಂಬ ಲೇಖನದಲ್ಲಿ ಸರ್ಕಾರಗಳು ತಮ್ಮ ಧೋರಣೆಗಳನ್ನು ಹೇಗೆ ಪಠ್ಯಪುಸ್ತಕಗಳಲ್ಲಿ ಅಳವಡಿಸಿದ್ದಾರೆ ಎಂಬ ಕುರಿತು ಚರ್ಚಿಸಿದ್ದಾರೆ. ಎಸ್. ಮಂಚಯ್ಯರವರ **ಪ್ರಾಥಮಿಕ ಶಿಕ್ಷಣದಲ್ಲಿ ಪಠ್ಯಪುಸ್ತಕವೇ ಮುಖ್ಯ** ಎಂಬ ಲೇಖನದಲ್ಲಿ ಪಠ್ಯಪುಸ್ತಕದ ಮಹತ್ವದ ಕುರಿತು ವಿಮರ್ಶೆ ಮಾಡಿದ್ದಾರೆ. ಇದಲ್ಲದೇ ವಡ್ಡಗೆರೆ ನಾಗರಾಜಯ್ಯ ಮತ್ತು ಎಸ್.ಎಸ್. ಪ್ರಭಾಕರರವರ **ಮತೀಯ ವಿಷವಿರ್ತುಲದಿಂದ ಮಕ್ಕಳನ್ನು ಕಾಪಾಡಿ,** ಡಾ. ಸಿ.ಎಸ್. ದ್ವಾರಕನಾಥರವರ **ಪ್ರಾಥಮಿಕ ಶಿಕ್ಷಣದಲ್ಲಿ ಕೇಸರೀಕರಣದ ಸ್ಯಾಂಪಲ್** ಮತ್ತು ನಾಗರಾಜ ಕಿರಣಗಿರವರ **ವಿದ್ಯಾರ್ಥಿಗಳಿಗೆ ಕಬ್ಬಿಣದ ಕಡಲೆಯಾದ ಹೊಸ ಪಠ್ಯಪುಸ್ತಕ** ಎಂಬ ಲೇಖನಗಳು ಪಠ್ಯಪುಸ್ತಕಗಳ ದೋಷಗಳ ಬಗ್ಗೆ ಬೆಳಕು ಚೆಲ್ಲಿವೆ. ಡಾ. ಎಚ್.ಡಿ ಪ್ರಶಾಂತ್‌ರವರು **ಈಶಾನ್ಯ ಕರ್ನಾಟಕದಲ್ಲಿ ಶಿಕ್ಷಣ ಮತ್ತು ಸಮಾಜ ಅಧ್ಯಯನ** ಕೈಗೊಂಡು ವಿದ್ಯಾರ್ಥಿಗಳ ಶೈಕ್ಷಣಿಕ ಸ್ಥಿತಿಗತಿಗಳ ಕುರಿತು ಪರೋಕ್ಷವಾಗಿ ವಿಶ್ಲೇಷಿಸಿದ್ದಾರೆ. ಇವರುಗಳಲ್ಲದೆ ನಿಯತಕಾಲಿಕೆಗಳು, ಗ್ರಂಥಗಳು, ಕೆಲ ಬಿಡಿಲೇಖನಗಳು, ವರದಿಗಳು, ಪ್ರಸ್ತುತ ವಿಷಯದ ಕುರಿತು ಪ್ರಕಟವಾಗಿವೆ. ಈ ಮೇಲಿನ ಹೆಸರಿಸಲಾದ ಮತ್ತು ಇಲ್ಲಿ ಉಲ್ಲೇಖಿಸಿದೇ ಇರುವ ಈ ವಿಷಯದ ಕುರಿತಾಗಿ ಅಧ್ಯಯನ ಮಾಡಿದ ಎಲ್ಲ ವಿದ್ವಾಂಸರು ಪ್ರಧಾನವಾಗಿ ಪ್ರಸಕ್ತ ವಿಷಯ ಕುರಿತಂತೆ ಮೌನವಹಿಸಿದ್ದಾರೆ. ಅಲ್ಲದೆ ಇಲ್ಲಿಯವರೆಗೆ ಈ ವಿಷಯದ ಮೇಲೆ ಯಾವುದೇ ಬೆಳಕು ಚೆಲ್ಲುವ ಅಧ್ಯಯನಗಳು ವ್ಯವಸ್ಥಿತವಾಗಿ ನಡೆದಿಲ್ಲ. ಆದ್ದರಿಂದ ಸುದೀರ್ಘ ಮತ್ತು ವ್ಯವಸ್ಥಿತ ಅಧ್ಯಯನದ ಅವಶ್ಯಕತೆ ಇದೆ. ಸಂಶೋಧಕ ಹಾಗೂ ಶಿಕ್ಷಣ ತಜ್ಞ, ಇತಿಹಾಸಕಾರ, ವಿದ್ವಾಂಸರಿಂದ ನಿರ್ಲಕ್ಷ್ಯಕ್ಕೆ ಒಳಗಾದ ಈ ಕ್ಷೇತ್ರದ ಮೇಲೆ ವ್ಯವಸ್ಥಿತ ಅಧ್ಯಯನ ಮಾಡಬೇಕಾದ ತುರ್ತು ಅಗತ್ಯವಿದೆ. ಇಲ್ಲಿನ ಚರಿತ್ರೆ ಪಠ್ಯಪುಸ್ತಕಗಳ ವೈಶಿಷ್ಟತೆ ಏನು? ಅವು ಯಾವ ಯಾವ ವಿಷಯಗಳನ್ನು ಒಳಗೊಂಡಿವೆ. ಅವುಗಳ ಸಾಂಸ್ಕೃತಿಕ ಮಹತ್ವವೇನು? ಇಲ್ಲಿನ ಚರಿತ್ರೆ ಪಠ್ಯಪುಸ್ತಕಗಳ ರಚನೆಯಲ್ಲಿ ಲೇಖಕರು ಅಳವಡಿಸಿಕೊಂಡಿರುವ ಬರವಣಿಗೆ ಕ್ರಮ ಯಾವುದು? ಅವುಗಳ ರಚನೆಯಲ್ಲಿ ಸರ್ಕಾರಗಳು ನಿರ್ವಹಿಸಿದ ಪಾತ್ರವೇನು? ಪಠ್ಯಪುಸ್ತಕಗಳ ರಚನೆಯಲ್ಲಿ ಲೇಖಕರ ಮನೋಸ್ಥಿತಿ ಮತ್ತು ದೃಷ್ಟಿಕೋನ ಯಾವ ಬಗೆಯದು, ಅವುಗಳನ್ನು ಜನರು ಏಕೆ ಮುಖ್ಯವೆಂದು ಪರಿಗಣಿಸುತ್ತಾರೆ ಎನ್ನುವುದನ್ನು ಪರಿಶೀಲಿಸಿ ಸಂಶೋಧನೆಗೆ ಒಳಪಡಿಸಬೇಕಾದ ಅಗತ್ಯತೆ ಇದೆ. ಇದರಿಂದ ಪ್ರಸಕ್ತ ವಿಷಯ ಕುರಿತಂತೆ ಯಾವ ಬಗೆಯಲ್ಲಿ ಚರಿತ್ರೆ ಲೇಖನಶಾಸ್ತ್ರ (ಇತಿಹಾಸ ಬರವಣಿಗೆ ಕ್ರಮ) ಬೆಳವಣಿಗೆಯಾಗಿದೆ ಎನ್ನುವುದನ್ನು ಅರಿಯಲು ಸಹಾಯಕವಾಗುತ್ತದೆ. ಅಲ್ಲದೆ ಮುಂದಿನ ಅಧ್ಯಯನಗಳಿಗೆ ಇದು ಒಂದು ಮಾದರಿಯು ಆಗುತ್ತದೆ. ಆದ್ದರಿಂದ ಈ ಕುರಿತಂತೆ

ವ್ಯವಸ್ಥಿತ ದಾಖಲೆಯ ಅವಶ್ಯಕತೆ ಇದೆ. ಆದರೂ ಸಹ ಈ ಚರಿತ್ರೆಯ ಪಠ್ಯಪುಸ್ತಕಗಳು ಶಾಲಾ ತರಗತಿಗಳಲ್ಲಿ ಪುನರ್ ರಚನೆಯಾದಾಗ ಇಂತಹ ಪಠ್ಯಪುಸ್ತಕದ ಮೇಲೆ ಚರ್ಚೆಗಳು ಏಳುವುದು ಸಾಮಾನ್ಯವಾಗಿದೆ. ಈ ದೃಷ್ಟಿಯಿಂದ ಇದೂವರೆಗೂ ಪುನರ್‌ರಚನೆಗೊಂಡ ಚರಿತ್ರೆ ಪಠ್ಯಪುಸ್ತಕಗಳು ದೋಷಮುಕ್ತವಾಗಲೂ ರಚನಾ ಸಮಿತಿಯ ಸದಸ್ಯರಿಗೆ ಏಕೆ ಸಾಧ್ಯವಾಗುತ್ತಿಲ್ಲ ಎಂಬ ಸವಾಲು ಮತ್ತು ಜವಾಬು ಚರ್ಚೆಯ ಅಂಶವಾಗಿರುವುದು ಮುಖ್ಯವೆನಿಸುತ್ತದೆ.

## ಅಧ್ಯಯನದ ಮಹತ್ವ

ನಾವು ಶಿಕ್ಷಣ ನೀಡುವುದು ಜಡವಸ್ತುವಿಗಲ್ಲ, ಸಚೇತನ ವಸ್ತುವಿಗೆ. ಮಗು ಸಚೇತನ ವಸ್ತು ಮತ್ತು ಚೈತನ್ಯ ಮೂರ್ತಿ. ಈ ಚೈತನ್ಯ ಮೂರ್ತಿಯಾದ ಮಗುವಿಗೆ ತನ್ನ ಉತ್ತಮ ವ್ಯಕ್ತಿತ್ವ ಗುಣ ಶಕ್ತಿಗಳ ಸ್ವಭಾವಕ್ಕೆ ತಕ್ಕಂತೆ ಸಮಾಜ ಒಪ್ಪುವಂತೆ ಉತ್ತಮ ದಿಕ್ಕಿನತ್ತ ಲೋಕ ಪೂಜ್ಯಾ ವ್ಯಕ್ತಿಯಾಗಿ ಸಾಗುವಂತೆ ಸಂಸ್ಕರಿಸಿ ಸಾಣೆ ಹಿಡಿಯುವುದೇ ಶಿಕ್ಷಣ. ಮಗು ಒಂದು ಮಾಂಸದ ಮುದ್ದೆ ಅಥವಾ ಗೋರ್ಕಲ್ಲು. ಇಂತಹ ಆಕಾರವಿಲ್ಲದ, ನಯವಿಲ್ಲದ ವಸ್ತುವನ್ನು ಒಂದು ಗೊತ್ತಾದ ಸಮಾಜದ ನಡವಳಿಕೆಗಳಿಗೆ, ನಿಯಮಗಳಿಗೆ, ಮೌಲ್ಯಗಳಿಗೆ ತಕ್ಕಂತೆ ಹೊಂದಿಕೊಳ್ಳುವಂತೆ ಮಾಡಿ ತನ್ನ ಭವಿಷ್ಯವನ್ನು ರೂಪಿಸುವುದೇ ಶಿಕ್ಷಣ. ಇಂತಹ ಶಿಕ್ಷಣದಲ್ಲಿ ಇಂದು ಮಗುವಿನ ಸರ್ವಾಂಗೀಣ ಅಭಿವೃದ್ಧಿ ಅಡಗಿದೆ. ಇದಕ್ಕೆ ಪಠ್ಯಪುಸ್ತಕ ಒಂದು ವಿಶಿಷ್ಟ ಸಾಧನ(ಟೋಲ್/ವೆಪನ್) ಎಂಬುದು ಗಮನಾರ್ಹ.

ಪ್ರಾಥಮಿಕ, ಮಾಧ್ಯಮಿಕ ತರಗತಿಗಳಲ್ಲಿ ಪಠ್ಯಪುಸ್ತಕಗಳೇ ಶಿಕ್ಷಣ ಎಂಬಂತೆ ಪರಿಭಾವಿಸಿ ಅವುಗಳನ್ನು ಬಳಸಲಾಗುತ್ತದೆ. ಪುಸ್ತಕಗಳಿಲ್ಲದೇ ಶಿಕ್ಷಣ ನಡೆಯುತ್ತಿದ್ದ ಕಾಲವಿತ್ತು. ಅಂದು ಕೇವಲ ಗುರು ಆದಂತಹವನು ತಾನು ತಿಳಿದುಕೊಂಡಿದ್ದ ಜ್ಞಾನವನ್ನು ಮುಂದಿನ ಪೀಳಿಗೆಗೆ ಧಾರೆ ಎರೆಯುತ್ತಿದ್ದನು. ಮುದ್ರಣ ಯಂತ್ರಗಳು ಇನ್ನು ಆವಿಷ್ಕಾರ ಆಗದೆ ಇದ್ದುದ್ದರಿಂದ ಅಂದು ಮರಳಿನ ಮೇಲೆ ಶಿಕ್ಷಣ ಕಲಿಸುತ್ತಿದ್ದರು. ನಂತರದ ದಿನಗಳಲ್ಲಿ ತಾಳೆಗರಿಗಳ ಮೇಲೆ ಬರೆದಿಡುವ ಮತ್ತು ಅವುಗಳನ್ನು ಸಂಗ್ರಹಿಸಿಡುವ ಪದ್ಧತಿ ಇತ್ತು. ಮುದ್ರಣ ಯಂತ್ರ ಬಳಕೆಗೆ ಬಂದ ಮೇಲೆ ಕಾಗದ ಮೇಲೆ ಪ್ರತಿಯೊಂದು ವಿಷಯವನ್ನು ಮುದ್ರಿಸುವ ಪರಿಪಾಠ ಆರಂಭವಾಯಿತು. ಶಿಕ್ಷಣದ ವಿವಿಧ ಹಂತಗಳಿಗೆ ಅವಶ್ಯಕವಾದ ಪಠ್ಯಪುಸ್ತಕಗಳ ಮುದ್ರಣದಲ್ಲಿ ಇದನ್ನು ಅಳವಡಿಸಿಕೊಂಡಿದ್ದರಿಂದ ಹಲವು ಬದಲಾವಣೆಗಳಿಗೆ ಕಾರಣವಾಯಿತು.

'ತಾಯಿಯೇ ಮೊದಲ ಗುರು. ಮನೆಯೇ ಮೊದಲು ಪಾಠ ಶಾಲೆ' ಎಂಬ ಮಾತು ನಿಜ. ವಿದ್ಯೆಯ ಕಲಿಕೆಗೆ ಮಗುವನ್ನು ಮೊದಲು ಅಣಿಗೊಳಿಸುವವಳು ತಾಯಿ. ಮಗುವಿನ ಸರ್ವಾಂಗೀಣ ಅಭಿವೃದ್ಧಿಗೆ ಇವಳು ಸ್ಪಂದಿಸುತ್ತಾಳೆ. ಆದರೆ ವಿದ್ಯೆಯ ಮೂಲಕ ಮಗುವಿನ ಬುದ್ಧಿ-ಭಾವನೆಗಳನ್ನು, ವ್ಯಕ್ತಿತ್ವವನ್ನು ಅವನ ಜ್ಞಾನ ವಲಯವನ್ನು ವಿಸ್ತಾರಗೊಳಿಸುವುದು, ತಿದ್ದಿ ಬೆಳೆಸುವುದು ಗುರುವಿನ ಗುರುತರವಾದ ಜವಾಬ್ದಾರಿಯಾಗಿದೆ. ಆತ ವಿದ್ಯಾರ್ಥಿಗಳಿಗೆ ಬೋಧನೆ/ಕಲಿಕೆಯನ್ನು ಮನನ ಮಾಡಿ ಖಚಿತವಾದ ತಿಳುವಳಿಕೆಯನ್ನು ಕೊಡಬೇಕಾದರೆ ಆ ಗುರುವಿಗೆ ಅತ್ಯಗತ್ಯವಾದದ್ದು ಪಠ್ಯಪುಸ್ತಕ. ಇವು ವಿದ್ಯಾರ್ಥಿಗಳ ನೈಜ ಹಾಗೂ ಮಾನಸಿಕ ಬೆಳವಣಿಗೆಗೆ

ಮತ್ತು ಲೋಕ ಸತ್ಯಗಳನ್ನು ಅರಿಯಲು ಸಹಾಯಕವಾಗುತ್ತದೆ. ಪ್ರಸ್ತುತ ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳ ರಚನೆಯ ಪಾತ್ರ ಮಹತ್ವದ್ದು. ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುವಂತಹ ಪಠ್ಯಕ್ರಮದಲ್ಲಿ ಅಳವಡಿಸುವ ವಿಷಯಗಳನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಎಚ್ಚರಿಕೆ ಅಗತ್ಯ. ರಾಷ್ಟ್ರೀಯತೆ ಮತ್ತು ಏಕತೆಯ ದೃಷ್ಟಿಯ ಚೌಕಟ್ಟಿನಲ್ಲಿ ಪಠ್ಯಪುಸ್ತಕಗಳು ರಚನೆಯಾಗಬೇಕು. ಆದರೆ ನಾವು ಯಾವುದೇ ಒಂದು ಹಂತದಲ್ಲಿ ಪಠ್ಯಪುಸ್ತಕಗಳು ರಚನೆಯಾದರೆ ಸಾಕು ಅವುಗಳಲ್ಲಿ ಇರುವ ಲೋಪದೋಷಗಳ ಬಗ್ಗೆ ಶಿಕ್ಷಕ ವೃಂದ, ವಿದ್ಯಾರ್ಥಿ, ತಜ್ಞ ವಿದ್ವಾಂಸ, ವಿಮರ್ಶಕರು ಹಾಗೂ ಸಾರ್ವಜನಿಕರಿಂದ ಟೀಕೆಗಳು ಬರುವುದು ಸಾಮಾನ್ಯ. ಇವುಗಳಲ್ಲಿ ನಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದಲ್ಲಿ ರಚಿತಗೊಂಡಿರುವ ಚರಿತ್ರೆಯ ಪಠ್ಯಪುಸ್ತಕಗಳೂ ಹೊರತಲ್ಲ. ಇಂತಹ ಪಠ್ಯಪುಸ್ತಕದ ಬದಲಾವಣೆಯ ಬಗ್ಗೆ ಪ್ರತಿದಿನ ಪತ್ರಿಕೆಗಳಲ್ಲಿ ಅನೇಕ ಮಾಹಿತಿಗಳು ಮೂಡಿಬರುತ್ತಿವೆ. ಹಾಗಾದರೆ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಯಾವ ಯಾವ ಅಂಶಗಳನ್ನು ಒಳಗೊಂಡಂತೆ ರಚಿತವಾಗಬೇಕು ಎಂಬ ಹಿನ್ನೆಲೆಯನ್ನು ನೋಡಬೇಕಾದ ಅಗತ್ಯತೆ ಇದೆ. ಇತ್ತೀಚೆಗೆ ಕೇಂದ್ರೀಯ ಹಾಗೂ ರಾಜ್ಯದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗೆ ಚರಿತ್ರೆ ಪಠ್ಯಪುಸ್ತಕಗಳು ರಚನೆಗೊಂಡವು. ಈ ಸಂದರ್ಭದಲ್ಲಿ ಪಠ್ಯಪುಸ್ತಕಗಳು ಕೇಸರೀಕರಣದಿಂದ ಕೂಡಿವೆ ಎನ್ನುವ ಮಾತು ದೇಶದ ಎಲ್ಲೆಡೆ ವಿವಾದಕ್ಕೆ ಎಡೆಮಾಡಿಕೊಟ್ಟಿತು. ದೇಶದ ಅಧಿಕಾರದ ಚುಕ್ಕಾಣಿ ಹಿಡಿದವರೇ ಇದಕ್ಕೆ ಸಮರ್ಥನೆ ಎಂಬಂತೆ ಹಸಿರೀಕರಣ ಮಾಡಬೇಕಾಗಿತ್ತೇ ಎಂದು ವ್ಯಂಗ್ಯವಾಗಿ ನುಡಿದ ಪ್ರಸಂಗಗಳಿವೆ. ಸಂವಿಧಾನದ ಮೂಲ ಆಶಯಗಳನ್ನೇ ಧಿಕ್ಕರಿಸುವ ಇಂಥ ಮಾತುಗಳಿಂದ ಗಣತಂತ್ರ ವ್ಯವಸ್ಥೆಯಲ್ಲಿ ಎಂಥ ಮೌಲ್ಯಗಳನ್ನು ಕಾಯ್ದುಕೊಳ್ಳಲು ಸಾಧ್ಯ ಎಂಬ ಪ್ರಶ್ನೆ ಪ್ರಜ್ಞಾವಂತರಲ್ಲಿ ಕಾಡತೊಡಗಿತು. ತಮ್ಮ ವೈಯಕ್ತಿಕ ಅಥವಾ ಆಡಳಿತದಲ್ಲಿರುವ ಪಕ್ಷಗಳ ಸಿದ್ಧಾಂತಗಳನ್ನು ಮಕ್ಕಳ ಪಠ್ಯಪುಸ್ತಕದೊಳಗೆ ಸೇರಿಸುವುದು ಎಷ್ಟರಮಟ್ಟಿಗೆ ಸರಿ ಎಂಬುದು ಮೂಕ ಪ್ರಶ್ನೆಯಾಗಿ ಉಳಿದುಬಿಡುತ್ತದೆ. ಈ ನೆಲೆಯ ನಿರ್ಣಯಗಳಿಂದ ಮಕ್ಕಳ ಶೈಕ್ಷಣಿಕ ಭವಿಷ್ಯದ ಮೇಲೆ ಆಗುವ ಪರಿಣಾಮಗಳನ್ನು ಅಭ್ಯಸಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ರಾಜ್ಯದ ಪ್ರಾಥಮಿಕ ಶಿಕ್ಷಣ ಇಲಾಖೆ ಪಠ್ಯಪುಸ್ತಕಗಳ ಕುರಿತಾಗಿ ಯಾವ ಆಶಯ, ಗುರಿ, ಉದ್ದೇಶ, ಧೋರಣೆ ಮತ್ತು ನಿಲುವುಗಳನ್ನು ಹೊಂದಿದೆ ಎಂಬುದನ್ನು ತಿಳಿಸುತ್ತದೆ ಈ ಅಧ್ಯಯನ.

ಸರ್ಕಾರವು ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಸಮಾಜ ವಿಜ್ಞಾನದ ಪಠ್ಯಗಳನ್ನು ಸಿದ್ಧಪಡಿಸಲು ಸಮಿತಿಯೊಂದನ್ನು ನೇಮಿಸಿತ್ತು. ಈ ಸಮಿತಿಯ ನೇಮಕಕ್ಕೆ ಸರ್ಕಾರವು ಅನುಸರಿಸಿದ ಅಳತೆಗೋಲು ಯಾವುದು ಎಂಬುದು ಅಸ್ಪಷ್ಟ. ಪ್ರಾಥಮಿಕ ಹಂತದ ಸಮಾಜ ವಿಜ್ಞಾನದ ಪಠ್ಯದಲ್ಲಿಯೇ ಚರಿತ್ರೆಯ ವಿಷಯಗಳು ಅಡಕವಾಗಿರುತ್ತವೆ. ಚರಿತ್ರೆಯ ಅಧ್ಯಯನವು ಶಿಸ್ತು ಪ್ರಧಾನವಾದುದು. ಇಲ್ಲಿ ಎಚ್ಚರದಿಂದ ಮಕ್ಕಳ ಗ್ರಹಿಕೆಯ ಸಾಮರ್ಥ್ಯವನ್ನು ಪರಿಶೀಲಿಸಿ ಚರಿತ್ರೆಯ ಪಠ್ಯಗಳನ್ನು ರೂಪಿಸಬೇಕಿರುತ್ತದೆ. ವೈಜ್ಞಾನಿಕವಾಗಿ ಈ ತರಗತಿಗಳಲ್ಲಿನ ಮಕ್ಕಳ ಮನಸ್ಸನ್ನು ಅಧ್ಯಯನಕ್ಕೆ ಒಳಪಡಿಸಲಾಗಿರುತ್ತದೆ. ಹೆಚ್ಚಿನ ಗೊಂದಲಗಳಿಗಿಂತ ಪಾಠಗಳಲ್ಲಿ ಸರಳತೆ, ಸಾಮರಸ್ಯ

ನಿಖರತೆಗಳು ಅವಶ್ಯಕ. ದಿನನಿತ್ಯದ ತರಗತಿಗಳಲ್ಲಿ ವಿದ್ಯಾರ್ಥಿಗಳೊಂದಿಗೆ ಪ್ರಾಯೋಗಿಕವಾಗಿ ಮುಖಾಮುಖಿ ಆಗುವ ಶಿಕ್ಷಕರ ಪಾತ್ರ ಹಾಗೂ ಜವಾಬ್ದಾರಿಗಳು ಇಲ್ಲಿ ಹೆಚ್ಚಾಗಿರುತ್ತವೆ. ಆದ್ದರಿಂದ ಸದರಿ ಸಮಿತಿಗಳಲ್ಲಿ ಇಂತಹ ಅನುಭವಿ ಶಿಕ್ಷಕರುಗಳನ್ನು ಒಳಗುಮಾಡಿಕೊಳ್ಳಬೇಕಾದ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ.

ಆಂಗ್ಲರಿಂದ ಎರವಲಾಗಿ ಬಂದ ಪಠ್ಯಪುಸ್ತಕದ ಆಧುನಿಕ ವಿಚಾರಗಳು ಶೈಕ್ಷಣಿಕವಾಗಿ ಅನೇಕ ಬಗೆಯ ಪಲ್ಲಟಗಳಿಗೆ ಎಡೆಮಾಡಿಕೊಟ್ಟಿದೆ. ತಮ್ಮ ಆಡಳಿತದ ಅನುಕೂಲಕ್ಕೆ ತಕ್ಕಂತೆ ಗೆಜೆಟಿಯರ್, ವರದಿ, ಪತ್ರ, ದಾಖಲೆ, ಕಡತ ಮತ್ತು ಇತರ ಗ್ರಂಥಗಳನ್ನು ಪ್ರಕಟಿಸಿದ್ದರು. ಆಂಗ್ಲರ ಸಂಪರ್ಕದಿಂದಾಗಿ ಭಾರತೀಯರು ಹೊಸ ರೀತಿಯ ಚರಿತ್ರೆಯನ್ನು ಗ್ರಹಿಸುವ ಕ್ರಮವನ್ನು ಕಲಿಯುಂತಾಯಿತು. ಆಳಲು ಬಂದ ಆಂಗ್ಲ ಅಧಿಕಾರಗಳೇ ನಮ್ಮ ಚರಿತ್ರಕಾರರೂ ಆಗಿದ್ದು ತಮ್ಮದೇ ಆದ ರೀತಿಯಲ್ಲಿ ಭಾರತದ ಚರಿತ್ರೆಯನ್ನು ರಚಿಸಿದ್ದು ಗಮನಾರ್ಹವಾದುದು. ವಾಸ್ತವವಾದುದನ್ನು ತಮಗೆ ತಿಳಿದಂತೆ ತಿರುಚಿ ರಚಿಸಿದ್ದ ಚರಿತ್ರೆಯನ್ನೇ ಇಂದಿಗೂ ಅದನ್ನೇ ಅನುಸರಿಸುವ ಜಾಯಮಾನವಿದೆ. ೧೮೫೭ರ ಘಟನೆಯನ್ನು ಸಾವರ್ಕರ್ ಅವರು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದರೆ, ಆಂಗ್ಲರು ಕೇವಲ ಸಿಪಾಯಿ ದಂಗೆ ಎಂಬುದಕ್ಕೆ ಮಾತ್ರ ಸೀಮಿತಗೊಳಿಸಿದರು. ಅದೇ ರೀತಿ ಶಿವಾಜಿಯನ್ನು ಜಾದುನಾಥ ಸರ್ಕಾರರು ಅಸಾಧಾರಣ ಎಂದು ಕರೆದರೆ, ಬ್ರಿಟಿಷರು ಅವನನ್ನು ಬೆಟ್ಟದ ಇಲಿಯನ್ನಾಗಿ ಗುರುತಿಸಿದರು. ರಾನಾಲ್ಡ್‌ನಂಥ ಆಂಗ್ಲ ಸಂಸ್ಕೃತಿ ವ್ಯಾಮೋಹಿಗಳು ಶಿವಾಜಿಯನ್ನು ಕಳ್ಳರ ಮುಖ್ಯಸ್ಥ ಎಂತಲೇ ಬರೆದದ್ದು ಇದೆ. ಹೀಗೆ ತಮ್ಮ ಹಿತಾಸಕ್ತಿಗಳಿಗಾಗಿ ಚರಿತ್ರೆಯನ್ನು ತಿರುಚುವ ಪರಿಪಾಠ ಬೆಳೆದು ಬಂದಿದೆ. ಈ ರೀತಿ ಶಾಲೆಯಲ್ಲಿ ಚರಿತ್ರೆ ಓದುವ ಮಕ್ಕಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದು ಸಹಜ.

ಬಹು ಸಂಸ್ಕೃತಿ, ಜಾತಿ, ಬುಡಕಟ್ಟುಗಳನ್ನು ಹೊಂದಿರುವ ಭಾರತದಲ್ಲಿ ಮೊದಲಿನಿಂದಲೂ ಏಕಮುಖಿಯಾದ ಚರಿತ್ರೆಯನ್ನು ಅಭ್ಯಾಸ ಮಾಡಲಾಗುತ್ತಿದೆ. ಬಹುಮುಖಿ ನೆಲೆಗಳ ಚರಿತ್ರೆಗಳನ್ನಲ್ಲ. ೨೦ನೆಯ ಶತಮಾನದ ಮೊದಲ ಕಾಲಘಟ್ಟದಿಂದಲೂ ಅನೇಕ ಶೋಷಿತ ತಳಸಮುದಾಯಗಳ ಜನ ಅಲ್ಲಲ್ಲಿ ಶಿಕ್ಷಿತರಾಗತೊಡಗಿದರು. ಹೀಗೆ ಅಕ್ಷರಜ್ಞಾನ ಬಂದಂತೆಲ್ಲಾ ಮೇಲ್ವರ್ಗಗಳು ಸೃಷ್ಟಿಸಿದ್ದ ಚರಿತ್ರೆಯ ಪಠ್ಯಗಳಲ್ಲಿ ದಾಖಲಾಗದ ತಮ್ಮ ನೋವಿನ ಚರಿತ್ರೆಗಳನ್ನು ಹುಡುಕ ಹೊರಟದ್ದು ಗಮನಾರ್ಹವಾದುದು. ಹಿಂದೂ–ಮುಸ್ಲಿಂ ಕೋಮುವಾದವನ್ನೇ ಉಣಬಡಿಸಿದ ಅಂದಿನ ಚರಿತ್ರೆ ಬರಹಗಳಿಂದಾಗಿ ಇಂದಿಗೂ ತಮ್ಮ ಮೇಲೆ ನಡೆದು ಬಂದ ಅತ್ಯಾಚಾರ, ಅನಾಚಾರ, ಕಷ್ಟ-ನಷ್ಟ ನೋವಿನ ಸಂಗತಿಗಳ ಬಗ್ಗೆ ಈ ಸಮುದಾಯಗಳು ತಮ್ಮತನವನ್ನು ಹುಡುಕುವಂತೆ ಜಾಗೃತಿಗೊಂಡಿವೆ. ಈ ಶೂನ್ಯವಾಗಿಸಿದ್ದರ ಬಗ್ಗೆ ಧ್ವನಿಗಳು ಏಳತೊಡಗಿವೆ. ಇಂತಹ ಅಂಶವನ್ನು ಚರಿತ್ರೆಯ ಪಠ್ಯಮುಸ್ತಕಗಳಲ್ಲಿ ಅಳವಡಿಸಬೇಕೆ? ಅಥವಾ ಯಥಾಸ್ಥಿತಿಯನ್ನು ಕಾಯ್ದುಕೊಂಡು ಹೋಗಬೇಕೇ ಎನ್ನುವ ಪ್ರಶ್ನೆಗಳು ತಲೆಯೆತ್ತುತ್ತವೆ.

ಪಾಶ್ಚಾತ್ಯ ಶಿಕ್ಷಣ ಪದ್ಧತಿ ಅಥವಾ ಆಂಗ್ಲರು ಹಾಕಿಕೊಟ್ಟ ಚರಿತ್ರೆಯ ಮಾರ್ಗಗಳನ್ನೇ ಅನುಸರಿಸಿದರೆ ಹಲವು ಬಗೆಯ ತೊಡಕುಗಳಿಗೆ ಸಿಲುಕಬೇಕಾಗುತ್ತದೆ. ಈ ರೀತಿಯ ಕಲಿಕೆ

ಮಕ್ಕಳ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರದೆ ಇರುವುದಿಲ್ಲ. ಚರಿತ್ರೆಯನ್ನು ನಮ್ಮದೇ ಆದ ನೆಲೆಗಳಲ್ಲಿ ಪರಿಶೀಲಿಸಿ ವಿಶ್ಲೇಷಿಸಿ ಪುನರ್‌ರಚಿಸಬೇಕಿದೆ.

ಕರ್ನಾಟಕದಲ್ಲಿ ಖಾಸಗಿಯವರು ವಿವಿಧ ರೀತಿಯ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಾರೆ. ಅದರಲ್ಲೂ ಬಂಡವಾಳಶಾಹಿ ಮಠಮಾನ್ಯಗಳೇ ಶಾಲೆಗಳನ್ನು ನಡೆಸುವುದು ಹೆಚ್ಚು. ಅದೇ ರೀತಿ ಕ್ರೈಸ್ತ ಧರ್ಮದ ಶಾಲೆಗಳು, ಮಹಮದೀಯರ ಮದ್ರಸಾಗಳು, ಆರ್‌ಎಸ್‌ಎಸ್‌ನ ಮನೋಭಾವವನ್ನು ಹೊಂದಿದ ವಿದ್ಯಾಭಾರತಿಯಂತಹ ಸಂಸ್ಥೆಗಳು ನಡೆಸುವ ಸರಸ್ವತಿ ಶಿಶುಮಂದಿರಗಳಿವೆ. ಇಂತಹ ಕೆಲವು ಶಾಲೆಗಳಲ್ಲಿ ಸರ್ಕಾರದಿಂದ ಅನುಮೋದಿತ ಪಠ್ಯಪುಸ್ತಕಗಳನ್ನು ಅನುಸರಿಸಿದರೆ ಇನ್ನೂ ಕೆಲವು ಶಾಲೆಗಳಲ್ಲಿ ಇತರ ಖಾಸಗಿ ಪ್ರಕಾಶನಗಳು ಪ್ರಕಟಿಸಿದ ಸರ್ಕಾರದ ಅನುಮೋದನೆ ಇಲ್ಲದ ಪಠ್ಯಪುಸ್ತಕಗಳನ್ನು ಬಳಸಲಾಗುತ್ತದೆ. ಸರ್ಕಾರದಿಂದ ಅನುಮೋದನೆಗೊಳ್ಳದ ಖಾಸಗಿ ಪ್ರಕಾಶಕರಿಂದ ಮುದ್ರಿತಗೊಂಡ ಅನ್ಯಭಾಷೆಯ ಪಠ್ಯಗಳನ್ನು ಅನುಸರಿಸುವುದು ಎಷ್ಟು ಸರಿ ಎಂಬ ಪ್ರಶ್ನೆಗಳು ನಮ್ಮನ್ನು ಸದಾ ಕಾಡುತ್ತವೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಪ್ರಸ್ತುತ ಕರ್ನಾಟಕ ಸರ್ಕಾರದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪವನ್ನು ತಾತ್ವಿಕ, ಚಾರಿತ್ರಿಕ ಹಾಗೂ ವಿಮರ್ಶಾತ್ಮಕವಾಗಿ ಅಧ್ಯಯನವನ್ನು ಮಾಡುವ ಮಹತ್ವದ ಉದ್ದೇಶವಿದೆ. ಈ ಪಠ್ಯಪುಸ್ತಕಗಳ ಬಗ್ಗೆ ಚರಿತ್ರೆ ಬೋಧಿಸುವ ಶಿಕ್ಷಕರ ಅಭಿಪ್ರಾಯಗಳ ಜೊತೆಗೆ ವಿದ್ಯಾರ್ಥಿಗಳು ಮತ್ತು ಪೋಷಕರ ಅಭಿಪ್ರಾಯವನ್ನು ಸಂಗ್ರಹಿಸಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಶಿಕ್ಷಣ ಪಡೆಯಲು ಪಠ್ಯಪುಸ್ತಕಗಳು ಬಹುಮುಖ್ಯ. ಪಠ್ಯವಿಲ್ಲದ ಶಿಕ್ಷಣ ನಾವಿಕನಿಲ್ಲದ ದೋಣಿ ಇದ್ದಂತೆ. ಅದು ಗೊತ್ತು ಗುರಿ ಇಲ್ಲದೆ ಸಾಗುವ ನಾವೆಯಾಗುತ್ತದೆ. ಈ ಪ್ರಸಕ್ತ ವಿಷಯವನ್ನು ಕುರಿತು ಅಧ್ಯಯನ ಮಾಡಲು ವರದಿಗಳು, ಪ್ರಕಟಿತ ಗ್ರಂಥಗಳು ಮತ್ತು ಲೇಖನಗಳು ಸಹಾಯಕವಾಗಿವೆ. ಚರಿತ್ರೆ ಪಠ್ಯಪುಸ್ತಕಗಳ ಅರ್ಥ ಮತ್ತು ಮಹತ್ವವೇನು? ಅವು ಕಾಲದಿಂದ ಕಾಲಕ್ಕೆ ಯಾವ ಬಗೆಯಲ್ಲಿ ಮೂಡಿಬಂದಿವೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಪಠ್ಯಗಳು ಶಿಕ್ಷಣ ನೀಡುವಲ್ಲಿ ನಿರ್ವಹಿಸಿದ ಪಾತ್ರ ಏನು? ಸರ್ಕಾರದ ಕಾಯ್ದೆಗಳು ಶಿಕ್ಷಣ ರೂಪಿಸುವಲ್ಲಿ ಮತ್ತು ಚರಿತ್ರೆಯ ದಾಖಲೀಕರಣದಲ್ಲಿ ವಹಿಸಿದ ಪಾತ್ರವೇನು? ಪಠ್ಯಗಳ ರಚನೆಯಲ್ಲಿ ಲೇಖಕರ ಮನೋಭಾವನೆ ಏನು? ರಾಷ್ಟ್ರೀಯತೆಯನ್ನು ಮತ್ತು ರಾಷ್ಟ್ರೀಯ ಏಕತೆಯನ್ನು ರೂಪಿಸುವಲ್ಲಿ ಪಠ್ಯಗಳು ಯಾವ ರೀತಿ ಪ್ರಭಾವ ಬೀರಿವೆ? ದೇಶವೊಂದರ ಇತಿಹಾಸ ರಚನೆ/ದಾಖಲೆ ಮತ್ತು ಇತಿಹಾಸ ನಿರ್ಮಾಣದಲ್ಲಿ ಈ ಪಠ್ಯಗಳು ಯಾವ ರೀತಿ ಸಹಾಯಕವಾಗಿವೆ? ಈ ಎಲ್ಲಾ ಅಂಶಗಳನ್ನು ವಿದ್ವಾಂಸರು ಯಾವ ಬಗೆಯಲ್ಲಿ ನೋಡಿದ್ದಾರೆ ಮತ್ತು ಇಲ್ಲಿನ ಶಿಕ್ಷಣ, ಪರಂಪರೆ ಮತ್ತು ಸಂಸ್ಕೃತಿಯ ಸೇರ್ಪಡಿಸುವಿಕೆಯಲ್ಲಾದ ಬದಲಾವಣೆಗಳಲ್ಲಿ ಇವುಗಳ ಪಾತ್ರ ಏನು? ಇಲ್ಲಿನ ಸಮಾಜ ಮತ್ತು ವಿಭಿನ್ನ ಸಮುದಾಯಗಳ ಮೇಲೆ ಅವು ಬೀರಿದ ಪ್ರಭಾವವೇನು? ಮೊದಲಾದವುಗಳ ಕುರಿತು ತಾರ್ಕಿಕವಾಗಿ ವಿಶ್ಲೇಷಿಸಬೇಕಾದ ಅಗತ್ಯತೆ ಇದೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಬಗ್ಗೆ ಈ ಹಿಂದೆ ಇಂತಹ ಯಾವುದೇ ಮಹತ್ತರವಾದ ಸಂಶೋಧನೆಗಳು ನಡೆದಿಲ್ಲ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನ ಮಹತ್ವದ್ದಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದ್ದು, ಅಧ್ಯಯನದ ಉದ್ದೇಶಗಳು ಈ ಮುಂದಿನಂತಿವೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಚರಿತ್ರೆ ಪಠ್ಯಪುಸ್ತಕ ಎಂದರೇನು? ಅದರ ಅರ್ಥ ಮತ್ತು ವ್ಯಾಖ್ಯಾನಗಳೇನು? ಚರಿತ್ರೆ ಪಠ್ಯ ಪುಸ್ತಕದ ಉಪಯೋಗಗಳೇನು? ಚರಿತ್ರೆ ಪಠ್ಯಪುಸ್ತಕದ ಗುಣಲಕ್ಷಣಗಳು ಹಾಗೂ ಮಹತ್ವ ಹಾಗು ಅವುಗಳ ಸ್ವರೂಪವನ್ನು ಗುರುತಿಸುವುದು ಈ ಆಧ್ಯಯನದ ಮುಖ್ಯ ಉದ್ದೇಶವಾಗಿದೆ.

೨. ಭಾರತದಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರಚನೆ, ಪರಿಕಲ್ಪನೆ, ಪ್ರಕ್ರಿಯೆ ಕುರಿತ ಅಧ್ಯಯನ ಮಾಡುವುದಲ್ಲದೆ, ಯಾವ ಕಾಲದಿಂದ ಆರಂಭವಾಯಿತು. ಅದು ಹೇಗೆ ವಿಕಾಸವಾಯಿತೆಂದು ಗುರುತಿಸಬೇಕಾಗಿದೆ. ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಭಾರತ ಕುರಿತು ರಚಿತವಾದ ಪಠ್ಯ ಮತ್ತು ಅವುಗಳ ಮಹತ್ವ ಕುರಿತಂತೆ ದಾಖಲಿಸಿ, ಭಾರತದ ಚರಿತ್ರೆ ರಚನಾಶಾಸ್ತ್ರದ ಬೆಳವಣಿಗೆಯನ್ನು ಕಾಲಾನುಕ್ರಮವಾಗಿ ಅವಲೋಕನ ಮಾಡುವ ಅಗತ್ಯವಿದೆ.

೩. ದೇಶದ ಇತರೆಡೆಯಂತೆ ಕರ್ನಾಟಕದಲ್ಲಿಯೂ ಚರಿತ್ರೆ ಪಠ್ಯ ಪುಸ್ತಕದ ರಚನೆ ಬಹು ಹಿಂದಿನಿಂದಲೂ ನಡೆಯುತ್ತಾ ಬಂದಿದೆ. ರಾಜ್ಯದ ಚರಿತ್ರೆ ಪಠ್ಯಪುಸ್ತಕಗಳ ಚಾರಿತ್ರಿಕ ಹಿನ್ನೆಲೆ ಮತ್ತು ಕಾಲಾನುಕ್ರಮವನ್ನು ಗುರುತಿಸುವುದರೊಂದಿಗೆ ಕರ್ನಾಟಕದ ಚರಿತ್ರೆ ರಚನಾಶಾಸ್ತ್ರದ ಬೆಳವಣಿಗೆಯನ್ನು ಪೂರಕವಾಗಿ ಗುರುತಿಸಬೇಕಾಗಿದೆ.

೪. ಚರಿತ್ರೆ ಪಠ್ಯಪುಸ್ತಕದ ಬಗ್ಗೆ ಶಿಕ್ಷಣ ತಜ್ಞರ ಅನುಭವ, ಚಿಂತನೆಗಳೇನು ಎಂಬುದನ್ನು ಬೆಳಕಿಗೆ ತರಬೇಕಿದೆ.

೫. ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕ ರಚನೆಯ ಸ್ವರೂಪ ಏನು? ಅವು ಯಾವ ಚಿಂತನಾಕ್ರಮದ ತಳಹದಿಯ ಮೇಲೆ ರೂಪಿತವಾಗಿವೆ. ಯಾವ ಮುಖ್ಯ ವಿಷಯಗಳು ಪಠ್ಯಗಳಿಂದ ಕಣ್ಮರೆಯಾಗಿವೆ. ಇದಕ್ಕೆ ಕಾರಣಗಳನ್ನು ಈ ಅಧ್ಯಯನದಲ್ಲಿ ಹುಡುಕಲಾಗುವುದು.

೬. ಪ್ರಸ್ತುತ ಕರ್ನಾಟಕದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ ಕುರಿತು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳ ಆಯ್ದ ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಪೋಷಕರ ಅಭಿಪ್ರಾಯ ಗಳನ್ನು ಕ್ರೂಢೀಕರಿಸಿ ವಿಶ್ಲೇಷಿಸಲಾಗುವುದು. ಇವರು ಯಾವ ಬಗೆಯ ಪಠ್ಯಪುಸ್ತಕಗಳನ್ನು ನಿರೀಕ್ಷಿಸುತ್ತಿದ್ದಾರೆ. ಯಾವ ನಿರ್ಲಕ್ಷಿತ ಕ್ಷೇತ್ರಗಳು ಪಠ್ಯಗಳ ಮುಖ್ಯ ವಸ್ತುಗಳಾಗಬೇಕೆಂದು ಅವರು ಬಯಸುತ್ತಾರೆ ಎನ್ನುವ ವಿವರವನ್ನು ದಾಖಲಿಸಲಾಗುವುದು.

೭. ಪಠ್ಯಪುಸ್ತಕ ರಚನೆಯ ಹಿಂದಿರುವ ದೃಷ್ಟಿ-ಧೋರಣೆಗಳು, ನೀತಿ-ನಿಯಮಗಳು ಮತ್ತು ಆ ಪಠ್ಯದಲ್ಲಿ ನಿರೂಪಿತವಾಗಿರುವ ವಸ್ತುವಿಷಯಗಳು ಏನನ್ನು ಧ್ವನಿಸುತ್ತವೆ. ಅವುಗಳಲ್ಲಿರುವ ಒಳಧ್ವನಿಗಳೇನು ಎಂಬುದನ್ನು ಬೆಳಕಿಗೆ ತರಬೇಕಿದೆ.

೮. ಕರ್ನಾಟಕದಲ್ಲಿ ಸಮಾಜ ವಿಜ್ಞಾನದ ಚರಿತ್ರೆಯ ಪಠ್ಯ ವಿಷಯಗಳಿಗೆ ಸಂಬಂಧಿಸಿದಂತೆ ಚರ್ಚೆ, ವಾದ–ವಿವಾದಗಳು ಎದ್ದಿವೆ. ಗಮನಿಸಬೇಕಾದ ಅಂಶವೇನೆಂದರೆ ಚರಿತ್ರೆ ಸಂಗತಿಗಳು ಮಾತ್ರ ಮೇಲಿಂದ ಮೇಲೆ ವಿವಾದಗಳಿಗೆ ಸಿಲುಕುತ್ತಿರುವುದು. ಆದರೆ ಇದು ಮೊದಲೂ ಅಲ್ಲ, ಕೊನೆಯೂ ಅಲ್ಲ. ಯಾವ ಸಂಗತಿಗಳು ಇಂತಹ ವಾದ–ವಿವಾದಗಳಿಗೆ ಸಿಲುಕುತ್ತಿವೆ ಎಂಬುದನ್ನು ಗುರುತಿಸಲಾಗುವುದು.

೯. ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಅಂತಾರಾಷ್ಟ್ರೀಯ, ರಾಷ್ಟ್ರೀಯ, ರಾಜ್ಯ ಚರಿತ್ರೆ ಸಂಗತಿಗಳನ್ನು ಅಭ್ಯಸಿಸುವುದು ಸಾಮಾನ್ಯವಾದಂತಹ ವಿಷಯವಾಗಿದೆ. ಕರ್ನಾಟಕದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಜನಸಾಮಾನ್ಯರ, ಸ್ಥಳೀಯ ಇತಿಹಾಸವನ್ನು ಈ ಹಂತದಲ್ಲಿ ಅಳವಡಿಸಿಕೊಂಡು ಅಭ್ಯಸಿಸುವ ಅಗತ್ಯತೆ ಏನು ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರವಾಗಿ ಚರ್ಚಿಸುವ ಗುರಿಯಿದೆ.

೧೦. ರಾಷ್ಟ್ರೀಯ ಐಕ್ಯತೆಯ ನೆಪದಲ್ಲಿ ಪ್ರಾಥಮಿಕ/ಮಾಧ್ಯಮಿಕ ಪಠ್ಯಪುಸ್ತಕಗಳಲ್ಲಿ ಸುಳ್ಳುಗಳು ಹೇಗೆ ವೈಭವೀಕರಣವಾಗಿ ಅವು ಚರಿತ್ರೆಯ ಸತ್ಯಗಳಾಗಿ ಮಾರ್ಪಡಬಲ್ಲವು ಎಂಬುದನ್ನು ತಾತ್ವಿಕವಾಗಿ ಚರ್ಚಿಸಲಾಗುವುದು.

೧೧. ಚರಿತ್ರೆಯ ಬರವಣಿಗೆಯ ವಿವಿಧ ವಾದ, ಸಿದ್ಧಾಂತ, ಪಂಥಗಳನ್ನು ಗಮನಿಸಲಾಗುವುದು. ಅವುಗಳ ಚಿಂತನಾಕ್ರಮಗಳು ಪಠ್ಯಪುಸ್ತಕಗಳಲ್ಲಿ ಹೇಗೆ ನುಸುಳಿಕೊಂಡಿವೆ ಮತ್ತು ಯಾವ ಪಂಥಗಳ ಚಿಂತನಾಕ್ರಮಗಳು ಪಠ್ಯಪುಸಕ್ತಗಳಿಂದ ದೂರ ಉಳಿದಿವೆ ಎಂಬುದನ್ನು ಚರ್ಚಿಸಲಾಗುವುದು. ಕೇವಲ ಕೆಲವೇ ಚಿಂತನಾಕ್ರಮಗಳು ಪ್ರಾಬಲ್ಯವಾಗಿ ಇನ್ನು ಕೆಲವು ಹೇಗೆ ನಿರ್ಲಕ್ಷ್ಯಗೊಳಗಾಗಿವೆ ಎನ್ನುವುದನ್ನು ವಿವರಿಸಬೇಕಾಗಿದೆ.

೧೨. ಹದಿನೆಂಟು–ಹತ್ತೊಂಭತ್ತನೆಯ ಶತಮಾನದ ನಂತರ ಚರಿತ್ರೆ ಬರವಣಿಗೆಯಲ್ಲಿ ಹೊಸ ಪರಿಕಲ್ಪನೆ/ಚಿಂತನೆ/ದೃಷ್ಟಿಕೋನಗಳು/ಹೊಸ ಆಲೋಚನಾ ಕ್ರಮಗಳು ಬೆಳವಣಿಗೆಗೆ ಬಂದವು. ಅವುಗಳಲ್ಲಿ ಸಾಮ್ರಾಜ್ಯವಾದ, ವಸಾಹತುವಾದ, ರಾಷ್ಟ್ರೀಯವಾದ, ಉದಾರವಾದ, ಮಾರ್ಕ್ಸ್ ವಾದ, ಪ್ರಜಾಪ್ರಭುತ್ವ, ಪುನರುಜ್ಜೀವನ, ಬಂಡವಾಳವಾದ, ಕೋಮುವಾದ, ಜಾತ್ಯಾತೀತವಾದ ಪ್ರಮುಖವಾದವು. ಈ ಪಂಥಗಳ ದೃಷ್ಟಿಕೋನಗಳು ಪಠ್ಯಪುಸ್ತಕಗಳ ರಚನೆಯಲ್ಲಿ ಹೇಗೆ ಕೆಲಸ ಮಾಡಿವೆ ಎಂಬುದನ್ನು ಗುರುತಿಸಬೇಕಾಗಿದೆ.

೧೩. ಸ್ವಾತಂತ್ರ್ಯ ಬಂದ ನಂತರ ೧೯೬೪ ರಿಂದ ೨೦೦೯ರವರೆಗೆ ಐದು ದಶಕಗಳಲ್ಲಿ ಹೊರಬಂದ ಪಠ್ಯಪುಸ್ತಕಗಳಲ್ಲಿ ಚರಿತ್ರೆಯ ಪಠ್ಯಪುಸ್ತಕಗಳ ಸ್ವರೂಪ, ರಚನೆಯ ಬಗ್ಗೆ ತಿಳಿಯುವ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಪಠ್ಯಪುಸ್ತಕಗಳ ಕುರಿತಾಗಿ ರಚಿತವಾದ ವಿವಿಧ ಆಯೋಗಗಳು, ಸಮಿತಿಗಳು ಶಿಫಾರಸ್ಸುಗಳನ್ನು ಅಧ್ಯಯನ ಮಾಡುವ ಉದ್ದೇಶವಿದೆ.

೧೪. ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರು ಚರಿತ್ರೆ ಪಠ್ಯಪುಸ್ತಕಗಳ ಕುರಿತು ಹೊಂದಿರುವ ಅನುಭವ, ಅಭಿಪ್ರಾಯಗಳನ್ನು ವಿಶ್ಲೇಷಿಸುವ ಉದ್ದೇಶವಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಸ್ವಾತಂತ್ರ್ಯೋತ್ತರದ ಪ್ರಮುಖ ಕಾಲಘಟ್ಟವಾದ ೧೯೬೪ರಿಂದ ೨೦೦೯ರವರೆಗೆ ಹೊರಬಂದ ಪ್ರಾಥಮಿಕ(೧ ರಿಂದ ೪) ಹಾಗೂ ಮಾಧ್ಯಮಿಕ(೫ ರಿಂದ ೭) ತರಗತಿಗಳ ಕನ್ನಡ ಮಾಧ್ಯಮದ ಚರಿತ್ರೆ ಪಠ್ಯಪುಸ್ತಕಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಗೊಳಪಡಿಸಿ ಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಶಿಕ್ಷಣದ ಚರಿತ್ರೆಯ ಪಠ್ಯಪುಸ್ತಕಗಳ ರಚನೆಯ ಸ್ವರೂಪದ ವಿವಿಧ ದೃಷ್ಟಿಕೋನಗಳ ವ್ಯಾಪ್ತಿಯನ್ನು ಹೊಂದಿದೆ. ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟನ್ನು, ವ್ಯಾಪ್ತಿಯನ್ನು ಹೊಂದಿರುತ್ತದೆ. ಅದರಂತೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಕರ್ನಾಟಕ ರಾಜ್ಯದ ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಿಕೊಂಡಿದೆ. ಪ್ರತಿ ಜಿಲ್ಲೆಯಿಂದಲೂ ಮೂರು ತಾಲ್ಲೂಕುಗಳನ್ನು ಆಯ್ದುಕೊಳ್ಳಲಾಗಿದೆ. ಪ್ರತಿ ತಾಲ್ಲೂಕಿನಿಂದ ೫ ಶಾಲೆಗಳಂತೆ ಮೂರು ಜಿಲ್ಲೆಗಳ ೪೫ ಶಾಲೆಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಗೊಳಪಡಿಸಲಾಗಿದೆ.

## ಅಧ್ಯಯನ ವಿಧಾನ

ಈ ಅಧ್ಯಯನದಲ್ಲಿ ೧೯೪೬ ರಿಂದ ೨೦೦೯ರವರೆಗೆ ಬಂದಿರುವ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳನ್ನು ಆಧಾರವಾಗಿರಿಸಿಕೊಂಡು ಅವುಗಳ ಸ್ವರೂಪವನ್ನು ಅರಿಯುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನವನ್ನು ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸಲಾಗಿದ್ದು, ಇಲ್ಲಿ ಸಂದರ್ಶನ ವಿಧಾನ, ಚಾರಿತ್ರಿಕ ವಿಧಾನ, ಸಂಖ್ಯಾಶಾಸ್ತ್ರೀಯ ವಿಧಾನ, ಸಹಭಾಗಿತ್ವ ವಿಧಾನಗಳನ್ನು ಅನುಸರಿಸಲಾಗಿದೆ.

### (ಅ) ಚಾರಿತ್ರಿಕ ವಿಧಾನ

ಚರಿತ್ರೆ ಪಠ್ಯಪುಸ್ತಕಗಳ ಮೂಲ ತಿಳಿಯುವ ಉದ್ದೇಶದಿಂದ ಅವುಗಳು ವಸಾಹತುಶಾಹಿ ಆಡಳಿತ ಕಾಲದಿಂದ ಪ್ರಸ್ತುತದವರೆಗೂ ಚರಿತ್ರೆಯನ್ನು ಪ್ರತಿಬಿಂಬಿಸುವ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು, ವಿವಿಧ ಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನಗಳು ಮುಂತಾದವುಗಳಿಂದ ಮಾಹಿತಿ ಸಂಗ್ರಹಿಸಿಕೊಂಡು ಚಾರಿತ್ರಿಕ ವಿಧಾನದ ಮೂಲಕ ವಿಶ್ಲೇಷಿಸಲಾಗುವುದು.

### (ಆ) ಸಂದರ್ಶನ ವಿಧಾನ

ಕ್ಷೇತ್ರಕಾರ್ಯದಲ್ಲಿ ಪ್ರಶ್ನಾವಳಿಯ ಮೂಲಕ ಸಿದ್ಧಪಡಿಸಿಕೊಂಡು ಬಳ್ಳಾರಿ, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಯೊಳಗಿನ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು, ಚರಿತ್ರೆಯನ್ನು ಬೋಧಿಸುವ ಶಿಕ್ಷಕರು ಹಾಗೂ ವಿದ್ಯಾರ್ಥಿಗಳ ಪೋಷಕರನ್ನು ಸಮೀಕ್ಷೆಗೆ ಒಳಪಡಿಸಿ ಮಾಹಿತಿಯನ್ನು ಕ್ರೋಢೀಕರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

### (ಇ) ಸಂಖ್ಯಾಶಾಸ್ತ್ರೀಯ ವಿಧಾನ

ಜನಗಣತಿ ವರದಿ, ಶಿಕ್ಷಣ ಇಲಾಖೆ ಹಾಗೂ ಶೈಕ್ಷಣಿಕ ಪತ್ರಿಕೆಗಳಲ್ಲಿ ನೀಡಿದ ಅಂಕಿಅಂಶಗಳು, ಕರ್ನಾಟಕ ಗೆಜಿಟಿಯರ್ ಹಾಗೂ ಸಂದರ್ಶನದಲ್ಲಿ ದೊರೆತ ಮಾಹಿತಿಗಳನ್ನು ಸಂಖ್ಯಾಶಾಸ್ತ್ರೀಯ ವಿಧಾನದಲ್ಲಿ ವಿಶ್ಲೇಷಿಸಲಾಗುವುದು.

**(ಈ) ಸಹಭಾಗಿತ್ವ ವಿಧಾನ**

ಕರ್ನಾಟಕದಲ್ಲಿ ಸರ್ಕಾರಿ ಕನ್ನಡ ಮಾಧ್ಯಮ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳನ್ನು ಕೇಂದ್ರವಾಗಿರಿಸಿಕೊಂಡು, ಇನ್ನುಳಿದಂತೆ ಖಾಸಗಿ ಶಾಲೆಗಳನ್ನು ಪೂರಕವಾಗಿರಿಸಿಕೊಂಡು ಆ ಶಾಲೆಗಳಲ್ಲಿ ಕಾರ್ಯನಿರ್ವಹಿಸುವ ಶಿಕ್ಷಕರ ಚರಿತ್ರೆ ಕುರಿತಾದ ಬೋಧನೆ, ವಿದ್ಯಾರ್ಥಿಗಳ ಕಲಿಕಾ ಕ್ರಮ ಇತ್ಯಾದಿಗಳನ್ನು ಅರಿಯಲು ನೇರವಾಗಿ ತರಗತಿಗಳಲ್ಲಿ ಪಾಲ್ಗೊಂಡು ಅವಲೋಕಿಸುವುದರೊಂದಿಗೆ ಅಲ್ಲಿ ದೊರೆತ ಮಾಹಿತಿಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ಅಧ್ಯಯನದ ಅನುಕೂಲತೆಯ ಚೌಕಟ್ಟಿನಲ್ಲಿ ಪ್ರಸ್ತುತ ಸಂಶೋಧನಾ ಮಹಾಪ್ರಬಂಧವನ್ನು ೭ ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮತ್ತು ಅಧ್ಯಯನ ಮಹತ್ವ, ವ್ಯಾಪ್ತಿ, ಅಧ್ಯಯನದ ಸ್ವರೂಪ ಮತ್ತು ವಿಧಾನವನ್ನು ವಿವರಿಸಲಾಗಿದೆ.

ಚರಿತ್ರೆ ಪಠ್ಯಪುಸ್ತಕದ ಸ್ವರೂಪ ಎರಡನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. ಪಠ್ಯಪುಸ್ತಕ ಮತ್ತು ಪಠ್ಯಕ್ರಮಗಳ ಕುರಿತು ವಿದ್ವಾಂಸರ ಅಭಿಪ್ರಾಯಗಳು, ಪಠ್ಯ ಪುಸ್ತಕದ ಅವಶ್ಯಕತೆ ಮತ್ತು ಉಪಯೋಗಗಳು, ಭಾರತದಲ್ಲಿ ಚರಿತ್ರೆ ಬರವಣಿಗೆಯ ಪರಂಪರೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು, ಚರಿತ್ರೆ ಪಠ್ಯಪುಸ್ತಕಗಳ ಕುರಿತ ವ್ಯಾಖ್ಯೆಗಳು, ಚರಿತ್ರೆ ಪಠ್ಯಪುಸ್ತಕದ ಗುಣಲಕ್ಷಣಗಳು, ಚರಿತ್ರೆ ಪಠ್ಯಕ್ರಮ ರಚನೆಯ ಹಿಂದಿರುವ ತತ್ವಗಳು, ಚರಿತ್ರೆ ಪಠ್ಯಕ್ರಮದಲ್ಲಿನ ತೊಡಕುಗಳ ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳ ಕುರಿತು ವಿವರಿಸಲಾಗಿದೆ. ಇದರಲ್ಲಿ ಪ್ರಾಚೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯ ಪುಸ್ತಕಗಳು, ಮಧ್ಯಕಾಲೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು, ಆಧುನಿಕ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು, ಶಾಲಾ ಪಠ್ಯರಚನೆಯ ಉಸ್ತುವಾರಿ ಮತ್ತು ರಾಜಕಾರಣ ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಶಿಕ್ಷಣತಜ್ಞರ ಚಿಂತನೆಗಳ ಹಿನ್ನೆಲೆಯಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಎಂದಿದ್ದು ಇದರಲ್ಲಿ ಪಾಶ್ಚಿಮಾತ್ಯ ಶಿಕ್ಷಣತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕಗಳು, ಭಾರತೀಯ ಹಾಗೂ ಕರ್ನಾಟಕದ ಶಿಕ್ಷಣತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪ ಅಧ್ಯಾಯ ಐದರಲ್ಲಿ ತಿಳಿಸಲಾಗಿದೆ. ಇದರಲ್ಲಿ ಚರಿತ್ರೆ ಪಠ್ಯಪುಸ್ತಕಗಳಿಗೆ ಪೂರಕವಾಗಿ ಸ್ವಾತಂತ್ರ್ಯಪೂರ್ವದ ಶೈಕ್ಷಣಿಕ ಬೆಳವಣಿಗೆಯ ಹಿನ್ನೋಟದಲ್ಲಿ ಕರ್ನಾಟಕದ ಎಲ್ಲಾ ಭಾಗಗಳನ್ನು ನೋಡಲಾಗಿದೆ. ಅದರಲ್ಲಿ ಮೈಸೂರು ಪ್ರದೇಶ, ಬಾಂಬೆ ಕರ್ನಾಟಕ ಪ್ರಾಂತ್ಯ, ಮದ್ರಾಸ್ ಕರ್ನಾಟಕ ಪ್ರದೇಶ, ಹೈದರಾಬಾದ್ ಕರ್ನಾಟಕ ಪಠ್ಯಪುಸ್ತಕಗಳ ರಚನಾ ಸ್ವರೂಪವನ್ನು ಅವಲೋಕಿಸಲಾಗಿದೆ. ಹಾಗೆಯೇ ಸ್ವಾತಂತ್ರ್ಯಪೂರ್ವದ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ

ಸ್ವರೂಪ, ಸ್ವಾತಂತ್ರ್ಯೋತ್ತರ ಕರ್ನಾಟಕದ ಪ್ರಾಥಮಿಕ ಶಾಲೆಗಳ ಚರಿತ್ರೆ ಪಠ್ಯ ಪುಸ್ತಕಗಳ ಸ್ವರೂಪ, ಮೂರನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ, ನಾಲ್ಕನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ, ಸ್ವಾತಂತ್ರ್ಯೋತ್ತರ ಕರ್ನಾಟಕದ ಮಾಧ್ಯಮಿಕ ಶಾಲೆಗಳ ಚರಿತ್ರೆ ಪಠ್ಯ ಪುಸ್ತಕಗಳ ಸ್ವರೂಪ ಎಂದಿದೆ. ಇದರಲ್ಲಿ, ೫ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು, ೬ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು, ೭ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು, ೧೯೮೬ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಪಠ್ಯಕ್ರಮಗಳ ಕುರಿತು ಹೇಳಲಾಗಿದೆ. ೨೦೦೨ರ ನಂತರ ಬಂದ ಚರಿತ್ರೆ ಪಠ್ಯಪುಸ್ತಕಗಳ ಬದಲಾವಣೆಯ ಸ್ವರೂಪವನ್ನು ವಿವರಿಸಿದೆ. ಇದಲ್ಲದೆ ೨೦೦೫ರ ಎನ್.ಸಿ.ಎಫ್‌ನ ಆಶಯದಂತೆ ಹೊರಬಂದ ಪಠ್ಯಪುಸ್ತಕಗಳ ಸ್ವರೂಪವನ್ನು ವಿಶ್ಲೇಷಿಸಲಾಗಿದೆ. ಪಠ್ಯಸೂಚಿ ಮತ್ತು ಪಠ್ಯಪುಸ್ತಕಗಳ ನಡುವಿನ ವ್ಯತ್ಯಾಸಗಳನ್ನು ಸಹ ಗುರುತಿಸಲಾಗಿದೆ.

ಅಧ್ಯಾಯ ಆರರಲ್ಲಿ ಕರ್ನಾಟಕದ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳ ಅವಲೋಕನ ಮಾಡಲಾಗಿದೆ. ಇದರಲ್ಲಿ ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆಯೊಂದಿಗೆ ಚರಿತ್ರೆ ಪಠ್ಯಕ್ಕೆ ಸಂಬಂಧಿಸಿದಂತೆ ಶಿಕ್ಷಕರ ಅನಿಸಿಕೆಗಳು, ವಿದ್ಯಾರ್ಥಿ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯ ಪುಸ್ತಕಗಳು, ಪಾಲಕರ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು, ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರ ಅಭಿಪ್ರಾಯಗಳನ್ನು ಕುರಿತು ಚರ್ಚಿಸಲಾಗಿದೆ.

ಕೊನೆಯದಾಗಿ ಅಧ್ಯಾಯ ಏಳರಲ್ಲಿ ಸಮಾರೋಪವಿದೆ. ಸಮಾರೋಪದ ಅಧ್ಯಾಯದಲ್ಲಿ ಕಂಡುಕೊಂಡ ಫಲಿತಗಳನ್ನು ಚರ್ಚಿಸುವುದರೊಂದಿಗೆ ಅಧ್ಯಯನದ ಮಿತಿಗಳನ್ನು ಸಲಹೆ-ಸೂಚನೆಗಳೊಂದಿಗೆ ವಿಶ್ಲೇಷಿಸಲಾಗಿದೆ. ಅನುಬಂಧದಲ್ಲಿ ವಕ್ತೃಗಳ ಮಾಹಿತಿ, ಪರಾಮರ್ಶನ ಗ್ರಂಥಗಳು, ನಕ್ಷೆಗಳು ಮತ್ತು ಛಾಯಾಚಿತ್ರಗಳಿವೆ.

□□

ಅಧ್ಯಾಯ : ಎರಡು

# ಪಠ್ಯಪುಸ್ತಕದ ಪರಿಕಲ್ಪನೆ ಮತ್ತು ಸ್ವರೂಪ

---

೨.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮ-ತಾತ್ವಿಕ ಚಿಂತನೆ

೨.೧.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮಗಳ ಕುರಿತ ವಿದ್ವಾಂಸರ ಚಿಂತನೆ ಮತ್ತು ವ್ಯಾಖ್ಯಾನಗಳು

೨.೧.೨. ಪಠ್ಯಪುಸ್ತಕದ ಅವಶ್ಯಕತೆ ಮತ್ತು ಉಪಯೋಗಗಳು

೨.೨. ಭಾರತದಲ್ಲಿ ಚರಿತ್ರೆ ಬರವಣಿಗೆಯ ಪರಂಪರೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೨.೨.೧. ಚರಿತ್ರೆ ಪಠ್ಯಪುಸ್ತಕಗಳ ಕುರಿತ ವ್ಯಾಖ್ಯೆಗಳು

೨.೨.೨. ಚರಿತ್ರೆ ಪಠ್ಯಪುಸ್ತಕದ ಗುಣಲಕ್ಷಣಗಳು

೨.೨.೩. ಚರಿತ್ರೆ ಪಠ್ಯಕ್ರಮ ರಚನೆಯ ತತ್ವಗಳು

೨.೨.೪. ಚರಿತ್ರೆ ಪಠ್ಯಕ್ರಮದಲ್ಲಿನ ತೊಡಕುಗಳು

ಅಧ್ಯಾಯ : ಎರಡು

# ಪಠ್ಯಪುಸ್ತಕದ ಪರಿಕಲ್ಪನೆ ಮತ್ತು ಸ್ವರೂಪ

**ಮಾ**ನವನ ಉಗಮದೊಂದಿಗೆ ಬರಹ ಹುಟ್ಟಿಕೊಳ್ಳಲಿಲ್ಲ, ಅದು ಸ್ಪಷ್ಟ ಸ್ವರೂಪ ಪಡೆದುಕೊಳ್ಳಲು ಲಕ್ಷಾಂತರ ವರ್ಷಗಳೇ ಬೇಕಾದವು. ಲಿಪಿ ಹುಟ್ಟುವ ಮೊದಲು ಸಂಕೇತಗಳು, ಸಂಜ್ಞೆ ಮತ್ತು ಚಿತ್ರ ಲಿಪಿಗಳು ತಮ್ಮ ಅಸ್ತಿತ್ವವನ್ನು ಪಡೆದುಕೊಂಡವು. ಇದೇ ಬರಹಕ್ಕೆ ಮೂಲ ರೂಪವಾಯಿತು. ಈ ರೀತಿಯ ಸಂಕೇತಗಳು, ಸಂಜ್ಞೆ ಮತ್ತು ಚಿತ್ರಲಿಪಿಗಳು ಮುಂದೆ ಬರಹ ರೂಪವನ್ನು ಪಡೆದುಕೊಂಡವು. ಪ್ರಾಚೀನ ಕಾಲದಲ್ಲಿ ಮನುಷ್ಯ ತನಗೆ ತಿಳಿದಿರುವ ವಿಷಯವನ್ನು ಇತರರಿಗೆ ತಿಳಿಯಪಡಿಸಲು ಬಾಯಿಂದ ಕಿವಿಗೆ ತಲುಪಿಸುತ್ತಿದ್ದ. ಆದರೆ ಮಾನವನ ನೆನಪಿನ ಶಕ್ತಿ ನಿರಂತರವಲ್ಲ ಎಂಬುದನ್ನು ಅರಿತ ಅವನು ತನ್ನ ಗಮನಕ್ಕೆ ಬಂದ ವಿದ್ಯಮಾನಗಳ ಬಗ್ಗೆ ಹಾಗೂ ಮುಂದಿನ ತಲೆಮಾರಿಗೆ ಅದರ ಉಪಯೋಗವಾಗಬೇಕೆಂಬ ಬಯಕೆಯಿಂದ ಮಾಹಿತಿಯನ್ನು ಸಂಗ್ರಹಿಸಿ ಸಂರಕ್ಷಿಸತೊಡಗಿದ. ಈ ಸಂರಕ್ಷಣೆಯೇ ಬರಹದ ಉಗಮವೆಂದು ಹೇಳಬಹುದು. ಇದೇ ಪುಸ್ತಕಗಳ ಉಗಮಕ್ಕೂ ನಾಂದಿಯಾಯಿತು. ಮಾನವಕುಲದ ಏಳ್ಗೆಗಾಗಿ ಜನ್ಮತಾಳಿದ ಪುಸ್ತಕ ಕೊನೆಯವರೆಗೂ ತಾನು ಸೃಷ್ಟಿಗೊಂಡ ಧ್ಯೇಯಕ್ಕಾಗಿ ಕಾರ್ಯನಿರ್ವಹಿಸುತ್ತಿವೆ. ಪುಸ್ತಕದ ನೆರವಿನಿಂದ ನಮ್ಮ ಬುದ್ಧಿ ಬೆಳಗಬೇಕು, ಜೀವನ ಸೌಂದರ್ಯ ಹೆಚ್ಚಾಗಬೇಕು. ಅದರ ಪ್ರಯೋಜನ ಹೆಚ್ಚಾಗಿ ದೊರೆಯುವಂತೆ ಮಾಡುವ ಕೆಲಸ ಮಾತ್ರ ಮಾನವ ಜನಾಂಗದ್ದು. "ಅತಿ ಹೆಚ್ಚು ಜನರು ತನ್ನ ಲಾಭವನ್ನು ಪಡೆದುಕೊಳ್ಳಬೇಕೆಂಬುದೇ ಪ್ರತಿ ಪುಸ್ತಕದ ಆಂತರಿಕ ಬಯಕೆಯಾಗಿರುತ್ತದೆ" ಎಂದು ಡಾ. ಎಸ್.ಆರ್. ರಂಗನಾಥ್‌ರವರು ಹೇಳಿರುವುದು ಇಲ್ಲಿ ಸೂಕ್ತವೆನಿಸುತ್ತದೆ.

ಭಾರತದಲ್ಲಿ ವೇದಗಳ ಕಾಲದ ಶಿಕ್ಷಣವನ್ನು ಪ್ರಾಚೀನವೆಂದು, ಮಹಮ್ಮದೀಯರ ಶಿಕ್ಷಣವನ್ನು ಮಧ್ಯಕಾಲೀನವೆಂದು ಮತ್ತು ಆಂಗ್ಲರ ಕ್ರಿಶ್ಚಿಯನ್ ಶಿಕ್ಷಣ ವ್ಯವಸ್ಥೆಯನ್ನು ಆಧುನಿಕವೆಂದು ಕರೆಯಲಾಗಿತ್ತು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ ರೂಪುಗೊಂಡ ಶಿಕ್ಷಣವನ್ನು ಆಧುನಿಕ ಎಂದು ಕರೆಯಲಾಗಿದೆ. ಆಶ್ರಮ ಶಿಕ್ಷಣ ಪದ್ಧತಿ ಕೊನೆಗೊಂಡು ಆಧುನಿಕ ಶಿಕ್ಷಣ ಪದ್ಧತಿ ಆರಂಭವಾದ ಮೇಲೆ ಶೈಕ್ಷಣಿಕವಾಗಿ ಸಾಕಷ್ಟು ಪ್ರಗತಿಯನ್ನು ಸಾಧಿಸಲಾಗಿದೆ. ಈ ಪ್ರಗತಿಯಲ್ಲಿ ಪಠ್ಯ ಪುಸ್ತಕಗಳು ತನ್ನದೇ ಆದ ಪಾತ್ರ ನಿರ್ವಹಿಸಿವೆ. ಚರಿತ್ರೆ ಪಠ್ಯಗಳು ಪ್ರಾಚೀನ ಕಾಲದಿಂದಲೂ ಸಮಾಜ ಬದಲಾದಂತೆಲ್ಲಾ ಪುಸ್ತಕ ತನ್ನ ಆಯಾಮ ಮತ್ತು ಆಕಾರಗಳನ್ನು

ಬದಲಿಸುತ್ತ ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತಾ ಬಂದಿವೆ. ಪ್ರಾಚೀನ ಶಿಲಾಶಾಸನಗಳಿಂದ ಪ್ರಾರಂಭವಾದ ಪಠ್ಯದ ಪರಿಕಲ್ಪನೆ ನಂತರ ಹಲವಾರು ರೂಪಗಳನ್ನು ತಾಳಿ ಈಗ ಬರವಣಿಗೆ ಕಾಗದಕ್ಕೆ ಬಂದು ನಿಂತು ಮೈಕ್ರೋ ಫಿಲ್ಮ್, ಮೈಕ್ರೋ ಕಾರ್ಡ್‌ಗಳಲ್ಲಿ ಮುಂದುವರಿದಿವೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕಗಳೆಂದರೆ ಏನು? ಅವುಗಳಿಗೆ ಯಾವ ಯಾವ ಅರ್ಥಗಳಿವೆ. ಅವು ಶಿಕ್ಷಣ ಪದ್ಧತಿಯ ಬೆಳವಣಿಗೆಗೆ ಹೇಗೆ ಕಾರಣವಾಗಿವೆ. ಅವುಗಳ ಕುರಿತು ಇರುವ ವ್ಯಾಖ್ಯಾನಗಳು ಯಾವುವು ಮತ್ತು ಅವುಗಳಿಂದ ಆಗುವ ಉಪಯೋಗಗಳು ಏನು? ಈ ಮೊದಲಾದ ಅಂಶಗಳನ್ನು ಇಲ್ಲಿ ಅವಲೋಕಿಸಲಾಗಿದೆ.

ಭಾರತದಲ್ಲಿ ಇಲ್ಲಿಯವರೆಗೆ ರಚನೆಯಾದ ಪಠ್ಯಪುಸ್ತಕಗಳು ಮತ್ತು ಅದರಲ್ಲಿ ಅಡಕವಾಗಿರುವ ಕಲಿಕಾ ವಿಧಾನಕ್ಕೆ ಸಂಬಂಧಪಟ್ಟ ಪಠ್ಯಕ್ರಮದ ವಿಷಯಗಳನ್ನು ಎರಡು ದೃಷ್ಟಿಕೋನಗಳಿಂದ ನೋಡಬಹುದು. ಒಂದನೆಯದಾಗಿ, ಭಾರತದ ರಾಷ್ಟ್ರೀಯ ಕಾರ್ಯನೀತಿಗಳ ಆಶಯ ಮತ್ತು ಎರಡನೆಯದಾಗಿ, ವಿಮರ್ಶಾತ್ಮಕ ಶಿಕ್ಷಣ ಪದ್ಧತಿಯ ಬಗ್ಗೆ ಪ್ರಜಾಸತ್ತಾತ್ಮಕ ಸಮಾಜಗಳಲ್ಲಿ ಈಗ ನಡೆಯುತ್ತಿರುವಂತಹ ಚಿಂತನೆ.

ನಮ್ಮ ರಾಷ್ಟ್ರೀಯ ಕಾರ್ಯನೀತಿಗಳು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಉತ್ತಮ ಪ್ರಜೆಗಳನ್ನು ಸಿದ್ಧಗೊಳಿಸುವಲ್ಲಿ ಸ್ವತಂತ್ರ ಮತ್ತು ವಿಮರ್ಶಾತ್ಮಕ ಚಿಂತನೆಯನ್ನು ಪೋಷಿಸುವುದು ಶಿಕ್ಷಣದ ಅತಿ ಮುಖ್ಯ ಗುರಿಯಾಗಿದೆ. ಮಾಧ್ಯಮಿಕ ಶಿಕ್ಷಣ ಸಮಿತಿ ೧೯೫೨ರ ವರದಿಯ ಪ್ರಕಾರ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಯಾದವನು ಕೇವಲ ಆಲೋಚನಾರಹಿತವಾಗಿ ಮತದಾನ ಮಾಡುವುದನ್ನು ಮೀರಿ, ಎಲ್ಲಾ ರೀತಿಯ ಸಂಕೀರ್ಣವಾದ ಸಾಮಾಜಿಕ, ಆರ್ಥಿಕ, ರಾಜಕೀಯ ವಿಷಯಗಳ ಬಗ್ಗೆ ತನ್ನದೇ ಆದ ಸ್ವತಂತ್ರ ನಿರ್ಧಾರ ತೆಗೆದುಕೊಳ್ಳುವಂತವನಾಗಬೇಕು. ಇದಕ್ಕೆ ಅತಿ ಅಗತ್ಯವಾಗಿ ಬೇಕಾಗಿರುವುದು ಸ್ಪಷ್ಟವಾಗಿ ಯೋಚನೆ ಮಾಡಬಲ್ಲಂತಹ ಸಾಮರ್ಥ್ಯ ಮತ್ತು ಹೊಸ ಆಲೋಚನೆಗಳನ್ನು ಸ್ವೀಕರಿಸುವ ಮನೋಭಾವ. ಈ ವರದಿಯು ನಿರ್ದಿಷ್ಟವಾಗಿ ಮಾಧ್ಯಮಿಕ ಶಿಕ್ಷಣವನ್ನು ಕುರಿತಾಗಿತ್ತು ಎಂಬುದನ್ನು ನಾವಿಲ್ಲಿ ಗಮನಿಸಬೇಕು. ಪ್ರಜೆಯಾದವನು ಸ್ವತಂತ್ರವಾಗಿ ನಿರ್ಧಾರಗಳನ್ನು ಕೈಗೊಳ್ಳಬೇಕಾದ ವಿಚಾರಗಳಲ್ಲಿ ರಾಜಕೀಯ ವಿಚಾರಗಳು ಕೂಡಾ ಸೇರಿದ್ದು, ಆ ರೀತಿಯ ಅಂಶಗಳನ್ನು ಸಹ ಪಠ್ಯಪುಸ್ತಕದಲ್ಲಿ ಅಳವಡಿಸಬೇಕೆಂಬುದು ಈ ವರದಿಯಲ್ಲಿ ಅಡಕವಾದ ಆಶಯವಾಗಿತ್ತು.

ಕೊಠಾರಿ ಸಮಿತಿ ವರದಿಯೆಂದೇ ಪ್ರಸಿದ್ಧವಾಗಿರುವ ರಾಷ್ಟ್ರೀಯ ಶಿಕ್ಷಣ ಸಮಿತಿ (೧೯೬೪-೬೬)ಯ ವರದಿಯು, ತೀವ್ರ ಸಾಮಾಜಿಕ ಬದಲಾವಣೆಗಳನ್ನು ಮುಂಬರುವ ದಿನಗಳ ಸವಾಲುಗಳು ಎಂದು ೧೯೬೬ರಲ್ಲೇ ಗುರುತಿಸಿತ್ತು. ಈ ಸವಾಲುಗಳನ್ನು ಎದುರಿಸುವಲ್ಲಿ ಶಿಕ್ಷಣದ ಗುರಿಗಳನ್ನೇ ಭಿನ್ನವಾಗಿ ನೋಡಬೇಕು ಎಂಬುದು ಅದರ ಸಲಹೆಯಾಗಿತ್ತು. ಜ್ಞಾನವನ್ನು ಒಂದು ಸಿದ್ಧ ಉತ್ಪನ್ನವಾಗಿ ಕೊಡುವುದರ ಬದಲಾಗಿ, ಕುತೂಹಲ ಜಾಗೃತಗೊಳಿಸುವಂತಹ, ಸ್ವ-ಅಧ್ಯಯನ, ಸ್ವತಂತ್ರ ಆಲೋಚನೆ ಮತ್ತು ನಿರ್ಧಾರಗಳನ್ನು ತೆಗೆದುಕೊಳ್ಳಲು ಅವಶ್ಯವಾದ ಮೂಲಭೂತ ಕೌಶಲ್ಯವನ್ನು ಬೆಳೆಸುವಂತಹ ಶಿಕ್ಷಣವನ್ನು ಇದು ಪ್ರತಿಪಾದಿಸುತ್ತದೆ. ಇದನ್ನೇ ರಾಷ್ಟ್ರೀಯ

ಶಿಕ್ಷಣ ಮುಂದುವರಿಯಲು ಸಾಧ್ಯವಿಲ್ಲ. ಹಾಗಾಗಿ ಶಿಕ್ಷಕ ಮತ್ತು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳು ಅತ್ಯಾವಶ್ಯಕವಾಗಿವೆ. ಪಠ್ಯವಿಲ್ಲದ ಶಿಕ್ಷಣ ಗೊತ್ತು ಗುರಿಯಿಲ್ಲದೆ ಓಡುವ ಕುದುರೆಯಂತೆ. ಆ ಕಾರಣಕ್ಕಾಗಿ ಈ ಸಮಾಜಕ್ಕೆ ಪಠ್ಯಪುಸ್ತಕಗಳ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಮೊದಲು ಪುಸ್ತಕಗಳೆಂದರೆ ಏನು ಎಂಬುದನ್ನು ಅರಿಯುವುದು ಮುಖ್ಯವಾಗುತ್ತದೆ.

**ಪುಸ್ತಕಗಳ ಅರ್ಥ**

ಪುಸ್ತಕಗಳೆಂದರೆ ಕೈಬರಹಗಳಿಂದ ಬರೆಯಲ್ಪಟ್ಟಂತಹ ಅಥವಾ ಮುದ್ರಿತವಾದ ಹಲವಾರು ಹಾಳೆಗಳ ಸಮೂಹಕ್ಕೆ ಪುಸ್ತಕವೆಂದು ಸಾಮಾನ್ಯವಾದ ಅರ್ಥದಲ್ಲಿ ಕರೆಯಲಾಗಿದೆ. ಪುಸ್ತಕಗಳೆಂದರೆ ಸಾಮಾನ್ಯವಾಗಿ ಅನೇಕ ಹಾಳೆಗಳನ್ನು ಕೂಡಿಸಿ ನಾಲ್ಕು ಮಗ್ಗುಲುಗಳಲ್ಲಿ ಯಾವುದಾದರೊಂದು ಮಗ್ಗುಲನ್ನೂ ಬಿಗಿಗೊಳಿಸಿ, ಮುಂದೆ ಹಾಗೂ ಹಿಂದೆ ರಕ್ಷಾ ಹೊದಿಕೆಗಳನ್ನು ಹಾಕಿದ ವಸ್ತುವಿಗೆ ಸಾಮಾನ್ಯವಾಗಿ ಪುಸ್ತಕ ಎನ್ನುತ್ತೇವೆ.

"ಯುನೆಸ್ಕೋ ಪ್ರಕಾರ "ರಕ್ಷಾಪುಟಗಳನ್ನು ಹೊರತುಪಡಿಸಿ ಕನಿಷ್ಠವೆಂದರೆ ನಲವತ್ತು ಪುಟಗಳನ್ನು ಹೊಂದಿದ ಹಾಗೂ ನಿಯತಕಾಲಿಕವಲ್ಲದ ಮುದ್ರಿತ ಪುಟವೇ ಪುಸ್ತಕವೆಂದಿದೆ".[೧] "ಹಲವಾರು ಹಾಳೆಗಳ ಅಥವಾ ಬರವಣಿಗೆಗಾಗಿ ಮರದಿಂದ ತಯಾರಿಸಲ್ಪಟ್ಟ ವಸ್ತುಗಳ ಅಥವಾ ಇತರ ಬರವಣಿಗೆಗೆ ಉಪಯೋಗಿಸುವ ವಸ್ತುಗಳ ಸಮೂಹವನ್ನು ಹೊಲಿಗೆಯ ಮೂಲಕ ಜೋಡಿಸಲ್ಪಟ್ಟ ಅಥವಾ ರಟ್ಟು ಕಟ್ಟುವ ಕಲೆಯ ಮುಖಾಂತರ ಜೋಡಿಸಿದ ವಸ್ತುವಿಗೆ ಪುಸ್ತಕ"ವೆಂದು ಕೊಲಂಬಿಯಾ ವಿಶ್ವಕೋಶದಲ್ಲಿದೆ.

ಅದೇ ರೀತಿ ವೆಬ್‌ಸ್ಟರ್ ಅಂತಾರಾಷ್ಟ್ರೀಯ ನಿಘಂಟಿನ ಪ್ರಕಾರ "ಮರದ ಫಲಕಗಳ ಸಮೂಹ ಅಥವಾ ಹಾಳೆಗಳ ಸಮೂಹ ಅಥವಾ ಅಂತಹದೇ ವಸ್ತುಗಳ ಕೈ ಬರಹದ ಅಥವಾ ಮುದ್ರಿತ ಅಥವಾ ಖಾಲಿ ಇರುವ ವಸ್ತುಗಳ ವ್ಯವಸ್ಥಿತ ಜೋಡಣೆಗೆ ಪುಸ್ತಕ" ಎನ್ನಲಾಗುತ್ತದೆ.

ಪ್ರಸಿದ್ಧ ವಿಜ್ಞಾನಿಯಾದ ಥಾಮಸ್ ಅಲ್ವಾ ಎಡಿಸನ್‌ರವರು 'ಪುಸ್ತಕಗಳು ಮಹಾಬುದ್ಧಿವಂತನು ಮಾನವರಿಗಾಗಿ ಬಿಟ್ಟುಹೋದ ಉತ್ತರಾಧಿಕಾರಿಗಳಾಗಿವೆ. ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸುರಕ್ಷಿತವಾಗಿ ತಲುಪಿಸಲ್ಪಡುತ್ತವೆ. ಅಂದರೆ ತುಂಬಾ ಬುದ್ಧಿವಂತರು ಎಚ್ಚರಿಕೆಯಿಂದ ಮುಂದಿನ ಜನಾಂಗವನ್ನು ಬುದ್ಧಿವಂತರನ್ನಾಗಿ ಮಾಡುವುದಕ್ಕಾಗಿ ಅವುಗಳು ಸಂರಕ್ಷಿಸಲ್ಪಟ್ಟಿವೆ. ಅಂದರೆ ಪಠ್ಯಪುಸ್ತಕಗಳು ಇಡೀ ಮಾನವ ಜನಾಂಗವನ್ನೇ ತುಂಬಾ ಬುದ್ಧಿವಂತನನ್ನಾಗಿಸುವ ಶಕ್ತಿಯನ್ನು ಒಳಗೊಂಡಿವೆ. ಪುಸ್ತಕಗಳು ಸಮಾಜದ ಜೀವನಾಡಿಯಾಗಿದ್ದು, ಶೈಕ್ಷಣಿಕ ವ್ಯವಸ್ಥೆಯ ಅಡಿಗಲ್ಲುಗಳಾಗಿವೆ. ಅದರಂತೆ ಶಾಲೆಯ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಪಠ್ಯಪುಸ್ತಕಗಳು ಅವರ ನಿಜವಾದ ಮಾರ್ಗದರ್ಶಿಕೆಗಳಾಗಿವೆ. ಅಲ್ಲದೆ ಪಠ್ಯಕ್ರಮವು ಸಹ ವಿದ್ಯಾರ್ಥಿಗಳ ಮನೋವಿಕಾಸಕ್ಕೆ ಸಹಕಾರಿಯಾಗಿದೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕ ಮತ್ತು ಪಠ್ಯಕ್ರಮ ಎಂದರೇನು ಎನ್ನುವುದನ್ನು ಅವಲೋಕಿಸುವ ಅಗತ್ಯತೆ ಇದೆ. ಈ ಕುರಿತಂತೆ ಮುಂದೆ ವಿವರಿಸಲಾಗಿದೆ.

## ೨.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮ

ವಿದ್ಯಾರ್ಥಿಗಳಿಗೆ ಶಿಕ್ಷಣವು ವಾಸ್ತವವಾದ ಜ್ಞಾನ ಮತ್ತು ಅನುಭವವನ್ನು ಒದಗಿಸುವ ಪ್ರಮುಖವಾದ ಸಾಧನವಾಗಿದೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕ ಮತ್ತು ಪಠ್ಯಕ್ರಮಗಳ ನಡುವಿನ ವ್ಯತ್ಯಾಸವನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕಾದ ಅವಶ್ಯಕತೆ ಇದೆ. ವಿದ್ಯಾರ್ಥಿಗಳಿಗೆ ಏನನ್ನು ಕಲಿಸಬೇಕು ಮತ್ತು ಯಾವ ವಿಧಾನದಲ್ಲಿ ಕಲಿಸಬೇಕು ಹಾಗೂ ಯಾವ ವಸ್ತು ವಿಷಯಗಳನ್ನು ವಿದ್ಯಾರ್ಥಿಗಳಿಗೆ ನಿವೇದಿಸಬೇಕು ಇಲ್ಲವೇ ಅವರ ವಿಷಯದ ಆಯ್ಕೆ ಏನು ಎಂಬುದನ್ನು ಮೊದಲು ನಿರ್ಧರಿಸಬೇಕಾಗುತ್ತದೆ. ಇವೆಲ್ಲವನ್ನು ಅರ್ಥ ಮಾಡಿಕೊಳ್ಳಲು ಇರುವ ಏಕೈಕ ಮಾಧ್ಯಮವೆಂದರೆ ಪಠ್ಯಕ್ರಮ. ಇದು ಶಿಕ್ಷಣ ವ್ಯವಸ್ಥೆಯ ಕೇಂದ್ರ ಮತ್ತು ಪ್ರಮುಖ ಆಧಾರ ಸ್ತಂಭ ಎಂದರೂ ತಪ್ಪಲ್ಲ. ಅಲ್ಲದೆ ಇದು ಶಿಕ್ಷಣ ಪ್ರಕ್ರಿಯೆಯ ಜೀವಾಳವೂ ಆಗಿದೆ. ಶಿಕ್ಷಣದ ಅನೇಕ ಸಾಧನೆಗಳಲ್ಲಿ ಪಠ್ಯಕ್ರಮ ಹಾಗೂ ಪಠ್ಯವಸ್ತುವಿಗೆ ಅಗ್ರ ಸ್ಥಾನ ನೀಡಲಾಗಿದೆ. ಶೈಕ್ಷಣಿಕ ಗುರಿ ಮತ್ತು ಉದ್ದೇಶಗಳನ್ನು ಸಾಧಿಸುವ ಕೇಂದ್ರ ಬಿಂದುವಾಗಿ ಇಂದು ಪಠ್ಯಕ್ರಮ ಕಾರ್ಯನಿರ್ವಹಿಸುತ್ತಿದೆ. ಪಠ್ಯಕ್ರಮ ಅಥವಾ ಪಠ್ಯವಸ್ತು ಎಂಬ ಪದವನ್ನು ಆಂಗ್ಲ ಭಾಷೆಯಲ್ಲಿ 'ಕರಿಕ್ಯೂಲಂ' ಎನ್ನುವ ಪದಕ್ಕೆ ಸರಿಸಮಾನವಾಗಿ ಬಳಸಲಾಗುತ್ತಿದೆ. ಕರಿಕ್ಯೂಲಂ ಎಂಬ ಆಂಗ್ಲ ಭಾಷೆಯ ಈ ಪದವು ಲ್ಯಾಟಿನ್ ಭಾಷೆಯ 'ಕರೆರ್' ಎಂಬ ಶಬ್ದದಿಂದ ಬಂದಿದೆ. 'ಕರೆರ್' ಎಂಬ ಪದದ ಅರ್ಥ "ಎ ಕೋರ್ಸ್ ಟುಬಿ ರನ್ ಫಾರ್ ರೀಚಿಂಗ್ ಎ ಸರ್ಟೈನ್ ಗೋಲ್ ಆರ್ ಡಿಸ್ಟಿನೇಷನ್ ಎಂದು. ಅಂದರೆ ನಿಗದಿತ ಗುರಿಯನ್ನು ತಲುಪಲು ಅನುಸರಿಸುವ ದಾರಿ ಎಂದರ್ಥ."[೨] ಸಾಮಾನ್ಯ ಅರ್ಥದಲ್ಲಿ ಪಠ್ಯ ಕ್ರಮ ಎಂದರೆ ಶಾಲೆ ಅಥವಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳನ್ನು ಒದಗಿಸುವ ಅನುಭವಗಳು ಮತ್ತು ವಿಷಯಗಳ ಒಟ್ಟಾರೆ ವ್ಯವಸ್ಥೆ ಅಥವಾ ಗುಂಪು ಎಂಬುದಾಗಿದೆ. ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಅಗತ್ಯವಾದಂತಹ ವಸ್ತು ವಿಷಯವನ್ನು ವ್ಯವಸ್ಥೆಗೊಳಿಸಿದ ಬೋಧಿಸುವ ವಿಷಯಕ್ಕೆ ಮಾತ್ರ ಸೀಮಿತವಾಗಿರುವುದೇ ಪಠ್ಯಕ್ರಮ. ಆದ್ದರಿಂದ ಪಠ್ಯಪುಸ್ತಕಗಳು ವಿದ್ಯಾರ್ಥಿ ಮತ್ತು ಶಿಕ್ಷಕ ಸಮುದಾಯಕ್ಕೆ ಅತ್ಯಂತ ಅವಶ್ಯಕ. ಪಠ್ಯಕ್ರಮ ಎಂಬ ಪರಿಕಲ್ಪನೆಯೂ ತುಂಬಾ ವಿಶಾಲವಾದ ಅರ್ಥವನ್ನು ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಪಡೆದುಕೊಂಡಿದೆ. ಏಕೆಂದರೆ ಇದು ಕೇವಲ ವಿಷಯ ವಸ್ತುವನ್ನು ಮಾತ್ರ ಒಳಗೊಂಡಿರುವಂತಹದಲ್ಲ. ಆದರೆ ಪಠ್ಯಪುಸ್ತಕ ಎನ್ನುವಂತಹದ್ದು ಶಿಕ್ಷಣ ಕ್ಷೇತ್ರದಲ್ಲಿ ತುಂಬಾ ಸಂಕುಚಿತವಾದಂತಹ ಅರ್ಥವನ್ನು ಪಡೆದುಕೊಂಡಿದೆ. ಪಠ್ಯಕ್ರಮದ ಅರ್ಥವು ವಿಶಾಲವಾಗಿರುವಂತಹದ್ದು. ಪಠ್ಯವಸ್ತುವು ಆಳವಾದ ಮತ್ತು ಸಮಗ್ರವಾದ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಒದಗಿಸಿದರೆ ಪಠ್ಯಪುಸ್ತಕವು ಕೇವಲ ಒಂದು ತರಗತಿಗೆ ಮಾತ್ರ ಸೀಮಿತವಾದಂತಹ ಜ್ಞಾನವನ್ನು ಒದಗಿಸುತ್ತದೆ.

ಪಠ್ಯಪುಸ್ತಕವು ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಆದರೆ ಪಠ್ಯಕ್ರಮವು ಕೇವಲ ಪಠ್ಯ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿರುತ್ತದೆ. "ಪಠ್ಯಕ್ರಮವು ಒಂದು ವಿಷಯ ಮತ್ತು ಕಲಿಕೆಯ ಅನುಭವಗಳು ಹಾಗೂ ಕಲಿಕಾ ಚಟುವಟಿಕೆಗಳನ್ನು ಒಳಗೊಂಡಿದ್ದರೆ ಪಠ್ಯಪುಸ್ತಕವು ಕೇವಲ ವಿಷಯ ವಸ್ತುವನ್ನು ಮಾತ್ರ ಒಳಗೊಂಡಿರುತ್ತದೆ".[೩]

ಪಠ್ಯಕ್ರಮವು ಶಿಕ್ಷಕರಿಗೆ ಹಾಗೂ ವಿದ್ಯಾರ್ಥಿಗಳಿಗಿಬ್ಬರಿಗೂ ಬೇಗ ಅರ್ಥಮಾಡಿಕೊಳ್ಳದಿದ್ದರೂ ಶಿಕ್ಷಕರು ಅರ್ಥಮಾಡಿಕೊಳ್ಳಬಲ್ಲರು.

ಪಠ್ಯಕ್ರಮವು ವಿದ್ಯಾರ್ಥಿಗಳಿಗೆ ಎಂದೂ ಕಂಠಪಾಠಕ್ಕೆ ಅವಕಾಶವನ್ನು ನೀಡುವುದಿಲ್ಲ. ಆದರೆ ಪಠ್ಯಪುಸ್ತಕವು ವಿದ್ಯಾರ್ಥಿಗಳಿಗೆ ಕಂಠಪಾಠಕ್ಕೆ ಹೆಚ್ಚು ಅವಕಾಶವನ್ನು ಕಲ್ಪಿಸಿ ಕೊಡುತ್ತದೆ. ಪಠ್ಯಕ್ರಮದಲ್ಲಿ ವಿಷಯ ವಸ್ತುವಿನ ಉದ್ದೇಶಗಳು, ಧ್ಯೇಯಗಳು ಈಡೇರಿಸಲು ಯಾವುದೇ ನಿರ್ದಿಷ್ಟವಾದಂತಹ ಸಮಯವನ್ನು ಸೂಚಿಸಿರುವುದಿಲ್ಲ. ಯಾವಾಗ ಬೇಕಾದರೂ ಇದನ್ನು ಪೂರ್ಣಗೊಳಿಸಲು ಅವಕಾಶವಿರುತ್ತದೆ. ಆದರೆ ಪಠ್ಯಪುಸ್ತಕವೆನ್ನುವಂತಹದ್ದು ಒಂದು ತರಗತಿಗೆ ಸೀಮಿತವಾಗಿರುವುದರಿಂದ ಅದನ್ನು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಪೂರ್ಣಗೊಳಿಸಲು ಅವಕಾಶವಿರುತ್ತದೆ. ಆದರೆ ಪಠ್ಯಪುಸ್ತಕವೆನ್ನುವಂತಹದ್ದು ಒಂದು ತರಗತಿಗೆ ಸೀಮಿತವಾಗಿರುವುದರಿಂದ ಅದನ್ನು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಪೂರ್ಣಗೊಳಿಸಲೇಬೇಕಾದ ಅನಿವಾರ್ಯತೆ ಇದೆ. ಇಲ್ಲವಾದರೆ ಇದರಿಂದ ಮಕ್ಕಳಿಗೆ ತೊಂದರೆಗಳು ಎದುರಾಗಬಹುದಾದ ಸಾಧ್ಯತೆಗಳು ಹೆಚ್ಚಾಗಿವೆ. ಪಠ್ಯವಸ್ತುವು ಹೆಚ್ಚಿನ ವಿಷಯ ವಸ್ತುವನ್ನು ಒಳಗೊಂಡಿರುವಂತಹದ್ದು. ಇಲ್ಲಿ ಎಲ್ಲಾ ಮಾಹಿತಿಯೂ ಕೂಡ ಲಭ್ಯವಾಗುತ್ತದೆ. ಆದರೆ ಪಠ್ಯಪುಸ್ತಕದಲ್ಲಿ ಸೀಮಿತವಾದ ಜ್ಞಾನವಿರುವುದರಿಂದ ಹೆಚ್ಚಿನ ಜ್ಞಾನಕ್ಕಾಗಿ ಇತರೆ ಪುಸ್ತಕಗಳನ್ನು ಅಧ್ಯಯನಿಸಬೇಕಾದ ಅಗತ್ಯತೆ ಇರುತ್ತದೆ.

### ೨.೧.೧. ಪಠ್ಯಪುಸ್ತಕ ಮತ್ತು ಪಠ್ಯಕ್ರಮಗಳ ಕುರಿತು ವಿದ್ವಾಂಸರ ಅಭಿಪ್ರಾಯಗಳು

ವಿದ್ಯಾರ್ಥಿಗಳ ವ್ಯಕ್ತಿತ್ವದ ಮೇಲೆ ಪಠ್ಯಕ್ರಮವು ಶಾಶ್ವತವಾದಂತಹ ಮತ್ತು ಗಾಢವಾದಂತಹ ಪ್ರಭಾವ ಬೀರುವ ಸಾಧ್ಯತೆ ಹೆಚ್ಚಾಗಿರುತ್ತದೆ. ಪಠ್ಯಪುಸ್ತಕದಲ್ಲಿ ಮಗುವಿನ ವ್ಯಕ್ತಿತ್ವದ ವಿಕಾಸದ ಮೇಲೆ ಕ್ಷಣಿಕವಾದಂತಹ ಹಾಗೂ ತಾತ್ಕಾಲಿಕವಾದಂತಹ ಪರಿಣಾಮ ಬೀರುವ ಸಾಧ್ಯತೆ ಹೆಚ್ಚಾಗಿರುತ್ತದೆ. ಪಠ್ಯವಸ್ತುವು ಮಗುವಿನ ಕಲಿಕೆಯ ಎಲ್ಲಾ ವಿಷಯಗಳಿದ್ದರೂ ಪ್ರತ್ಯಕ್ಷವಾಗಿ ಕೆಲವನ್ನು ಮಾತ್ರ ಕಲಿಕೆಯ ಅನುಭವಗಳನ್ನು ಒದಗಿಸುತ್ತದೆ. ಉದಾ:- ಚರಿತ್ರೆ ಪಠ್ಯಪುಸ್ತಕಗಳು ಮಕ್ಕಳಿಗೆ ಕೇವಲ ಚರಿತ್ರೆಯ ಅನುಭವವನ್ನಷ್ಟೇ ನೀಡುತ್ತವೆಯೋ ಹೊರತು ವಿಜ್ಞಾನದ ಅಥವಾ ಗಣಿತದ ಅನುಭವವನ್ನು ನೀಡುವುದಕ್ಕೆ ಸಾಧ್ಯವಿಲ್ಲ. ಹೀಗೆ ಪಠ್ಯವಸ್ತು ಮತ್ತು ಪಠ್ಯಪುಸ್ತಕಗಳು ತುಂಬಾ ಭಿನ್ನವಾದಂತಹ ಅರ್ಥವನ್ನು ಒಳಗೊಂಡಿರುವಂತಹವು ಆಗಿರುತ್ತವೆ. ಇವೆರಡೂ ಮೇಲ್ನೋಟಕ್ಕೆ ಒಂದೇ ಎಂದು ಗೋಚರಿಸಿದರೂ ಸಹ ಅವು ವಾಸ್ತವವಾಗಿ ಬೇರೆ-ಬೇರೆಯಾದವುಗಳು. ಪಠ್ಯವಸ್ತುವು ಪಠ್ಯಪುಸ್ತಕ ಒಟ್ಟಾರೆಯಾದಂತಹ ಎಲ್ಲಾ ಅಂಶಗಳನ್ನು ಒಳಗೊಂಡಿರುತ್ತದೆ. ಆದರೆ ಪಠ್ಯಕ್ರಮವು ಪಠ್ಯಪುಸ್ತಕದ ಒಂದು ಭಾಗವಾಗಿರುತ್ತದೆ. ಈ ಕುರಿತಂತೆ ವಿವಿಧ ವಿದ್ವಾಂಸರು ತಮ್ಮದೇ ಆದ ದೃಷ್ಟಿಯಲ್ಲಿ ಪಠ್ಯಪುಸ್ತಕಗಳ ಕುರಿತು ವ್ಯಾಖ್ಯಾನಿಸಿದ್ದಾರೆ. ಅವರಲ್ಲಿ ರೇಟಿಂಗ್ ಎನ್ನುವ ತಜ್ಞರು "ಪಠ್ಯಪುಸ್ತಕವು ಬೋಧನೆಯ ಅರ್ಥ ಸಾಮಗ್ರಿಯಿದ್ದಂತೆ".[೪] ಅವರ ಅಭಿಪ್ರಾಯವನ್ನು ಒಂದು ತರಗತಿಯಲ್ಲಿ ಮಗುವಿಗೆ ವಿಷಯವನ್ನು ತಿಳಿಸಲು ಸಹಾಯಕವಾಗುವಂತಹ ಅರ್ಥ ಪೂರ್ಣವಾದಂತಹ ಮಾಹಿತಿಯನ್ನು ಒಳಗೊಂಡಿರುವ ಒಂದು ಸಾಧನ ಎಂದು ಪರಿಭಾವಿಸಬಹುದು.

ಅದೇ ರೀತಿ ಸಿ.ಪಿ. ಹಿಲ್ ಎಂಬ ತಜ್ಞರು ಪಠ್ಯಪುಸ್ತಕ ಎಂಬುದನ್ನು ಈ ರೀತಿಯಾಗಿ ಅರ್ಥೈಸಲು ಪ್ರಯತ್ನಿಸಿದ್ದಾರೆ. "ಪಠ್ಯಪುಸ್ತಕವೆಂದರೆ ಕಂಠಪಾಠಕ್ಕಾಗಿ ಸಂಗತಿಗಳನ್ನು ಸಂಗ್ರಹಿಸುವುದಕ್ಕಾಗಿ ಉಪಯೋಗಿಸುವಂತಹದಲ್ಲ. ಆದರೆ ಅದು ವಿದ್ಯಾರ್ಥಿಗಳಿಗೆ ಅನೇಕ ತೆರನಾದ ವೈವಿಧ್ಯತೆಗಳನ್ನು ಉಪಯೋಗಿಸಬಲ್ಲ ಮೂಲ ಮಾಹಿತಿಯನ್ನು ಒಳಗೊಂಡ ಸಂಗ್ರಹಾಲಯವಿದ್ದಂತೆ" ಎಂದಿದ್ದಾರೆ. ಪಠ್ಯಪುಸ್ತಕಗಳೆಂದರೆ ಮಕ್ಕಳು ಪರೀಕ್ಷಾ ದೃಷ್ಟಿಯನ್ನಿಟ್ಟುಕೊಂಡು ಕಂಠಪಾಠ ಮಾಡುವುದಕ್ಕೆ ಅವುಗಳು ಸೀಮಿತವಾಗಿರುವುದಿಲ್ಲ. ಬದಲಾಗಿ ನಿಜವಾದ, ವಾಸ್ತವವಾದ ಸತ್ಯಾಂಶಗಳನ್ನು ನೈಜ ಮಾಹಿತಿಯನ್ನು ಅವುಗಳು ಮಕ್ಕಳಿಗೆ ಒದಗಿಸುವ ಸಾಮಗ್ರಿಗಳಾಗಿರುತ್ತವೆ.

ಆರ್.ಎಚ್. ಡಿಕ್ಷನರಿ ಪ್ರಕಾರ "ಪಠ್ಯಪುಸ್ತಕವು ಒಂದು ನಿರ್ದಿಷ್ಟ ವಿಷಯದ ಅಧ್ಯಯನಕ್ಕಾಗಿ ವಿದ್ಯಾರ್ಥಿಗಳು ಉಪಯೋಗಿಸುವಂತಹ ಉತ್ತಮ ಗುಣಮಟ್ಟದ ಪುಸ್ತಕವಾಗಿರುತ್ತದೆ" ಎಂದು ವ್ಯಾಖ್ಯಾನಿಸಿದೆ.

ಅಮೇರಿಕಾದ ಟೆಕ್ಸ್‌ಬುಕ್ ಪಬ್ಲಿಷರ್ಸ್ ಇನ್‌ಸ್ಟಿಟ್ಯೂಟ್‌ರ ಪ್ರಕಾರ 'ಒಂದು ನಿರ್ದಿಷ್ಟ ತರಗತಿಯ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಅಧ್ಯಯನದ ಉಪಯೋಗಕ್ಕಾಗಿ, ಅನುಕೂಲಕ್ಕಾಗಿ ತಯಾರಿಸುವ ಪುಸ್ತಕವಾಗಿದ್ದು, ಇದರಲ್ಲಿ ಒಂದು ನಿರ್ದಿಷ್ಟ ವಿಷಯದ ಬಗ್ಗೆ ಪಠ್ಯಾಂಶಗಳನ್ನು ವ್ಯವಸ್ಥಿತವಾಗಿ, ಅನುಕ್ರಮವಾಗಿ ಜೋಡಿಸಿರುತ್ತದೆ.

ಒಟ್ಟಾರೆಯಾಗಿ ಅನೇಕ ಶಿಕ್ಷಣ ತಜ್ಞರು, ವಿದ್ವಾಂಸರು, ಸಾಹಿತಿಗಳು ಹೇಳಿರುವುದೆಲ್ಲವೂ ಪಠ್ಯಪುಸ್ತಕಕ್ಕೆ ನೈಜವಾದ ಅರ್ಥ ನೀಡುತ್ತವೆ. ಇವೆಲ್ಲವೂ ಗಮನಿಸಿ ಪಠ್ಯಪುಸ್ತಕವೆಂದರೆ ಒಂದು ತರಗತಿಗೆ ಒಂದು ತಜ್ಞರ ತಂಡವೊಂದು ಕೆಲವು ಮಾನದಂಡಗಳನ್ನಾಧರಿಸಿ ಮಗುವಿನ ಸರ್ವತೋಮುಖವಾದ ಜ್ಞಾನಾಭಿವೃದ್ಧಿಗೆ ನಿರ್ದಿಷ್ಟ ಗುರಿ ಮತ್ತು ಉದ್ದೇಶಗಳನ್ನು ಇಟ್ಟುಕೊಂಡು ಸಿದ್ಧಪಡಿಸಿದ ಪುಸ್ತಕವೇ ಪಠ್ಯಪುಸ್ತಕವೆಂದು ಅಥವಾ ಕಲಿಕಾ ಸಾಮಗ್ರಿ ಎಂದು ಹೇಳಬಹುದು.

ಪಠ್ಯಪುಸ್ತಕದಂತೆ ಪಠ್ಯಕ್ರಮವು ಸಹ ತನ್ನದೇ ಆದ ವೈಶಿಷ್ಟ್ಯತೆಗಳನ್ನೊಳಗೊಂಡಿದೆ. ಪಠ್ಯಕ್ರಮದ ಆಧುನಿಕ ಪರಿಕಲ್ಪನೆಯೇ ಬೇರೆ ಆಗಿದೆ. ಏಕೆಂದರೆ ಹಿಂದೆ ಪಠ್ಯಕ್ರಮ ಎಂಬುದು ಕೇವಲ ಬೋಧನಾ ವಿಷಯಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಇಂದು ವಿದ್ಯಾರ್ಥಿಗಳು ಶಾಲೆಯಲ್ಲಿ ಅಧ್ಯಾಪಕರಿಂದ, ಪುಸ್ತಕ ಭಂಡಾರದಿಂದ, ಆಟದ ಮೈದಾನದಿಂದ, ಪ್ರಯೋಗಾಲಯದಿಂದ ಮತ್ತು ಔಪಚಾರಿಕ ಸಂಪರ್ಕಗಳಿಂದ ಪಡೆಯುವ ಎಲ್ಲ ರೀತಿಯ ಅನುಭವಗಳ ಒಟ್ಟು ಮೊತ್ತವನ್ನು ಪಠ್ಯಕ್ರಮ ಎಂದು ಕರೆಯಬಹುದು. ಪಠ್ಯಕ್ರಮದ ಬಗ್ಗೆ ಅನೇಕ ಶಿಕ್ಷಣ ತಜ್ಞರು, ಸಾಹಿತಿಗಳು, ವಿದ್ವಾಂಸರು, ತಮ್ಮದೇ ಆದ ಸೈದ್ಧಾಂತಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಪಠ್ಯಕ್ರಮ ಎಂಬುದರ ಬಗ್ಗೆ ವ್ಯಾಖ್ಯಾನಿಸಿದ್ದಾರೆ. ಇವುಗಳಲ್ಲಿ ಪ್ರಮುಖವಾದ ವ್ಯಾಖ್ಯಾನಗಳು ಇಂತಿವೆ.

ಪಠ್ಯಕ್ರಮದ ಬಗ್ಗೆ ಅನೇಕ ವ್ಯಾಖ್ಯಾನಗಳಿದ್ದರೂ ಕನ್ನಿಂಗ್ ಹ್ಯಾಮ್ ಅವರು ನೀಡಿರುವ ವ್ಯಾಖ್ಯೆ ಅತ್ಯಂತ ಪ್ರಮುಖವಾದ ಹಾಗೂ ಪ್ರಸಿದ್ಧವಾದ ವ್ಯಾಖ್ಯೆ ಎನಿಸಿಕೊಂಡಿದೆ. ಕನ್ನಿಂಗ್ ಹ್ಯಾಮ್ ಅಭಿಪ್ರಾಯ ಪಡುವಂತೆ "ಛಾಯಾಗ್ರಾಹಕ ಕೊಠಡಿಯಲ್ಲಿ [ಶಾಲೆ] ವಿವಿಧ ಸಾಮಗ್ರಿ [ವಿದ್ಯಾರ್ಥಿ]ಗಳನ್ನು ತನ್ನ ಧ್ಯೇಯ–ಧೋರಣೆಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳಲು ಕಲೆಗಾರ

[ಶಿಕ್ಷಕಿ]ನಿಗೆ ಇರುವ ಸಾಧನವೇ ಪಠ್ಯಕ್ರಮ"³ ಎಂದು ಹೇಳಿದ್ದಾನೆ. ಇವನ ಅಭಿಪ್ರಾಯದ ಪ್ರಕಾರ ಪಠ್ಯಕ್ರಮ ಎಂಬುದು ಕೇವಲ ಒಬ್ಬ ಶಿಕ್ಷಕನಿಗೆ ವಿದ್ಯಾರ್ಥಿಗೆ ಮಾತ್ರ ಸೀಮಿತವಾಗಿರದೆ ಅದು ಇಡೀ ಶೈಕ್ಷಣಿಕ ವ್ಯವಸ್ಥೆಯ ಪ್ರಮುಖ ಆಧಾರ ಬಿಂದುವಾಗಿದೆ. ಇದರಲ್ಲಿ ಬರುವ ಪ್ರತಿಯೊಬ್ಬರಿಗೂ ಇದು ಅತ್ಯಾವಶ್ಯಕ ಎಂಬುದನ್ನು ತಿಳಿಸಿದ್ದಾರೆ.

ಕ್ರೋ ಮತ್ತು ಕ್ರೋ ಎಂಬ ಶಿಕ್ಷಣ ತಜ್ಞ ಹಾಗೂ ಮನೋವಿಜ್ಞಾನಿಯು ಅಭಿಪ್ರಾಯಪಡುವಂತೆ "ಮಾನಸಿಕವಾಗಿ, ಶಾರೀರಕವಾಗಿ, ಭಾವನಾತ್ಮಕವಾಗಿ, ಸಾಮಾಜಿಕವಾಗಿ ಮತ್ತು ನೈತಿಕವಾಗಿ ವಿದ್ಯಾರ್ಥಿಗಳು ಬೆಳೆಯಲು ಸಹಾಯ ಮಾಡುವ ಗುರಿಗಳನ್ನು ಹೊಂದಿರುವ ಶಾಲೆಯ ಒಳಗೆ ಮತ್ತು ಹೊರಗೆ ನೀಡಬಹುದಾದ ಅನುಭವಗಳ ಸೂಚನಾ ಪಟ್ಟಿಯೇ ಪಠ್ಯವಸ್ತು" ಎಂಬುದಾಗಿ ತಿಳಿಸಿದ್ದಾರೆ. ಅಂದರೆ ವಿದ್ಯಾರ್ಥಿಯ ಸರ್ವಾಂಗೀಣ ಅಭಿವೃದ್ಧಿಗೆ ಅಗತ್ಯವಾದ ವಿಷಯಗಳನ್ನು ಶಾಲೆಯ ಹೊರಗೂ ನೀಡಬಹುದಾದ ಎಲ್ಲಾ ಅಂಶಗಳ ಒಟ್ಟು ಮೊತ್ತ ಎಂದು ತಿಳಿಯಬಹುದಾಗಿದೆ.

ಅಮೇರಿಕಾದ ಖ್ಯಾತ ದಾರ್ಶನಿಕ, ಮನೋವಿಜ್ಞಾನಿ ಮತ್ತು ಪ್ರಾಯೋಗಿಕ ಶಿಕ್ಷಕನೆಂದು ಹೆಸರು ವಾಸಿಯಾಗಿರುವ ಜಾನ್ ಡ್ಯೂಯಿಯು ಪಠ್ಯಕ್ರಮ ಎಂದರೇನು ಎನ್ನುವುದನ್ನು ಈ ರೀತಿ ಹೇಳಿದ್ದಾನೆ. "ಉದ್ದೇಶಿತ ಸತತ ಕ್ರಿಯೆಯಲ್ಲಿ ಸಂಪನ್ಮೂಲಗಳಾಗಿ ಅಥವಾ ತೊಂದರೆಗೊಳಗಾಗಿರುವ ವಸ್ತುಗಳು, ವಿಚಾರಗಳು ಮತ್ತು ಅನುಭವಗಳೇ" ಪಠ್ಯಕ್ರಮವೆಂದಿದ್ದಾರೆ.

ಜರ್ಮನಿಯ ಪ್ರಸಿದ್ಧ ಶಿಕ್ಷಣ ತಜ್ಞನಾದ ಫ್ರೊಬೆಲ್ "ಪಠ್ಯಕ್ರಮವೆಂದರೆ ಮಾನವ ಜನಾಂಗದ ಜ್ಞಾನ ಮತ್ತು ಅನುಭವಗಳ ಸಾರ ಸಂಗ್ರಹವೇ ಆಗಿದೆ" ಎಂದಿದ್ದಾರೆ. ಅಂದರೆ ಆದಿ ಮಾನವನಿಂದ ಹಿಡಿದು ಇಂದಿನ ಆಧುನಿಕ ಜಗತ್ತಿನವರೆಗೆ ಮಾನವನು ಬಾಳಿ ಬದುಕಿದ ಅವನ ಗುಣಗಳನ್ನು ಒಟ್ಟುಗೂಡಿಸಿ ಕಲಿಸುವುದೇ ಪಠ್ಯಕ್ರಮವೆಂದು ತಿಳಿಸಿದ್ದಾನೆ.

ಮಹಾತ್ಮಗಾಂಧೀಜಿಯವರು "ಮಗುವಿನ ಪರಿಸರ, ಬುದ್ಧಿಶಕ್ತಿ ವಿಚಾರ ಶಕ್ತಿಗಳನ್ನು ಒಳಗೊಂಡಿರುವುದೇ ಪಠ್ಯಕ್ರಮವೆಂದು" ಅಭಿಪ್ರಾಯ ಪಡುತ್ತಾರೆ. ಅಂದರೆ ಮಗು ಯಾವ ವಿಷಯವನ್ನು ಎಲ್ಲದರೂ ಕಲಿತರೂ ಸಹ ಅದು ಅವನ ಬುದ್ಧಿಶಕ್ತಿಗೆ ಅನುಕೂಲವಾಗುವಂತೆ ಇರುವುದೇ ಪಠ್ಯಕ್ರಮ ಎಂದಿದ್ದಾರೆ. ಅದೇ ರೀತಿಯಲ್ಲಿ ಪಠ್ಯಕ್ರಮಗಳು ಸಿದ್ಧಪಡಿಸಬೇಕು ಎಂಬುದಾಗಿ ತಿಳಿಸಿದ್ದಾರೆ.

ಕಾರ್ಟರ್ ವಿ. ಗುಡ್‌ರ ಪ್ರಕಾರ ಪಠ್ಯಕ್ರಮವೆಂದರೆ 'ಬೋಧನಾ ವಿಷಯಗಳನ್ನು ಸಮರ್ಪಕ ರೀತಿಯಲ್ಲಿ ಅಳವಡಿಸಿ ವ್ಯಕ್ತಿಯ ಜೀವನೋಪಾಯಕ್ಕೆ ಅನುಕೂಲವಾದ ವ್ಯಕ್ತಿಯನ್ನು ಅವಲಂಬಿಸುವಂತೆ ಮಾಡುವ ವ್ಯವಸ್ಥೆಯೇ ಪಠ್ಯವಸ್ತು'.

"ಸೆಕೆಂಡರಿ ಎಜ್ಯುಕೇಷನ್ ಕಮಿಷನ್ ಹೇಳುವಂತೆ ಪಠ್ಯಕ್ರಮವೆಂದರೆ 'ಸಾಂಪ್ರದಾಯಿಕ ವಿಷಯಗಳ ಜೊತೆಗೆ ಶಾಲೆಯಲ್ಲಿ ಮಗು ಪಡೆಯುವ ಅನುಭವಗಳ ಸಮಗ್ರತೆಯೇ ಆಗಿದೆ".⁴

ಒಟ್ಟಾರೆ ಈ ಮೇಲಿನ ತಜ್ಞರ ಅಭಿಪ್ರಾಯದಲ್ಲಿ ಹೇಳುವುದಾದರೆ ಪಠ್ಯಕ್ರಮವೆಂದರೆ ಜ್ಞಾನದ ಎಲ್ಲಾ ವಲಯಗಳನ್ನು ನೀಡುವ ಮತ್ತು ಮಗುವಿನ ಸರ್ವತೋಮುಖ ಅಭಿವೃದ್ಧಿಗಾಗಿ

ನೀಡುವ ವಸ್ತು ವಿಷಯವೇ ಆಗಿದೆ. ಈ ಮೇಲೆ ಅನೇಕ ತಜ್ಞರು ಹೇಳಿರುವ ವ್ಯಾಖ್ಯಾನಗಳು ಮೇಲ್ನೋಟದಲ್ಲಿ ಸ್ವಲ್ಪ ವಿಭಿನ್ನವಾಗಿ ಕಂಡರೂ ಅವುಗಳೆಲ್ಲ ಅರ್ಥ ಒಂದೇ ಆಗಿದೆ. ಒಟ್ಟಿನಲ್ಲಿ ಪಠ್ಯಕ್ರಮವೆಂದರೆ, ವಿದ್ಯಾರ್ಥಿ ಶಾಲೆಯಲ್ಲಿ ತರಗತಿಯ ಒಳಗೆ ವಾಚನಾಲಯ, ಕ್ರೀಡಾಂಗಣಗಳಲ್ಲಿ ಶಿಕ್ಷಕರ ನಿರ್ದೇಶನ ಮತ್ತು ಸಹಕಾರದಿಂದ ಪಡೆಯಬಹುದಾದ ಎಲ್ಲಾ ರೀತಿಯ ಅನುಭಗಳ ಸಂಚಯನ ಎನ್ನಬಹುದು.

### ೨.೧.೨ ಪಠ್ಯಪುಸ್ತಕದ ಅವಶ್ಯಕತೆ ಮತ್ತು ಉಪಯೋಗಗಳು

ಪಠ್ಯಪುಸ್ತಕ ಎಂಬುದು ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿ ಶಿಕ್ಷಕ ಮತ್ತು ವಿದ್ಯಾರ್ಥಿಗಳಿಗೆ ಒಂದು ಅತ್ಯವಶ್ಯಕ ಸಾಧನ. ಪಠ್ಯಪುಸ್ತಕ ಇಲ್ಲದೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳೀರ್ವರೂ ಏನನ್ನು ಮಾಡಲಾರರು. ಪಠ್ಯಪುಸ್ತಕವಿದ್ದರೆ ಮಾತ್ರ ಶಿಕ್ಷಕ ವಿದ್ಯಾರ್ಥಿಗಳಿಗೆ ದಾರಿ ತೋರಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕ ಎನ್ನುವುದು ಪ್ರಮುಖ ಮತ್ತು ಅನಿವಾರ್ಯವಾದ ಸಾಧನ ಎಂದು ಹೇಳಬಹುದು. ಮಕ್ಕಳಿಗೆ ಪಠ್ಯಪುಸ್ತಕ ಇಲ್ಲದ ಶಿಕ್ಷಣವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವಾದ ಮಾತು. ಆದ್ದರಿಂದ ಶೈಕ್ಷಣಿಕ ಕ್ಷೇತ್ರದಲ್ಲಿ ಪಠ್ಯಪುಸ್ತಕಗಳ ಅವಶ್ಯಕತೆ ಮತ್ತು ಉಪಯೋಗಗಳೇನು? ಎನ್ನುವ ವಿವರಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

#### ೧. ಕಲಿಕೆಯ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು

ಆಯಾ ಹಂತಗಳಿಗೆ ಅನುಗುಣವಾಗಿ ಇರುವ ಪಾಠಗಳಿಗೆ ಸಂಬಂಧಿಸಿದಂತೆ ಪೂರ್ಣ ಮಾಹಿತಿಗಳನ್ನು ಪಠ್ಯಪುಸ್ತಕಗಳು ಒಳಗೊಂಡಿದ್ದು, ಶಿಕ್ಷಕರಿಗೆ ಯಾವ ಅಂಶಗಳಿಗೆ ಗಮನ ಕೇಂದ್ರೀಕರಿಸಬೇಕು, ವಿಸ್ತೃತಗೊಳಿಸಬೇಕು, ಮಿತಿಗೊಳಿಸಬೇಕು ಎಂಬುದರ ತಿಳುವಳಿಕೆಯನ್ನುಂಟು ಮಾಡುತ್ತದೆ. ಅಂದರೆ ಬೋಧನಾ ವಿಷಯದ ಆಳ, ಅರಿವು ಮತ್ತು ತೀವ್ರತೆಯ ಬಗ್ಗೆ ಶಿಕ್ಷಕರಿಗೆ ಸ್ಪಷ್ಟ ಕಲ್ಪನೆಯನ್ನುಂಟು ಮಾಡುತ್ತದೆ. ಕಲಿಕೆಯಲ್ಲಿ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳಲು ಪಠ್ಯಪುಸ್ತಕಗಳು ತುಂಬಾ ಅವಶ್ಯಕವಾಗಿವೆ. ಈ ಕಲಿಕೆ ನಮ್ಮಲ್ಲಿರಲಿಲ್ಲ. ಇದು ಶಿಕ್ಷಕರಿಗೆ ಅರ್ಥವಾಗಬೇಕಾದುದು ಅತ್ಯಾವಶ್ಯಕ. ಉದಾಹರಣೆಗೆ ಆಕೃತಿಗಳು - ಆಯಾತಾಕಾರ ಯಾವುದು? ಹೇಗಿರುತ್ತದೆ? ಒಂದು ಪುಸ್ತಕವನ್ನು ತೋರಿಸಿ ಇದು ಯಾವ ಆಯಾತಕಾರದಲ್ಲಿದೆಂದು ಹೇಳಬಹುದು. ಆದರೆ ಪುಸ್ತಕವೇ ಆಯತವಲ್ಲ. ಅದರಂತೆಯೇ "ಸಿಹಿ ಎಂದರೇನು" ಜಿಲೇಬಿ ಸಿಹಿಯಾಗಿದೆ ಎಂದು ಹೇಳಬಹುದೇ ಹೊರತು, ಜಿಲೇಬಿಯೇ ಸಿಹಿಯಲ್ಲ. ಈ ರೀತಿಯ ಪರಿಕಲ್ಪನೆಗಳನ್ನು ಸ್ಪಷ್ಟವಾಗಿ ಅರ್ಥ ಮಾಡಿಕೊಳ್ಳಲು ಶಿಕ್ಷಕ ಮತ್ತು ವಿದ್ಯಾರ್ಥಿಗೆ ಸೇತುವೆಯಾಗಿ ಪಠ್ಯಪುಸ್ತಕ ಕಾರ್ಯನಿರ್ವಹಿಸುತ್ತದೆ.

#### ೨. ಶಿಕ್ಷಕರ ಮಾರ್ಗದರ್ಶನ ಮತ್ತು ಕಲಿಸುವ ಉದ್ದೇಶದ ಸ್ಪಷ್ಟತೆ ಅರಿಯಲು

ಪ್ರಾಥಮಿಕ ಅಥವಾ ಪ್ರೌಢಶಾಲಾ ಹಂತದ ತರಗತಿಗೆ ಅನುಗುಣವಾಗಿ ಪ್ರತಿದಿನ ಏನನ್ನು ಬೋಧಿಸಬೇಕು? ಎಷ್ಟು ವಿಷಯ? ಯಾವ ತರಹದ ಅಂಶಗಳನ್ನು ಒಳಗೊಂಡಂತೆ ಬೋಧಿಸಬೇಕು? ಬೋಧನಾ ವೇಳೆ, ಚಿತ್ರ, ಭೂಪಟ, ಪ್ರಶ್ನೆಗಳು ಯಾವ ರೀತಿ ಗೃಹಕಾರ್ಯ ಕೊಡಬೇಕು? ಹಾಗೆಯೇ ಯಾವ ಸಾಮಾನ್ಯ ಗುರಿಗಳು ಮತ್ತು ನಿರ್ದಿಷ್ಟ ಬೋಧನಾ ಉದ್ದೇಶಗಳನ್ನು

ರಚಿಸಿಕೊಳ್ಳಬೇಕು? ಆ ಪಾಠಕ್ಕೆ ಪೀಠಿಕೆ ಯಾವ ರೀತಿ ಇರಬೇಕು? ಎಂದು ಯೋಜಿಸಲು ಗುರಿ ನಿರೂಪಣೆ ನಿರ್ಧರಿಸಲು ಮತ್ತು ಸೂಕ್ತ ಕಲಿಕೆಯ ಅನುಭವಗಳನ್ನು ಆಯ್ಕೆ ಮಾಡಿಕೊಳ್ಳಲು, ವಿಷಯದ ಮೇಲೆ ಪ್ರಭುತ್ವ ಸಾಧಿಸಲು ಶಿಕ್ಷಕರಿಗೆ ಪಠ್ಯಪುಸ್ತಕವು ಅತಿ ಅವಶ್ಯಕವು ಮತ್ತು ಮಾರ್ಗದರ್ಶಿಯೂ ಆಗಿದೆ. ನಾವು ಏಕೆ ಮತ್ತು ಏನನ್ನು ಬೋಧಿಸುತ್ತೇವೆ ಎಂಬ ವಿಷಯಗಳಲ್ಲಿ ಸ್ಪಷ್ಟತೆ ಕಂಡುಕೊಳ್ಳಲು ಪಠ್ಯಪುಸ್ತಕ ಸಹಾಯಕವಾಗುತ್ತದೆ. ಶಿಕ್ಷಕರಿಗೆ ತಮ್ಮ ಕಲಿಸುವ ಉದ್ದೇಶವನ್ನು ಸ್ಪಷ್ಟಪಡಿಸಿಕೊಳ್ಳಲು ಅದು ಅವಶ್ಯಕವಾಗಿದೆ. ಉದಾಹರಣೆಗೆ ಗಣಿತದ ವಿನ್ಯಾಸದ ಬಗ್ಗೆ ಈ ಮೊದಲು ಕಲಿಸುತ್ತಿದ್ದೇವಾದರೂ, ಏತಕ್ಕೆ ಎಂಬುದನ್ನು ಅರಿಯುವ ಗೋಜಿಗೆ ಹೋಗಿರಲಿಲ್ಲ. ಗಣಿತದಲ್ಲಿನ ಸೌಂದರ್ಯವನ್ನು ಆಸ್ವಾದಿಸುವುದು ಗಣಿತ ಶಿಕ್ಷಣದ ಒಂದು ಮುಖ್ಯ ಉದ್ದೇಶವೇ ಆಗಿದೆ.

**೩. ಶಿಕ್ಷಕರಲ್ಲಿ ಆತ್ಮವಿಶ್ವಾಸ ಹೆಚ್ಚಿಸಿಕೊಳ್ಳಲು**

ಪಠ್ಯಕ್ರಮ ರಚನೆಯಿಂದ ಶಿಕ್ಷಕರಲ್ಲಿ ಆತ್ಮವಿಶ್ವಾಸ ಹೆಚ್ಚಾಗುವುದು. ಯಾವುದೇ ವಿಷಯದ ಆಳಕ್ಕೆ ಇಳಿದು ಅರ್ಥ ಮಾಡಿಕೊಂಡರೆ ಅದು ನಮ್ಮಲ್ಲಿ ಆತ್ಮವಿಶ್ವಾಸ ಮೂಡಿಸಬಲ್ಲದು. ನಾನೀಗ ತರಗತಿಗೆ ವಿಶ್ವಾಸದಿಂದಲೇ ಹೋಗಬಲ್ಲೆ ಮಕ್ಕಳ ಪ್ರಶ್ನೆಗಳಿಗೆ ಸಿಟ್ಟಾಗದೇ, ಬೇಸರಿಸಿಕೊಳ್ಳದೇ ಉತ್ತರಿಸಬಲ್ಲೆ. ಇದನ್ನು ನಾವು ನಮ್ಮ ಮಕ್ಕಳಲ್ಲಿಯೂ ಕಾಣಬಹುದು ಎನ್ನುತ್ತಾರೆ ದಾವಣಗೆರೆ ಅಜಾದ್ ನಗರದ ಸ.ಹಿ.ಪ್ರಾ. ಶಾಲೆಯ ಮುಖ್ಯ ಶಿಕ್ಷಕ ಆಂಜನೇಯ.

**೪. ಮುಕ್ತ ವಾತಾವರಣ ನಿರ್ಮಾಣವಾಗಲು**

ಪಠ್ಯಪುಸ್ತಕಗಳು ವಿದ್ಯಾರ್ಥಿಗಳು ಮತ್ತು ಶಿಕ್ಷಕರ ನಡುವೆ ಮುಕ್ತ ವಾತಾವರಣ ಕಲ್ಪಿಸುತ್ತವೆ. ಇವುಗಳಿಂದಾಗಿ ಶಿಕ್ಷಕರೊಂದಿಗೆ, ತಮ್ಮದೇ ಗುಂಪಿನಲ್ಲಿ ಚರ್ಚೆಗಳನ್ನು ನಡೆಸಲು ಅವರಲ್ಲಿ ಬದಲಾವಣೆ ತರಲು ಮತ್ತು ಬೇರೆಯವರನ್ನು ಅರಿಯಲು ಸಹಾಯಕ.

**೫. ತರಗತಿ ಪ್ರಕ್ರಿಯೆ ಅರ್ಥ ಮಾಡಿಕೊಳ್ಳಲು**

ಮಕ್ಕಳಿಂದ ನಾವು ಯಾವ ಅಪೇಕ್ಷಿತ ಕಲಿಕೆಯಾಗಬೇಕು, ಅದು ಮಕ್ಕಳಲ್ಲಿ ಆಗುತ್ತಿದೆಯೋ ಅಥವಾ ಇಲ್ಲವೋ ಎಂಬುದನ್ನು ಶಿಕ್ಷಕರು ಅರ್ಥ ಮಾಡಿಕೊಳ್ಳಲು ಪಠ್ಯಪುಸ್ತಕಗಳು ಸಹಾಯಕವಾಗಿವೆ. ಉದಾಹರಣೆ: "ಶಾಲೆಯಲ್ಲಿ ಕಲಿತ ಗಣಿತವನ್ನು ಮಗು ನಿತ್ಯಜೀವನದಲ್ಲಿ ಬಳಸುವುದು" - ಶಾಲೆಯ ಮಕ್ಕಳಾದ ಸಾನಿಯಾ ಮತ್ತು ಬಸವರಾಜ ಹೇಳುತ್ತಾರೆ- "ಅಂಗಡಿಗೆ ಹೋಗುವಾಗ ನಾವು ತೆಗೆದುಕೊಳ್ಳಬೇಕಾಗಿರುವ ವಸ್ತುಗಳಿಗೆ ಎಷ್ಟು ಬೆಲೆಯಾಗುತ್ತದೆ. ನಂತರ ಅವನ್ನು ತೆಗೆದುಕೊಂಡು ಹಿಂತಿರುಗುವಾಗ ನಮ್ಮಲ್ಲಿ ಎಷ್ಟು ಹಣ ಉಳಿದಿರುತ್ತದೆ ಎಂಬುದನ್ನು ಈ ಮೊದಲೇ ಅಂದಾಜು ಮಾಡಿರುತ್ತವೆ". ಒಂಬತ್ತು ವರ್ಷದ ಭೀಮರಾಯ ಹೇಳುತ್ತಾನೆ-"ಒಮ್ಮೆ ಅಂಗಡಿಯಾತ ನನಗೆ ಕಡಿಮೆ ಹಣವನ್ನು ಹಿಂತಿರುಗಿಸಿದ. ನಾನು ಸರಿಯಾಗಿ ಲೆಕ್ಕ ಹಾಕಿ ನನಗೆ ಬರಬೇಕಾದ ಹಣವನ್ನು ಕೇಳಿ ಪಡೆದೆ". ಇಲ್ಲಿ ತರಗತಿ ಪಠ್ಯದೊಂದಿಗೆ ಲೋಕಾನುಭವವು ಮಕ್ಕಳ ಮೇಲೆ ಪ್ರಭಾವ ಬೀರುತ್ತದೆ.

೬ ಮಗುವಿನ ಕಲಿಕಾ ಸಾಮರ್ಥ್ಯ ವೃದ್ಧಿಗೆ

ನಿರ್ದಿಷ್ಟ ಪಠ್ಯ ಇಟ್ಟುಕೊಂಡು ಶಿಕ್ಷಕರು ಬೋಧಿಸುವುದರಿಂದ ಅವರ ಕಲಿಕಾ ಮಟ್ಟ ವೃದ್ಧಿಯಾಗಲು ಸಹಾಯಕವಾಗುತ್ತದೆ. ಇದರಿಂದ ಕಲಿಕೆ ಮತ್ತು ಬೋಧನೆ ಇವುಗಳಲ್ಲಿ ಒಂದಕ್ಕೊಂದು ಸಂಬಂಧ ಏರ್ಪಟ್ಟಿರುವುದನ್ನು ತರಗತಿಯಲ್ಲಿ ನಾವೀಗ ಕಾಣುತ್ತೇವೆ.

ಯಾವುದೇ ಪಠ್ಯ ವಿಷಯವನ್ನು ಕಲಿಸುವಾಗ ಅದನ್ನು ಕಲಿಸುವ ಉದ್ದೇಶವೇನು? ಯಾವ ಪಠ್ಯ ವಿಷಯದಲ್ಲಿ ಯಾವ ಸಾಮರ್ಥ್ಯಗಳನ್ನು ಮಗು ಕಲಿಯುತ್ತದೆ ಎಂಬಂಥ ಅಂಶಗಳು ಸರಿಯಾಗಿ ಅರ್ಥವಾದವು. ಈ ಮೊದಲು ಪಠ್ಯದಲ್ಲಿ ನೀಡಿರುವ ವಿಷಯಗಳನ್ನು ಮಾತ್ರ ಕಲಿಸುವತ್ತ ನಮ್ಮ ಗಮನ ಕೇಂದ್ರೀಕೃತವಾಗಿತ್ತು. ಉದಾ: ಗಣಿತದ ಸಾಮರ್ಥ್ಯಗಳು, ಹೋಲಿಕೆ, ವ್ಯತ್ಯಾಸ, ಸಾಮ್ಯತೆ ಮುಂತಾದವುಗಳು. ಪರಿಸರ ಅಧ್ಯಯನ-ವೀಕ್ಷಣೆ, ವರ್ಗೀಕರಣ ಮುಂತಾದವುಗಳು. ಭಾಷೆ ಆಲಿಸುವುದು, ಮಾತನಾಡುವುದು, ಓದು, ಬರಹ ಮುಂತಾದವುಗಳು. ಇವುಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ಪಠ್ಯಕ್ಕೂ ಮತ್ತು ಶಿಕ್ಷಣದ ಗುರಿ-ಉದ್ದೇಶಗಳಿಗೂ ಒಂದಕ್ಕೊಂದು ಸಂಬಂಧ ಇರುವುದು ಕಂಡುಬರುತ್ತದೆ. ಈಗ ತರಗತಿಗಳಲ್ಲಿ ಒಂದಕ್ಕಿಂತ ಹೆಚ್ಚು ಚಟುವಟಿಕೆಗಳು ಪ್ರಯೋಗವಾಗುತ್ತಿವೆ. ಉದಾ:- ಸಿದ್ಧಪಡಿಸಿದ ಒಂದು ಚಟುವಟಿಕೆ ಅಷ್ಟಾಗಿ ಸರಿ ಹೊಂದುತ್ತಿಲ್ಲ ಎಂದೆನಿಸಿದರೆ ತಕ್ಷಣವೇ ಬೇರೊಂದು ಚಟುವಟಿಕೆಯನ್ನು ಅದಕ್ಕೆ ಪೂರಕವಾಗಿ ನಾವೀಗ ಮಾಡಬಲ್ಲೆವು.

ಉದಾಹರಣೆ: "ಮಗುವಿನ ವೀಕ್ಷಣೆ ಸಾಮರ್ಥ್ಯವನ್ನು ಹೆಚ್ಚಿಸುವುದು" ಪರಿಸರ ಅಧ್ಯಯನದ ಒಂದು ಪ್ರಮುಖ ಉದ್ದೇಶ. ತರಗತಿಯಲ್ಲಿ ಒಮ್ಮೆ ಮರಿ ಹಾಕುವ ಮತ್ತು ಮೊಟ್ಟೆ ಇಡುವ ಪ್ರಾಣಿಗಳ ಬಗ್ಗೆ ಚರ್ಚೆ ನಡೆಯಿತು. ಕೆಲದಿನಗಳ ನಂತರ ಆರು ವರ್ಷದ ಚೌಡಮ್ಮ ಎಂಬ ಮಗು ತರಗತಿಯಲ್ಲಿ "ಸರ್, ನಮ್ಮ ಮನೆಯಲ್ಲಿ ನಿನ್ನೆ ಮೀನಿನ ಸಾಂಬಾರು ಮಾಡಿದ್ದರು. ಅದನ್ನು ಕೊಯ್ಯುವಾಗ ಅದರಲ್ಲಿ ತುಂಬಾ ಮೊಟ್ಟೆಗಳಿರುವುದನ್ನು ನಾನು ನೋಡಿದೆ" ಎಂದು ಹೇಳಿದಳು. ಈ ರೀತಿ ಪಠ್ಯಪುಸ್ತಕ ವಿದ್ಯಾರ್ಥಿಗಳು ತಮ್ಮ ಕಲಿಕಾ ಸಾಮರ್ಥ್ಯ ವೃದ್ಧಿಸಿಕೊಳ್ಳಲು ಮತ್ತು ಕಲಿಕೆಯನ್ನು ಅವರು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಗುತ್ತವೆ.

೭ ವಿದ್ಯಾರ್ಥಿಗಳ ಜ್ಞಾನಾಭಿವೃದ್ಧಿ ಮತ್ತು ಕಲಿಕೆಯಲ್ಲಿ ಸ್ಪಷ್ಟತೆ ಕಂಡುಕೊಳ್ಳಲು

"ವಿದ್ಯಾರ್ಥಿಗಳಿಗೆ ಪುಠ್ಯಪುಸ್ತಕ "ಕಾಮಧೇನು-ಕಲ್ಪವೃಕ್ಷ"ವಿದ್ದಂತೆ ಎಂದರೆ ತಪ್ಪಾಗಲಾರದು. ಇದು ಅತ್ಯಂತ ಸುಲಭಸಾಧ್ಯವಾದ ಮಾರ್ಗದರ್ಶಿಯಾಗಿದೆ".[೨] ಈ ಹಂತಗಳಲ್ಲಿ ಅವರ ಅವಧಾನ ಶಕ್ತಿ ಕಡಿಮೆ ಇದ್ದು ಶಾಲೆಯ ಬೋಧಕರ ಎಲ್ಲಾ ಅಂಶಗಳನ್ನು ಗ್ರಹಿಸುವಲ್ಲಿ ವಿಫಲರಾಗಿರುವ ಸಾಧ್ಯತೆಗಳಿವೆ. ಇದನ್ನು ಸರಿದೂಗಿಸಲು ಪಠ್ಯಪುಸ್ತಕ ವಿದ್ಯಾರ್ಥಿಗಳಿಗೆ ನೆರವು ನೀಡುತ್ತದೆ. ಬೋಧನೆಯಲ್ಲಿ ಕೊರತೆ ಮತ್ತು ನ್ಯೂನತೆಗಳಿಗೆ ಪರಿಹಾರೋಪಾಯದಲ್ಲಿ ಸಹಾಯಕವಾಗಿದೆ. ಅಲ್ಲದೆ ಮಕ್ಕಳಲ್ಲಿ ಪ್ರಚೋದನೆಯನ್ನುಂಟು ಮಾಡಿ, ಉತ್ತಮ ಜ್ಞಾನಾಭಿವೃದ್ಧಿಗೆ, ಮುಂದಿನ ಓದಿಗೆ ಗೃಹಕಾರ್ಯ ನಿರ್ವಹಿಸಲು, ಪರೀಕ್ಷೆಗೆ ಉತ್ತಮ ಸಿದ್ಧತೆ ಮಾಡಿಕೊಳ್ಳಲು ಸಹಾಯಕವಾಗಿದೆ. ಒಟ್ಟಾರೆ ಪಠ್ಯಪುಸ್ತಕ ವಿದ್ಯಾರ್ಥಿಗಳಿಗೆ ಒಬ್ಬ "ಉತ್ತಮ ಸ್ನೇಹಿತ"ನಂತೆ ಇದ್ದು ಶಿಸ್ತಿನ

ಸಿಪಾಯಿಯನ್ನಾಗಿ ರೂಪಿಸುವಲ್ಲಿ ಸಹಕಾರಿಯಾಗಿದೆ ಎನ್ನಬಹುದು. ಅಲ್ಲದೆ ಪಠ್ಯಪುಸ್ತಕಗಳಿಂದ ಪರಿಕಲ್ಪನೆಗಳ ಅರ್ಥಮಾಡಿಕೊಳ್ಳುವಿಕೆ ಮಕ್ಕಳಲ್ಲಿಯೂ ಕಂಡುಬರುತ್ತಿದೆ. ಉದಾ:- ೯-೪=೫ ಎಂದರೆ ೯ ಮತ್ತು ೪ ಬೇರೆ ಬೇರೆಯಲ್ಲ, ಇರುವ ೯ರಲ್ಲಿ ೪ನ್ನು ತೆಗೆಯಬೇಕು ಎಂಬುದಾಗಿದೆ. ಈ ರೀತಿ ಅನೇಕ ಪರಿಕಲ್ಪನೆಗಳನ್ನು ಮಕ್ಕಳು ಸ್ಪಷ್ಟವಾಗಿ ವಿವರಿಸಬಲ್ಲರು. ಯಾವ ಚಟುವಟಿಕೆಗಳು ಉಪಯುಕ್ತವಾಗಿವೆ ಮತ್ತು ಯಾವುವು ಇಲ್ಲ ಎಂಬುದನ್ನು ಶಿಕ್ಷಕರು ತರಗತಿಯಲ್ಲಿ ಪ್ರಯೋಗಿಸಿ ತಿಳಿದುಕೊಳ್ಳಲು ಸಹಾಯಕವಾಗಿವೆ. ಉದಾ:- "ಸಂಖ್ಯಾ ರೇಖೆಯನ್ನು ಬಳಸಿ ಸಂಕಲನ ಮತ್ತು ವ್ಯವಕಲನ ಮಾಡುವುದು". ಸರಿಯಾದ ಪಠ್ಯಪುಸ್ತಕವಿದ್ದಲ್ಲಿ ಮಕ್ಕಳಿಗೆ ಸಂಕಲನ ಮತ್ತು ವ್ಯವಕಲನ ಸಮಸ್ಯೆಗಳನ್ನು ಬಿಡಿಸಲು ಇದು ನೆರವಾಗಬಲ್ಲದು. ಅಲ್ಲದೆ ಕೆಲವು ವಿಶೇಷ ಟಾಸ್ಕ್‌ಗಳನ್ನು ವಿದ್ಯಾರ್ಥಿಗಳಿಗೆ ನೀಡುವ ಮೂಲಕ ಅವರನ್ನು ಕಲಿಕೆಯಲ್ಲಿ ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳಲು ಪಠ್ಯಪುಸ್ತಕಗಳು ಸಹಾಯಕ.

**೮. ನಿರ್ಧಾರಣೆ ಮತ್ತು ಮೌಲ್ಯಮಾಪನಕ್ಕೆ**

ಪಠ್ಯಕ್ರಮ ರಚನೆಯಿಂದಾಗಿ "ಕಲಿಸಿದ ವಿಷಯಗಳನ್ನು ಮಗು ಎಷ್ಟು ಕಲಿತಿದೆ" ಎಂಬುದನ್ನು ತಿಳಿಯಲು ಮತ್ತು 'ನಿರ್ಧಾರಣೆ' ಮಾಡಲು ಸಹಾಯಕವಾಗುತ್ತದೆ. ನಿರ್ಧಾರಣೆ ಎಂದರೆ ಶಿಕ್ಷಣವು ನಾಗರಿಕರನ್ನು ಅರ್ಥಪೂರ್ಣವಾದ ಮತ್ತು ಉತ್ಪಾದಕ ಬದುಕನ್ನು ಬದುಕಲು ತಯಾರು ಮಾಡುವ ಕಾಳಜಿ ಹೊಂದಿದೆ. ಮೌಲ್ಯಮಾಪನವು ಅಂತಹ ಶಿಕ್ಷಣವನ್ನು ಒದಗಿಸುವಲ್ಲಿ ನಾವು ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದೇವೆ ಎಂಬುದರ ಬಗ್ಗೆ ವಿಶ್ವಾಸಾರ್ಹ ಮರು ಅಭಿಪ್ರಾಯವನ್ನು ಒದಗಿಸುವ ಮಾರ್ಗವಾಗಿದೆ. ಅಲ್ಲದೇ ಇದು ನಮ್ಮ ಬೋಧನಾ ವಿಧಾನ ಬಳಸುವ ಸಾಮಗ್ರಿ, ನಾವು ಗಳಿಸಿಕೊಂಡಿರುವ ಜ್ಞಾನವನ್ನು ಪುನರ್‌ಪರಿಶೀಲಿಸುವುದಾಗಿದೆ. ಕಲಿಕೆಯ ನಿರ್ಧಾರಣೆಯ ಮೂಲ ಉದ್ದೇಶ ಕಲಿಕೆಯ ಮತ್ತು ಬೋಧನೆಯ ಪ್ರಕ್ರಿಯೆಗಳನ್ನೂ ಮತ್ತು ಸಾಮಗ್ರಿಗಳನ್ನೂ ಉತ್ತಮಪಡಿಸುವುದೇ ಆಗಿದೆ.

**೯. ಬೋಧನೋಪಕರಣಗಳ ಮಾಹಿತಿ ಅರಿಯಲು**

ಪಠ್ಯಪುಸ್ತಕಗಳು ಅನೇಕ ರೀತಿಯ ಚಿತ್ರ, ಭೂಪಟ, ನಕ್ಷೆ, ವಂಶಾವಳಿ, ಕಾಲ, ರೇಖೆಗಳನ್ನು ಒಳಗೊಂಡಿದ್ದು ಮಕ್ಕಳಲ್ಲಿ ಆಸಕ್ತಿಯನ್ನು ಬೆಳೆಸಲು ಸಹಾಯಕವಾಗಿದೆ. ಹಾಗೆಯೇ ಶಿಕ್ಷಕ ಪಠ್ಯಪುಸ್ತಕ ವಿಷಯವನ್ನು ಆಧರಿಸಿ ಇನ್ನೂ ಉತ್ತಮ ಕಾಲ್ಪನಿಕ ಮತ್ತು ಚಟುವಟಿಕಾ ಮಾದರಿ ಚಿತ್ರಗಳನ್ನು ರೂಪಿಸಿ ಬೋಧಿಸಲು ಸಹಾಯಕವಾಗಿವೆ.

**೧೦. ವಿಷಯದ ತಾರ್ಕಿಕ ಮಂಡನೆಗೆ ಪೂರಕ**

**ಸಮಾಜವಿಜ್ಞಾನದಂಥ** ವಿಶಾಲ ವ್ಯಾಪ್ತಿಯುಳ್ಳ ವಿಷಯಗಳನ್ನು ಕ್ರಮಬದ್ಧವಾಗಿ ಅಂದರೆ, ವಿಷಯದ ಪ್ರಾರಂಭ, ಮಧ್ಯೆ, ಅಂತ್ಯವನ್ನು ಶಿಸ್ತುಬದ್ಧವಾಗಿ ಜೋಡಿಸಿಕೊಂಡು ಅಭ್ಯಸಿಸಲು ಮತ್ತು ಬೋಧಿಸಲು ವಿದ್ಯಾರ್ಥಿ ಮತ್ತು ಶಿಕ್ಷಕರಿಗೆ ಪಠ್ಯಪುಸ್ತಕ ಸಹಾಯಕವಾಗಿದೆ. ಇತಿಹಾಸದ ವಿಷಯದಲ್ಲಿ ಈ ಅಂಶ ಅತ್ಯಂತ ಪ್ರಮುಖವಾದುದಾಗಿದೆ. ಕಾರಣ ಘಟನೆಯ ಪ್ರಾರಂಭದಿಂದ ಪ್ರಾರಂಭಿಸಿ ಅಂತ್ಯದೊಂದಿಗೆ ಮುಕ್ತಾಯಗೊಳಿಸಿದರೆ ಮಾತ್ರ ಅರ್ಥಪೂರ್ಣ ಅಭ್ಯಾಸ ಅಥವಾ

ಬೋಧನೆಯಾಗುವುದು. ಈ ರೀತಿ ಪಠ್ಯಪುಸ್ತಕದಲ್ಲಿ ವಿಷಯವನ್ನು ತಾರ್ಕಿಕವಾಗಿ ಜೋಡಿಸಿರುವುದರಿಂದ ವಿದ್ಯಾರ್ಥಿಗಳ ಮತ್ತು ಶಿಕ್ಷಕರ ತಾರ್ಕಿಕ ಅಭ್ಯಾಸ ಮತ್ತು ಬೋಧನೆಗೆ ಸಹಾಯಕವಾಗಿದೆ.

**೧೧. ಕಾಲದ ಕಲ್ಪನೆ ಬೆಳೆಸಲು**

ಕಾಲದ ಕಲ್ಪನೆ ಪ್ರತಿ ಅಭ್ಯಾಸದ ವಿಷಯದಲ್ಲಿ ಪ್ರಮುಖವಾದದು. ವಿವಿಧ ಹಂತಗಳಲ್ಲಿ ಮಕ್ಕಳಿಗೆ ಬೋಧನಾ ವೇಳೆ ನಿರಂತರವಾಗಿ ಇಸವಿಗಳನ್ನು ಹೇಳುತ್ತಾ ಹೋದರೆ ನಿರಾಸಕ್ತಿಯುಂಟಾಗುತ್ತದೆ. ಆದ್ದರಿಂದ ಕವಿ, ಕಾಲ, ಇಲ್ಲವೇ ಪ್ರಮುಖ ವೈಜ್ಞಾನಿಕ ಶೋಧನೆಗಳು, ಸಂಭವಿಸಿದ ಪ್ರಚಲಿತ ಘಟನೆಗಳು, ನಡೆದ ಯುದ್ಧಗಳು ಮೊದಲಾದವುಗಳಲ್ಲಿ ಪ್ರಮುಖ ಇಸವಿಗಳನ್ನು ಕಾಲಾನುಕ್ರಮದಲ್ಲಿ ಪಠ್ಯಪುಸ್ತಕದಲ್ಲಿ ನೀಡಲಾಗಿರುತ್ತದೆ. ಇದರಿಂದ ವಿದ್ಯಾರ್ಥಿಗಳು ಅವುಗಳನ್ನು ಓದುತ್ತಾ ಗ್ರಹಿಸಿಕೊಳ್ಳಲು ಸಹಾಯಕವಾಗುತ್ತದೆ.[೮] ಇದರಿಂದ ಚಾರಿತ್ರಿಕ ಮತ್ತು ಜಾಗೃತಿ ಪ್ರಜ್ಞೆ ಮಕ್ಕಳಲ್ಲಿ ಬೆಳೆಸಿಕೊಳ್ಳಲು ಸಹಾಯಕವಾಗುತ್ತದೆ. ಇಲ್ಲದಿದ್ದರೆ ಶಿಕ್ಷಕ ಹಾಗೂ ವಿದ್ಯಾರ್ಥಿಗಳಿಬ್ಬರು ಗೊಂದಲಕ್ಕೆ ಒಳಗಾಗಬಹುದು. ಕಾಲದ ವೈಜ್ಞಾನಿಕ ಅರಿವು ಇಬ್ಬರಿಗೂ ಅಗತ್ಯವಿದೆ.

**೧೨. ಸ್ಥಳ ಕಲ್ಪನೆ ಬೆಳೆಸಲು**

"ಯಾವುದೇ ಘಟನೆಯು ಶೂನ್ಯದಲ್ಲಿ ಜರುಗುವುದಿಲ್ಲ. ಅದಕ್ಕೆ ಒಂದು ನಿರ್ದಿಷ್ಟ ಸ್ಥಳ ಇರುತ್ತದೆ. ಈ ರೀತಿ ಘಟನೆಗಳನ್ನು ಪಠ್ಯಪುಸ್ತಕದಲ್ಲಿ ತಿಳಿಸುವಾಗ ಭೂಪಟಗಳನ್ನು ಭೌಗೋಳಿಕ ಸನ್ನಿವೇಶಗಳ ಮಾಹಿತಿಗಳಾದ ಸಮುದ್ರ, ನದಿ, ಗುಡ್ಡ, ಬೆಟ್ಟ ಇತ್ಯಾದಿಗಳ ಸ್ಥಳ ಕಲ್ಪನೆಯನ್ನು ಮೂಡಿಸುತ್ತದೆ.[೯] ಇದರಿಂದ ಮಕ್ಕಳಿಗೆ ಸ್ಪಷ್ಟ ಸ್ಥಳದ ಕಲ್ಪನೆಯನ್ನು ಮೂಡಿಸಲು ಚರಿತ್ರೆ ಪಠ್ಯಪುಸ್ತಕಗಳು ಉಪಯುಕ್ತವಾಗುತ್ತವೆ.

**೧೩. ಶಿಕ್ಷಕರು ಗೃಹ ಕಾರ್ಯ ನಿಯೋಜಿಸಲು**

ಶಿಕ್ಷಕರು ಬೋಧನೆಯ ನಂತರ ಆಯಾ ಪಾಠಕ್ಕೆ ಸಂಬಂಧಿಸಿದಂತೆ ಗೃಹಕಾರ್ಯ ನೀಡಲು ಸಹಾಯಕವಾಗಿದೆ. ಪಠ್ಯಪುಸ್ತಕದ ಅಂತ್ಯದಲ್ಲಿ ಅಭ್ಯಾಸ ಎನ್ನುವ ಮುಖ್ಯ ಭಾಗವನ್ನು ಒಳಗೊಂಡಿರುತ್ತದೆ. ಇಲ್ಲಿನ ಸೂಚನೆಗಳನ್ನು ಅನುಸರಿಸಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಗೃಹಕಾರ್ಯ ನಿಯೋಜಿಸಲು ಸುಲಭವಾಗುತ್ತದೆ. ಅಲ್ಲದೆ ಈ ರೀತಿ ವಿದ್ಯಾರ್ಥಿಗಳಿಗೆ ವಹಿಸಲಾದ ಕಾರ್ಯದ ಪ್ರಗತಿಯನ್ನು ಪರಿಶೀಲಿಸಲು ಸಹಾಯಕವಾಗುತ್ತದೆ.

**೧೪. ಪ್ರಾಯೋಗಿಕ ಬೋಧನೆಗೆ ಪೂರಕ**

ವಿವಿಧ ಜ್ಞಾನ ಶಿಸ್ತುಗಳಲ್ಲಿನ ಪಠ್ಯದಲ್ಲಿರುವ ಕೆಲ ಕ್ಲಿಷ್ಟ ಸಂಗತಿಗಳನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡಲು, ಅವರಿಗೆ ಮನನ ಮಾಡಿಕೊಡಲು ಇಲ್ಲವೇ ವ್ಯವಸ್ಥಿತ ಮತ್ತು ಕ್ರಮಬದ್ಧ ಅಧ್ಯಯನ ಮಾಡಲು ಪ್ರಾಯೋಗಿಕ ಬೋಧನೆ ಅತ್ಯವಶ್ಯಕ. ಈ ಹಿನ್ನೆಲೆಯಲ್ಲಿ

ಪ್ರಾಯೋಗಿಕ ಕೆಲಸಗಳಾದ ನಾಟಕೀಕರಣ, ಬೊಂಬೆಯಾಟ, ವೈಭವೋತ್ಸವಗಳು, ಮೌನ ಪ್ರದರ್ಶನಗಳು, ಭೂಪಟ, ನಕ್ಷೆ, ಕಾಲರೇಖೆ, ಚಿತ್ರಪಟಗಳ ರಚನೆ, ವಂಶಾವಳಿ ಇತ್ಯಾದಿ ಪ್ರಾಯೋಗಿಕ ಕೆಲಸ ನಿರ್ವಹಿಸಲು ಪಠ್ಯಗಳು ನಮಗೆ ಸಹಕಾರಿಯಾಗಿವೆ. ಬೋಧನ ವಿಧಾನದ ಆಯ್ಕೆಗೆ ತಕ್ಕಂತೆ ಸೂಕ್ತ ಪ್ರಾಯೋಗಿಕ ಕೆಲಸವನ್ನು ಆಯ್ಕೆ ಮಾಡಿಕೊಳ್ಳಬೇಕು.

**೧೫. ಬೋಧನಾ ವಿಧಾನಗಳ ಅನುಸರಣೆಗೆ ಉಪಯುಕ್ತ**

ಪಠ್ಯಪುಸ್ತಕದಲ್ಲಿನ ವಿಷಯದ ಆಧಾರದ ಮೇಲೆ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ತನ್ನ ಸ್ವಭಾವಕ್ಕೆ ಸೂಕ್ತವಾದ ವಿಧಾನವನ್ನು ಆಯ್ಕೆ ಮಾಡಲು ಸಹಾಯಕ. ಉಪನ್ಯಾಸ, ಚರ್ಚೆ, ಸಮಸ್ಯೆ, ಪರಿಹಾರ, ಯೋಜನಾ, ಜೀವನ ಚರಿತ್ರಾ ವಿಧಾನ ಮುಂತಾದವುಗಳಲ್ಲಿ ಯಾರಿಗೆ ಯಾವುದು ಸೂಕ್ತ? ಎಂದು ನಿರ್ಧರಿಸುವಲ್ಲಿ ಪಠ್ಯಪುಸ್ತಕವು ಸಹಕಾರಿಯಾಗಿದೆ.

**೧೬. ಕೌಶಲ್ಯದ ಬೆಳವಣಿಗೆಗೆ ಪೂರಕ**

ಪಠ್ಯಪುಸ್ತಕದ ಮಾಹಿತಿ ಆಧಾರದ ಮೇಲೆ ಭೂಪಟ ಬರೆಯುವ, ಸ್ಥಳಗಳನ್ನು ಗುರುತಿಸುವ, ಸಾಮ್ರಾಜ್ಯದ ಎಲ್ಲೆಗಳನ್ನು ತೋರಿಸುವ, ಭೂಪಟ ಓದುವ, ವಿಷಯ ವಿವರಿಸುವ, ವಿಶ್ಲೇಷಿಸುವ, ಉದಾಹರಿಸುವ, ಸ್ಪಷ್ಟೀಕರಣಗೊಳಿಸುವ, ಹೋಲಿಕೆ ಮತ್ತು ವ್ಯತ್ಯಾಸ ಮಾಡುವ ಮತ್ತು ಚಿತ್ರ ಬಿಡಿಸುವ ಮೊದಲಾದ ಕೌಶಲ್ಯದ ಬೆಳವಣಿಗೆಗೆ ಸಹಕಾರಿಯಾಗಿವೆ.

**೧೭. ಸತ್ಪ್ರಜೆಗಳ ನಿರ್ಮಾಣ ಮತ್ತು ರಾಷ್ಟ್ರೀಯ ಭಾವೈಕ್ಯದ ಸಾಧನ**

ಪಠ್ಯಪುಸ್ತಕದ ವಿಷಯದಲ್ಲಿನ ವಿಷಯಗಳು ವರ್ತಮಾನವನ್ನು ವಿವರಿಸಿ, ಭವಿಷ್ಯತ್ತಿನ ಮೇಲೆ ಬೆಳಕು ಚೆಲ್ಲುವಂತೆ ಮಾಡುವ ಮೂಲಕ ಸತ್ಪ್ರಜೆಗಳನ್ನು ರೂಪಿಸುವ ಕಾರ್ಯ ಮಾಡುತ್ತವೆ'. ಹಾಗೆಯೇ ವಿಭಿನ್ನ ಭಾಷೆ, ಮತ, ಧರ್ಮ, ಆಹಾರ, ಉಡುಗೆ ತೊಡುಗೆ, ಹಬ್ಬ ಹರಿದಿನಗಳು, ಪ್ರಾಂತ್ಯ ಮತ್ತು ಲಿಂಗ ಬೇಧಗಳನ್ನು ಒಳಗೊಂಡಿದ್ದರೂ ಸಹ ನಾವೆಲ್ಲಾ ಒಂದೇ ಎಂಬಂತೆ ಏಕ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರೀಯ ಲಾಂಛನ ಮತ್ತು ಸಂವಿಧಾನದ ಬಗ್ಗೆ ತಿಳಿಸುವ ಮೂಲಕ ರಾಷ್ಟ್ರೀಯ ಭಾವೈಕ್ಯತೆಯನ್ನು ವಿದ್ಯಾರ್ಥಿಗಳಲ್ಲಿ ಮೂಡಿಸುವ ಸಾಧನವಾಗಿವೆ.

ಈ ಎಲ್ಲಾ ಅಂಶಗಳಿಂದ ಶಿಕ್ಷಣ ಪ್ರಕ್ರಿಯೆಯಲ್ಲಿ ಪಠ್ಯಪುಸ್ತಕಗಳ ಸ್ಥಾನವು ಅತ್ಯಂತ ಮಹತ್ವವುಳ್ಳದ್ದಾಗಿದೆ. ಪಠ್ಯಪುಸ್ತಕದ ಸಹಾಯದಿಂದ ವಿದ್ಯಾರ್ಥಿಗಳು ತಮ್ಮ ಅಭ್ಯಾಸ ಪ್ರಾರಂಭಿಸಿ ಮುಂದುವರಿಸಬಹುದಾಗಿದೆ. ಶಿಕ್ಷಕರು ಇದರಿಂದ ಉತ್ತಮ ರೀತಿಯಲ್ಲಿ ಬೋಧನಾ ಕಾರ್ಯ ಕೈಗೊಳ್ಳಬಹುದಾಗಿದೆ. ಆದರೆ ಶಿಕ್ಷಕ ಪಠ್ಯಪುಸ್ತಕವನ್ನು ಜಾಗರೂಕತೆಯಿಂದ ಎಷ್ಟು ಬೇಕೋ ಅಷ್ಟನ್ನು ಮಿತವಾಗಿ ಬಳಸುವುದು ಉತ್ತಮ. ಶಿಕ್ಷಣ ಕ್ಷೇತ್ರದಿಂದ ಪಠ್ಯಪುಸ್ತಕವನ್ನು ಸಂಪೂರ್ಣವಾಗಿ ದೂರವಾಗಿಡುವುದು ಅಸಾಧ್ಯದ ಮಾತಾಗಿದೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಗಳು ಶೈಕ್ಷಣಿಕ ಕ್ಷೇತ್ರಕ್ಕೆ ಅತ್ಯವಶ್ಯಕ ಸಾಧನಗಳಾಗಿವೆ.

## ೨.೨. ಭಾರತದಲ್ಲಿ ಚರಿತ್ರೆ ಬರವಣಿಗೆಯ ಪರಂಪರೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

ಮಾನವ ಅನಾಗರಿಕತೆಯಿಂದ ನಾಗರಿಕತೆ ಕಡೆಗೆ ಸಾಗಿದ ಜೀವನವೇ ಇತಿಹಾಸ. ಇಂದು ಪ್ರತಿ ಮಾನವನ ಜ್ಞಾನ ವೃದ್ಧಿಗೆ ಚರಿತ್ರೆ ಅತ್ಯವಶ್ಯಕವಾಗಿದೆ. ಅದರಂತೆ ಭಾರತದ ಚರಿತ್ರೆ

ರಚನಾ ಪರಂಪರೆಯನ್ನು ಅವಲೋಕಿಸುವುದು ಮುಖ್ಯವಾಗುತ್ತದೆ. ಇತಿಹಾಸ ರಚನಾಶಾಸ್ತ್ರವನ್ನು ಚರಿತ್ರೆ ಲೇಖನಶಾಸ್ತ್ರ ಮತ್ತು ಹಿಸ್ಟೋರಿಯಾಗ್ರಫಿ ಎಂದೆಲ್ಲಾ ಕರೆಯಲಾಗುತ್ತದೆ. ಗ್ರೀಕರು ಮೊದಲಬಾರಿಗೆ ಇತಿಹಾಸವನ್ನು ದಾಖಲು ಮಾಡುವ ವಿನೂತನ ಪರಂಪರೆಗೆ ನಾಂದಿ ಹಾಡಿದರು. ಆ ಕಾರಣಕ್ಕಾಗಿ ಹೆರೋಡೋಟಸ್‌ನನ್ನು ಇತಿಹಾಸದ ಪಿತಾಮಹ ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಇತಿಹಾಸ ಲೇಖನಶಾಸ್ತ್ರ ತನ್ನ ಸ್ಪಷ್ಟ ಸ್ವರೂಪವನ್ನು ಪಡೆದುಕೊಂಡಿದ್ದು ಬ್ರಿಟಿಷರ ಪ್ರಭಾವದಿಂದ. ಆದರೆ ಇದಕ್ಕಿಂತಲೂ ಹಿಂದಿನಿಂದ ಭಾರತೀಯರಿಗೆ ಇತಿಹಾಸದ ಪರಿಕಲ್ಪನೆ ಇತ್ತು. ವೇದ, ಉಪನಿಷತ್ತು, ಪುರಾಣ, ಅರಣ್ಯಕಗಳು, ಬ್ರಾಹ್ಮಣಕಗಳು, ಗಾಥ, ಗೋತ್ರ ಮತ್ತು ಪ್ರವರ, ನಾರಾಶಂಸಿ, ಗಾಥ, ಆಖ್ಯಾಯಿತಾ, ಸಂಹಿತೆ, ಕಾವ್ಯ, ಭಾಷ್ಯ ಹಾಗು ಹಲವು ವಿದೇಶಿ ಪ್ರವಾಸಿಗರ ಕಥನಗಳು ಮತ್ತು ಕಲ್ಹಣ ಮತ್ತು ಬಿಲ್ಹಣ, ಬಾಣ ಮೊದಲಾದವರ ಪ್ರಾಚೀನ ಭಾರತದ ಪ್ರಮುಖ ಚಾರಿತ್ರಿಕ ರಚನೆಗಳಾಗಿದ್ದವು. ಅದೇ ರೀತಿ ಮಧ್ಯಯುಗೀನ ಭಾರತದಲ್ಲಿ ರಾಜರ ಆಸ್ಥಾನದಲ್ಲಿದ್ದ ಅಲ್ಬೆರೂನಿ, ಇಬನ ಬತೂತ, ಅಮೀರ್‌ಖುಸ್ರು, ಅಬ್ದುಲ್ ಫಸಲ್‌ರ ಬರವಣಿಗೆಗಳು ಮತ್ತು ವಿದೇಶಿ ಪ್ರವಾಸಿಗರ ಕಥನಗಳು ಆ ಕಾಲದ ಪ್ರಮುಖ ಚಾರಿತ್ರಿಕ ರಚನೆಗಳಾಗಿವೆ. ಆದರೆ ಈ ಎಲ್ಲಾ ಕೃತಿಗಳಲ್ಲಿ ಭಾರತದ ಸಮಗ್ರ ವಿವರಗಳು ಇರಲಿಲ್ಲ. ಆ ಕಾರಣಕ್ಕಾಗಿ ಇವೆಲ್ಲವುಗಳು ಅಂದು ಪ್ರಾದೇಶಿಕ ಇತಿಹಾಸಗಳೆಂದು ಜನಪ್ರಿಯವಾದವು. ಭಾರತೀಯ ಇತಿಹಾಸ ಲೇಖನಶಾಸ್ತ್ರದ ದೃಷ್ಟಿಯಿಂದ ಆಧುನಿಕ ಭಾರತ ಅತ್ಯಂತ ಮಹತ್ವದ್ದಾಗಿದೆ. ೧೭೫೭ರಲ್ಲಿ ಬ್ರಿಟಿಷರ ಆಳ್ವಿಕೆ ಆರಂಭವಾಯಿತು. ಅನಂತರ ಫ್ರೆಂಚ್, ಪೋರ್ಚುಗೀಸ್, ಜರ್ಮನ್ ಮೊದಲಾದ ಅನೇಕ ಯುರೋಪಿಯನ್ನರು ಭಾರತಕ್ಕೆ ಬಂದರು. ಅವರಲ್ಲಿ ಅನೇಕರು ಪಾದ್ರಿಗಳಾಗಿ, ಮಿಲಿಟರಿ ಇಲ್ಲವೇ ಇತರೆ ಅಧಿಕಾರಿಗಳಾಗಿ ಇಲ್ಲಿಗೆ ಬಂದರು. ಅವರು ಆಡಳಿತಾತ್ಮಕ ಅನುಕೂಲಕ್ಕಾಗಿ ಇಲ್ಲಿನ ಭಾಷೆ, ಜನರ ದಂತಕಥೆ, ಐತಿಹ್ಯ, ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಜನಜೀವನ, ಇಲ್ಲಿನ ಪರಂಪರೆ, ಇತಿಹಾಸ ಮತ್ತು ಕಲೆ ಮತ್ತು ವಾಸ್ತುಶಿಲ್ಪ ಕುರಿತು ಅಭ್ಯಾಸ ಮಾಡಿ ದಾಖಲು ಮಾಡಲು ಪ್ರಾರಂಭಿಸಿದರು. ಈ ರೀತಿಯ ದಾಖಲೀಕರಣವೇ ಭಾರತದ ಇತಿಹಾಸ ರಚನೆಗೆ ದಾರಿಯಾಯಿತು. ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿನ ಚರಿತ್ರಾ ರಚನಾ ಪರಂಪರೆಯನ್ನು ವಿವಿಧ ಪಂಥಗಳನ್ನಾಗಿ ವಿಭಾಗಿಸಲಾಗಿದೆ.[೧೦]

೧. ಓರಿಯಂಟಲಿಸ್ಟ್ (ಪೌರತ್ಯ) ಇತಿಹಾಸಕಾರರು

೨. ವಸಾಹತು/ಇಂಪೀರಿಯಲ್ ಇತಿಹಾಸಕಾರರು

೩. ರಾಷ್ಟ್ರೀಯ ಇತಿಹಾಸಕಾರರು

೪. ಮಾರ್ಕ್ಸಿಸ್ಟ್ ಇತಿಹಾಸಕಾರರು

೫. ಸಬಾಲ್ಟರ್ನ್ ಇತಿಹಾಸಕಾರರು

೬. ಸಂಕೀರ್ಣ ವಿಷಯಾಧಾರಿತ ಇತಿಹಾಸಕಾರರು

ಈ ಮೇಲಿನ ಚರಿತ್ರೆ ಪರಂಪರೆಯ ಸಿದ್ಧಾಂತಗಳು ಇಲ್ಲಿನ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಮೇಲೆ ಪ್ರಭಾವ ಬೀರಿರುವುದನ್ನು ಗುರುತಿಸಬಹುದಾಗಿದೆ. ಭಾರತವನ್ನು ಕುರಿತು

ಆರಂಭದಲ್ಲಿ ಅಧ್ಯಯನ ಮಾಡಿದ ಯುರೋಪ್ ಮೂಲದ ಎಲ್ಲಾ ವಿದ್ವಾಂಸರನ್ನು ಮೊದಲಿಗೆ ಓರಿಯಂಟಲಿಸ್ಟರೆಂದು (ಪೌರತ್ಯ/ಪೌರಸ್ತ್ಯ) ಕರೆಯಲಾಯಿತು. ಇವರಲ್ಲಿ ಸಂಪ್ರದಾಯವಾದಿಗಳು ಮತ್ತು ಉದಾರವಾದಿಗಳು ಎನ್ನುವ ಎರಡು ಗುಂಪುಗಳಿದ್ದವು. ಇವರಲ್ಲಿ ವಸಾಹತುಶಾಹಿ ಇತಿಹಾಸಕಾರರು/ಇಂಪೀರಿಯಲಿಸ್ಟ್ ಇತಿಹಾಸಕಾರರು ಪ್ರಮುಖರಾಗಿದ್ದು, ಅವರು ಸಂಪ್ರದಾಯವಾದಿ ಓರಿಯಂಟಲಿಸ್ಟರೆಂದು ಕರೆಯಲ್ಪಡುತ್ತಾರೆ. ಇವರಿಗೆ ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯ ಮೇಲೆ ಸ್ವಲ್ಪವೂ ಗೌರವ ಇರಲಿಲ್ಲ. ಅವರು ಭಾರತವನ್ನು ಕಟುವಾಗಿ ಟೀಕಿಸಿದ್ದಾರೆ. ಅವರಲ್ಲಿ ಜೇಮ್ಸ್ ಮಿಲ್ ಮತ್ತು ವಿ.ಎ. ಸ್ಮಿಥ್ ಮೊದಲಾದವರು ಭಾರತೀಯರು ಮೂಢ ವಸ್ತುಗಳನ್ನು ಪೂಜಿಸುವವರು, ಅವರಿಗೆ ಸಮಯ ಪ್ರಜ್ಞೆಯಾಗಲಿ, ಒಂದು ಸಂಸ್ಕೃತಿಯಾಗಲಿ ಇಲ್ಲ. ಅವರನ್ನು ಉದ್ಧರಿಸಲು ಬ್ರಿಟಿಷರಾದ ನಮ್ಮನ್ನು ಭಗವಂತ ಕಳುಹಿಸಿಕೊಟ್ಟಿದ್ದಾನೆ. ಎನ್ನುವ ಅಹಂಕಾರ ಮತ್ತು ಅವಹೇಳನಕಾರಿ ಮಾತುಗಳನ್ನು ಆಡುತ್ತಿದ್ದರು. ಇದಕ್ಕೆ ಸವಾಲು ಎಂಬಂತೆ ಭಾರತದಲ್ಲಿ ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯ ಇತಿಹಾಸಕಾರರಾದ ಆರ್.ಜಿ. ಭಂಡಾರ್‌ಕರ್, ಕೆ.ಪಿ. ಜಯಸ್ವಾಲ್, ಆರ್.ಕೆ. ಮುಖರ್ಜಿ, ರಾಜೇಂದ್ರಲಾಲ್ ಮಿತ್ರ, ಹರಪ್ರಸಾದ ಶಾಸ್ತ್ರಿ, ಆರ್.ಸಿ. ದತ್ತ, ರಾಯ್ ಚೌಧರಿ, ನೀಲಕಂಠಶಾಸ್ತ್ರೀ, ಜೆ.ಎನ್. ಸರ್ಕಾರ್, ಕೆ.ಎಂ. ಫಣಿಕ್ಕರ್ ಮೊದಲಾದವರು ಭಾರತ ದೇಶ ಉನ್ನತವಾದ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಹೊಂದಿತ್ತು ಎನ್ನುವ ರಾಷ್ಟ್ರಿಯ ಪ್ರಜ್ಞೆಯ/ರಾಷ್ಟ್ರೀಯ ಪ್ರಚೋದನೆಯ ಬರಹಗಳನ್ನು ರಚಿಸಿದರು. ಇದು ಭಾರತದ ಗತವೈಭವವನ್ನು ಪ್ರಚಾರ ಮಾಡಲು ಮತ್ತು ಭಾರತ ಸ್ವಾತಂತ್ರ್ಯ ಪಡೆಯಲು ಪ್ರೇರಣೆ ಒದಗಿಸಿದವು. ತರುವಾಯದ ಕಾಲಘಟ್ಟದಲ್ಲಿ ಹಲವು ಇತಿಹಾಸ ರಚನಾ ಪಂಥಗಳು ಭಾರತದಲ್ಲಿ ಅಸ್ತಿತ್ವಕ್ಕೆ ಬಂದವು. ಅವರಲ್ಲಿ ಮಾರ್ಕ್ಸಿಸ್ಟ್ ಮತ್ತು ಸಬಾಲ್ಟರ್ನ್ ಇತಿಹಾಸಕಾರರು ಪ್ರಮುಖರಾಗಿದ್ದಾರೆ. ಇತಿಹಾಸ ರಚನೆಯಲ್ಲಿ ಆರ್ಥಿಕ ಅಂಶಗಳಿಗೆ ಹೆಚ್ಚು ಒತ್ತು ಕೊಟ್ಟಿಲ್ಲ ಮತ್ತು ಶ್ರಮದ ಅಂಶಗಳನ್ನು ಇತಿಹಾಸ ರಚನೆಯಲ್ಲಿ ಗಣನೆಗೆ ತೆಗೆದುಕೊಂಡಿಲ್ಲ ಆದ್ದರಿಂದ ಮಾನವನ ಶ್ರಮ ಮತ್ತು ಆರ್ಥಿಕ ಅಂಶಗಳಿಗೆ ಹೆಚ್ಚು ಒತ್ತು ಕೊಟ್ಟು ಇತಿಹಾಸ ರಚನೆ ಮಾಡಬೇಕೆಂಬ ಸದಾಶಯದಿಂದ ಮಹಮದ್ ಇರ್ಫನ್ ಹಬೀಬ್, ಹಿರೇನ್ ಮುಖರ್ಜಿ, ಮನ್ಮಥ್ ರಾಯ, ಪಾಲ್ಮೆದತ್ತ್, ಸುಮಿಥ್ ಸರ್ಕಾರ್, ಶರ್ಮಾ ಆರ್.ಎಸ್. ರೋಮಿಲಾ ಥಾಫರ್, ಎಂ.ಎನ್. ರಾಯ್ ಮೊದಲಾದ ಮಾರ್ಕ್ಸ್‌ಪಂಥೀಯ ಇತಿಹಾಸಕಾರರು ಇತಿಹಾಸ ರಚನೆ ಮಾಡಿದರು. ಅದೇ ರೀತಿ ಇತಿಹಾಸ ರಚನೆಯಲ್ಲಿ ಕೆಳವರ್ಗಗಳ ಹೋರಾಟದ ವಿವಿಧ ಮುಖಗಳನ್ನು ನಿರ್ಲಕ್ಷಿಸಲಾಗಿದೆ. ಆದ್ದರಿಂದ ಕೆಳವರ್ಗಗಳ ಆಚಾರ, ವಿಚಾರಗಳು, ಸಂಪ್ರದಾಯ ಅವರ ಇತಿಹಾಸವನ್ನು ಮುಖ್ಯವಾಗಿಟ್ಟುಕೊಂಡು ಇತಿಹಾಸ ರಚನೆ ಮಾಡಬೇಕೆಂದು ಸಬಾಲ್ಟರನ್ ಇತಿಹಾಸಕಾರರಾದ ರಣಜಿತ್‌ಗುಹಾ, ಡೆವಿಡ್ ಆರ್ನಾಲ್ಡ್, ಜಾನ್ ಪಾಂಡೆ, ಸುಮಿಥ್ ಸರ್ಕಾರ್, ಪಾಮೇದತ್ತ, ಗಾಯಿತ್ರಿ ದೇವಿ ವೀಣಾ ದಾಸ್, ಡೇವಿಡ್ ಹಾರ್ಡಿಮನ್, ಷಾಹಿದ್ ಅಮೀನ್ ಮೊದಲಾದವರು ಪ್ರತಿಪಾದಿಸಿದರು. ಅವರು ಇದುವರೆಗೆ ಚರಿತ್ರೆಯಲ್ಲಿ ನಿರ್ಲಕ್ಷ್ಯಕ್ಕೊಳಗಾದ ರೈತರ, ಬುಡಕಟ್ಟು ಜನರ ಮತ್ತು ಮಹಿಳೆಯರ ಹೋರಾಟ, ಅವರ ಸಾಹಸಗಾಥೆ ಮೊದಲಾದ ಅಂಶಗಳನ್ನು ಆಧಾರವಾಗಿಟ್ಟು ಇತಿಹಾಸ ರಚಿಸಿದರು. ಪ್ರಸಕ್ತ ಇದೇ ಪಂಥದ ಇತಿಹಾಸ ರಚನಾಪಂಥ

ಭಾರತದಲ್ಲಿ ಹೆಚ್ಚು ಚಾಲ್ತಿಯಲ್ಲಿದ್ದು, ಇತಿಹಾಸ ರಚನೆಯಲ್ಲಿ ಹೆಚ್ಚು ಅಳವಡಿಸಿಕೊಳ್ಳಲಾಗಿದೆ. ಭಾರತದ ಇತಿಹಾಸ ರಚನಾ ಪರಂಪರೆ ಮತ್ತು ಪಂಥಗಳು ಇಲ್ಲಿನ ಶಾಲಾ ಪಠ್ಯಪುಸ್ತಕ ರಚನೆಯ ಮೇಲೆ ಬಹುದೊಡ್ಡ ಪ್ರಭಾವ ಬೀರಿವೆ. ಈ ಪಂಥಗಳ ಪ್ರಭಾವ ಇಲ್ಲಿನ ಪಠ್ಯಪುಸ್ತಕಗಳ ರಚನೆಯ ಮೇಲೆ ಯಾವ ರೀತಿ ಪರಿಣಾಮ ಬೀರಿದೆ ಎನ್ನುವುದನ್ನು ಮುಂದಿನ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗಿದೆ.

ಪ್ರಾಚೀನ ಶಿಕ್ಷಣ ಪದ್ಧತಿಯಲ್ಲಿ ವೇದ, ಉಪನಿಷತ್, ಪುರಾಣ, ತರ್ಕಶಾಸ್ತ್ರಗಳಿಗೆ ಹೆಚ್ಚು ಆದ್ಯತೆಯನ್ನು ನೀಡಲಾಗಿತ್ತು. ಆದರೆ ಆಧುನಿಕ ಶಿಕ್ಷಣ ಪದ್ಧತಿ ಜಾರಿಯಾದ ಮೇಲೆ ಭಾರತದಲ್ಲಿ ಚರಿತ್ರೆಯನ್ನು ಪಠ್ಯಕ್ರಮದ ಒಂದು ಭಾಗವಾಗಿ ಸೇರಿಸಲಾಯಿತು. ಇತಿಹಾಸ ಕೇವಲ ಗತಕಾಲದ ಘಟನೆಯಲ್ಲ ಅದೊಂದು ಮಾನವ ಕುಲದ ಸಮಗ್ರ ದಾಖಲೆ. ಏಕೆಂದರೆ ಚರಿತ್ರೆಯಿಂದ ನಾವು ಕಲಿಯಬೇಕಾದದು ಸಾಕಷ್ಟು ಇದೆ. ಅದೊಂದು ಮಾನವನಿಗೆ ಅವಶ್ಯಕ ಸಾಮಾಜಿಕ ವಿಜ್ಞಾನವಾಗಿದೆ. ಇತಿಹಾಸವನ್ನು ಶಾಲಾ-ಕಾಲೇಜುಗಳಲ್ಲಿ ಬೋಧಿಸುವುದರಿಂದ, ಅದನ್ನು ಕಲಿಯುವ ವಿದ್ಯಾರ್ಥಿಗಳಿಗೆ ಅನೇಕ ಉಪಯೋಗಗಳು ಇವೆ. ಅವುಗಳನ್ನು ಈ ಮುಂದಿನಂತೆ ಪಟ್ಟಿ ಮಾಡಬಹುದು.

೧. ವಿದ್ಯಾರ್ಥಿಗಳಿಗೆ ಚರಿತ್ರೆ ಅತ್ಯಮೂಲ್ಯವಾದ ಬೌದ್ಧಿಕ ನಿಧಿಯನ್ನು ನೀಡುತ್ತದೆ.

೨. ವಿದ್ಯಾರ್ಥಿಗಳ ಜೀವನಕ್ಕೆ ಸಮರ್ಪಕ ಮಾರ್ಗದರ್ಶಿಯಾಗಿದೆ.

೩. ವಿದ್ಯಾರ್ಥಿಗಳಲ್ಲಿ ಚರಿತ್ರೆ ಆತ್ಮಜ್ಞಾನ ಹಾಗು ಸಹಿಷ್ಣುತಾ ಮನೋಭಾವದ ಬೆಳವಣಿಗೆಗೆ ಸಹಕಾರಿಯಾಗಿದೆ

೪. ಚರಿತ್ರೆ ವಿದ್ಯಾರ್ಥಿಗಳಿಗೆ ವ್ಯವಹಾರಿಕ ಮೌಲ್ಯವನ್ನು ತಿಳಿಸಿಕೊಡುತ್ತದೆ.

೫. ಇತಿಹಾಸ ಮಹಾನ್ ಪುರುಷರ/ತತ್ವಜ್ಞಾನಿಗಳ ಸದ್ಗುಣಗಳನ್ನು ಅಳವಡಿಸಿಕೊಳ್ಳಲು ವಿದ್ಯಾರ್ಥಿಗಳಿಗೆ ಸಹಕಾರಿಯಾಗಿದೆ.

೬. ವಿದ್ಯಾರ್ಥಿಗಳು ಉತ್ತಮ ಜೀವನ ಮೌಲ್ಯ ಅಳವಡಿಸಿಕೊಳ್ಳಲು ಮತ್ತು ನಾಗರಿಕರಾಗಿ ಜೀವಿಸಲು ಇತಿಹಾಸ ಪ್ರೇರಣೆ ನೀಡುತ್ತದೆ.

೭. ವಿದ್ಯಾರ್ಥಿಗಳಿಗೆ ನಾವೆಲ್ಲ ಒಂದೇ ರಾಷ್ಟ್ರಕ್ಕೇ ಸೇರಿದವರು ಎನ್ನುವ ರಾಷ್ಟ್ರೀಯ ಪ್ರಜ್ಞೆ ಮೂಡಿಸಲು ಇತಿಹಾಸ ಸಹಕಾರಿಯಾಗಿದೆ.

೮. ವಿದ್ಯಾರ್ಥಿಗಳು ಹೊಸ ಆಲೋಚನೆಗಳನ್ನು ಅಳವಡಿಸಿಕೊಳ್ಳಲು ಚರಿತ್ರೆ ಸಹಾಯಕವಾಗಿದೆ.

೯. ಪರಸ್ಪರ ಶಾಂತಿ-ಸಹನೆ-ನೆಮ್ಮದಿಯಿಂದ ತಮ್ಮ ಜೀವನ ರೂಪಿಸಿಕೊಳ್ಳಲು ವಿದ್ಯಾರ್ಥಿಗಳಿಗೆ ಚರಿತ್ರೆ ಸಹಾಯಕವಾಗಿದೆ.

೧೦. ವಿದ್ಯಾರ್ಥಿಗಳಿಗೆ ಆಹ್ಲಾದ ಇಲ್ಲವೇ ಮನೋರಂಜನೆ ಉಂಟುಮಾಡಲು ಸಹ ಚರಿತ್ರೆ ಸಹಾಯಕವಾಗಿದೆ.

೧೧. ವಿದ್ಯಾರ್ಥಿಗಳು ಐತಿಹಾಸಿಕ ಸತ್ಯಗಳನ್ನು ಅರಿಯಲು ಸಹಾಯಕವಾಗಿದೆ.

೧೨. ಇತಿಹಾಸವು ವಿದ್ಯಾರ್ಥಿಗಳಿಗೆ ನಂಬಲರ್ಹವಾದ ಸಾಂಸ್ಕೃತಿಕ ದಾಖಲೆಗಳನ್ನು ಒದಗಿಸುತ್ತದೆ.

ಇತಿಹಾಸವನ್ನು ಅಭ್ಯಾಸ ಮಾಡುವುದರಿಂದ ಈ ಮೇಲಿನ ರೀತಿಯಲ್ಲಿ ಹಲವಾರು ಪ್ರಯೋಜನಗಳಾಗುತ್ತವೆ ಎಂಬುದನ್ನು ಅರಿತ ಶಿಕ್ಷಣ ತಜ್ಞರು ವಿದ್ಯಾರ್ಥಿಗಳ ಹಿತವನ್ನು ಗಮನದಲ್ಲಿಟ್ಟು ಕೊಂಡು ಚರಿತ್ರೆಯ ಅಭ್ಯಾಸಕ್ಕೆ ಸಲಹೆ ಮಾಡಿದರು. ನಂತರ ರಚಿತವಾದ ಹಲವು ಶಿಕ್ಷಣ ಸಮಿತಿಗಳು/ಶಿಕ್ಷಣ ಆಯೋಗಗಳು ಕೂಡ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ ಮನೋಭಾವನೆಯನ್ನು ರೂಢಿಸುವ ಉದ್ದೇಶದಿಂದ ಮತ್ತು ಸಾಧ್ಯವಾದಷ್ಟು ಉತ್ತಮ ಪ್ರಜೆಗಳನ್ನಾಗಿ ರೂಪಿಸುವ ಉದ್ದೇಶದಿಂದ ಇತಿಹಾಸದ ಅಧ್ಯಯನಕ್ಕೆ ಹೆಚ್ಚು ಒತ್ತುಕೊಟ್ಟವು. ಅದರಲ್ಲೂ ವಿಶೇಷವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಸಾಮಾಜಿಕ ವಿಜ್ಞಾನ ಎನ್ನುವ ಪಠ್ಯದಲ್ಲಿ ಇತಿಹಾಸದ ಕೆಲ ಮುಖ್ಯ ಪಾಠಗಳನ್ನು ಅಳವಡಿಸಿ ವಿದ್ಯಾರ್ಥಿಗಳ ಮನೋವಿಕಾಸಕ್ಕೆ ದಾರಿ ಮಾಡಿಕೊಡಲಾಗಿದೆ. ಈ ಹಿನ್ನೆಲೆಯಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರೂಪುರೇಷೆಗಳನ್ನು ಅವಲೋಕಿಸಬೇಕಾದ ಅಗತ್ಯವಿದೆ.

ಚರಿತ್ರೆಯ ಬೋಧನೆಯ ಗುರಿ ಮತ್ತು ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ವಿದ್ಯಾರ್ಥಿಗಳಿಗೆ ನೀಡುವ ಎಲ್ಲಾ ರೀತಿಯ ಅನುಭವಗಳು, ಚಟುವಟಿಕೆಗಳು ಮತ್ತು ಯೋಜನೆಗಳ ಒಟ್ಟು ಮೊತ್ತವೇ ಚರಿತ್ರೆ ಪಠ್ಯಕ್ರಮವಾಗಿದೆ. ಒಟ್ಟಾರೆಯಾಗಿ ವಿದ್ಯಾರ್ಥಿಯ ವರ್ತನೆಯಲ್ಲಿ ಅಪೇಕ್ಷಿತ ಬದಲಾವಣೆ ತರಲು ಶಾಲೆಯ ಒಳಗೆ ಮತ್ತು ಹೊರಗೆ ಹಮ್ಮಿಕೊಳ್ಳುವ ಅಧ್ಯಯನ ಕಾರ್ಯಕ್ರಮ, ಚಟುವಟಿಕೆಗಳ ಕಾರ್ಯಕ್ರಮ, ಮಾರ್ಗದರ್ಶನ ಕಾರ್ಯಕ್ರಮಗಳ ಒಟ್ಟು ಮೊತ್ತವೇ ಚರಿತ್ರೆ ಪಠ್ಯ ಕ್ರಮವಾಗಿದೆ. ಇತಿಹಾಸದ ಪಠ್ಯಕ್ರಮದ ರಚನೆಯು ಕ್ಲಿಷ್ಟವೂ, ಜಟಿಲವೂ ಆಗಿರುವಂತಹದ್ದು. ಏಕೆಂದರೆ ಇತಿಹಾಸದ ವ್ಯಾಪ್ತಿಯು ತುಂಬಾ ವಿಶಾಲವಾಗಿದೆ. ಇತಿಹಾಸವು ಒಳಗೊಳ್ಳದೇ ಇರುವ ವಿಷಯ ಇಲ್ಲವೇ ಇಲ್ಲ. ಈ ರೀತಿ ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುವ ಇತಿಹಾಸವನ್ನು ಹಾಗೂ ಪಠ್ಯಕ್ರಮಕ್ಕೆ ಅಳವಡಿಸುವುದು ತುಂಬಾ ಕ್ಲಿಷ್ಟಕರವಾದುದು. ಮಕ್ಕಳ ಜ್ಞಾನ ಕೌಶಲ್ಯಗಳನ್ನು ಹೆಚ್ಚಿಸಿ ಸಮಾಜದ ಉಪಯುಕ್ತ ಪ್ರಜೆಗಳನ್ನಾಗಿ ಮಾಡಲು ಇತಿಹಾಸಕ್ಕೆ ವ್ಯವಸ್ಥಿತವಾದ ಪಠ್ಯಕ್ರಮ ಅತ್ಯವಶ್ಯಕವಾಗಿದೆ.

ಶೈಕ್ಷಣಿಕವಾಗಿ ಚರಿತ್ರೆಯಲ್ಲಿ ಏನನ್ನು ಕಲಿಸಬೇಕು ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಅಷ್ಟೇ ಅಲ್ಲದೆ ಈ ಉದ್ದೇಶಗಳನ್ನು ಅರ್ಥ ಮಾಡಿಕೊಳ್ಳಲು ವಸ್ತು ವಿಷಯವನ್ನು ಆಯ್ಕೆ ಮಾಡಬೇಕಾಗುತ್ತದೆ. ಇವೆಲ್ಲವನ್ನು ಅರ್ಥ ಮಾಡಿಕೊಳ್ಳಲು ಇರುವ ಏಕೈಕ ಮಾಧ್ಯಮವೆಂದರೆ ಪಠ್ಯಕ್ರಮ. ಇಂದು ವಿದ್ಯಾರ್ಥಿಗಳಿಗೆ ಶಿಕ್ಷಣವು ವಾಸ್ತವವಾದ ಜ್ಞಾನ ಮತ್ತು ಅನುಭವವನ್ನು ಒದಗಿಸುವುದು ಪ್ರಮುಖವಾದ ಶಿಕ್ಷಣ ವ್ಯವಸ್ಥೆಯ ಕೇಂದ್ರ ಪ್ರಮುಖ ಆಧಾರ ಸ್ತಂಭವಾಗಿದೆ. ಶಿಕ್ಷಣ ಪ್ರಕ್ರಿಯೆಯ ಜೀವಾಳವಾಗಿದೆ. ಶಿಕ್ಷಣದ ಅನೇಕ ಸಾಧನೆಗಳಲ್ಲಿ ಪಠ್ಯಕ್ರಮ ಹಾಗೂ ಪಠ್ಯವಸ್ತುವಿಗೆ ಅಗ್ರಸ್ಥಾನ ನೀಡಲಾಗಿದೆ. ಶೈಕ್ಷಣಿಕ ಗುರಿ ಮತ್ತು ಉದ್ದೇಶಗಳನ್ನು ಸಾಧಿಸುವ ಕೇಂದ್ರ ಬಿಂದುವಾಗಿದೆ. ಇಂದಿನ ಪಠ್ಯಕ್ರಮ.

ಶೈಕ್ಷಣಿಕ ವ್ಯವಸ್ಥೆಯ ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಪಠ್ಯಪುಸ್ತಕಗಳು ಮಹತ್ವದ ಪಾತ್ರ ವಹಿಸುತ್ತದೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತಗಳು ಬೋಧನೆಯಲ್ಲಿ ಪಠ್ಯಪುಸ್ತಕದ ಪಾತ್ರ

ಅತಿ ಮಹತ್ವವುಳ್ಳದೆಂದು ಹೇಳಬಹುದಾಗಿದೆ. ಈ ಹಂತಗಳಿಗೆ ಅನುಗುಣವಾಗಿ ಶಿಕ್ಷಕ ಪಠ್ಯಪುಸ್ತಕ ಆಧಾರದಿಂದ ಏನನ್ನು ಬೋಧಿಸಬೇಕು? ಹೇಗೇ ಬೋಧಿಸಬೇಕು? ಎಂದು ಸ್ಪಷ್ಟ ತಿಳುವಳಿಕೆ ಮತ್ತು ಮಾರ್ಗದರ್ಶನವನ್ನು ನೀಡುತ್ತದೆ. ಇಂದು "ಪಠ್ಯಪುಸ್ತಕವಿಲ್ಲದ ಆಧುನಿಕ ಶಿಕ್ಷಣ ಕ್ರಮದ ಬಗ್ಗೆ ಕಲ್ಪಿಸುವುದು ಡೆನ್ಮಾರ್ಕಿನ ರಾಜಕುಮಾರನಿಲ್ಲದ ಹೆಮ್ಲೆಟ್ ನಾಟಕದ ಕಲ್ಪನೆಯಷ್ಟೇ ಕಠಿಣವಾದುದು. ಇತಿಹಾಸ ಬೋಧನೆಯಲ್ಲಿ ಪಠ್ಯಪುಸ್ತಕಗಳ ಪಾತ್ರ ಮಹತ್ವದ್ದು" ಎಂದು ಆರ್.ಜಿ. ಪ್ರಭು ಅವರು ತಮ್ಮ ಇತಿಹಾಸ ಮತ್ತು ಪೌರನೀತಿ ಬೋಧನೆ ಎಂಬ ಕೃತಿಯಲ್ಲಿ ತಿಳಿಸಿದ್ದಾರೆ.

ಪಠ್ಯಪುಸ್ತಕವು ತರಗತಿಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಪರಿಣಿತರು ವಿಶೇಷ ಎಚ್ಚರಿಕೆಯಿಂದ ಸಿದ್ಧಪಡಿಸಿದ ಮತ್ತು ಬೋಧನೆಗೆ ಅವಶ್ಯಕವಾದ ಸಹಾಯಕ ಸಾಮಗ್ರಿ ವಿಷಯಗಳನ್ನೊಳಗೊಂಡ ಪುಸ್ತಕವೇ ಪಠ್ಯಪುಸ್ತಕ. ಶಿಕ್ಷಣದ ಉದ್ದೇಶಗಳಿಗೆ ಅನುಗುಣವಾಗಿ ಒಂದು ಮಾನವನ ಉಗಮದಿಂದ ಅವನ ವಿಕಾಸ ಕ್ರಮ, ಅವನು ಮಾಡಿದ ಸಾಧನೆಗಳು, ದಿಗ್ವಿಜಯಗಳು, ಅವನು ಮಾಡಿದ ಉತ್ತಮ ಕೆಲಸ ಕಾರ್ಯ ಮೊದಲಾದ ವಿಷಯಗಳನ್ನು ಪರಿಣಿತರು, ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಸಂಗ್ರಹಿಸಿ ಸಿದ್ಧಪಡಿಸಿರುವ ಕೃತಿಯನ್ನು ಚರಿತ್ರೆ ಪಠ್ಯಪುಸ್ತಕ ಎನ್ನಬಹುದಾಗಿದೆ.

'ಇತಿಹಾಸದ ಪಠ್ಯಪುಸ್ತಕ ವಿಷಯದಲ್ಲಿನ ವಿಷಯಗಳು ಗತಕಾಲ ಘಟನೆಯ ಹಿನ್ನೆಲೆಯಲ್ಲಿ ವರ್ತಮಾನವನ್ನು ವಿವರಿಸಿ, ಭವಿಷ್ಯತ್ತಿನ ಮೇಲೆ ಬೆಳಕು ಚೆಲ್ಲುವಂತೆ ಮಾಡುವ ಮೂಲಕ ಸತ್ಪ್ರಜೆಗಳನ್ನು ರೂಪಿಸುವ ಕಾರ್ಯ ಮಾಡುತ್ತದೆ'. ಹಾಗೆಯೇ ವಿಭಿನ್ನ ಭಾಷೆ, ಮತ, ಧರ್ಮ, ಆಹಾರ, ಉಡುಗೆ ತೊಡುಗೆ, ಹಬ್ಬ ಹರಿದಿನಗಳು, ಪ್ರಾಂತ್ಯ ಮತ್ತು ಲಿಂಗ ಭೇದಗಳನ್ನು ಒಳಗೊಂಡಿದ್ದರೂ ಸಹ ನಾವೆಲ್ಲಾ ಒಂದೇ ಎಂಬಂತೆ ಏಕ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರೀಯ ಲಾಂಛನ ಮತ್ತು ಸಂವಿಧಾನದ ಬಗ್ಗೆ ತಿಳಿಸುವ ಮೂಲಕ ರಾಷ್ಟ್ರೀಯ ಭಾವೈಕ್ಯತೆಯ ಸಾಧನವಾಗಿದೆ. ಅದರಂತೆ ಇತಿಹಾಸವನ್ನು ಕಲೆ ಮತ್ತು ವಿಜ್ಞಾನವೆಂದು ಒಪ್ಪಿಕೊಳ್ಳುವ ಮೂಲಕ ವ್ಯವಸ್ಥಿತ ಮತ್ತು ಕ್ರಮಬದ್ಧ ಅಧ್ಯಯನ ಮಾಡಬೇಕಾಗಿದೆ. ಈ ರೀತಿ ವ್ಯವಸ್ಥಿತ ಮತ್ತು ಕ್ರಮಬದ್ಧ ಅಧ್ಯಯನದ ಮೂಲಕ ಇತಿಹಾಸದಲ್ಲಿನ ಅನೇಕ ಸಂಗತಿಗಳನ್ನು ಮನನ ಮಾಡಿಕೊಳ್ಳಲು ಪ್ರಾಯೋಗಿಕ ಕೆಲಸಗಳಾದ ನಾಟಕೀಕರಣ, ಬೊಂಬೆಯಾಟ, ವೈಭವೋತ್ಸವಗಳು, ಮೌನ ಪ್ರದರ್ಶನಗಳು, ಭೂಪಟ, ನಕ್ಷೆ, ಕಾಲರೇಖೆ, ಚಿತ್ರಪಟಗಳ ರಚನೆ, ವಂಶಾವಳಿ ಇತ್ಯಾದಿ ಪ್ರಾಯೋಗಿಕ ಕೆಲಸ ನಿರ್ವಹಿಸಲು ಚರಿತ್ರೆ ಪಠ್ಯ ಸಹಕಾರಿಯಾಗಿದೆ. ಬೋಧನ ವಿಧಾನದ ಆಯ್ಕೆಗೆ ತಕ್ಕಂತೆ ಸೂಕ್ತ ಪ್ರಾಯೋಗಿಕ ಕೆಲಸವನ್ನು ಆಯ್ಕೆ ಮಾಡಿಕೊಳ್ಳಬೇಕಾಗಿರುವುದು ಶಿಕ್ಷಕನ ಕರ್ತವ್ಯವಾಗಿದೆ.

### ೨.೨.೧ ಚರಿತ್ರೆ ಪಠ್ಯಪುಸ್ತಕಗಳ ಕುರಿತ ವ್ಯಾಖ್ಯೆಗಳು

ವಿವಿಧ ಶಿಕ್ಷಣ ತಜ್ಞರು, ವಿದ್ವಾಂಸರು, ವಿಚಾರವಾದಿಗಳು ಮತ್ತು ಚರಿತ್ರೆಕಾರರು ಪಠ್ಯಪುಸ್ತಕಗಳ ಕುರಿತಂತೆ ತಮ್ಮದೇ ಆದ ಅಭಿಪ್ರಾಯಗಳನ್ನು ಹೊಂದಿದ್ದು, ಅದನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ.

ಅವರಲ್ಲಿ ಮುಖ್ಯವಾಗಿ ಶಿಕ್ಷಣ ಆಯೋಗದಲ್ಲಿ ಒಂದಾದ ಹಂಟರ್ ಆಯೋಗದ ಅಧ್ಯಕ್ಷರಾದ ವಿಲಿಯಂ ಹಂಟರ್‌ರವರು ಪಠ್ಯಪುಸ್ತಕದ ಬಗ್ಗೆ ಈ ರೀತಿಯಾಗಿ ತಿಳಿಸಿದ್ದಾರೆ. "ಇತಿಹಾಸ ಬೋಧನಾ ಕಾರ್ಯದಲ್ಲಿ ಶಿಕ್ಷಕರ ನಂತರ ಪಠ್ಯಪುಸ್ತಕ ಬರುತ್ತದೆ ಎಂದಿದ್ದಾರೆ".[೧೧] ಅಂದರೆ ಇತಿಹಾಸದ ಪಠ್ಯಪುಸ್ತಕ ಎಷ್ಟು ಅವಶ್ಯಕವಾದುದು ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವುದು ಎಂಬುದು ಇದರಿಂದ ನಾವು ಮನಗಾಣಬಹುದಾಗಿದೆ.

ರಾಜ್ಯ ಹಿಂದುಳಿದ ಆಯೋಗದ ಮಾಜಿ ಅಧ್ಯಕ್ಷರಾದ ಸಿ.ಎಸ್. ದ್ವಾರಕನಾಥ ಅವರು "ಚರಿತ್ರೆ ಪಠ್ಯಪುಸ್ತಕಗಳೆಂದರೆ ಅವುಗಳು ಕೇವಲ ರಾಜ ಮಹಾರಾಜರನ್ನು ಅವರ ಪರಿವಾರ ವರ್ಗವನ್ನು ಒಳಗೊಂಡ ಚರಿತ್ರೆಯಾಗಿರಬಾರದು. ಇಡೀ ಮಾನವ ಸಂಕುಲ ಹೇಗೆ ಬೆಳೆದುಬಂತು, ಆದಿಮಾನವನಿಂದ ಇಂದಿನವರೆಗೆ ಪ್ರತಿಯೊಬ್ಬ ಶ್ರೀಸಾಮಾನ್ಯ ಚರಿತ್ರೆಯನ್ನು ಒಳಗೊಂಡಿರುವ ಚರಿತ್ರೆಯೇ ನಿಜವಾದ ಚರಿತ್ರೆ ಪಠ್ಯಪುಸ್ತಕವಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ."[೧೨] ಪ್ರಾಥಮಿಕ ಶಾಲಾ ತರಗತಿಗಳಲ್ಲಿ ಮಕ್ಕಳಿಗೆ ರಾಜರ ಯುದ್ಧ, ಅವರ ಹೋರಾಟ, ಸಾಧನೆಗಳನ್ನಷ್ಟೇ ತಿಳಿಸುವುದು ಪಠ್ಯಪುಸ್ತಕ ಎನ್ನಿಸಿಕೊಳ್ಳುವುದಿಲ್ಲ. ಒಂದು ಕಾಲಘಟ್ಟದ ಸಮಗ್ರವಾದಂತಹ ಇಡೀ ಸಮುದಾಯದ ಚಿತ್ರಣವನ್ನು ನೀಡುವಂತೆ ಅದು ಇರಬೇಕು ಎಂದಿದ್ದಾರೆ.

ಪಠ್ಯಪುಸ್ತಕ ರಚನಾ ಸಮಿತಿಯ ಹಿಂದಿನ ಸದಸ್ಯರಾದ ಎಸ್.ಮಂಚಯ್ಯರವರು ಪಠ್ಯಪುಸ್ತಕವೆಂದರೆ "ಚರಿತ್ರೆಯ ವಿಷಯವನ್ನು ಆಳವಾಗಿ ಪಾಂಡಿತ್ಯ ಪಡೆದುಕೊಂಡಿರುವ ತಜ್ಞರ ತಂಡವೊಂದು ಮಕ್ಕಳ ಮನೋಸಾಮರ್ಥ್ಯಕ್ಕೆ ಅನುಗುಣವಾಗಿ ಅವರ ದೈಹಿಕ ವಯೋಮಾನಕ್ಕನು ಗುಣವಾಗಿ ಎಚ್ಚರಿಕೆಯಿಂದ ಅನೇಕ ಬಾರಿ ಚರ್ಚಿಸಿ ಸಿದ್ಧಪಡಿಸುವ ಒಂದು ಸಾಧನ ಎಂದು ಹೇಳಿದ್ದಾರೆ."[೧೩] ಯಾವುದೇ ತರಗತಿಯ ಯಾವುದೇ ಪಠ್ಯಪುಸ್ತಕವು ಸಿದ್ಧಗೊಳ್ಳಬೇಕಾದರೆ ಅದು ರಾಷ್ಟ್ರೀಯ ಪಠ್ಯ ಚೌಕಟ್ಟುಗಳನ್ನು ಆಧರಿಸಿಯೇ ಸಿದ್ಧಪಡಿಸಬೇಕು. ಈ ಹಿನ್ನೆಲೆಯಲ್ಲಿ ಚರಿತ್ರೆಯ ಪಠ್ಯಪುಸ್ತಕಗಳು ಸಹ ಸಿದ್ಧಗೊಳ್ಳುತ್ತವೆ ಎಂಬುದು ಅವರ ಅಭಿಮತವಾಗಿದೆ.

ಡಾ. ಕೆ. ಸದಾಶಿವರವರು ತಮ್ಮ ಪ್ರಾಚೀನ ಭಾರತದ ಇತಿಹಾಸ ಎಂಬ ಪುಸ್ತಕದಲ್ಲಿ ಬ್ರಾಹ್ಮಣಕಗಳು ಮತ್ತು ಉಪನಿಷತ್ತುಗಳು ಚರಿತ್ರೆ ಎಂಬುದನ್ನು ಈ ರೀತಿಯೂ ತಿಳಿಸಿದೆ ಎಂದು ತಿಳಿಸಿದ್ದಾರೆ. "ಗತಕಾಲದ ಘಟನೆಗಳನ್ನು ಉದ್ದೇಶಪೂರ್ವಕವಾಗಿ ನಿರೂಪಿಸುವುದು."[೧೪] ಅವರು ಮುಂದುವರೆದು ಋಗ್ವೇದದಲ್ಲಿ ಚರಿತ್ರೆಯ ಬಗ್ಗೆ ಯಾವುದೇ ನಿಖರವಾದ ವ್ಯಾಖ್ಯಾನವನ್ನು ನೀಡಿಲ್ಲ ಎಂದಿದ್ದಾರೆ.

ಡಿ.ಡಿ. ಕೋಸಾಂಬಿಯವರು ಭಾರತ ಚರಿತ್ರೆ ಎಂದರೆ ಭಾರತ ಒಂದು ರಾಷ್ಟ್ರವೇ ಆಗಿರಲಿಲ್ಲ. ಭಾರತೀಯ ಸಂಸ್ಕೃತಿ ಮತ್ತು ನಾಗರಿಕತೆ ಎನ್ನುವುದು ಮುಸ್ಲಿಮರ ಅಥವಾ ಬ್ರಿಟಿಷರ, ಒಟ್ಟಿನಲ್ಲಿ ವಿದೇಶಿ ಆಕ್ರಮಣ ಫಲ ಎಂಬ ವಾದಕ್ಕೆ ಇಂಬು ಕೊಡುತ್ತದೆ ಎನ್ನಿಸುತ್ತದೆ. ಇವರು "ಬದಲಾವಣೆಗಳನ್ನು ಕಾಲಾನುಕ್ರಮದಲ್ಲಿ ವ್ಯವಸ್ಥಿತವಾಗಿ ನಿರೂಪಿಸುವುದು ಚರಿತ್ರೆ ಎಂದಿದ್ದಾರೆ".[೧೫] ಏಕೆಂದರೆ ಈ ರೀತಿ ವ್ಯಾಖ್ಯಾನಿಸುವುದರಿಂದ ಚರಿತ್ರೆ ಅಂದರೆ ಉತ್ಪಾದನಾ

ಸಂಬಂಧಗಳು ಮತ್ತು ಸಾಧನೆಗಳಲ್ಲಿ ನಿರಂತರವಾಗಿ ಆದ ಬದಲಾವಣೆಗಳನ್ನು ಕಾಲಾನುಕ್ರಮದಲ್ಲಿ ವ್ಯವಸ್ಥಿತವಾಗಿ ನಿರೂಪಿಸಲು ಅನುಕೂಲವಾಗುತ್ತದೆ ಎಂದಿದ್ದಾರೆ.

ಡಾ. ಬಿ.ಆರ್. ಅಂಬೇಡ್ಕರ್‌ರವರು ಚರಿತ್ರೆ ಎಂಬುದನ್ನು ಈ ರೀತಿ ಅರ್ಥೈಸಿದ್ದಾರೆ. "ಪ್ರಾಚೀನ ಭಾರತದ ಚರಿತ್ರೆ ಇಲ್ಲ ಎಂದಲ್ಲ, ಬೇಕಾದಷ್ಟಿದೆ. ಆದರೆ ಅದು ತನ್ನ ಪ್ರತಿಭೆಯನ್ನು ಕಳೆದುಕೊಂಡಿದೆ. ಹೆಂಗಸರು ಮತ್ತು ಮಕ್ಕಳಿಗೆ ಮನರಂಜನೆ ನೀಡಲೆಂದೇ ಅದನ್ನು ಪುರಾಣರೂಪಕ್ಕೆ ಭಟ್ಟಿ ಇಳಿಸಲಾಗಿದೆ."[೧೬] ಇವುಗಳಲ್ಲಿ ಬ್ರಾಹ್ಮಣ್ಯ ಪ್ರತಿಪಾದನೆ ಅಧಿಕವಾಗಿ ಮಾಡಲಾಗಿದೆ ಎಂದಿದ್ದಾರೆ ಅಂಬೇಡ್ಕರವರು. ಚರಿತ್ರೆಯನ್ನು ವಸ್ತುನಿಷ್ಠವಾಗಿ ನಿರೂಪಿಸಬೇಕು. ಪಕ್ಷಪಾತಿಯಾಗಿ ಒಬ್ಬ ಚರಿತ್ರಕಾರ ಯಾವುದೇ ಆಮಿಷಕ್ಕೆ ಒಳಗಾಗದೆ ಸತ್ಯಕ್ಕೆ ನಿಷ್ಠೆಯಾಗಿ ಬರೆಯಬೇಕು ಎಂದಿದ್ದಾರೆ. ಇತಿಹಾಸಕಾರರ ವ್ಯಾಖ್ಯೆಗಳ ಒಟ್ಟು ಚಿಂತನೆ ಎಂದರೆ ಚರಿತ್ರೆಯ ಮರುಅಧ್ಯಯನ ಸಮರ್ಪಕವಾಗಿ ಆಗಬೇಕು ಎನ್ನುವುದು. ಚರಿತ್ರೆ ಮಾನವ ಜೀವನದ ಅನುಭವದ ಫಲವಾಗಿದ್ದು, ಅದರ ವಿವಿಧ ಮುಖಗಳನ್ನು ಅನಾವರಣಗೊಳಿಸುವ ಕೆಲಸ ಪಠ್ಯಪುಸ್ತಕ ಗಳಿಂದಾಗಬೇಕಾದ ಅವಶ್ಯಕತೆ ಇದೆ.

**೨.೨.೨. ಚರಿತ್ರೆ ಪಠ್ಯಪುಸ್ತಕದ ಗುಣ ಲಕ್ಷಣಗಳು**

ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ಶಾಲಾ ಶಿಕ್ಷಣದಲ್ಲಿ ಪ್ರತ್ಯೇಕವಾದ ಚರಿತ್ರೆ ಪಠ್ಯಪುಸ್ತಕಗಳನ್ನು ರಚಿಸಿರುವುದಿಲ್ಲ. ಆದರೆ ಇಲ್ಲಿ ಸಮಾಜ ವಿಜ್ಞಾನಗಳನ್ನು ಸಂಯುಕ್ತವಾಗಿ ಪ್ರಕಟಿಸಲಾಗಿದ್ದು, ಅದರಲ್ಲಿ ಇತಿಹಾಸ, ಭೂಗೋಳ, ಪೌರನೀತಿ, ರಾಜಕೀಯ ಶಾಸ್ತ್ರ, ಅರ್ಥಶಾಸ್ತ್ರದ ವಿಷಯಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಪ್ರಾಸಂಗಿಕವಾಗಿ ಇದನ್ನು ಚರಿತ್ರೆ ಪಠ್ಯಪುಸ್ತಕವೆಂದು ಪರಿಭಾವಿಸಲಾಗಿದೆ. ಪದವಿ ಪೂರ್ವ ಹಂತದಿಂದ ಮತ್ತು ಉನ್ನತ ವ್ಯಾಸಂಗದವರೆಗೆ ಮಾತ್ರವೇ ರಾಜ್ಯದಲ್ಲಿ ಪ್ರತ್ಯೇಕವಾಗಿ ಚರಿತ್ರೆ ಪಠ್ಯಪುಸ್ತಕಗಳನ್ನು ಅಳವಡಿಸಲಾಗಿದೆ. ಪ್ರತಿ ಪಠ್ಯಪುಸ್ತಕವು ತನ್ನದೇ ಆದ ಗುಣಲಕ್ಷಣಗಳನ್ನು ಒಳಗೊಂಡಿರುವಂತೆ ಚರಿತ್ರೆ ಪಠ್ಯಪುಸ್ತಕವು ಕೂಡ ತನ್ನದೇ ಆದ ಮುಖ್ಯ ಲಕ್ಷಣಗಳನ್ನು ಒಳಗೊಂಡಿದ್ದು, ಆ ವಿವರಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದಾಗಿದೆ. ಒಂದು ಉತ್ತಮವಾದ ಇತಿಹಾಸದ ಪಠ್ಯಪುಸ್ತಕವು ಮೂರು ಗುಣಲಕ್ಷಣಗಳನ್ನು ಒಳಗೊಂಡಿರಬೇಕು ಅವೆಂದರೆ,

೧. ಬಾಹ್ಯ ಗುಣ ಲಕ್ಷಣಗಳು

೨. ಸಾಮಾನ್ಯ ಗುಣ ಲಕ್ಷಣಗಳು

೩. ಆಂತರಿಕ ಗುಣ ಲಕ್ಷಣಗಳು".[೧೭]

**೧. ಬಾಹ್ಯ ಗುಣಲಕ್ಷಣಗಳು.**

**೧. ಪುಸ್ತಕದ ಮುಖಪುಟ**

ಪಠ್ಯಪುಸ್ತಕದ ಬಾಹ್ಯ ಗುಣಲಕ್ಷಣಗಳಲ್ಲಿ ಮೊದಲನೆಯ ಮುಖ್ಯವಾದ ಗುಣಲಕ್ಷಣವೇ ಪಠ್ಯಪುಸ್ತಕದ ಅಂದವಾದ ಮುಖಪುಟ. ಪಠ್ಯಪುಸ್ತಕದ ಮುಖಪುಟದಲ್ಲಿ ಸುಂದರ ಅರ್ಥಪೂರ್ಣ, ಚಾರಿತ್ರಿಕ ಹಿನ್ನೆಲೆಯ ಅಗತ್ಯ ಚಿತ್ರಗಳನ್ನು ಚಿತ್ರಿಸಿರಬೇಕು. ಪಠ್ಯಪುಸ್ತಕದ ಮುಖಪುಟವನ್ನು

ನೋಡಿದ ಮಾತ್ರಕ್ಕೆ ಆ ಪುಸ್ತಕವನ್ನು ಓದುವ ಆಸಕ್ತಿ ಮೂಡಬೇಕು. ರಕ್ಷಕವಚ ಅಂದವಾಗಿರಬೇಕು ಮತ್ತು ಬಾಳಿಕೆ ಬರುವಂತಿರಬೇಕು. ಚರಿತ್ರೆ ಪಠ್ಯಪುಸ್ತಕಗಳು ಚರಿತ್ರೆ ಘಟನೆಯ ಮುಖ್ಯ ಭಾಗವನ್ನು ಅನಾವರಣ ಮಾಡುವಂತಿರಬೇಕು.

**೨. ಗಾತ್ರ**

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆಯ ಪಠ್ಯಪುಸ್ತಕಗಳ ಗಾತ್ರ ಸಮಂಜಸವಾಗಿರಬೇಕು. ಮಕ್ಕಳು ಅದನ್ನು ಸುಲಭವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ತೆಗೆದುಕೊಂಡು ಹೋಗುವಂತಿರಬೇಕು. ಅಂದರೆ ಗಾತ್ರದಲ್ಲಿ ದೊಡ್ಡದಾಗಿರದೆ ಹೆಚ್ಚಿನ ಅಧ್ಯಾಯಗಳನ್ನು ಒಳಗೊಂಡಿರದೇ ಅವರ ವಯೋ ಮತ್ತು ಬೌದ್ಧಿಕ ಸಾಮರ್ಥ್ಯಾನುಸಾರವಾಗಿ ಪ್ರತಿ ತರಗತಿಯ ಮಕ್ಕಳಿಗೆ ಪಠ್ಯಪುಸ್ತಕಗಳು ರಚನೆಯಾಗಬೇಕು. ಏಕೆಂದರೆ ಚಿಕ್ಕ ವಯಸ್ಸಿನ ಮಕ್ಕಳು ಪುಸ್ತಕದ ಬಾಹ್ಯ ಗಾತ್ರವನ್ನೇ ನೋಡಿ ಹೆದರುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ಈ ಹಂತದ ಮಕ್ಕಳಿಗೆ ಚರಿತ್ರೆ ಪಠ್ಯಪುಸ್ತಕಗಳು ಗಾತ್ರದಲ್ಲಿ ಅಚ್ಚುಕಟ್ಟಾಗಿರಬೇಕು.

**೩. ಪಠ್ಯಪುಸ್ತಕದ ಬೆಲೆ**

ಪಠ್ಯಪುಸ್ತಕವು ವಿದ್ಯಾರ್ಥಿಗಳಿಂದ ಉಪಯೋಗಿಸಲ್ಪಡುವುದರಿಂದ ಅದರ ಬೆಲೆಯು ವಿವೇಚನಾಯುತವಾಗಿರಬೇಕು. ಪ್ರತಿಯೊಬ್ಬ ವಿದ್ಯಾರ್ಥಿಯು ಪಠ್ಯಪುಸ್ತಕವನ್ನು ಕೊಂಡು ಕೊಳ್ಳುವಂತಿರಬೇಕು. ಏಕೆಂದರೆ ಭಾರತವು ಒಂದು ಬಡತನದಿಂದ ತುಂಬಿರುವ ದೇಶ ಎಷ್ಟೋ ಮಕ್ಕಳು ಇಂದು ಶಾಲೆಯನ್ನು ಬಿಡಲು ಈ ಬಡತನವೇ ಕಾರಣವಾಗಿದೆ. ತಮ್ಮ ಮಕ್ಕಳು ಓದುವ ಪಠ್ಯಪುಸ್ತಕವನ್ನು ಒದಗಿಸುವ ಸಾಮರ್ಥ್ಯವಿಲ್ಲದೆ ಇರುವ ಎಷ್ಟೋ ಕುಟುಂಬಗಳು ಇಂದು ಇರುವುದು ನಮ್ಮ ಕಣ್ಣ ಮುಂದೆ ಕಟ್ಟಿದಂತಿದೆ. ಆದ್ದರಿಂದ ಪಠ್ಯಪುಸ್ತಕದ ಬೆಲೆಯು ರಿಯಾಯಿತಿ ದರದಲ್ಲಿ ಎಲ್ಲಾ ಮಕ್ಕಳಿಗೂ ದೊರೆಯುವಂತೆ ಆಗಬೇಕು. ಇದಕ್ಕಾಗಿ ಸರ್ಕಾರ ಪುಸ್ತಕದ ಮುದ್ರಣಕ್ಕಾಗಿ ರಿಯಾಯಿತಿ ದರದಲ್ಲಿ ಕಾಗದವನ್ನು ಒದಗಿಸುತ್ತಿದೆ. ಪುಸ್ತಕ ಪ್ರಕಟಣೆಯಿಂದ ಲಾಭದ ಉದ್ದೇಶವಿದೆ, ಬೆಲೆ ಕಡಿಮೆ ಇದ್ದಾಗ ಅದು ತಲುಪುತ್ತದೆ. ಇಲ್ಲವಾದರೆ ಅದು ಕೇವಲ ಹಣವಿದ್ದವರ ಸ್ವತ್ತಾಗುವುದು. ಈ ದೃಷ್ಟಿಯಿಂದ ಇಂದು ರಾಜ್ಯ ಸರ್ಕಾರ ಉಚಿತ ಪಠ್ಯಪುಸ್ತಕಗಳನ್ನು ಕರ್ನಾಟಕದಲ್ಲಿ ಸರ್ಕಾರಿ ಶಾಲೆಗಳಲ್ಲಿ ವಿತರಿಸುತ್ತಿದೆ.

**೨. ಸಾಮಾನ್ಯ ಗುಣಲಕ್ಷಣಗಳು**

**೧. ಚರಿತ್ರೆ ಪಠ್ಯಪುಸ್ತಕವು ಚರಿತ್ರೆ ಬೋಧನೆಯ ಗುರಿ ಹಾಗೂ ಉದ್ದೇಶಗಳನ್ನು ಈಡೇರಿಸುವಂತಿರಬೇಕು**

ಚರಿತ್ರೆ ಪಠ್ಯಪುಸ್ತಕವು ಚರಿತ್ರೆ ಬೋಧನೆಯ ಗುರಿ ಮತ್ತು ಉದ್ದೇಶಗಳೆರಡರನ್ನು ಸಾಧಿಸಲು ಸಹಾಯಕವಾಗಿರಬೇಕು. ದೇಶಭಕ್ತಿ, ರಾಷ್ಟ್ರೀಯ ಐಕ್ಯತೆ, ಸಂಸ್ಕೃತಿಯ ವರ್ಗಾವಣೆ, ಅಂತರ್‌ರಾಷ್ಟ್ರೀಯ ತಿಳುವಳಿಕೆ, ಧಾರ್ಮಿಕ ಸಹಿಷ್ಣುತಾ ಮನೋಭಾವನೆ, ಜಾತ್ಯಾತೀತ ಮನೋಭಾವ, ಸರ್ವಧರ್ಮ ಸಹಿಷ್ಣುತೆ ಮುಂತಾದ ಗುರಿಗಳು ಚರಿತ್ರೆ ಪಠ್ಯಪುಸ್ತಕದಿಂದ ಮಾತ್ರ ಈಡೇರಿಸಲು ಸಾಧ್ಯ. ಈ ಗುರಿಗಳ ಈಡೇರಿಕೆಗಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆ ಪಠ್ಯಪುಸ್ತಕದಲ್ಲಿ ಸಾಕಷ್ಟು ಒತ್ತು ನೀಡಿರಬೇಕು. ಹಾಗಾದಾಗ ಮಾತ್ರ ಈ ಉದ್ದೇಶ ಈಡೇರುತ್ತದೆ.

೨. ಶಿಶು ಕೇಂದ್ರಿತವಾಗಿರಬೇಕು

ಚರಿತ್ರೆ ಪಠ್ಯಪುಸ್ತಕವನ್ನು ರಚಿಸುವವರು ವಿದ್ಯಾರ್ಥಿಗಳ ವಯಸ್ಸು ಸಾಮರ್ಥ್ಯ ಮತ್ತು ಆಸಕ್ತಿಗಳಿಗೆ ಅನುಗುಣವಾಗಿ ರಚಿಸಬೇಕು. ಅಂದರೆ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಚರಿತ್ರೆ ಪಠ್ಯಪುಸ್ತಕ ಸಿದ್ಧವಾಗಿರಬೇಕು. ಅದರ ಹೊರತಾಗಿ ಸಿದ್ಧಪಡಿಸುವವರ ಬೌದ್ಧಿಕ ಸಾಮರ್ಥ್ಯ ಮತ್ತು ಯಾವುದೇ ಒತ್ತಡಗಳಿಗೆ ಒಳಗಾಗದೆ ಅವರು ಮಕ್ಕಳ ಭವಿಷ್ಯ ದೃಷ್ಟಿಯಿಂದ ಸಿದ್ಧಪಡಿಸಬೇಕು.

೩. ಸಾಕಷ್ಟು ನಿದರ್ಶನಗಳಿರಬೇಕು

"ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗೆ ರಚಿತವಾಗುವ ಚರಿತ್ರೆ ಪಠ್ಯಪುಸ್ತಕಗಳು ಸಾಕಷ್ಟು ನಿದರ್ಶನಗಳಿಂದ ಕೂಡಿರಬೇಕು. ಏಕೆಂದರೆ ಈ ಹಂತದಲ್ಲಿ ಮಕ್ಕಳಿಗೆ ಅನೇಕ ಅಮೂರ್ತವಾದ ವಿಚಾರಗಳನ್ನು ಈ ಹಂತದಲ್ಲಿ ಗ್ರಹಿಸುವ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಪಠ್ಯಪುಸ್ತಕದಲ್ಲಿ ಸಾಕಷ್ಟು ಸರಿಯಾದ ಗಾತ್ರದಿಂದ, ಬಣ್ಣದಿಂದ ಕೂಡಿರುವ ಚಿತ್ರಗಳಿರಬೇಕು."[೧೮] ಪ್ರತಿಯೊಂದು ಅಂಶಗಳಿಗೆ ಸಂಬಂಧಿಸಿದಂತೆ ಸಾಧ್ಯವಾದೆಡೆಯಲ್ಲೆಲ್ಲ ಭೂಪಟ, ನಕ್ಷೆ, ರೇಖಾಚಿತ್ರಗಳಿದ್ದರೆ ವಿದ್ಯಾರ್ಥಿಗಳನ್ನು ಪ್ರಚೋದಿಸುತ್ತದೆ. ಪುಸ್ತಕದಲ್ಲಿರುವ ಎಲ್ಲಾ ರೀತಿಯ ನಿದರ್ಶನಗಳು ವಾಸ್ತವತೆಯನ್ನು ಪ್ರತಿಬಿಂಬಿಸುವಂತಿರಬೇಕು. ಅದರಲ್ಲಿಯೂ ಕಾಲಸೂಚಿ, ವಂಶಾವಳಿ, ಆಲೇಖಗಳು, ಘಟನೆಗಳು, ಇಸ್ವಿಗಳು ನಿಖರವಾಗಿರಬೇಕು.

೪. ಲೇಖಕನ ಅರ್ಹತೆ ಮತ್ತು ಅನುಭವ

ಲೇಖಕನಿಗೆ ತಾನು ಪ್ರಕಾಶಗೊಳಿಸಬೇಕಾದಂತಹ ವಿಷಯದಲ್ಲಿ ಬೋಧನಾನುಭವ ಇರಲೇಬೇಕು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಬೋಧನೆಯಲ್ಲಿ ಸಾಕಷ್ಟು ನುರಿತ ಅನುಭವ ಇರಬೇಕು. ಇದರಿಂದ ವಾಸ್ತವ ದಿನಗಳಲ್ಲಿ ಕಲಿಕೆಗೆ ಬೇಕಾಗುವಂತಹ ಸನ್ನಿವೇಶವನ್ನು, ವಿದ್ಯಾರ್ಥಿಗಳಿಗೆ ಎದುರಾಗಬಹುದಾದ ಸಮಸ್ಯೆಗಳನ್ನು ಅರಿತವನಾಗಿರುತ್ತಾನೆ. ಅಲ್ಲದೆ ಆತನು ಬದಲಾಗುತ್ತಿರುವ ಬದುಕಿನ ಅರ್ಥಗಳನ್ನು, ಮೌಲ್ಯಗಳನ್ನು ಅರ್ಥೈಸಿಕೊಳ್ಳಬಲ್ಲಂತಹ ಸೂಕ್ಷ್ಮ ಮತಿಯಾಗಿರಬೇಕು. ಪಠ್ಯಪುಸ್ತಕ ಸಿದ್ಧಪಡಿಸುವ ಸದಸ್ಯರು ವಿಶೇಷ ಜ್ಞಾನದ ಸಹಾಯ ಪಡೆದಿರಬೇಕಾದದ್ದು ಅತ್ಯವಶ್ಯಕ.

೫. ನಿರಂತರ ಪರಿಷ್ಕರಣೆಗೆ ಒಳಗಾಗಬೇಕು

ಚರಿತ್ರೆ ಪಠ್ಯಪುಸ್ತಕವು ನಿರಂತರ ಪರಿಷ್ಕರಣೆಗೆ ಒಳಗಾಗಬೇಕು. ಏಕೆಂದರೆ ಹೊಸ-ಹೊಸ ಪ್ರಯೋಗ ಮತ್ತು ಸಂಶೋಧನೆಗಳ ಪ್ರಭಾವದಿಂದ ಈಗಾಗಲೇ ಪ್ರಚಲಿತದಲ್ಲಿರುವ ವಿಷಯದಲ್ಲಿ ಆಗಾಗ ಬದಲಾವಣೆಗಳು, ಹೊಸ-ಹೊಸ ವಿಷಯಗಳು ಬೆಳಕಿಗೆ ಬರುತ್ತಲೇ ಇವೆ. ಘಟನೆಯ ಕುರಿತು ಮೊದಲಿನ ಭಾವನೆಗಳು ಸುಳ್ಳಾಗುತ್ತಲಿವೆ. ಆದ್ದರಿಂದ ಚರಿತ್ರೆಯ ಪಠ್ಯಪುಸ್ತಕಗಳು ಇಂದಿನವರೆಗಿನ ವಿಷಯಗಳನ್ನು ಒಳಗೊಂಡಂತೆ ರಚಿಸಬೇಕು. ಭಾರತ ದೇಶದ ಚರಿತ್ರೆಯಲ್ಲಿಯೂ ಇದು ತೀರಾ ಅತ್ಯವಶ್ಯಕವಾಗಿದೆ. ಏಕೆಂದರೆ ಬ್ರಿಟಿಷರು ನಮ್ಮ ದೇಶದ ಘಟನೆಯನ್ನು ನೋಡಿದ ದೃಷ್ಟಿ ನಂಬಲರ್ಹವಾದುದಲ್ಲ. ಇದರಿಂದ ಇತಿಹಾಸದ ಘಟನೆಗಳನ್ನು ಪುನರ್‌ವಿಮರ್ಶಿಸಿ, ವಾಸ್ತವವಾಗಿ ಚರಿತ್ರೆ ಘಟನೆಗಳನ್ನು ವಿಶ್ಲೇಷಿಸಬೇಕಾಗಿದೆ. ಹಾಗಾಗಿ ಮರುರಚನೆ, ಮರುಚಿಂತನೆ,

ಮರುವ್ಯಾಖ್ಯಾನಗಳು ಚರಿತ್ರೆ ಪಠ್ಯದಲ್ಲಿ ಹೊಸ ಅಧ್ಯಾಯವನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗುತ್ತಲಿವೆ.

**೬. ಪಕ್ಷಪಾತದಿಂದ ಮುಕ್ತವಾಗಿರಬೇಕು**

ಚರಿತ್ರೆಯ ಉತ್ತಮ ಪಠ್ಯಪುಸ್ತಕದಲ್ಲಿ ಯಾವುದೇ ರೀತಿಯ ಅನಪೇಕ್ಷಣೀಯವಾದ ಅಂಶವಿರಕೂಡದು. ಕೇವಲ ಸತ್ಯ ಸಂಗತಿಯನ್ನು ಮಾತ್ರ ತಿಳಿಸಬೇಕು. ಅದರಲ್ಲಿ ಯಾವುದೇ ಜನಾಂಗದ, ಜಾತಿಯ ಮತ್ತು ಧರ್ಮದವರ ಮನ ನೋಯಿಸುವ ವಿಷಯಗಳಿರಕೂಡದು. ಇಂದಿನ ಜಗತ್ತಿನ ಅತಿ ಅವಶ್ಯಕವಾಗಿ ಬೇಕಾಗಿರುವುದು ಮಾನವ ಕಲ್ಯಾಣ, ಸಹಿಷ್ಣು, ಬಂಧುತ್ವ ಮೊದಲಾದ ಸದ್ಗುಣಗಳ ಬೆಳವಣಿಗೆಗೆ ಪ್ರಚೋದನೆ ನೀಡಬೇಕು. ಸಂಕುಚಿತ ರಾಷ್ಟ್ರೀಯ ಭಾವನೆಗಳಿಗೆ ಪಠ್ಯಪುಸ್ತಕದಲ್ಲಿ ಅವಕಾಶ ಇರಕೂಡದು.

**೭. ರಾಷ್ಟ್ರೀಯ ಭಾವೈಕ್ಯತೆಯನ್ನು ಮೂಡಿಸುವಂತಿರಬೇಕು**

ಚರಿತ್ರೆಯ ಪಠ್ಯಪುಸ್ತಕವು ಮಾಡಲೇಬೇಕಾದ ಪ್ರಮುಖ ಕಾರ್ಯ ಇದಾಗಿದೆ. ಕಾರಣ ವಿಶಾಲ ಭವ್ಯ ಭಾರತವು ಅನೇಕ ಜಾತಿ, ಧರ್ಮ ಮತ್ತು ಪಂಗಡದ ಜನತೆಯನ್ನು ಒಳಗೊಂಡಿದೆ. ಭಿನ್ನ ಭಾಷೆ, ಸಂಸ್ಕೃತಿ, ಆಚಾರ–ವಿಚಾರ, ರೀತಿ–ನೀತಿ, ಉಡುಗೆ–ತೊಡುಗೆಗಳಲ್ಲಿ ವ್ಯತ್ಯಾಸ ಕಾಣಬಹುದಾಗಿದೆ. ಈ ಎಲ್ಲಾ ವೈವಿಧ್ಯತೆಗಳನ್ನು ಮರೆತು "ನಾವೆಲ್ಲಾ ಒಂದೇ" ಎಂಬ ಭಾವನೆಯನ್ನು ಪಠ್ಯಪುಸ್ತಕವು ಬೆಳೆಸಬೇಕು.

**೮. ಅಂತಾರಾಷ್ಟ್ರೀಯ ತಿಳುವಳಿಕೆ ಮೂಡಿಸುವಂತಿರಬೇಕು**

ಚರಿತ್ರೆಯ ಪಠ್ಯಪುಸ್ತಕವು ಜಗತ್ತಿನ ಮಹಾನ್ ವೀರ ಪುರುಷರು, ತತ್ವಜ್ಞಾನಿಗಳು, ಸಂತರು, ಸಮಾಜ ಸುಧಾರಕರು, ಸಾಧನೆಗೈದ ವೀರ ಮಹಿಳೆಯರು, ಸಾಹಸಿಗರು, ವಿಜ್ಞಾನಿಗಳು, ಚರಿತ್ರೆಕಾರರ ಜೀವನ ಹಾಗೂ ಕೊಡುಗೆಗಳನ್ನು ಮಕ್ಕಳಿಗೆ ಪರಿಚಯಿಸುವ ಮೂಲಕ ಅಂತಾರಾಷ್ಟ್ರೀಯ ತಿಳುವಳಿಕೆ ಮೂಡಿಸುವಂತಿರಬೇಕು.

**೯. ಮಕ್ಕಳ ದೈನಂದಿನ ಬದುಕಿಗೆ ಅನ್ವಯವಾಗುವಂತಿರಬೇಕು**

ಚರಿತ್ರೆಯ ಪಠ್ಯಪುಸ್ತಕದಲ್ಲಿ ಮಕ್ಕಳ ದೈನಂದಿನ ಬದುಕಿಗೆ ಅನ್ವಯವಾಗುವಂತೆ ವಿಷಯ ವಸ್ತುವನ್ನು ಪರೋಕ್ಷವಾಗಿ ಹೆಣೆದಿರಬೇಕು. ಇದರಿಂದ ವಿದ್ಯಾರ್ಥಿಯು ಭವಿಷ್ಯದ ಜೀವನವನ್ನು ರೂಪಿಸಿಕೊಳ್ಳಲು ಸಹಾಯಕವಾಗುತ್ತದೆ.

**೩. ಆಂತರಿಕ ಗುಣಲಕ್ಷಣಗಳು**

**೧. ಚರಿತ್ರೆಯ ಪಠ್ಯಪುಸ್ತಕದಲ್ಲಿರುವ ವಿಷಯಗಳು ತಾರ್ಕಿಕ ಕ್ರಮದಲ್ಲಿರಬೇಕು**

ಚರಿತ್ರೆಯ ಪಠ್ಯಪುಸ್ತಕದಲ್ಲಿ ನಿರೂಪಿಸಿದ ವಿಷಯಗಳು ಮತ್ತು ಘಟನೆಗಳು ಕ್ರಮಬದ್ಧವಾಗಿ ಕಾಲಾನುಕ್ರಮಕ್ಕನುಗುಣವಾಗಿ ತಾರ್ಕಿಕ ಕ್ರಮದಲ್ಲಿ ನಿರೂಪಿತವಾಗಿರಬೇಕು. ವ್ಯವಸ್ಥಿತ ರೀತಿಯಲ್ಲಿ ವಿಷಯಗಳ ಜೋಡಣೆ ಇಲ್ಲದಿದ್ದರೆ ಅದು ಕಲಿಕೆಯಲ್ಲಿ ಗೊಂದಲವನ್ನು, ಅಸ್ಪಷ್ಟತೆಯನ್ನು ಉಂಟು ಮಾಡುತ್ತದೆ. ಇದನ್ನು ನಿವಾರಿಸಲು ವಿಷಯಗಳನ್ನು ತಾರ್ಕಿಕ ಕ್ರಮದಲ್ಲಿ ಒಂದಾದರ ಮೇಲೊಂದರಂತೆ ವ್ಯವಸ್ಥಿತ ರೀತಿಯಲ್ಲಿ ಜೋಡಿಸಿರಬೇಕು.

**೨. ಭಾಷೆ ಮತ್ತು ಶೈಲಿ**

ಚರಿತ್ರೆಯ ಪಠ್ಯಪುಸ್ತಕದಲ್ಲಿ ಬಳಸಿರುವ ಭಾಷೆ ಸರಳವಾಗಿರಬೇಕು ಮತ್ತು ಶೈಲಿ ಉತ್ತಮವಾಗಿರಬೇಕು. ಅಲಂಕಾರಿಕ ಭಾಷೆ ಸಾಧ್ಯವಾದಷ್ಟು ಕಡಿಮೆ ಇರಬೇಕು. ಅತಿ ಹೆಚ್ಚಾಗಿ ಪರಭಾಷೆಯ ಪದಗಳನ್ನು ಬಳಸಬಾರದು. ಚರಿತ್ರೆ ಪಠ್ಯಪುಸ್ತಕದ ಮುಖ್ಯ ಉದ್ದೇಶ ವಿಷಯವನ್ನು ಸ್ಪಷ್ಟವಾಗಿ ನಿರೂಪಿಸುವುದೇ ವಿನಃ ಭಾಷಾ ಪಠ್ಯಪುಸ್ತಕದಂತೆ ಭಾಷೆಗೆ ಅತಿ ಹೆಚ್ಚು ಒತ್ತನ್ನು ನೀಡುವುದಲ್ಲ.[೯] ಪುಸ್ತಕದಲ್ಲಿ ಬಳಸಿರುವ ಪ್ರತಿಯೊಂದು ಪದಗಳು, ವಾಕ್ಯಗಳು ಸರಳ ಮತ್ತು ಉತ್ತಮವಾಗಿರಬೇಕು. ಅತಿ ಉದ್ದದ ವಾಕ್ಯಗಳನ್ನು ಬಳಸಬಾರದು. ವಿಷಯಗಳನ್ನು ಕಥಾ ಶೈಲಿಯಲ್ಲಿ ನಿರೂಪಿಸಿರಬೇಕು.

**೩. ಉತ್ತಮ ಉದಾಹರಣೆ ಮತ್ತು ಸಹ ಸಂಬಂಧ ಹೊಂದಿರಬೇಕು**

ಚರಿತ್ರೆಯ ಪಠ್ಯಪುಸ್ತಕವು ಘಟನೆಗಳಿಗೆ ಪೂರಕವಾದಂತಹ ಉತ್ತಮವಾದ ಉದಾಹರಣೆಗಳನ್ನು ಒಳಗೊಂಡಿರಬೇಕು. ಅದೇ ರೀತಿ ಸಮಾಜ ವಿಜ್ಞಾನದ ಇತರೆ ವಿಷಯಗಳೊಂದಿಗೆ ಅಂದರೆ ಭೂಗೋಳ, ಪೌರನೀತಿ, ಸಾಹಿತ್ಯ, ಸಮಾಜಶಾಸ್ತ್ರ ಮುಂತಾದವುಗಳೊಂದಿಗೂ ಸಂಬಂಧ ಕಲ್ಪಿಸಿ ರಚಿಸಬೇಕು. ಏಕೆಂದರೆ ಚರಿತ್ರೆ ಎಂದರೆ ಕೇವಲ ರಾಜ ಮಹಾರಾಜರ ಕಥೆ ಎಂದು ಮಕ್ಕಳು ತಿಳಿಯುವ ಸಾಧ್ಯತೆ ಇರುತ್ತದೆ. ಇದನ್ನು ಹೋಗಲಾಡಿಸುವ ಪ್ರಯತ್ನ ಪಠ್ಯದಲ್ಲಿರಬೇಕು.

**೪. ಪ್ರಾಯೋಗಿಕ ಚಟುವಟಿಕೆಗಳಿಗೆ ಅವಕಾಶವಿರಬೇಕು**

ಚರಿತ್ರೆಯ ಪಠ್ಯಪುಸ್ತಕದಲ್ಲಿ ಕೇವಲ ಸೈದ್ಧಾಂತಿಕ ವಿಷಯಗಳಿದ್ದರೆ ಮಾತ್ರ ಸಾಲದು. ಕಾರಣ ಚರಿತ್ರೆ ಒಂದು ವಿಜ್ಞಾನವಾಗಿರುವುದರಿಂದ ಪಠ್ಯಪುಸ್ತಕದಲ್ಲಿ ಪ್ರಾಯೋಗಿಕ ಚಟುವಟಿಕೆಗಳನ್ನು ಸೂಚಿಸಿರಬೇಕು. ಕಾಲಸೂಚಿ, ರಚನೆ, ಭೂಪಟ, ಮಾದರಿಗಳ ತಯಾರಿಕೆ, ಆಲೇಖಗಳ ರಚನೆ ಇತ್ಯಾದಿಗಳಿಗೆ ಅವಕಾಶವಿರಬೇಕು.

**೫. ಪ್ರತಿ ಅಧ್ಯಾಯದ ಕೊನೆಯಲ್ಲಿ ಅಭ್ಯಾಸ ಪ್ರಶ್ನೆಗಳಿರಬೇಕು**

ಚರಿತ್ರೆಯ ಪಠ್ಯಪುಸ್ತಕದ ಪ್ರತಿ ಅಧ್ಯಾಯದ ಕೊನೆಯಲ್ಲಿ ಮಕ್ಕಳಿಗೆ ಅಭ್ಯಾಸ ಪ್ರಶ್ನೆಗಳನ್ನು ನೀಡಿರಬೇಕು. ಅಲ್ಲದೆ ಹೆಚ್ಚಿನ ಅಧ್ಯಯನಕ್ಕಾಗಿ ಇತರ ಚಟುವಟಿಕೆಗಳನ್ನು ಮತ್ತು ಪುಸ್ತಕಗಳನ್ನು ಸೂಚಿಸಿರಬೇಕು. ಇವು ವರ್ಗದಲ್ಲಿ ಕಲಿತ ವಿಷಯಗಳನ್ನು ಪುನರಾವರ್ತನೆ ಮಾಡಿಕೊಳ್ಳಲು ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತದೆ.

**೬. ಪಠ್ಯಪುಸ್ತಕವು ಹಲವು ಬೋಧನಾ ಪದ್ದತಿಗಳನ್ನು ಸೂಚಿಸಿರಬೇಕು**

ಉತ್ತಮ ಚರಿತ್ರೆ ಪಠ್ಯಪುಸ್ತಕವು ಆಧುನಿಕ ಬೋಧನಾ ಪದ್ಧತಿಗಳಾದ ಚರ್ಚಾ ಪದ್ಧತಿ, ಸಾಮಾನ್ಯ ಪರಿಹಾರ ಪದ್ಧತಿ, ಯೋಜನಾ ಪದ್ಧತಿ, ಜೀವನ ವೃತ್ತಾಂತ ಪದ್ಧತಿ, ಕಾಲಾನುಕ್ರಮ ಪದ್ಧತಿಗಳನ್ನು ಒಳಗೊಂಡಂತೆ ಎಲ್ಲಾ ಬೋಧನಾ ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಗಿರಬೇಕು.

**೭. ಅಕ್ಷರಗಳ ಗಾತ್ರ ಹಾಗೂ ಸಾಲುಗಳು**

ಚರಿತ್ರೆ ಪಠ್ಯಪುಸ್ತಕದಲ್ಲಿ ಮುದ್ರಿತ ಅಕ್ಷರಗಳ ಗಾತ್ರ ಒಂದೇ ಪ್ರಮಾಣದಲ್ಲಿರಬೇಕು. ಶೀರ್ಷಿಕೆ ಹಾಗೂ ಉಪ ಶೀರ್ಷಿಕೆಗಳು ದಪ್ಪ ಅಕ್ಷರಗಳಿಂದ ಬರೆದಿರಬೇಕು. ಸಾಲುಗಳ ನಡುವೆ ಯೋಗ್ಯ

ಅಂತರವಿರಬೇಕು. ಯಾವುದೇ ಬರವಣಿಗೆಯಲ್ಲಿ ದೋಷವಿರಬಾರದು. ಏಕೆಂದರೆ ಮಕ್ಕಳು ಅವುಗಳನ್ನು ಈ ಹಂತದಲ್ಲಿ ಅನುಕರಿಸುವುದು ಹೆಚ್ಚು. ಆದ್ದರಿಂದ ಸಾಧ್ಯವಾದಷ್ಟು ಚರಿತ್ರೆ ಪಠ್ಯಪುಸ್ತಕ ಅಕ್ಷರ ದೋಷವಿಲ್ಲದೆ ಇರಬೇಕು.

**೮. ಪರಿವಿಡಿ ಮತ್ತು ಕೊನೆಯಲ್ಲಿ ಗ್ರಂಥಋಣವೂ ಇರಬೇಕು**

ಕಾಲಹರಣ ಮಾಡದೆ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಬ್ಬರು ತಮಗೆ ಬೇಕಾದ ಅಧ್ಯಾಯವನ್ನು ಹುಡುಕಿಕೊಳ್ಳಲು ಪರಿವಿಡಿ ಹೇಗೆ ಸಹಾಯ ಮಾಡುತ್ತದೆಯೋ ಅದೇ ರೀತಿ ಅಧ್ಯಾಯಗಳಿಗೆ ಹೆಚ್ಚಿನ ವಿವರವಾದ ವಿಷಯ ಜ್ಞಾನಕ್ಕೆ ಆಧಾರ ಸೂಚಿ ಅಥವಾ ಗ್ರಂಥಋಣಗಳನ್ನು ನೀಡುವುದು ಉಪಯುಕ್ತವಾಗಿದೆ.

**೨.೨.೩. ಚರಿತ್ರೆಯ ಪಠ್ಯಕ್ರಮ ರಚನೆಯ ತತ್ವಗಳು**

ಚರಿತ್ರೆಯಂತಹ ವಿಶಾಲ ವ್ಯಾಪ್ತಿಯನ್ನು ಹೊಂದಿರುವ ವಿಷಯಕ್ಕೆ ಪಠ್ಯಕ್ರಮವನ್ನು ರಚಿಸುವಾಗ ಕೆಲವು ಅತ್ಯಂತ ಪ್ರಮುಖವಾದ ತತ್ವಗಳನ್ನು ಅಥವಾ ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಇಂತಹ ಹಲವಾರು ತತ್ವಗಳ ಹಿನ್ನೆಲೆಯಲ್ಲಿ ಚರಿತ್ರೆ ಪಠ್ಯವಸ್ತುವನ್ನು ಸಿದ್ಧಪಡಿಸಲಾಗುತ್ತಿದೆ. ಸರ್ಕಾರ ನೇಮಿಸುವ ಪಠ್ಯಪುಸ್ತಕ ರಚನಾ ಸಮಿತಿಯು ತನ್ನದೇ ಆದ ತತ್ವಗಳನ್ನು ಒಳಗೊಂಡಿರುತ್ತದೆ. ಈ ತತ್ವಗಳು ಈ ರೀತಿಯಾಗಿವೆ.

**ಸಿದ್ಧತೆಯ ತತ್ವ**

ಚರಿತ್ರೆ ಪಠ್ಯಕ್ರಮದ ಪ್ರಮುಖ ಅಗತ್ಯತೆ ಆ ವಿಷಯ ಗುರಿ-ಉದ್ದೇಶಗಳನ್ನು ಸಾಧಿಸುವುದಾಗಿದೆ. ಈ ಮೂಲಕ ವಿದ್ಯಾರ್ಥಿಗಳ ಭವಿಷ್ಯ ಜೀವನಕ್ಕೆ ಬೇಕಾಗುವ ಬೌದ್ಧಿಕ, ಮಾನಸಿಕ ಇತ್ಯಾದಿ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ತಯಾರು ಮಾಡುವುದಾಗಿದೆ. ಬೇರೆ ಎಲ್ಲಾ ವಿಷಯಗಳಿಗಿಂತ ಇತಿಹಾಸ ವಿಷಯ ಮಗುವಿನ ಜೀವನಕ್ಕೆ ಬೇಕಾದ ಅಗತ್ಯತೆಗಳನ್ನು ಪೂರೈಸುವಲ್ಲಿ ಸಹಾಯಕವಾಗಿದೆ. ಇದರ ಅಧ್ಯಯನವು ಅವರ ಜೀವನದಲ್ಲಿ ಶಿಸ್ತು, ಸಂಯಮ, ತಾಳ್ಮೆ, ಸಹಕಾರ, ಪ್ರೀತಿ, ದಯೆ, ಕರುಣೆ ಮುಂತಾದ ಗುಣಗಳನ್ನು ಬೆಳೆಸುವಲ್ಲಿ ಸಹಾಯಕವಾಗಿದೆ. ಹಾಗೆಯೇ ಇದರ ಅಧ್ಯಯನವು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಇತ್ಯಾದಿ ಸಮಸ್ಯೆಗಳನ್ನು ಪರಿಹರಿಸುವುದ ರಲ್ಲಿಯೂ ಸಹಾಯಕವಾಗಿದೆ.

**ಜೀವನ ರೂಪಿಸುವ ತತ್ವ**

ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಹೀಗಿರುವಲ್ಲಿ ಇಂದಿನ ಆಧುನಿಕ ಸಂಕೀರ್ಣ ಸಮಾಜಕ್ಕೆ ಸರಿ ಹೊಂದುವಂತೆ ರೂಪಿಸುವ ಗುರುತರವಾದ ಜವಾಬ್ದಾರಿ ಚರಿತ್ರೆ ಪಠ್ಯಕ್ರಮಕ್ಕೆ ಸಂಬಂಧಿಸಿದೆ. ಸಮಾಜ ಪ್ರತಿ ಕ್ಷಣದಲ್ಲಿಯೂ ವಿವಿಧ ಕ್ಷೇತ್ರಗಳಲ್ಲಿ ಬದಲಾವಣೆ ಹೊಂದುತ್ತಿದ್ದು, ಅದಕ್ಕೆ ಹೊಂದಿಕೊಂಡಂತೆ ಮುಂದಿನ ಸಮಾಜಕ್ಕೆ ಉತ್ತಮ ವ್ಯಕ್ತಿತ್ವವುಳ್ಳ ಸಮತೂಕದ ವ್ಯಕ್ತಿಗಳನ್ನು ರೂಪಿಸುವಂತಹ ಗುರುತರವಾದ ಜವಾಬ್ದಾರಿ ಚರಿತ್ರೆ ಪಠ್ಯಕ್ರಮದ ನಿಯಮವಾಗಿದೆ.

**ಬೌದ್ಧಿಕ ಬೆಳವಣಿಗೆಯ ತತ್ವ**

ಜ್ಞಾನ ಬೆಳೆಸಿಕೊಳ್ಳಬೇಕೆಂದು ಎಲ್ಲಾ ಸಮಾಜದ ಜನತೆಯ ಅಪೇಕ್ಷೆ. ಅದರಲ್ಲಿಯೂ ಜ್ಞಾನಭಿವೃದ್ಧಿಗೆ ಚರಿತ್ರೆ ಅತ್ಯಂತ ಸೂಕ್ತ ವಿಷಯ. ಚರಿತ್ರೆ ಪಠ್ಯಕ್ರಮ ರಚನೆಯಲ್ಲಿ ಈ ಅಂಶವನ್ನು ಗಮನದಲ್ಲಿರಿಸಿಕೊಂಡು ಮಕ್ಕಳ ಬೌದ್ಧಿಕ ಬೆಳವಣಿಗೆಗೆ ಪೂರಕವಾದಂತಹ ಭೂತ ಮತ್ತು ವರ್ತಮಾನ ಕಾಲ ವಿಷಯಗಳನ್ನು ಒಳಗೊಂಡಂತೆ, ಭವಿಷ್ಯತ್ತಿನ ಮೇಲೆ ಬೆಳಕು ಮೂಡಿಸುವಂತಹ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬೇಕು. ವಿಷಯವನ್ನು ಆಯ್ಕೆ ಮಾಡಿಕೊಳ್ಳುವಾಗ ಅವರ ವಯಸ್ಸು, ಲಿಂಗ, ಜಾತಿ, ಬೌದ್ಧಿಕ ಪರಿಪಕ್ವತೆಯ ಮಟ್ಟ ಇತ್ಯಾದಿಗಳನ್ನು ಗಮನದಲ್ಲಿರಿಸಿಕೊಳ್ಳಬೇಕು.

**ಅನುಭವ ಮತ್ತು ಆಸಕ್ತಿಯ ತತ್ವ**

ಯಾವುದೇ ವಿಷಯದ ಪಠ್ಯಕ್ರಮ ರಚನೆ, ಮಗುವಿನ ಅನುಭವ ಮತ್ತು ಆಸಕ್ತಿಗನುಗುಣವಾಗಿ ಸಮಂಜಸವಾಗಿರಬೇಕು. ಚರಿತ್ರೆ ಪಠ್ಯಕ್ರಮವೂ ಸಹ ಮಗುವಿನ ವಿವಿಧ ಅನುಭವ ಮತ್ತು ಆಸಕ್ತಿಗಳನ್ನು ಗಮನದಲ್ಲಿರಿಸಿಕೊಂಡು ಆಯಾ ಹಂತಗಳಿಗೆ ಅನುಗುಣವಾಗಿ ಚರಿತ್ರೆ ಪಠ್ಯಕ್ರಮವನ್ನು ರಚಿಸಬೇಕು.

**ಕಲಿಕೆಯ ಸನ್ನಿವೇಶಗಳ ವಾಸ್ತವಿಕತೆಯ ತತ್ವ:–** ನೆಪೋಲಿಯನ್ ಅವರು "ಸತ್ತವರ ಮೇಲೆ ಹೆಣೆಯಲ್ಪಡುವ ಸುಳ್ಳಿನ ಕಂತೆಯೇ ಚರಿತ್ರೆ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ."[೨೦] ಈ ಮಾತು ಇಂದಿಗೂ ಕಲಿಕಾ ಸನ್ನಿವೇಶಕ್ಕೆ ಅನ್ವಯಿಸುತ್ತದೆ. ಇತಿಹಾಸವು ಅನೇಕ ಸಾಕ್ಷಿ ಆಧಾರಗಳ ಹಿನ್ನೆಲೆಯಲ್ಲಿ ವಾಸ್ತವ ನೆಲೆಗಟ್ಟಿನ ಮೇಲೆ ಬರೆಯಲ್ಪಟ್ಟಿದೆ. ಆದುದರಿಂದ ಚರಿತ್ರೆ ಪಠ್ಯಕ್ರಮ ರಚನೆಯಲ್ಲಿ ಮಗುವಿಗೆ ವಾಸ್ತವ ಸಂಗತಿಗಳನ್ನು ಮಗುವಿಗೆ ಪರಿಚಯಿಸಲು ಪಠ್ಯಕ್ರಮದಲ್ಲಿ ಅನುವಾಗುವಂತೆ ಐತಿಹಾಸಿಕ ಅರಮನೆ, ಕೋಟೆ-ಕೊತ್ತಲು, ದೇವಸ್ಥಾನ, ಮಸೀದಿ, ಇಗರ್ಜಿ, ವಸ್ತುಸಂಗ್ರಹಾಲಯ, ಪ್ರಾಣಿ ಸಂಗ್ರಹಾಲಯ ಮುಂತಾದವುಗಳಿಗೆ ಸಂದರ್ಶಿಸುವ ಅವಕಾಶ ಕಲ್ಪಿಸಿ ನೇರವಾದ ಕಲಿಕೆಯ ಸನ್ನಿವೇಶವನ್ನು ಒದಗಿಸುವಂತಿರಬೇಕು".[೨೧] ಆಗ ಚರಿತ್ರೆ ಪಠ್ಯಪುಸ್ತಕಗಳು ಹೆಚ್ಚು ಪರಿಣಾಮಕಾರಿಯಾಗುತ್ತದೆ.

**ಯೋಗ್ಯ ಧ್ಯೇಯ ಮತ್ತು ರಾಜ್ಯ ನಿಷ್ಠೆಯ ಬೆಳವಣಿಗೆಯ ತತ್ವ**

ಇಂದು ಚರಿತ್ರೆ ಪಠ್ಯಕ್ರಮವು ವಿದ್ಯಾರ್ಥಿಗಳಲ್ಲಿ ಯೋಗ್ಯ ಧ್ಯೇಯಗಳನ್ನು ಮತ್ತು ರಾಜರ ನಿಷ್ಠೆಯನ್ನು ಮೂಡಿಸುವುದಕ್ಕೆ ಸಹಾಯಕವಾಗುವಂತಹ ವಸ್ತು. ವಿಷಯಗಳನ್ನು ಒಳಗೊಂಡಂತೆ ರಚನೆಯಾಗಬೇಕಾಗಿದೆ. ಕಾರಣ ಇಂದು ಸಮಾಜದ ಜನತೆಯಲ್ಲಿ ನೈತಿಕ ಮೌಲ್ಯಗಳು ಕುಸಿಯುತ್ತಿದ್ದು, ದೇಶ ಭಕ್ತಿಯ ಭಾವನೆಗಳು ದೂರವಾಗುತ್ತಿದೆ. ಚರಿತ್ರೆಯ ಪಠ್ಯವಸ್ತುವು ಈ ಅಂಶವನ್ನು ಗಮನದಲ್ಲಿರಿಸಿಕೊಂಡು ನಮ್ಮ ಸಮಾಜ ಅಪೇಕ್ಷಿಸುವ ರೀತಿಯಲ್ಲಿ ಉತ್ತಮ ನಡೆ, ರೀತಿ-ನೀತಿ, ಸಂಪ್ರದಾಯ, ಭಾವನೆಗಳನ್ನು ಬೆಳೆಸಿಕೊಳ್ಳುವಂತೆ ತಿಳಿಸಬೇಕು. ಹಾಗೆಯೇ ವಾಸಿಸುವ ಸಮುದಾಯ, ಪ್ರಾಂತ್ಯ ಮತ್ತು ದೇಶಗಳ ಬಗ್ಗೆ ಧನಾತ್ಮಕ ಮನೋಭಾವದ ಬೆಳವಣಿಗೆಯನ್ನುಂಟುಮಾಡುವಂತೆ ಪಠ್ಯವಸ್ತುವಿರಬೇಕು.

**ಪಾಲನೆಯ ತತ್ವ**

ವಿವೀಸ್ ಅವರು ಹೇಳಿರುವಂತೆ 'ಪೂರ್ಣ ನೀತಿಶಾಸ್ತ್ರವೇ ಚರಿತ್ರೆಯ ಮೇಲೆ ನಿರ್ಮಾಣ ಗೊಂಡಿದೆ' ಎಂಬ ಮಾತು ಸತ್ಯ ಇಂದಿನ ಪ್ರಜಾಪ್ರಭುತ್ವ ದೇಶದಲ್ಲಿ ಪ್ರತಿಯೊಬ್ಬ ಮಗು ನ್ಯಾಯಯುತವಾಗಿ ನೈತಿಕ ಮೌಲ್ಯಗಳಿಗೆ ಸಂಬಂಧಿಸಿದಂತೆ ಇತಿಹಾಸದಲ್ಲಿ ಬರುವ ಸಾಧು-ಸಂತರು, ಮಹಾತ್ಮರ, ಜೀವನ ಚರಿತ್ರೆ, ಅವರ ತ್ಯಾಗ, ನಿಸ್ವಾರ್ಥತೆ, ನಿಸ್ಪೃಹತೆ, ಸತ್ಯ ಸಂಧತೆ, ಧೈರ್ಯ, ಅನ್ಯಮತ ಸಹಿಷ್ಣುತೆ ಹಾಗೂ ನಮ್ಮ ಹಿರಿಯರು ಅನುಸರಿಸಿಕೊಂಡು ಬಂದ ಒಳ್ಳೆಯ ರೀತಿ-ನೀತಿ, ಸಂಪ್ರದಾಯ ಮತ್ತು ಸಂಸ್ಕೃತಿಯನ್ನು ಸಂಕ್ಷೇಪಿಸುವಂತೆ ನಮ್ಮ ಚರಿತ್ರೆ ಪಠ್ಯವಸ್ತುವಿನ ರಚನೆಯಾಗಬೇಕಾಗಿದೆ.

**ಸಮುದಾಯ ಜೀವನದೊಂದಿಗಿನ ಸಂಬಂಧ ತತ್ವ**

ಮಾನವ ಸಂಘಜೀವಿ, ಆದ್ದರಿಂದ ಚರಿತ್ರೆಯ ಪಠ್ಯವಸ್ತುವನ್ನು ರಚಿಸುವ ವೇಳೆ ಸಮುದಾಯದ ಜೀವನದೊಂದಿಗೆ ಸಂಬಂಧವನ್ನು ಕಲ್ಪಿಸಬೇಕು. ಇಂತಹ ಪಠ್ಯಕ್ರಮವು ಸ್ಥಳೀಯ ಅಗತ್ಯತೆಗಳು ಮತ್ತು ಸನ್ನಿವೇಶಗಳು ಸಮರ್ಥವಾಗಬೇಕು. ಹಾಗೆಯೇ ಮಕ್ಕಳ ಮನಸ್ಸಿನಲ್ಲಿ ಸ್ಥಳೀಯ ಸಮುದಾಯ ಪಠ್ಯಕ್ರಮದ ಅಖಂಡ ಭಾಗವೆಂಬ ಪ್ರಜ್ಞೆಯನ್ನು ಬೆಳೆಸಬೇಕು.

**ಸಹ ಸಂಬಂಧ ತತ್ವ**

'ಮಾನವ ಜನಾಂಗದ ಚರಿತ್ರೆ ಬೆಳವಣಿಗೆಯ ಚರಿತ್ರೆ' ಎಂಬ ಹೇಳಿಕೆ ಚರಿತ್ರೆಯು ಮಾನವನ ಕ್ಷೇತ್ರ ಮೂಲಗಳಾದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಇತ್ಯಾದಿ ಅಂಶಗಳನ್ನು ಚರಿತ್ರೆ ಪಠ್ಯ ವಸ್ತುವು ತಿಳಿಸುವಂತಿರಬೇಕು. ರಾಜಕೀಯ ಘಟನೆಗಳ ಮೇಲೆ ಕೆಲವೊಮ್ಮೆ ಧಾರ್ಮಿಕ ಅಂಶಗಳು ಸಂಬಂಧವನ್ನು ಹೊಂದಿರುತ್ತವೆ. ಈ ಎಲ್ಲಾ ವಿಷಯಗಳ ಮಧ್ಯೆ ಸಹ ಸಂಬಂಧವನ್ನು ಕಲ್ಪಿಸುವಂತೆ ಚರಿತ್ರೆ ಪಠ್ಯಕ್ರಮವು ರಚಿಸಲ್ಪಡಬೇಕು.

**ಶಿಕ್ಷಣಾತ್ಮಕ ಮೌಲ್ಯದ ತತ್ವ**

ಚರಿತ್ರೆ ಬೋಧನೆಯ ಉದ್ದೇಶ ಕೆಲವು ನಿಶ್ಚಿತ ಮಾಹಿತಿಗಳನ್ನು ಕೊಟ್ಟು ಮಗುವನ್ನು ವಿದ್ಯಾವಂತನನ್ನಾಗಿ ಮಾಡುವುದಾಗಿದೆ. ಚರಿತ್ರೆ ಪಠ್ಯಕ್ರಮವು ಮಗುವನ್ನು ಸಾಮಾಜಿಕ ಮತ್ತು ಭೌತಿಕ ಪರಿಸರಕ್ಕೆ ಹೊಂದಿಕೊಳ್ಳುವಂತೆ ಮತ್ತು ಉತ್ತಮ ಪ್ರಜೆಗಳನ್ನು ರೂಪಿಸುವುದಾಗಿದೆ. ಆದರೆ ಇಂದು ನಮ್ಮ ಶಿಕ್ಷಣ ಕೇವಲ ಅಕ್ಷರಸ್ಥರನ್ನಾಗಿ ರೂಪಿಸಹೊರಟಿದೆ. ಕೇವಲ ಅಕ್ಷರಸ್ಥರಾದರೆ ಸಾಲದು ನಮ್ಮ ಸಮಾಜ ಬಯಸಿದಂತಹ ಸುರಕ್ಷಿತ ವ್ಯಕ್ತಿಗಳನ್ನಾಗಿಸುವ ಶಿಕ್ಷಣವಾಗಬೇಕೆಂಬುದೇ ಇದರ ತಿರುಳಾಗಿದೆ.

**ಇತರೆ ತತ್ವಗಳು**

೧. ಪಠ್ಯಕ್ರಮವನ್ನು ರಚಿಸುವಾಗ ಸೃಜನಶೀಲತ್ವವನ್ನು ಗಮನದಲ್ಲಿಡಬೇಕಾಗುತ್ತದೆ.

೨. ವೈಜ್ಞಾನಿಕ ಮನೋಭಾವವನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮವನ್ನು ರಚಿಸಬೇಕಾಗುತ್ತದೆ.

೩. ಪಠ್ಯಕ್ರಮವನ್ನು ತಯಾರಿಸುವಾಗ ಔದ್ಯೋಗಿಕ ಮಹತ್ವವನ್ನು ಗಮನದಲ್ಲಿಟ್ಟುಕೊಳ್ಳಬೇಕು.

೪. ಪಠ್ಯಕ್ರಮವನ್ನು ರಚಿಸುವಾಗ ಸಂಸ್ಕೃತಿ, ಸಾಮಾಜಿಕರಣ ಮತ್ತು ವಿದ್ಯಾರ್ಥಿಗಳ ಮಾನಸಿಕ ಶಿಸ್ತು ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮವನ್ನು ರಚಿಸಬೇಕು.

೫. ಪಠ್ಯಕ್ರಮವನ್ನು ರಚಿಸುವಾಗ ಸದೃಢ ಸಮಾಜವನ್ನು ತಯಾರಿಸುವ ಹಾಗೆ ಇರಬೇಕು.

೬. ಪಠ್ಯಕ್ರಮವನ್ನು ರಚಿಸುವ ಆಯಾ ಪ್ರದೇಶಕ್ಕೆ ಅನುಗುಣವಾಗಿ ಅಂದರೆ ಗ್ರಾಮ, ಪಟ್ಟಣ, ಇವುಗಳನ್ನು ಗಮನದಲ್ಲಿಟ್ಟುಕೊಂಡು ರಚಿಸಬೇಕು.

೭. ಪಠ್ಯಕ್ರಮವು ಬದಲಾವಣೆಯ ತತ್ವವನ್ನು ರೂಪಿಸಿಕೊಂಡಿರಬೇಕು. ಏಕೆಂದರೆ ಅವಶ್ಯಕತೆ ಕಂಡು ಬಂದಾಗ ಕೆಲವೊಂದು ವಿಷಯವನ್ನು ತೆಗೆದು ಹಾಕುವ, ಕೆಲವೊಂದನ್ನು ಸೇರಿಸುವ ಅವಕಾಶವಿದ್ದರೆ ವಿದ್ಯಾರ್ಥಿಗಳು ಹೊಸ-ಹೊಸ ವಿಷಯಗಳನ್ನು ಕಲಿಯುತ್ತಾರೆ.

೮. ಮಕ್ಕಳಲ್ಲಿ ಪ್ರಜಾಸತ್ತಾತ್ಮಕ ಮನೋಭಾವನೆಯನ್ನು ಬೆಳೆಸುವ ಗುಣವನ್ನು ಗಮನದಲ್ಲಿಟ್ಟಿರಬೇಕು.

ಈ ಮೇಲಿನಂತೆ ಚರಿತ್ರೆ ಪುಠ್ಯಕ್ರಮದ ರಚನೆಯ ತತ್ವಗಳನ್ನು ಪಠ್ಯ ರಚನಾ ಸಮಿತಿ ಅಳವಡಿಸಿಕೊಂಡಿದೆ. ಈ ತತ್ವಗಳಿದ್ದರೆ ಮಾತ್ರ ಪಠ್ಯಕ್ರಮ ರಚನಾ ಚೌಕಟ್ಟಿನಲ್ಲಿ ಬರುತ್ತವೆ. ಇಲ್ಲದೇ ಆದ ಸಂದರ್ಭದಲ್ಲಿ ಪಠ್ಯಕ್ರಮ ಅಸ್ತವ್ಯಸ್ಥಗೊಳ್ಳುತ್ತವೆ.

### ೨.೨.೪. ಚರಿತ್ರೆ ಪಠ್ಯಕ್ರಮದಲ್ಲಿನ ತೊಡಕುಗಳು

ಚರಿತ್ರೆ ಪಠ್ಯಕ್ರಮದಲ್ಲಿ ಅನೇಕ ತೊಡಕುಗಳಿವೆ. ವಿಚಾರವಂತರು, ವಿಮರ್ಶಕರು ಈ ತೊಡಕುಗಳ ಕುರಿತು ಗಮನಹರಿಸಿದ್ದಾರೆ. ಇಂದಿನ ಸ್ಪರ್ಧಾತ್ಮಕ ಮಾರುಕಟ್ಟೆ ಹಾಗೂ ವಿದ್ಯಾರ್ಥಿಗಳ ಭವಿಷ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಶಿಕ್ಷಣ ಪದ್ಧತಿ ಹಾಗೂ ಪಠ್ಯಪುಸ್ತಕಗಳು ಕಾಲಕಾಲಕ್ಕೆ ಬದಲಾಗಬೇಕೆಂದು ಧರ್ಮಸ್ಥಳದ ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆ ಸಲಹೆ ನೀಡಿದ್ದಾರೆ.[೨೨] ಆಧುನಿಕ ಕಾಲಕ್ಕೆ ಬೇಕಾದ ಬದಲಾವಣೆ ಹಾಗೂ ಆಧುನಿಕತೆ ಮಧ್ಯ ಸಮ್ಮಿಲನವಾದರೆ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲವಾಗಲಿದೆ ಎಂದು ಅವರು ಅಭಿಪ್ರಾಯಪಡುತ್ತಾರೆ. ಇಂದಿನ ಪ್ರತಿಯೊಬ್ಬ ಶಿಕ್ಷಕರಿಗೂ ನಾವು ಏಕೆ ಈ ಕೆಲಸವನ್ನು ಮಾಡುತ್ತಿದ್ದೇವೆ? ಶಾಲೆಯಲ್ಲಿ ಮಕ್ಕಳು ಹೇಗೆ ಕಲಿಯುತ್ತಾರೆ? ನಾವು ಮಕ್ಕಳಿಗೆ ಹೇಗೆ, ಏನನ್ನು, ಎಷ್ಟು? ಕಲಿಸಬೇಕು ಎಂಬ ವಿಷಯಗಳು ತಿಳಿದಿರಬೇಕಾದುದು ಅತ್ಯಾವಶ್ಯಕ. ಇದಕ್ಕೆ ಪೂರಕವಾಗಿ ಈ ರೀತಿಯ ಅಂಶಗಳನ್ನು ನಾವು ತಿಳಿಯಲು ಸಹಾಯಕವಾದುದು ಪಠ್ಯಕ್ರಮ. ಪ್ರತಿಯೊಬ್ಬ ಶಿಕ್ಷಕನು ತನ್ನ ವಿದ್ಯಾರ್ಥಿಗಳಿಗೆ ಹೇಗೆ ಮತ್ತು ಏನನ್ನು ಕಲಿಸಬಹುದು ಎಂಬುದನ್ನು ಅರಿಯಲು ಪಠ್ಯಕ್ರಮದಂತಹ ಚಟುವಟಿಕೆಗಳು ಸಹಾಯಕವಾಗಿವೆ. ಪಠ್ಯವಸ್ತು ನಿಷ್ಪಕ್ಷಪಾತಿಯಾಗಿದ್ದು, ಯಾವುದೇ ರೂಢ ಮಾದರಿಗಳನ್ನು ಸೃಷ್ಟಿಸುವಂತಿರಬಾರದು ಮತ್ತು ಜನರ ಭಾವನೆಗಳಿಗೆ ಧಕ್ಕೆ ಮಾಡುವಂತಿರಬಾರದು. ಸಾಮಾನ್ಯವಾಗಿ ಸಮಾಜದಲ್ಲಿನ ಕೆಲವು ನಿರ್ದಿಷ್ಟ ಗುಂಪುಗಳು ತಮಗೆ ಇಷ್ಟವಾದ ನಾಯಕನನ್ನು ಅಥವಾ ಸಂಗತಿಗಳನ್ನು ಪಠ್ಯಪುಸ್ತಕದಲ್ಲಿ ಸೇರಿಸಬೇಕೆಂದು, ಇನ್ನು ಕೆಲವರು ತಮಗೆ ನೋವುಂಟುಮಾಡುವ ಅಂಶಗಳನ್ನು ಕೈಬಿಡಬೇಕೆಂದು ಆಗ್ರಹಿಸುತ್ತಾರೆ. ಇಂತಹ ವಿರೋಧ ಮತ್ತು ಹೋರಾಟಗಳನ್ನು

ಎಚ್ಚರಿಕೆಯಿಂದ ನಿರ್ವಹಿಸದೇ ಇದ್ದಲ್ಲಿ ಶಿಕ್ಷಣದ ವಿಮರ್ಶಾತ್ಮಕ ಚಿಂತನೆ ಮತ್ತು ಸತ್ಯ ಎರಡೂ ಘಾಸಿಗೊಳ್ಳುತ್ತದೆ. ಫೆಡರಲ್ ಸ್ವರೂಪದ ವ್ಯವಸ್ಥೆ ಇರುವ ನಮ್ಮ ನಾಡಿನ ಶಾಲಾ ಶಿಕ್ಷಣದ ಬಗ್ಗೆ ಪಠ್ಯಕ್ರಮದ ಬಗ್ಗೆ ಸ್ಪಷ್ಟ ಧೋರಣೆಗಳು ಇರಬೇಕೆಂದು ನಿರೀಕ್ಷಿಸುವುದು ಸಹಜ. ಶಾಲೆಗಳ ಹಂತದ ಶಿಕ್ಷಣ, ರಾಜ್ಯಗಳ ಪರಿಧಿಯಲ್ಲಿ ಬರುವ ಜವಾಬ್ದಾರಿ ಎಂಬ ಸಂದೇಶ ನಮ್ಮ ಸಂವಿಧಾನದಲ್ಲಿ ಅಂತರ್ಗತವಾಗಿದೆ. ಕೇಂದ್ರವು ಕಾಲಕಾಲಕ್ಕೆ ಶಾಲಾ ಪಠ್ಯಕ್ರಮದ ರೂಪುರೇಷೆಗಳನ್ನು ರಚಿಸಿ ರಾಜ್ಯಗಳಿಗೆ ರವಾನಿಸುವ ಪದ್ಧತಿ ಜಾರಿಯಲ್ಲಿದೆ. ಈ ಪಠ್ಯಕ್ರಮದ ಚೌಕಟ್ಟನ್ನು ಆಧರಿಸಿ ರಾಜ್ಯಗಳು ಪಠ್ಯವಸ್ತು(ಸಿಲೆಬಸ್) ಹಾಗೂ ಪಠ್ಯಪುಸ್ತಕಗಳನ್ನು ರಚಿಸಿ ಅನುಷ್ಠಾನಗೊಳಿಸುತ್ತವೆ. ಇತರೆಡೆಯಂತೆ ಭಾರತದಲ್ಲಿ ರಚನೆಯಾಗಿರುವ ಚರಿತ್ರೆ ಪಠ್ಯಪುಸ್ತಕಗಳು ಈ ಹಿಂದೆ ಉಲ್ಲೇಖಿಸಿದ ವಿವಿಧ ಪಂಥಗಳ ಪ್ರಭಾವಕ್ಕೊಳಗಾಗಿ ರಚನೆಯಾಗಿರುವುದನ್ನು ಕಾಣಬಹುದು. ಇದರಿಂದ ಕೆಲವೇ ಪಂಥ/ವಾದಗಳು ಪಠ್ಯದಲ್ಲಿ ಮೇಲುಗೈ ಸಾಧಿಸಿವೆ. ಇದರಿಂದಾಗಿ ಇಲ್ಲಿಯವರೆಗೆ ರಚನೆಯಾಗಿರುವ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಹಲವಾರು ದೋಷಗಳು ಕಾಣಿಸಿಕೊಂಡಿವೆ. ಇವುಗಳು ಚರಿತ್ರೆ ಪಠ್ಯಪುಸ್ತಕಗಳನ್ನು ಅಧ್ಯಯನ ಮಾಡುವವರಲ್ಲಿ ಹಲವು ಸಂದೇಹಗಳಿಗೆ ಎಡೆಮಾಡಿ ಕೊಡುತ್ತವೆ. ಪಠ್ಯದಲ್ಲಿರುವ ಈ ರೀತಿಯ ಹಲವಾರು ತೊಡಕುಗಳಿಂದ ನಿಖರವಾದ ನಿರ್ಣಯಕ್ಕೆ ಬರಲು ಸಾಧ್ಯವಾಗುತ್ತಿಲ್ಲ. ಅವು ಒಂದು ರೀತಿ ಗೊಂದಲಗಳ ಗೂಡಾಗಿದ್ದು, ಕೆಲವೇ ವರ್ಗಗಳ ಹಿತಾಶಕ್ತಿಗಳನ್ನು ಪ್ರತಿಬಿಂಬಿಸುತ್ತವೆ. ಚರಿತ್ರೆ ಪಠ್ಯಗಳು ಕೂಡ ಇಂದು ರಾಜಕೀಯಕ್ಕೆ ಸಿಲುಕಿವೆ. ಅಂದರೆ ಕೆಲವು ಜನರ ಹಿತಾಸಕ್ತಿಗಳು ಅಥವಾ ಧೋರಣೆಗಳು ಚರಿತ್ರೆ ಪಠ್ಯಗಳ ರಚನೆಯ ಹಿಂದೆ ಕೆಲಸ ಮಾಡುತ್ತಿವೆ. ಇದರಿಂದ ಚರಿತ್ರೆ ಪಠ್ಯಗಳು ಹಲವು ತೊಡಕುಗಳನ್ನು ಎದುರಿಸ ಬೇಕಾಗಿರುವ ಪರಿಸ್ಥಿತಿ ಒದಗಿ ಬಂದಿರುವುದು ವಿಪರ್ಯಾಸ. ಭಾರತದ ಅಖಂಡತೆ, ಸಮಗ್ರತೆ, ಎಲ್ಲಾ ಸಮುದಾಯಗಳನ್ನು, ಎಲ್ಲಾ ನೆಲ, ಜಲವನ್ನು ಪ್ರತಿನಿಧಿಸಬೇಕಿದ್ದ ಪಠ್ಯಗಳು ರಾಜಕೀಯದ ಪರಿಣಾಮವಾಗಿ ಕೆಲ ಬಲಾಢ್ಯ ಶಕ್ತಿಗಳ ಹಿಡಿತಕ್ಕೆ ಸಿಕ್ಕಿ ಸೀಮಿತವಾಗಿ ಪಠ್ಯ ರಚನೆಯಾಗಿರುವುದನ್ನು ಕಾಣಬಹುದು. ಉದಾಹರಣೆ ಕೇಸರಿಕರಣ ಮತ್ತು ಕೋಮುವಾದಿಕರಣ, ಜಾತಿಕರಣಗಳು ಚರಿತ್ರೆ ಪಠ್ಯಗಳಲ್ಲಿ ಪ್ರಾಥಮಿಕ ಹಂತದಿಂದಲೂ ನುಸುಳಿಕೊಂಡಿರುವುದನ್ನು ಕಾಣಬಹುದು. ರಾಷ್ಟ್ರೀಯತೆಯ ಹೆಸರಿನಲ್ಲಿ ಬರೆದ ಅನೇಕ ಹಿಂದೂವಾದಿಗಳು(ರಾಷ್ಟ್ರೀಯ ಇತಿಹಾಸಕಾರರು) ಬರೆದ ಬರಹಗಳು ಕೇವಲ ಕೆಲವೇ ಜನರ ಹಿತಾಸಕ್ತಿಗಳನ್ನು ಪ್ರತಿಬಿಂಬಿಸಿ ಉಳಿದ ಅಸಂಖ್ಯಾತ ಸಾಮಾನ್ಯ ವರ್ಗಗಳ ಚರಿತ್ರೆಯನ್ನು ನಿರ್ಲಕ್ಷಿಸಲಾಗಿದೆ. ಅಖಂಡ ರಾಷ್ಟ್ರೀಯತೆಯನ್ನು ಪ್ರಶ್ನಿಸಿ ಹುಟ್ಟಿಕೊಂಡ ಇಲ್ಲಿನ ಮುಸ್ಲಿಂ ಕೇಂದ್ರಿತ ಬರಹಗಳು ಕ್ರಮೇಣ ಕೋಮುವಾದಿ ಸ್ವರೂಪ ಪಡೆದುಕೊಂಡವು. ಈ ರೀತಿಯ ಅಂಶಗಳನ್ನು ಇಲ್ಲಿ ಚರ್ಚಿಸುವುದು ಅವಶ್ಯಕವಾಗಿದೆ. ಅಂತಹ ಪ್ರಮುಖವಾದ ಕೆಲವು ತೊಡಕುಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

**೧. ಚರಿತ್ರೆ ಪಠ್ಯದಲ್ಲಿ ಮೂಲಭೂತವಾದ**

ರಾಜ್ಯದಲ್ಲಿ ರಚನೆಯಾಗಿರುವ ಪ್ರಾಥಮಿಕ ಮತ್ತು ಮಾಧ್ಯಮಿಕ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಮೂಲಭೂತವಾದ ನುಸುಳಿಕೊಂಡಿದೆ. ಇದಕ್ಕೆ ಇತ್ತೀಚಿನ ಒಂದು ಉತ್ತಮ ಉದಾಹರಣೆ ಎಂದರೆ ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟು ೨೦೦೦ನೆಯ ಇಸವಿಯಲ್ಲಿ ಪ್ರಕಟವಾದಾಗ ಈ

ನಂಬಿಕೆಗಳು ಮಣ್ಣುಗೂಡಿದವು. ನಾವು ಹಿಂದೆಂದೂ ಕೇಳದಂತಹ ಮೂಲಭೂತವಾದಿಗಳು ಪಠ್ಯಕ್ರಮದ ರಚನೆಯಲ್ಲಿ ತಮ್ಮ ಕೈಚಳಕ ತೋರಿ ಬಹುಧರ್ಮದ ಹಾಗೂ ಬಹುಸಂಸ್ಕೃತಿಯ ನಮ್ಮ ನಾಡಿನಲ್ಲಿ ಕಂಡು ಕೇಳದಂತಹ ಅಂಶಗಳನ್ನು ಸೇರ್ಪಡೆ ಮಾಡುವಲ್ಲಿ ಯಶಸ್ಸು ಗಳಿಸಿದರು. ಪರಿಣಾಮವಾಗಿ ೨೦೦೦ದಲ್ಲಿ ಪ್ರಕಟವಾದ ದಾಖಲೆಯನ್ನು ತಿರಸ್ಕರಿಸಿ ೨೦೦೫ರಲ್ಲಿ ಮತ್ತೊಂದು ದಾಖಲೆಯನ್ನು ಕೇಂದ್ರ ರಾಜ್ಯಗಳಿಗೆ ರವಾನಿಸಿತು. ಪ್ರತಿಸಲ ಸರ್ಕಾರಗಳು ಬದಲಾವಣೆ ಕಂಡಾಗ ಶಾಲಾ ಶಿಕ್ಷಣವೆಂಬ ಗುರುತರ ಕ್ಷೇತ್ರದಲ್ಲಿ ಇಂಥ ದೋಷಗಳು ಕಾಣುವ ದೌರ್ಭಾಗ್ಯವು ನಮ್ಮದೇ ಅನ್ನುವುದನ್ನು ಕಾಲವೇ ಮುಂದೆ ಸ್ಪಷ್ಟಪಡಿಸಲಿದೆ. ಇಂಥ ಒಂದು ಕರಾಳ ಅಧ್ಯಾಯ ಮುಗಿಯಿತೆಂದು ಭಾವಿಸುವ ಹಲವರಿಗೆ, ಸಿ.ಎಸ್. ದ್ವಾರಕಾನಾಥರ 'ಪ್ರಾಥಮಿಕ ಶಿಕ್ಷಣದಲ್ಲಿ ಕೇಸರೀಕರಣದ ಸ್ಯಾಂಪಲ್' ಎಂಬ ಲೇಖನದಲ್ಲಿ ಕೆಲವು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು-೨೦೦೫ಕ್ಕೆ ಅನುಗುಣವಾಗಿ ೫ನೇ ತರಗತಿ ಪಠ್ಯಪುಸ್ತಗಳ ರಚನೆಗೆ ಸರ್ಕಾರ ವಿಷಯವಾರು ಪ್ರತ್ಯೇಕ ಸಮಿತಿಗಳನ್ನು ರಚಿಸಿತ್ತು. ಆದರೆ ಈ ಸಮಿತಿಗಳಿಗೆ ಪೂರ್ಣ ಸ್ವಾತಂತ್ರ್ಯ ಇರಲಿಲ್ಲ. ಸಲಹಾ ಸಮಿತಿ ಸಂಚಾಲಕರ ನಿರ್ದೇಶನಕ್ಕೆ ಅನುಗುಣವಾಗಿ ಪಠ್ಯವಸ್ತುಗಳನ್ನು ಸಿದ್ಧಪಡಿಸುವುದು ಅನಿವಾರ್ಯವಾಗಿತ್ತು. ಇದು ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ಕೆಲಸ ಮಾಡಿರುವ ತಜ್ಞರೊಬ್ಬರ ಸ್ಪಷ್ಟನುಡಿ. ವಾಸ್ತವವಾಗಿ ರಾಜ್ಯದಲ್ಲಿ ಬಿಜೆಪಿ ಸರ್ಕಾರ ಅಧಿಕಾರಕ್ಕೆ ಬರುವ ಮೊದಲೇ ಪರಿಷ್ಕೃತ ಪಠ್ಯವಸ್ತು ಸಿದ್ಧವಾಗಿತ್ತು. ಅದು ಮುದ್ರಣಕ್ಕೆ ಹೋಗುವ ಹಂತದಲ್ಲಿ ಸರ್ಕಾರ ಬದಲಾಯಿತು. ನಂತರದ ಬಂದ ಸರ್ಕಾರ ಪಠ್ಯಪುಸ್ತಕ ಬದಲಾವಣೆ ಮಾಡುವಂತೆ ಸೂಚನೆ ನೀಡಿತು. ೨೦೦೫ ರಿಂದ ೧೦ರವರೆಗೆ ಪಠ್ಯಪುಸ್ತಕ ರಚನಾ ಸಮಿತಿಯ ೩೫ ಸಭೆಗಳು ನಡೆದಿವೆ. ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು(ಡಿಎಸ್‌ಇಆರ್‌ಟಿ) ನಾಲ್ಕು ಮಂದಿ ನಿರ್ದೇಶಕರ ಬದಲಾವಣೆ ಆಯಿತು. ಹಿಂದೆಲ್ಲ ಪಠ್ಯಪುಸ್ತಕ ರಚನಾ ಸಮಿತಿಯ ತೀರ್ಮಾನವೇ ಅಂತಿಮವಾಗಿತ್ತು. ಸಮಿತಿಯ ಕೆಲಸ ಮುಗಿದ ನಂತರ ನಿರ್ದೇಶಕರಿಗೆ ಪಠ್ಯಪುಸ್ತಕ ನೀಡುತ್ತಿತ್ತು. ಆದರೆ ಈ ಬಾರಿ ಆ ರೀತಿ ಸಲಹಾ ಸಮಿತಿಯೊಂದನ್ನು ರಚಿಸಿ, ರಾಜಕೀಯ ಪಕ್ಷದೊಂದಿಗೆ ಗುರುತಿಸಿಕೊಂಡಿರುವ ವ್ಯಕ್ತಿಯೊಬ್ಬರನ್ನು ಅದರ ಸಂಚಾಲಕರನ್ನಾಗಿ ನೇಮಕ ಮಾಡಲಾಯಿತು. ಅವರ ನಿರ್ದೇಶನದಂತೆ ಕೆಲಸ ಮಾಡುವುದು ಅನಿವಾರ್ಯವಾಗಿತ್ತು. ಕೆಲ ವಿಷಯಗಳಲ್ಲಿ ಪಠ್ಯವಸ್ತು ಹೀಗಿಯೇ ಇರಬೇಕು ಎಂಬ ಸ್ಪಷ್ಟ ಸೂಚನೆ ನೀಡಿದ್ದರು. ಈ ರೀತಿ ಆಗಬಾರದಿತ್ತು ಎಂಬುದು ಸಮಿತಿಯಲ್ಲಿ ಕೆಲಸ ಮಾಡಿರುವ ತಜ್ಞರೊಬ್ಬರ ಬೇಸರದ ನುಡಿ. ರಚನಾ ಸಮಿತಿಗೆ ಪೂರ್ಣಪ್ರಮಾಣದ ಸ್ವಾತಂತ್ರ್ಯ ಇರಲಿಲ್ಲ. ಕೆಲವೊಂದು ಅಂಶಗಳನ್ನು ಸೇರಿಸುವ ಕುರಿತು ಲಿಖಿತ ಸೂಚನೆ ನೀಡಿದ್ದರು. ಸಲಹಾ ಸಮಿತಿಯ ನಿರ್ದೇಶನವನ್ನು ಪಾಲಿಸುವುದು ಅನಿವಾರ್ಯ ಆದಕಾರಣ ಮನಸ್ಸು ಒಪ್ಪದಿದ್ದರೂ ಸೇರಿಸಲಾಗಿದೆ. ಸರ್ಕಾರದ ನಿಯಂತ್ರಣದಲ್ಲಿ ಕೆಲಸ ಮಾಡುವಾಗ ರಾಜಿಯಾಗುವುದು ಅನಿವಾರ್ಯವಾಗುತ್ತದೆ. ಆದರೆ ಇದು ಒಳ್ಳೆಯ ಬೆಳವಣಿಗೆ ಅಲ್ಲ ಎಂದು ಅವರು ನೋವು ತೋಡಿಕೊಂಡರು.[೨೩] ಇಂದಿಗೂ ಇಂಥ ಅನೇಕ ಉದಾಹರಣೆಗಳಿವೆ.

ಪಠ್ಯಪುಸ್ತಕಗಳ ರಚನೆ ಹೀಗೇ ಆಗಬೇಕು ಎಂದು ಸರ್ಕಾರದ ಕಡೆಯಿಂದ ಮೌಖಿಕವಾಗಿ ಸೂಚನೆ ಇತ್ತು ಎಂದು ಅನ್ನಿಸುತ್ತದೆ. ಪಠ್ಯಪುಸ್ತಕಗಳನ್ನು ಎಲ್ಲ ಸಮುದಾಯದ ವಿದ್ಯಾರ್ಥಿಗಳು ಓದುವುದರಿಂದ ಯಾವುದೇ ಸಮುದಾಯದವರಿಗೆ ಮುಜುಗರವಾಗುವ ಅಂಶಗಳು ಇರಬಾರದು ಎಂಬುದು ಸಮಿತಿಯ ಮತ್ತೊಬ್ಬ ಸದಸ್ಯರ ಅಭಿಪ್ರಾಯ. ಆಕ್ಷೇಪಕ್ಕೆ ಒಳಗಾಗಿರುವ ಅಂಶಗಳ ಬಗ್ಗೆ ಪುನರ್‌ಪರಿಶೀಲನೆ ನಡೆಸುವುದು ಒಳ್ಳೆಯದು. ಇದೆಲ್ಲವನ್ನೂ ಗಮನಿಸಿದರೆ ಎಲ್ಲೋ ಒಂದು ಕಡೆ ಮೂಲಭೂತವಾದ ಎನ್ನುವ ರಹಸ್ಯ ಕಾರ್ಯಸೂಚಿ ಕೆಲಸ ಮಾಡುತ್ತಿದೆ ಅನ್ನಿಸುತ್ತದೆ.

೫ನೇ ತರಗತಿ ಪಠ್ಯದಲ್ಲಿ ವ್ಯವಸ್ಥಿತವಾಗಿ ಮೂಲಭೂತತನ ವ್ಯಕ್ತವಾಗಿರುವುದನ್ನು ಕಾಣಬಹುದು. ಅದರಲ್ಲಿ ಅಖಂಡ ಭಾರತದ ನಕ್ಷೆ ಹಾಕಿರುವುದು ತಪ್ಪಲ್ಲ. ಆದರೆ ಅದರಲ್ಲಿ ಹಿಂದೂ ಕುಟುಂಬವನ್ನು ಮಾತ್ರ ಗುರುತಿಸಿ ಉಳಿದ ಕುಟುಂಬಗಳನ್ನು ಕೈಬಿಟ್ಟಿರುವುದು ಮೂಲಭೂತವಾದದ ಪ್ರತೀಕವಾಗಿದೆ? ಇಲ್ಲಿನ ಬಹುಸಂಖ್ಯಾತ ಸಮುದಾಯದವರ ಕುಟುಂಬದ ಬಗ್ಗೆ ವಿವರಿಸದೇ ಅಲ್ಪಸಂಖ್ಯಾತ ಸಮುದಾಯದ ಕುಟುಂಬದ ಬಗೆಗೆ ವಿವರಿಸಿರುವುದು ಎಷ್ಟರಮಟ್ಟಿಗೆ ಸರಿ ಎನ್ನುವುದು ಪಠ್ಯಪುಸ್ತಕ ಸಮಿತಿಯಲ್ಲಿ ಕೆಲಸ ಮಾಡಿರುವ ಮತ್ತೊಬ್ಬ ತಜ್ಞರ ಪ್ರಶ್ನೆ. ಐದನೇ ತರಗತಿಯ ಸಮಾಜ ವಿಜ್ಞಾನದಲ್ಲಿ ನಾವು ಸೇರಿಸಿರುವ ಅಂಶಗಳು ಸರಿ ಇವೆ. ಆ ಬಗ್ಗೆ ಆಕ್ಷೇಪಣೆ ಇದ್ದರೆ ಇಲಾಖೆಯವರು ಉತ್ತರ ನೀಡಬೇಕಾಗುತ್ತದೆ. ಅದಕ್ಕೆ ನಾವು ಹೊಣೆಯಲ್ಲ. ಸಮಿತಿಯಲ್ಲಿ ಎಲ್ಲ ವಿಭಾಗಕ್ಕೆ ಸೇರಿದ ಸದಸ್ಯರು ಇದ್ದರು. ಎಲ್ಲರ ಅಭಿಪ್ರಾಯ, ಸಲಹೆಗಳನ್ನು ಆಲಿಸಲಾಗಿದೆ. ಯಾವ ಲೋಪ ಆಗಿಲ್ಲ ಎಂಬುದು ಪಠ್ಯಪುಸ್ತಕ ಸಮಿತಿಯ ಸಂಚಾಲಕರಾದ ಸುರೇಶ್ ಎಂ.ಎಂ. ಅವರ ಸಮರ್ಥನೆ.

### ೨. ಚರಿತ್ರೆ ಪಠ್ಯರಚನೆಯಲ್ಲಿ ವೈಭವೀಕರಣದ ಪ್ರಭಾವ

ರಾಜ್ಯದಲ್ಲಿ ರಚನೆಯಾಗಿರುವ ಪ್ರಾಥಮಿಕ ಮತ್ತು ಮಾಧ್ಯಮಿಕ ಚರಿತ್ರೆ ಪಠ್ಯಪುಸ್ತಕಗಳಲ್ಲಿ ವೈಭವೀಕರಣಕ್ಕೆ ಹೆಚ್ಚು ಆದ್ಯತೆ ನೀಡಲಾಗಿದೆ. ಹಿಂದಿನಿಂದಲೂ ಕೇವಲ ರಾಜಮಹಾರಾಜರ ಸಾಧನೆಗಳನ್ನು ಮಾತ್ರ ಬಣ್ಣಿಸಿರುವುದು ಚರಿತ್ರೆ ಪಠ್ಯಗಳ ಒಂದು ದೌರ್ಭಾಗ್ಯವೇ ಸರಿ. ಇದಕ್ಕೆ ಇತ್ತೀಚಿನ ಒಂದು ಉತ್ತಮ ಉದಾಹರಣೆ ಎಂದರೆ ಸಿ.ಎಸ್. ದ್ವಾರಕನಾಥ್ ಅವರು ಪ್ರಜಾವಾಣಿಗೆ ಬರೆದ ಲೇಖನವೊಂದರಲ್ಲಿ ತಮ್ಮ ಆಕ್ಷೇಪಣೆ ಎತ್ತಿದ್ದಾರೆ.[೨೪] ವೈದಿಕ ಸಂಸ್ಕೃತಿಯ ಬಗ್ಗೆ ವೈಭವೀಕರಣ ಮಾಡಲಾಗಿದೆ ಎಂದು ಉಲ್ಲೇಖಿಸಿದ್ದಾರೆ. ಆದರೆ ವೇದಗಳ ಕಾಲವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಸಹಜವಾಗಿಯೇ ವೈದಿಕ ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಮಾಹಿತಿ ನೀಡಬೇಕಾಗುತ್ತದೆ. ಹಾಗೆ ನೋಡಿದರೆ ಇಲ್ಲಿಯವರೆಗೆ ಬಂದ ಸಮಾಜವಿಜ್ಞಾನ ಪಠ್ಯಗಳಿಗಿಂತ ಭಿನ್ನವಾಗಿ ಪ್ರಸ್ತುತ ಪಠ್ಯವನ್ನು ರಚಿಸಲಾಗಿದೆ. ಚರಿತ್ರೆ, ಭೂಗೋಳದೊಂದಿಗೆ ಪೌರನೀತಿ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಹಾಗೂ ವ್ಯವಹಾರ ಅಧ್ಯಯನಗಳನ್ನು ಎನ್‌ಸಿಎಫ್–೨೦೦೫ ಪ್ರಕಾರ ರಚಿಸಲಾಗಿರುವುದನ್ನು ಗಮನಿಸಬಹುದು. ಇಲ್ಲಿಯವರೆಗೆ ಬಂದ ಪಠ್ಯಗಳಲ್ಲಿ 'ದಾಸ ಹಾಗೂ ದಸ್ಯು'ಗಳ ಇರುವುದನ್ನು ಪರಿಗಣಿಸಿರಲಿಲ್ಲ. ಅವರಿಗೆ ನೂರಾರು ದನಗಳು ಹಾಗೂ ಕೋಟೆಗಳಿದ್ದ ಮಾಹಿತಿಗಳು ಇರಲಿಲ್ಲ. ವೈದಿಕರನ್ನೂ ತಿರಸ್ಕರಿಸಿದ ಶ್ರೀಮಂತರಾದ ಪ್ರಾಣಿಯ

ಬಗ್ಗೆಯು ಮಾಹಿತಿಗಳು ಇರಲಿಲ್ಲ. ಇವರೆಲ್ಲರನ್ನು ಕಾಲಾನುಕ್ರಮದಲ್ಲಿ ಸೋಲಿಸಿದ ನಂತರ ವೈದಿಕ ಸಂಸ್ಕೃತಿಯ ಪ್ರಬಲವಾಯಿತು ಎನ್ನುವ ವಿವರಗಳನ್ನು ಈ ಪಠ್ಯದಲ್ಲಿ ಹೊಸದಾಗಿ ನೀಡಲಾಗಿದೆ. ಪಠ್ಯದಲ್ಲಿರುವ ಈ ಬಗೆಯ ವಿವರಗಳು ವೇದಗಳ ಕಾಲವನ್ನು ವೈಭವೀಕರಿಸುತ್ತದೆ ಎಂದರೆ ಇದು ಸರಿಯಲ್ಲ. ಬಹುತೇಕ ಸಮಾಜ ವಿಜ್ಞಾನ ಪಠ್ಯಗಳಲ್ಲಿ ಸಾಮಾನ್ಯವಾಗಿರುವ ನೂರಾರು ಸಂಖ್ಯೆಯಲ್ಲಿದ್ದ ಇಸವಿಗಳನ್ನು ಹಾಗೂ ಅನಗತ್ಯ ವಿವರಗಳನ್ನು ಪ್ರಸ್ತುತ ಪಠ್ಯದಿಂದ ಕೈಬಿಟ್ಟು ವಿದ್ಯಾರ್ಥಿಗಳು ಕ್ರಿಯಾಶೀಲರಾಗುವಂತೆ ವಿಷಯದ ಒಳನೋಟಗಳಿಗೆ ಮಹತ್ವ ನೀಡಿದ್ದನ್ನು ಗಮನಿಸಬಹುದಾಗಿದೆ.

**೩. ಕೋಮುವಾದ ಚರಿತ್ರೆ ಪಠ್ಯದಲ್ಲಿ ಮುಖ್ಯವಾಗಿ ಕಾಣಬರುವ ಮತ್ತೊಂದು ತೊಡಕು ಅಥವಾ ದೋಷವಾಗಿದೆ.**

ಇಲ್ಲಿಯವರೆಗೆ ರಚನೆಯಾದ ಚರಿತ್ರೆ ಪಠ್ಯಗಳನ್ನು ಗಮನಿಸಿದರೆ ಅವುಗಳಲ್ಲಿ ಕೋಮುವಾದ ಎನ್ನುವ ಮತ್ತೊಂದು ಪ್ರಮುಖ ತೊಡಕನ್ನು ಗುರುತಿಸಬಹುದಾಗಿದೆ. ಈ ಪಠ್ಯಗಳನ್ನು ನೋಡಿದರೆ ಸಂಘ ಪರಿವಾರ ಇಂತಹ ಪಠ್ಯಗಳಲ್ಲಿ ಏನೆಲ್ಲಾ ತುಂಬಲು ಬಯಸಿದೆಯೋ ಅದೆಲ್ಲವನ್ನೂ ತುಂಬಲು ಸಾಧ್ಯವಾಗಿಲ್ಲದೇ ಇರಬಹುದು ಅನಿಸುತ್ತದೆ. ಬಹುಶಃ ಅದಕ್ಕೆ ಪಠ್ಯಪುಸ್ತಕ ಸಮಿತಿಯೊಳಗಿನ ವಿರೋಧವೂ ಕಾರಣವಿರಬಹುದು.

ಒಂದು ಅರ್ಥದಲ್ಲಿ ಸಂಘ ಪರಿವಾರದ ಚಾಲಕ ಶಕ್ತಿ, ಸಂಘ ಪರಿವಾರದ ಉಸಿರು ಮುಸ್ಲಿಂ ದ್ವೇಷ ಮತ್ತು ಅಲ್ಪಸಂಖ್ಯಾತರ ದ್ವೇಷ. ಮುಗ್ಧ ಮಕ್ಕಳ ಅಲ್ಪಸಂಖ್ಯಾತ ಸಮುದಾಯದ ಬಗೆಗೆ ಸಂಶಯ ಮೂಡಿಸುವ, ದ್ವೇಷವನ್ನು ಪ್ರೇರೇಪಿಸುವುದಕ್ಕೆ ಪೂರಕವಾಗಬಹುದಾದ ಹಲವು ಪೂರ್ವಾಗ್ರಹ ಪೀಡಿತವಾದ ವಿಚಾರಗಳನ್ನು ಸೇರಿಸಿದ್ದನ್ನು ಕೆಲವರು ಪ್ರಶ್ನಿಸಿದ್ದಾರೆ. ವಿಷಯಗಳ ನಿರೂಪಣೆಯಲ್ಲಿ ಪಕ್ಷಪಾತವನ್ನು ಮಾಡಲಾಗಿದೆ ಎಂಬ ಅಭಿಪ್ರಾಯವಿದೆ. ೫ನೇ ತರಗತಿಯ ಸಮಾಜವಿಜ್ಞಾನ ಪಠ್ಯದ ಕೆಲವು ಉದಾಹರಣೆಗಳು ಈ ರೀತಿಯಾಗಿವೆ.

ಈ ಪಠ್ಯದ ಮೊದಲ ಪಾಠವು ರಾಜ್ಯದ ಎಲ್ಲ ಕಡೆಗೂ ಒಂದೇ ಇರುವುದಿಲ್ಲ. ಆಡಳಿತಾತ್ಮಕ ವಿಭಾಗವಾದ ಬೆಂಗಳೂರು ವಿಭಾಗ, ಮೈಸೂರು ವಿಭಾಗ, ಬೆಳಗಾಂ ವಿಭಾಗ, ಗುಲಬರ್ಗಾ ವಿಭಾಗಗಳಿವೆ. ಪ್ರತಿ ವಿಭಾಗದ ವಿದ್ಯಾರ್ಥಿಗಳಿಗೂ ತಮ್ಮ ಸುತ್ತಮುತ್ತಲ, ಸ್ಥಳೀಯ ಸಾಮಾಜಿಕ ಆರ್ಥಿಕ, ಐತಿಹಾಸಿಕ, ಸಾಂಸ್ಕೃತಿಕ, ಇತಿಹಾಸ, ವರ್ತಮಾನ, ಸ್ಥಿತಿಗತಿಗಳನ್ನು ಪರಿಚಯಿಸಿಕೊಡುವ ಉದ್ದೇಶವಿದೆ. ಇದರಿಂದಾಗಿ ಮೊದಲ ಪಾಠದಲ್ಲಿ ವಿಭಾಗದಿಂದ ವಿಭಾಗಕ್ಕೆ ಭಿನ್ನತೆ ಇದೆ. ನಂತರದ ಪಾಠಗಳು ಎಲ್ಲರಿಗೂ ಒಂದೇ.

ಮೈಸೂರು ವಿಭಾಗದಲ್ಲಿನ ಮೊದಲ ಪಾಠದಲ್ಲಿ ಮೈಸೂರು ಒಡೆಯರನ್ನು ಹೊಗಳುವಾಗಿನ ಉತ್ಸಾಹ ಟಿಪ್ಪು, ಹೈದರಾಲಿಗಳ ವಿಚಾರ ಬಂದಾಗ ಹುದುಗಿ ಹೋಗುತ್ತದೆ. ಒಡೆಯರ ವಿಚಾರವಾಗಿ ಪ್ರಾರಂಭದ ಒಡೆಯರ ರಾಜರಲ್ಲಿ ಚಿಕ್ಕದೇವರಾಜನು ಅತ್ಯಂತ ಖ್ಯಾತಿ ಪಡೆದವನು. ಕರ್ನಾಟಕ ಚಕ್ರವರ್ತಿ ಎಂಬ ಬಿರುದನ್ನು ಧರಿಸಿದ ಈತನು ರಾಜ್ಯವನ್ನು ವಿಸ್ತರಣೆ ಮಾಡಿದನು. ಈತನ ಆಳ್ವಿಕೆಯ ಕಾಲದಲ್ಲಿ ಮೈಸೂರು ಸಂಪದ್ಭರಿತವಾಯಿತು.

"ಮೈಸೂರು ರಾಜ್ಯವನ್ನಾಳಿದ ನಂತರದ ರಾಜರಲ್ಲಿ ಗಣನೀಯರಾದವರೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರು. ಇವರಿಬ್ಬರೂ ಸಾಹಿತ್ಯ ಮತ್ತು ಕಲೆಗಳಿಗೆ ಅಪಾರ ಪ್ರೋತ್ಸಾಹ ನೀಡಿದರು ಎನ್ನುವ ಪಠ್ಯವು ಕರ್ನಾಟಕ ಅಭಿವೃದ್ಧಿಗೆ ಹಲವು ಅಮೋಘ ಕೊಡುಗೆಗಳನ್ನು ನೀಡಿದ, ಆಧುನಿಕ ಮೈಸೂರಿನ ಅಭಿವೃದ್ಧಿ ಅಡಿಪಾಯವನ್ನು ಹಾಕಿದ ಹೈದರಾಲಿ, ಟಿಪ್ಪುವಿನ ಯಾವ ಕೊಡುಗೆಗಳನ್ನೂ ಪ್ರಸ್ತಾಪಿಸುವುದಿಲ್ಲ. ಸಾಮ್ರಾಜ್ಯಶಾಹಿ ಬ್ರಿಟಿಷರನ್ನು ದೇಶದಿಂದ ಓಡಿಸಲು ತನ್ನ ಮಕ್ಕಳನ್ನು ಒತ್ತೆ ಇಟ್ಟು ಕೊನೆಗೆ ತನ್ನ ಪ್ರಾಣವನ್ನೇ ಪಣವಾಗಿಟ್ಟು ಹೋರಾಟ ನಡೆಸಿದ ಟಿಪ್ಪುವಿನ ಶೌರ್ಯ, ಧೀಮಂತಿಕೆ, ದೇಶಪ್ರೇಮ ಬಗೆಗೂ ಹೇಳದೇ "ಚಿಕ್ಕದೇವರಾಯನ ಮರಣಾನಂತರ ಆರು ದಶಕಗಳ ಕಾಲ ದುರ್ಬಲ ರಾಜರುಗಳೇ ಅಧಿಕಾರದಲ್ಲಿದ್ದರು. ಈ ಅವಧಿಯಲ್ಲಿ ದಳವಾಯಿಗಳೆಂದು ಕರೆಯಲಾಗುವ ಸೇನಾಪತಿಗಳು ರಾಜರ ಪರವಾಗಿ ಆಳ್ವಿಕೆ ನಡೆಸುತ್ತಿದ್ದರು. ಮುಂದೆ ೧೭೬೧ರಲ್ಲಿ ರಾಜಧಾನಿಯಲ್ಲಿ ಸೈನಿಕ ಬಂಡಾಯ ಕಾಣಿಸಿಕೊಂಡಾಗ, ಹೈದರಾಲಿಯು ದಳವಾಯಿ ನಂಜರಾಜನನ್ನು ನಿವೃತ್ತಿಗೊಳಿಸಿ ತಾನೇ ಅಧಿಕಾರ ವಹಿಸಿಕೊಂಡನು. ೧೭೬೩ರಿಂದ ೧೭೯೯ರವರೆಗೆ ಮೈಸೂರು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯಲ್ಲಿತ್ತು. ಇದೇ ವೇಳೆ ಭಾರತದಲ್ಲಿ ಇಂಗ್ಲಿಷರು ರಾಜಕೀಯ ಶಕ್ತಿಯಾಗಿ ತಲೆಯೆತ್ತಿದ್ದರು. ೧೭೯೯ರಲ್ಲಿ ಅವರು ಟಿಪ್ಪು ಸುಲ್ತಾನನ್ನು ಸೋಲಿಸಿ ಮೈಸೂರು ರಾಜ್ಯವನ್ನು ತಮ್ಮ ಅಧಿಕಾರದಡಿಯಲ್ಲಿ ತಂದರು ಎಂದು ಹೇಳಿ ಕೈತೊಳೆದುಕೊಳ್ಳುತ್ತದೆ. ಮೈಸೂರು ವಿಭಾಗದಲ್ಲೇ ಹೈದರಾಲಿ, ಟಿಪ್ಪುಗಳಿಗೆ ಈ ಗತಿಯಾದರೆ ಇನ್ನು ಬೇರೆ ವಿಭಾಗ ಪಠ್ಯದಲ್ಲಿ ಕೇಳುವುದೇನು? ಚೆಲುವ ಕನ್ನಡ ನಾಡು ಎಂಬ ಎಲ್ಲರಿಗೂ ಸಾಮಾನ್ಯವಾದ ಭಾಗದಲ್ಲಿ ಟಿಪ್ಪುವಿಗೆ 'ಮೈಸೂರು ಹುಲಿ' ಎಂಬ ಬಿರುದು ನೀಡಿರುವುದಕ್ಕೆ ನಾವು ತೃಪ್ತಿಪಡಬೇಕಾಗಿದೆ.

ಗುಲಬರ್ಗಾ ವಿಭಾಗದ ಪಠ್ಯದ ಮೊದಲ ಪಾಠದಲ್ಲಿ 'ಹೈದರಾಬಾದ್ ವಿಮೋಚನಾ ಸಂಗ್ರಾಮ' ಎಂಬ ಒಂದು ಶೀರ್ಷಿಕೆಯಲ್ಲಿ ಹೈದರಾಬಾದ್ ನಿಜಾಮನ ವಿರುದ್ಧದ ಹೋರಾಟ ದೀರ್ಘ ವಿವರಣೆ ಇದೆ. ನಿಜಾಮನ ಆಡಳಿತ ಕ್ರೂರವಾಗಿತ್ತು ಎಂಬುದು ನಿಜವೇ. ನಿಜಾಮನ ಆಡಳಿತ ಎಂದರೆ ಒಬ್ಬ ಪಾಳೆಯಗಾರ ಸುಲಿಗೆಕೋರನ ಆಡಳಿತ. ಮತಾಂಧರೂ ಆಗಿದ್ದ ನಿಜಾಮನ ಬಂಟರ, ಸೈನ್ಯದ ದೌರ್ಜನ್ಯಗಳನ್ನು ವಿವರಿಸುವಾಗ ಅಲ್ಲಿ ತೋರಬೇಕಾದ ಎಚ್ಚರವನ್ನು ಸಮಚಿತ್ತದ ವಿವೇಕವನ್ನು ತೋರದೇ ಅದು ಮುಸ್ಲಿಂ ಆಡಳಿತಗಾರರು ಹಾಗೂ ಹಿಂದೂ ಪ್ರಜೆಗಳ ನಡುವಿನ ಹೋರಾಟ ಎಂಬಂತೆ ಚಿತ್ರಿಸಲಾಗಿದೆ.

ದೇಶಕ್ಕೆ ಸ್ವಾತಂತ್ರ್ಯ ಸಿಗುವ ಕಾಲಘಟ್ಟದ ಬೆಳವಣಿಗೆಗಳ ಕುರಿತು ಈ ಪಠ್ಯಗಳಲ್ಲಿ ವಿಶ್ಲೇಷಿಸುವ ಸಂದರ್ಭದಲ್ಲಿಯೂ ಸಹ ಕೋಮುವಾದದ ಅಂಶಗಳನ್ನು ಉದ್ದೇಶಪೂರ್ವಕವಾಗಿ ದಾಖಲಿಸಿರುವುದನ್ನು ಕಾಣಬಹುದಾಗಿದೆ. "ನಿಜಾಮ ಭಾರತ ಒಕ್ಕೂಟದಿಂದ ಹೊರಗುಳಿದು ಸ್ವತಂತ್ರ ಆಳ್ವಿಕೆ ನಡೆಸಲು ನಿರ್ಧರಿಸಿದನು ಎನ್ನುವ ಪಠ್ಯವು ಮೈಸೂರು ಒಡೆಯರ ಕುರಿತ ಪಾಠದಲ್ಲಿ ಮಾತ್ರ, ೧೯೪೭ರಲ್ಲಿ ಭಾರತ ಸ್ವತಂತ್ರ ರಾಷ್ಟ್ರವಾದಾಗ ಮೈಸೂರು ರಾಜ್ಯವು ಭಾರತ ಗಣರಾಜ್ಯದಲ್ಲಿ ಸೇರ್ಪಡೆಗೊಂಡಿತು ಎಂದು ತಿಳಿದುಬರುತ್ತದೆ. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಕೂಡಲೇ

ಮೈಸೂರು ಮಹಾರಾಜರೇನು ಓಡಿ ಹೋಗಿ ಭಾರತ ಒಕ್ಕೂಟವನ್ನು ಸೇರಲಿಲ್ಲ. ಅವರೂ ಕೂಡ ಪ್ರತ್ಯೇಕ ಮೈಸೂರು ಪ್ರಾಂತ್ಯವಾಗಿ ಉಳಿದುಕೊಳ್ಳುವ ಯತ್ನ ಮಾಡಿದ್ದರು. ಜನತೆಯ ಅಭಿಮತ ಅದಕ್ಕೆ ಪರವಾಗಿರಲಿಲ್ಲ. ಜನತೆಯು ಆ ಧೋರಣೆಯನ್ನು ಖಂಡಿಸಿ ಹೋರಾಟ ನಡೆಸಿದರು. ಅದರಿಂದಾಗಿ ಮೈಸೂರು ಮಹಾರಾಜರು ಭಾರತ ಒಕ್ಕೂಟಕ್ಕೆ ಸೇರಲು ಒಪ್ಪಲೇಬೇಕಾಯಿತು. ಇದು ಜಗಜ್ಜಾಹೀರಾಗಿರುವ ಇತಿಹಾಸ. ಇಂಥ ಇತಿಹಾಸವನ್ನು ತಿರುಚುವ ಸಂಘ ಪರಿವಾರದ ಭಂಡತನವನ್ನು ಮೆಚ್ಚಲೇಬೇಕು ಎಂದು ಆರ್. ರಾಮಕೃಷ್ಣ ಅವರು ಆರೋಪಿಸುತ್ತಾರೆ.[೨೫] ಅಲ್ಲದೆ ಒಡೆಯರು ಹಿಂದುಗಳು. ಹಾಗಾಗಿ ಅವರು ದೇಶದ ಪರ, ನಿಜಾಮ ಮುಸ್ಲಿಂ. ಹಾಗಾಗಿ ಆತ ದೇಶ ವಿರೋಧಿ ಎಂದು ಬಿಂಬಿಸುವುದಲ್ಲವೇ ಈ ಬಗೆಯ ನಿರೂಪಣೆಯ ಉದ್ದೇಶ!? ಮೈಸೂರಿನಲ್ಲಿ ರಾಜರ ಆಡಳಿತ ಹೋಗಿ ಜವಾಬ್ದಾರಿ ಸರ್ಕಾರ ಅಂದರೆ ಚುನಾಯಿತ ಸರ್ಕಾರ ಬರಬೇಕೆಂಬುದಕ್ಕಾಗಿಯೂ ಈ ಮೈಸೂರು ಜನತೆ ದೊಡ್ಡ ಹೋರಾಟ ಮಾಡಬೇಕಾಗಿ ಬಂದಿತ್ತು ಎಂಬ ಕೇವಲ ೬೫ ವರ್ಷಗಳ ಹಿಂದಿನ ಇತಿಹಾಸ ಜನರ ಮನಸ್ಸಿನಿಂದ ಅಳಿಸಿ ಹೋಗಲು ಸಾಧ್ಯವಿಲ್ಲ. ಇಂದಿಗೂ ಏಕೀಕರಣ ಚಳುವಳಿಯನ್ನು ಮೈಸೂರು ಚಲೋ ಚಳುವಳಿಯೆಂದೇ ಸ್ಮರಿಸಿಕೊಳ್ಳಲಾಗಿದೆ.

ಬರೀ ಪಠ್ಯಪುಸ್ತಕಗಳನ್ನು ತಿದ್ದುಪಡಿ ಮಾಡಿದರೆ ಸಾಲದು, ಬಿಜೆಪಿ ಸರಕಾರದ ಅವಧಿಯಲ್ಲಿ ಪಠ್ಯಪುಸ್ತಕಗಳನ್ನು ಪರಿಷ್ಕರಣೆ ಮಾಡಲು ಸಮಿತಿಯೊಂದನ್ನು ರಚಿಸಲಾಗಿತ್ತು. ಬಿ.ಎಸ್. ಮೂಡಂಬಡಿತ್ತಾಯರನ್ನು ಈ ಸಮಿತಿಗೆ ಸಂಯೋಜಕರನ್ನಾಗಿ ನೇಮಕ ಮಾಡಲಾಗಿತ್ತು. ಈ ಸಮಿತಿಯು ಕೋಮುವಾದದ ಕೆಲವು ಅಂಶಗಳನ್ನು ಪಠ್ಯಪುಸ್ತಕಗಳಲ್ಲಿ ಸೇರ್ಪಡೆಗೊಳಿಸಿದೆ. ಈ ಲೋಪವನ್ನು ಒಪ್ಪಿಕೊಳ್ಳದ ಸಂಯೋಜಕರು ಒಬ್ಬೊಬ್ಬ ಇತಿಹಾಸಕಾರ ಒಂದೊಂದು ರೀತಿ ಬರೆಯುತ್ತಾನೆ. ಯಾವುದನ್ನು ಆಧಾರವಾಗಿ ಇಟ್ಟುಕೊಳ್ಳಬೇಕೆಂದು ಪ್ರಶ್ನಿಸುತ್ತಾರೆ ಸಂದರ್ಶನದಲ್ಲಿ. ಆದರೆ, ಈ ದೇಶಕ್ಕೆ ಸಂವಿಧಾನ ಎಂಬುದೊಂದು ಇದೆ. ಈ ಸಂವಿಧಾನಕ್ಕೆ ಪೂರಕವಾಗಿ ಹಾಗೂ ಅತ್ಯಂತ ವೈಜ್ಞಾನಿಕವಾಗಿ, ನಿಷ್ಪಕ್ಷಪಾತವಾಗಿ ಚಾರಿತ್ರಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲಿದ ರೋಮಿಲಾ ಥಾಪರ್, ಇರ್ಫಾನ್ ಹಬೀಬ್, ಆರ್.ಎಸ್. ಶರ್ಮಾರಂತಹ ಇತಿಹಾಸಕಾರರು ರೂಪಿಸಿದ ಇತಿಹಾಸ ಪುಸ್ತಕಗಳು ಈಗಾಗಲೇ ಎಲ್ಲ ರಾಜ್ಯಗಳಲ್ಲಿ ಇತಿಹಾಸ ಪಠ್ಯಕ್ರಮದಲ್ಲಿ ಸೇರ್ಪಡೆಯಾಗಿರುವುದನ್ನು ಆಧಾರವಾಗಿಟ್ಟುಕೊಳ್ಳಬೇಕು.

**೪. ಚರಿತ್ರೆ ಪಠ್ಯಗಳಲ್ಲಿ ಧಾರ್ಮಿಕ ಅಂಧಶ್ರದ್ಧೆಯ ಅಂಶಗಳು**

ಈ ಮೇಲೆ ಉಲ್ಲೇಖಿಸಿದ ಪಠ್ಯದಲ್ಲಿ ಚಿಕ್ಕಮಗಳೂರಿನ ದತ್ತಾತ್ರೇಯ ಪೀಠವನ್ನು ಮಾತ್ರ ಹೆಚ್ಚು ಒತ್ತುಕೊಟ್ಟು ವಿಶ್ಲೇಷಿಸಲಾಗಿದ್ದು, ಅಲ್ಲಿಯೇ ಇರುವ ಬಾಬಾಬುಡನ್‌ಗಿರಿಯ ಬಗ್ಗೆ ನಿರ್ಲಕ್ಷ್ಯ ತೋರಿರುವುದನ್ನು ಕಾಣಬಹುದಾಗಿದೆ. “ಬಾಬುಬುಡನ್‌ಗಿರಿ: ಇದು ಪಶ್ಚಿಮ ಘಟ್ಟದ ಒಂದು ಭಾಗ. ಇದನ್ನು ಚಂದ್ರದ್ರೋಣ ಪರ್ವತ ಎಂದು ಕರೆಯುತ್ತಾರೆ. ಇಲ್ಲಿ ಅನೇಕ ಗಿಡ ಮೂಲಿಕೆಗಳು ದೊರೆಯುತ್ತವೆ. ಇದರ ನೆತ್ತಿಯಲ್ಲಿರುವ ಗುಹೆಯಲ್ಲಿ ದತ್ತಾತ್ರೇಯ ಪೀಠವಿದೆ. ಇಲ್ಲಿಗೆ ಸಹಸ್ರಾರು ಭಕ್ತರು ಬರುತ್ತಾರೆ. ಇದು ಈ ಪಠ್ಯವು ನಮ್ಮ ನಾಡಿನ ಹೆಮ್ಮೆಯ ಕೋಮು

ಸೌಹಾರ್ದ ಪರಂಪರೆಯ ತಾಣದ ಬಗೆಗೆ ಹೇಳುತ್ತಿರುವ ಮಾತು. 'ಸರ್ವ ಜನಾಂಗದ ಶಾಂತಿಯ ತೋಟ' ಎಂಬ ಕವಿವಾಣಿಯನ್ನು ನೆನಪಿಸುವಂತಹ ನೂರಾರು ವರ್ಷಗಳಿಂದಲೂ ಜಾತಿಭೇದವಿಲ್ಲದೇ ಹಿಂದೂ-ಮುಸ್ಲಿಂ ಜನರು ಭಕ್ತಿ, ಶ್ರದ್ಧೆಯಿಂದ ನಡೆದುಕೊಳ್ಳುತ್ತಿರುವ ಒಂದು ಶ್ರದ್ಧಾಕೇಂದ್ರವನ್ನು ಹಿಂದುತ್ವವಾದಿ, ವೈದಿಕ ಪುರೋಹಿತಶಾಹಿ ಕೇಂದ್ರವನ್ನಾಗಿಸುವ ಸಂಚಿಗೆ ಪೂರಕವಾಗಿ ನಿರೂಪಿಸಿರುವ ಪಠ್ಯವಿದು.

ಇದೇ ಮೈಸೂರು ಭಾಗವನ್ನು ಪರಿಚಯಿಸುವ ಪಠ್ಯದ 'ಮರೆಯಲಾಗದ ಮಹಾನುಭಾವರು' ಎಂಬ ಭಾಗದಲ್ಲಿ "ತಗಡೂರು ರಾಮಚಂದ್ರರಾವ್ ಅವರು ಅಸ್ಪೃಶ್ಯತೆಯ ವಿರುದ್ಧ ಹೋರಾಡಿದರಲ್ಲದೆ ಕ್ರೈಸ್ತರಾಗಿ ಮತಾಂತರಗೊಂಡ ಬಡವರನ್ನು ಮತ್ತೆ ತಮ್ಮ ಮತಗಳಿಗೆ ಸೇರುವಂತೆ ಮಾಡಿದರು ಎನ್ನುತ್ತದೆ. ಅಂದರೆ ಬಡವರನ್ನು ಆಮಿಷ ಒಡ್ಡಿ ಮತಾಂತರ ಮಾಡಲಾಗಿತ್ತು. ಅವರನ್ನು ಮರಳಿ ಕರೆತಲಾಯಿತು ಎಂಬ ಅರ್ಥವನ್ನು ತರುವುದೇ ಈ ಮಾತುಗಳ ಮೂಲಕ ವ್ಯಕ್ತಗೊಳಿಸುವ ಅರ್ಥ.

ಆದೇ ರೀತಿ ಅದೇ ಪುಸ್ತಕಗಳಲ್ಲಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕನ್ನು ಪರಿಚಯಿಸುವ ಭಾಗದಲ್ಲಿ "ಗಂಗಾವತಿ ತಾಲ್ಲೂಕಿನ ಅಂಜನಾದ್ರಿ (ಕಿಷ್ಕಿಂದೆ) ಪೌರಾಣಿಕವಾಗಿ ಪ್ರಸಿದ್ಧವಾಗಿದೆ. ವೀರಾಗ್ರೇಸರ, ರಾಮ ಭಕ್ತ, ಸಪ್ತ ಚಿರಂಜೀವಿಗಳಲ್ಲಿ ಒಬ್ಬನಾದ ಹನುಮಂತನು ಹುಟ್ಟಿದ್ದು, ರಾಮಾಯಣದ ಸುಂದರಕಾಂಡ ನಡೆದದ್ದು ಇಲ್ಲಿಯೇ ಎನ್ನುತ್ತದೆ ಪಠ್ಯ. ಪಠ್ಯಪುಸ್ತಕವೊಂದು 'ಜನರಲ್ಲಿ ಇಂತಹ ನಂಬಿಕೆ ಇದೆ' ಎಂದೋ ಅಥವಾ ಇಂತಹ ಪ್ರತೀತಿ ಇದೆ ಅಂತಲೋ ಹೇಳುವುದು ಬಿಟ್ಟು, ಪುರಾಣದ ಕುರಿತಾದ ಜನರ ಆಧಾರವಿಲ್ಲದ ನಂಬಿಕೆಗಳನ್ನು ಐತಿಹಾಸಿಕ ಸತ್ಯ ಎಂದು ನಿರೂಪಿಸಲು ಹೊರಟಿದೆ. ಇಂತಹ ನಿರೂಪಣೆಗೆ ಇದೊಂದೇ ಉದಾಹರಣೆಯಲ್ಲ. ಇಂತಹ ಇನ್ನೂ ಹಲವಾರು ಉದಾಹರಣೆಗಳು ಪಠ್ಯದಲ್ಲಿವೆ. ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಚಯಿಸುವ ಪಠ್ಯದ ಭಾಗದಲ್ಲಿ ಕಂಡುಬರುವ ಈ ಬರಹವನ್ನು ಗಮನಿಸಲಾಗಿದೆ.

**೫. ಚರಿತ್ರೆ ಪಠ್ಯಪುಸ್ತಕಗಳಲ್ಲಿ ಜಾತಿ ಕ್ರೌರ್ಯದ ವಾಸ್ತವವನ್ನು ಮರೆಮಾಚುವ ಯತ್ನಗಳು**

ಈವರೆಗೆ ರಚನೆಯಾದ ಚರಿತ್ರೆ ಪಠ್ಯಗಳು ಶತಶತಮಾನಗಳಿಂದ ನಡೆದ ಜಾತಿಯ ಕೌರ್ಯವನ್ನು ಮರೆಮಾಚಲು ಕೆಲ ಜಾತಿವಾದಿಗಳು ಪ್ರಯತ್ನ ಮಾಡಿರುವುದು ನಮ್ಮ ಪಠ್ಯಗಳಲ್ಲಿ ಮತ್ತೊಂದು ದೋಷವಾಗಿದೆ. ಜಾತೀಯತೆ ಎಂದರೆ ಜಾತಿಯ ಕುರಿತು ಅತೀವ ನಿಷ್ಠೆ ಎನ್ನಬಹುದು ಎನ್ನುತ್ತದೆ ಈ ಪಠ್ಯ ಅಂದರೆ ಜಾತೀಯತೆ ಎಂದರೆ ಮೇಲುಕೀಳು ಎಂಬ ಭಾವನೆಗಳ ಆಧಾರದಲ್ಲಿ ನಿರ್ದಿಷ್ಟ ಜನಸಮುದಾಯಗಳನ್ನು ತುಳಿಯುವ ಶೋಷಿಸುವ ಒಂದು ಅಸಮಾನ-ಅಮಾನವೀಯ ಸಾಮಾಜಿಕ ವ್ಯವಸ್ಥೆ ಎಂಬುದನ್ನು ಪಠ್ಯವು ಮರೆಮಾಚಲು ಪ್ರಯತ್ನಿಸುತ್ತದೆ. ಅದರಿಂದಾಗಿಯೇ 'ಗುಪ್ತರ ಕಾಲ-ಒಂದು ಸುವರ್ಣ ಯುಗ' ಎನ್ನುತ್ತದೆ ಈ ಪಠ್ಯ. ವೇದ ಕಾಲದ ನಂತರ ಚಾತುರ್ವರ್ಣ ವ್ಯವಸ್ಥೆ ಬಲಗೊಂಡ ಅಂಶ ಮುಂದೆ ಮೌರ್ಯ ಮತ್ತು ಗುಪ್ತರ ಕಾಲಘಟ್ಟಗಳಲ್ಲಿ ಅಸ್ಪೃಶ್ಯತೆ ಜಾತಿ ದಮನಗಳು ಸಾಂಸ್ಥಿಕ ಸ್ವರೂಪವನ್ನು ಪಡೆದುಕೊಂಡವು. ಕರಾಳ ಜಾತಿವಾದಿ ಕಟ್ಟಳೆಗಳನ್ನು ಸಮಾಜದ ಮೇಲೆ ಹೇರಿದ ಮನುಸ್ಮೃತಿಯು ಈ ಹಂತದಲ್ಲಿಯೇ

ಕ್ರೋಢೀಕರಣಗೊಂಡಿತು ಎಂಬ ಐತಿಹಾಸಿಕ ಸತ್ಯವನ್ನು ಮರೆಮಾಚಿ ಗುಪ್ತರ ಕಾಲವನ್ನು ಸುವರ್ಣ ಯುಗ ಎಂದು ಹೇಳಲಾಗುತ್ತಿದೆ. ಇಂತಹ ಮನೋಭಾವದ ಕಾರಣಕ್ಕಾಗಿಯೇ ವಚನ ಚಳುವಳಿ ಎಂದರೆ ಏನೋ ಒಂದು ಎರಡು ವಾಕ್ಯದಲ್ಲಿ ಹೇಳಿ ಮುಗಿಸುವ ಒಂದು ಸಾಮಾನ್ಯ ಘಟನಾವಳಿಯಂತೆ. ವೈದಿಕ ಧರ್ಮ ಚಿಂತನೆ ಸಂಸ್ಕೃತಿಯನ್ನು ಉಗ್ರವಾಗಿ ಖಂಡಿಸಿ ಸಾರಾಸಗಟಾಗಿ ತಿರಸ್ಕರಿಸಿ ಹೊಸದೊಂದು ಸಮಾಜದ ಕನಸಿನೊಂದಿಗೆ ಬೃಹತ್ ಆಂದೋಲನವನ್ನೇ ಆರಂಭಿಸಿದ ವಚನ ಚಳುವಳಿಯ ಪ್ರಣಾಳಿಕೆಯೇ ಈ ಪಠ್ಯದಲ್ಲಿ ಮಾಯವಾಗಿದೆ. ವೈದಿಕ ಸಂಸ್ಕೃತಿಯನ್ನು ಕೊಂಡಾಡುವಾಗಿನ ಸಂಭ್ರಮ ವಚನ ಚಳುವಳಿಯನ್ನು ಕುರಿತು ಇಲ್ಲ. ಹೀಗೆ ಪಟ್ಟಿ ಮಾಡುತ್ತಾ ಹೋದರೆ ಇನ್ನೂ ಅನೇಕ ಉದಾಹರಣೆಗಳಿವೆ. 

**೬. ಚರಿತ್ರೆ ಪಠ್ಯಪುಸ್ತಕಗಳಲ್ಲಿ ಅಲ್ಪಸಂಖ್ಯಾತರ ವಿರುದ್ಧದ ಅಂಶಗಳು**

೫ನೆಯ ತರಗತಿಯ ಪಠ್ಯಪುಸ್ತಕದಲ್ಲಿ ಅಲ್ಪಸಂಖ್ಯಾತರ ವಿರುದ್ಧ ಅಹವೇಳನಕಾರಿ ಅಂಶಗಳನ್ನು ದಾಖಲಿಸಲಾಗಿದೆ. ಈ ಬಗ್ಗೆ ಆಗ ನಾಡಿನ ಪ್ರಜ್ಞಾವಂತರು ಪ್ರತಿಭಟನೆ ವ್ಯಕ್ತಪಡಿಸಿದ್ದರು. ಆಗ ಬೇರೆ ತರಗತಿಗಳ ಪಠ್ಯಪುಸ್ತಕಗಳಲ್ಲಿ ಪರಿಷ್ಕರಣೆ ಮಾಡಿದರೂ ಕೆಲ ಪಠ್ಯಪುಸ್ತಕಗಳು ಹಾಗೇ ಉಳಿದುಕೊಂಡವು. ಇತಿಹಾಸ ಪಠ್ಯಕ್ರಮದಲ್ಲಿ ಹೈದರ್‌ಅಲಿಯನ್ನು ಶತ್ರುವಿನ ಸೈನ್ಯದವನು ಎಂದು ಬರೆಯಲ್ಪಟ್ಟಿದೆ. ಹಿಂದೂ ಧರ್ಮದ ವೈಭವವು ಮೊದಲ ಅಧ್ಯಾಯಗಳಲ್ಲಿ ಕಂಡುಬಂದಿದೆ.[೨೬] ಈ ಬಗ್ಗೆ ತಜ್ಞರ ತಂಡದಿಂದ ಪಠ್ಯಪುಸ್ತಕಗಳ ಸಮಗ್ರ ಪರಿಶೀಲನೆ ನಡೆಯಬೇಕಾಗಿದೆ.

**೭. ವಸಾಹತು/ಸಾಮ್ರಾಜ್ಯಶಾಹಿ ದೃಷ್ಟಿಕೋನದ ಬರವಣಿಗೆಗಳು ಪಠ್ಯಗಳಲ್ಲಿ ಅಧಿಕವಾಗಿವೆ.**

ಬ್ರಿಟಿಷ್ ಅಧಿಕಾರಿ ಮ್ಯಾಲೆಸನ್ ಈ ದೇಶದ ಜನರನ್ನು ಹುಚ್ಚರು ಅಂತ ಕರೀತಾನೆ. ಏಕೆ ಗೊತ್ತೇನು? ನೇಣು ಶಿಕ್ಷೆಗೆ ಕಳಿಸಿದರೆ ಈ ದೇಶದ ಜನ ಹೆದರೋದಿರಲಿ, ತಾವೇ ನೇಣುಗಂಬದ ಬಳಿ ಧಾವಿಸಿ ನೇಣು ಕುಣಿಕೆಯನ್ನು ಕೊರಳಿಗೆ ಹಾಕಿಕೊಂಡುಬಿಡ್ತಾ ಇದ್ದರಂತೆ. ಆದಷ್ಟು ಬೇಗ ನನ್ನ ನೇಣಿಗೇರಿಸಿ ಅಂತ ಗೋಗರೆಯುತ್ತಾ ಇದ್ದರಂತೆ. ಹೀಗೇಕೆಂದು ಪ್ರಶ್ನಿಸಿದಾಗ, ಪುನರ್ಜನ್ಮ ನಂಬೋರು ನಾವು, ಬೇಗ ಹೊರಟರೆ, ಬೇಗ ಮರಳಿ ಬರುತ್ತೇವಲ್ಲ! ಅನ್ನುವ ವಾದ ಮಂಡಿಸುತ್ತಿದ್ದರಂತೆ. ಹೆದರಿಸಬೇಕೆಂದು ನೇಣಿಗೇರಿಸಿದರೆ, ಅದೇ ಪ್ರೇರಣೆಯಾಗುವ ರೀತಿ ಅತೀ ವಿಶಿಷ್ಟವಲ್ಲವೆ? ಅದಕ್ಕೇ ಬ್ರಿಟಿಷರಿಗೆ ಅಷ್ಟೊಂದು ಕೋಪ. ಮೇ ೧೦ಕ್ಕೆ ೧೮೫೭ರಲ್ಲಿ ಸಂಗ್ರಾಮವೊಂದಕ್ಕೆ ಮುನ್ನುಡಿ ಬರೆಯಲಾಗಿತ್ತು. ಬ್ಯಾರಕ್‌ಪುರದ ಮಂಗಲ್‌ಪಾಂಡೆ ಆಂಗ್ಲ ಪೊಲೀಸ್ ಅಧಿಕಾರಿಯತ್ತ ಗುಂಡು ಸಿಡಿಸಿ, ತಿಂಗಳ ಕೊನೆಯಲ್ಲಿ ಆರಂಭವಾಗಬೇಕಾಗಿದ್ದ ಕ್ರಾಂತಿಗೆ ಆಗಲೇ ಕಿಡಿ ಹಚ್ಚಿಬಿಟ್ಟಿದ್ದ. ಅಲ್ಲಿಂದಾಚೆಗೆ ಮೀರತ್, ದೆಹಲಿಗಳು ಕ್ರಾಂತಿಯ ಕಿಡಿಗೆ ಉರಿದು ಬಿದ್ದವು. ಕಾನ್‌ಪುರ, ಝಾನ್ಸಿಗಳು ಜಯಘೋಷ ಮೊಳಗಿಸಿದವು. ಬಿಹಾರ ಕುದಿಯಿತು. ದಕ್ಷಿಣದಲ್ಲೂ ಬ್ರಿಟಿಷರ ಬುಡಕ್ಕೆ ಬಲವಾದ ಪೆಟ್ಟು ಬಿತ್ತು. ಅಂದುಕೊಂಡಂತೆಯೇ ಎಲ್ಲವೂ ಆಗಿದ್ದರೆ, ಇತಿಹಾಸದ ಹಾದಿ ಬೇರೆಯೇ ಇರುತ್ತಿತ್ತು. ಆ ವೇಳೆಗೆ ಆಂಗ್ಲರೊಟ್ಟಿಗೆ ಕಾದಾಡಿ ಹೈರಾಣಾಗಿದ್ದ ಸಿಖ್ಖರು ಭಾರತೀಯ ಸೈನಿಕರ ಬೆಂಬಲಕ್ಕೆ ಬರಲಿಲ್ಲ. ಅಯ್ಯೋ ಪಾಪ! ಅನ್ನುವ ಕೆಲವಷ್ಟು ಜನ ಆಂಗ್ಲ ಅಧಿಕಾರಿಗಳಿಗೆ ಉಳಿದುಕೊಳ್ಳುವ ಮಾರ್ಗ ತೋರಿದರು. ಅಂತೂ ಮಹಾಯುದ್ಧವೊಂದರಲ್ಲಿ ನಾವು ಸೋತಿದ್ದೆವು. ರಾಣಿ ತಾನೇ ಭಾರತವನ್ನು ತನ್ನ ತೆಕ್ಕೆಗೆ

ಎಳೆದುಕೊಂಡಳು. ಪರೋಕ್ಷವಾಗಿ ಮಾಡುತ್ತಿದ್ದ ಸುಲಿಗೆಗೆ ನೇರವಾಗಿ ಕೈಹಾಕುವ ಹೊಸ ಮೋಸದಾಟವಿದು. ೧೬೦೦ ಮೊದಲ ದಿನದಿಂದ ಹಿಡಿದು, ೧೯೪೭ರ ತಮ್ಮ ಅವಧಿಯ ಕೊನೆಯ ದಿನದವರೆಗೆ ಆಂಗ್ಲರ ಲೂಟಿ ಹೇಳತೀರದ್ದು. ಅವರು ಹಳ್ಳಿಗಳನ್ನು ಧ್ವಂಸಗೈದರು. ಬಂದರುಗಳನ್ನು ಖಾಲಿ ಮಾಡಿದರು. ಊರುಗಳುದ್ದಕ್ಕು ರೈಲ್ವೆ ಹಳಿಗನ್ನೆಳೆದು, ತೆರಿಗೆ ಲೂಟಿಗೆ ವ್ಯವಸ್ಥೆ ಮಾಡಿಕೊಂಡರು. ಇಲ್ಲವಾದಲ್ಲಿ, ಸುಮಾರು ಏಳು ಲಕ್ಷದಷ್ಟಿದ್ದ ಬ್ರಿಟಿಷರು ಕೋಟ್ಯಾಂತರ ಸಂಖ್ಯೆಯಲ್ಲಿದ್ದ ಭಾರತೀಯರನ್ನು ಆಳುತ್ತಿದ್ದುದಾರೂ ಹೇಗೆ? ಇವೆಲ್ಲ ಬಿಡಿ. ಇಂಥ ಲೂಟಿಕೋರ ಆಂಗ್ಲರನ್ನು ನಮ್ಮ ಪಠ್ಯಪುಸ್ತಕಗಳಲ್ಲಿ ಬಿಂಬಿಸಿರುವ ರೀತಿಯನ್ನು ನೀವು ನೋಡಬೇಕು. ಹತ್ತನೇ ತರಗತಿಯ ಸಮಾಜ ಪುಸ್ತಕದಲ್ಲಿ ಕೂಡಲೇ ಭಾರತದಾದ್ಯಂತ ರೈಲು ಸಂಪರ್ಕ ಬೆಳೆಯಿತು. ಇದರ ಪರಿಣಾಮವಾಗಿ ಹೆಚ್ಚಿನ ಭಾರತೀಯರು ದೇಶದಾದ್ಯಂತ ಪ್ರಯಾಣ ಮಾಡಲು ಅನುಕೂಲವಾಯಿತು. ಇದರಿಂದ ಭಾರತೀಯರಿಗೆ ತಾವೆಲ್ಲ ಒಂದೇ ಎಂಬ ಭಾವನೆ ಮೂಡಿತು ಎಂದು ಬರೆದಿದ್ದಾರೆ. ನಮ್ಮ ಮಕ್ಕಳು ಈ ಸಾಲುಗಳನ್ನು ಓದಿದರೆ, ನಾವು ಒಂದೆಂಬ ಭಾವನೆ ಮೂಡಲು ರೈಲು ಪ್ರಯಾಣವೇ ಕಾರಣವಾಯಿತು ಎಂದು ತಿಳಿಯುತ್ತಾರೆ ಎನ್ನುವುದರಲ್ಲಿ ಸಂಶಯವೇ ಇಲ್ಲ. ಎರಡನೆಯದು, ಬ್ರಿಟಿಷರು ಬರುವ ಮುನ್ನ ಮಗಧ ಸಾಮ್ರಾಜ್ಯ ದೇಶವ್ಯಾಪಿ ಹರಡಿತ್ತಲ್ಲ, ಆಗ ಭಾರತ ದೇಶ ಒಂದಾಗಿರಲಿಲ್ಲವೆ? ಕಾಶಿಯಾತ್ರೆ ಮಾಡಿದ ಭಕ್ತ ರಾಮೇಶ್ವರಕ್ಕೆ ಬಂದು ತೀರ್ಥ ಸಮರ್ಪಿಸುತ್ತಿದ್ದನಲ್ಲ, ಅವನು ಓಡಾಟ ಮಾಡಲೇ ಇಲ್ಲವೆ? ಅದು ಬಿಡಿ. ಇಂದು ಜಮ್ಮುವಿನಿಂದ ಕನ್ಯಾಕುಮಾರಿಯವರೆಗೆ ರೈಲು ಮಾರ್ಗಗಳಿವೆಯಲ್ಲ, ನಿಜ ಹೇಳಿ, ನಾವೆಲ್ಲ ಒಂದೇ ಎಂಬ ಭಾವನೆ ಜನರಲ್ಲಿ ಬಲವಾಗಿ ಮೂಡಿದೆಯಾ? ಇಂಥ ಸಾಲುಗಳನ್ನು ಪ್ರೌಢ ಮಕ್ಕಳ ತಲೆಯಲ್ಲಿ ತುರುಕುವಾಗ ಎಚ್ಚರಿಕೆ ಬೇಡವಾ? ಅದೇ ಪಾಠ ಆಂಗ್ಲರ ಆಳ್ವಿಕೆಯಲ್ಲಿ ಶಿಕ್ಷಣ ಪದ್ಧತಿ ಚೆಂದಗೊಂಡಿದುದರ ಕುರಿತು ಒಂದಿಡೀ ಪ್ಯಾರ ಹೊಗಳುತ್ತದೆ. ಭಾರತದಲ್ಲಿ ಶಿಕ್ಷಣ ಮೇಲುಜಾತಿಯ ಪುರುಷರಿಗೆ ಮಾತ್ರ ದೊರೆಯುತ್ತಿತ್ತೆಂದು ತೆಗಳುತ್ತದೆ. ಅಷ್ಟೇ ಅಲ್ಲ, ಇಂಗ್ಲಿಷರ ಶಿಕ್ಷಣದಿಂದ ಪಾಶ್ಚಾತ್ಯ ಜ್ಞಾನ-ವಿಜ್ಞಾನ ಎಲ್ಲರಿಗೂ ಹರಡಿತು..... ದೇಶದಲ್ಲಿ ಇಂಗ್ಲಿಷ್ ಶಿಕ್ಷಣ ಶಾಲೆಗಳನ್ನು ತೆರೆದರು... ಕ್ರೈಸ್ತ ಮತ ಪ್ರಚಾರಕರು ಇದರಲ್ಲಿ ಪ್ರಮುಖ ಪಾತ್ರವಹಿಸಿದರು ಎಂದು ಹೇಳಿದೆ. ಈ ಇತಿಹಾಸಕಾರರ ಮನಸ್ಸೆಂಥದ್ದು ನೋಡಿ. ಎಲ್ಲರಿಗೂ ಶಿಕ್ಷಣ ತಲುಪಿಸುವಲ್ಲಿ ಮುಖ್ಯ ಪಾತ್ರ ಕ್ರೈಸ್ತ ಪಾದ್ರಿಗಳದ್ದು ಎಂದು ಹೇಳುವ ಮೂಲಕ ಓದುಗರಲ್ಲಿ ಜಾತೀಯತೆ ಬಿತ್ತುವ ಕೆಲಸ ಮಾಡಿದ್ದಾರೆ. ಇಷ್ಟಕ್ಕೂ ನಮ್ಮ ಚರಿತ್ರೆಕಾರರು ಧರ್ಮಪಾಲರ ಬ್ಯೂಟಿಫುಲ್ ಟ್ರೀ ಓದಿದ್ದಾರೇನು? ಆಂಗ್ಲರ ದಾಖಲೆಗಳೇ ಹೇಳುವಂತೆ, ಬಳ್ಳಾರಿಯಲ್ಲಿ ಅಧ್ಯಯನಶೀಲರು ಮತ್ತು ಅಧ್ಯಾಪಕರಲ್ಲಿ ಬಹುತೇಕರು ಕೆಳವರ್ಗಗಳಿಂದ ಬಂದವರು. ದೇಶದ ಬಹುತೇಕ ಕಡೆಗಳಲ್ಲಿ ಶಾಲೆಗಳ ಸ್ಥಿತಿ ಹೀಗೆಯೇ ಇತ್ತು. ಇಲ್ಲವಾದಲ್ಲಿ, ಆಂಗ್ಲರ ಆಗಮನ ಕಾಲಕ್ಕೆ ಎಲ್ಲೆಡೆ ಕುಶಲಕರ್ಮಿಗಳು ಇದ್ದರಲ್ಲ, ಅದು ಹೇಗೆ ಸಾಧ್ಯವಾಯ್ತು? ಬ್ರಾಹ್ಮಣರು ಉನ್ನತ ಹುದ್ದೆಗಳಲ್ಲಿದ್ದು ಶೋಷಣೆ ಮಾಡುತ್ತಾ ಕಾಲಹರಣ ಮಾಡುತ್ತಿದ್ದರು ಎನ್ನುವವರಿಗೆ, ೧೮೫೭ರ ವೇಳೆಗೆ ಸೈನ್ಯದಲ್ಲಿದ್ದ ಬಹುಪಾಲು ಸಂಖ್ಯೆ ಬ್ರಾಹ್ಮಣರದ್ದು ಎನ್ನುವ ಅರಿವಿದೆಯೇನು? ಈ ಸಂಗ್ರಾಮದ ಕಿಡಿ ಉರಿಸಿದ ಮಂಗಲ್‌ಪಾಂಡೆ ಸ್ವತಃ ಜನಿವಾರಧಾರಿ. ನಮ್ಮನ್ನು ಒಡೆದಾಳಲು ಆಂಗ್ಲರು ಬಳಸಿದ್ದ ಅದೇ ದಾಳವನ್ನು ಮುಂದಿರಿಸಿ ಇಂದಿಗೂ ಕೊಲ್ಲುವುದು ಯಾವ ನ್ಯಾಯ? ಒಬ್ಬರನ್ನು

ಕೊಲ್ಲುವುದು ಒತ್ತಟ್ಟಿಗಿರಲಿ, ಕ್ರೈಸ್ತಪಾದ್ರಿಗಳನ್ನು ಸಾರ್ವಜನಿಕ ಶಿಕ್ಷಣದ ಹರಿಕಾರರೆಂದು ಬಿಂಬಿಸಿರುವುದು ಸರಿಯಾ? ಕ್ರೈಸ್ತಮತ ಪ್ರಚಾರಕರು ಬಂದಾಗಿನಿಂದ ಮಾಡಿದ ಕೆಲಸಗಳೇನೆಂಬುದನ್ನು ಅನೇಕ ಬ್ರಿಟಿಷ್ ಅಧಿಕಾರಿಗಳೇ ದಾಖಲಿಸಿದ್ದಾರೆ. ಗೋವೆಯಲ್ಲಿ ಸಂತ ಕ್ಸೇವಿಯರ್ ನಡೆಸಿದ ಕ್ರೌರ್ಯ ಯಾರಿಗೆ ತಿಳಿಯದು ಹೇಳಿ? ಇಷ್ಟಿದ್ದರೂ ಅವನ್ನೆಲ್ಲ ಮರೆಮಾಚಿ, ಆ ಕ್ರೈಸ್ತಮತವನ್ನು ಹೆಚ್ಚೆಂದು ಬಿಂಬಿಸಿ, ನಮ್ಮ ಪ್ರಾಚೀನ ಪರಂಪರೆಯನ್ನು ಜರೆದಿರುವುದು ಸರಿಯಾ? ಇದೊಂದು ಗಮನಿಸಲೇಬೇಕಾದ ಸಂಗತಿ. ನಾವು ತಂತ್ರಜ್ಞಾನ ದಿನದಿಂದ ದಿನಕ್ಕೆ ಬದಲಾಗುವುದನ್ನು ನೋಡುತ್ತಾ ಇದ್ದೇವೆ. ನಿನ್ನೆ ಲ್ಯಾಪ್‌ಟಾಪ್, ಇಂದು ಪಾಟ್‌ಟಾಪ್. ಪುಸ್ತಕದ ಬದಲು ಕಿಂಡಲ್ ಅದು ಒಪ್ಪಬಹುದಾದದ್ದು. ಆದರೆ ಭಾರತದಲ್ಲಿ ಇತಿಹಾಸವೇ ಬದಲಾಗಿ ಬಿಡುತ್ತೆ. ಭಾರತವೆಂದರೆ ಏನೆಂದು ಅರಿಯದ ಬ್ರಿಟಿಷರು ಈ ದೇಶದ ಇತಿಹಾಸ ಮನಸ್ಸಿಗೆ ಬಂದಂತೆ ಬರೆದರು. ಆಮೇಲೆ ಮಾವೋ ಮದವೇರಿಸಿಕೊಂಡವರು, ಸಚ್ಚಿಂತನೆಗಳೆಲ್ಲ ಚೀನಾದಿಂದಲೇ ಹರಿದುಬಂದ ವೆಂಬಂತೆ ಭಾರತವನ್ನು ತೆಗಳಿದರು. ನಾವು ಅದೇ ವರ್ಣ ಪದ್ಧತಿಯ ಮನುಸ್ಮೃತಿ ಹಿಡಿದುಕೊಂಡು ಬಡಿದಾಡುತ್ತ ಉಳಿದರು. ನಮ್ಮ ಅಂಗಳದಲ್ಲಿಯೇ ನಿಂತುಕೊಂಡು ನಮ್ಮ ಮನೆಯನ್ನು ಬಯ್ದುಕೊಳ್ಳುವ ದೈನೇಸಿ ಸ್ಥಿತಿ ಉಂಟಾಯಿತು.

ಇದೇ ಪುಸ್ತಕದಲ್ಲಿ ೧೮೫೭ರ ಸಂಗ್ರಾಮದ ಕುರಿತಂತೆ ಬ್ರಿಟಿಷ್ ಇತಿಹಾಸಕಾರರು ಇದನ್ನು ಕೇವಲ ಸಿಪಾಯಿ ದಂಗೆ ಎಂದು ವರ್ಣಿಸಿದ್ದಾರೆ. ಭಾರತದ ಇತಿಹಾಸಕಾರರು ಇದನ್ನು ಭಾರತದ ಮೊದಲ ಸ್ವಾತಂತ್ರ್ಯ ಸಮರ ಎಂದು ಕರೆದಿದ್ದಾರೆ ಎಂದು ಹೇಳುತ್ತದೆ. ಆಮೇಲೆ ಇಡೀ ಪುಸ್ತಕದಲ್ಲಿ ಎಲ್ಲೂ ಇದನ್ನು ಸ್ವಾತಂತ್ರ್ಯ ಸಂಗ್ರಾಮ ಎಂದು ಸಂಬೋಧಿಸದೆ, ದಂಗೆ ಎಂದೇ ಮತ್ತೆ ಮತ್ತೆ ಕರೆದಿರುವುದರ ಔಚಿತ್ಯ ಯಾರಿಗೂ ಅರ್ಥವಾಗದ್ದು. ಬಹುಶಃ ನಮ್ಮ ಚರಿತ್ರೆಕಾರರ ತಲೆ ಕೆಟ್ಟಿರಬೇಕೆಂದು ಪಠ್ಯಪುಸ್ತಕ ರಚನೆಕಾರರು ನಿರ್ಧರಿಸಿರಬೇಕು. ಹೀಗಾಗಿ ಅವರಿಗೆ ಪಠ್ಯಪುಸ್ತಕದ ಉದ್ದಕ್ಕೂ ವಿದೇಶೀ ಅಥವಾ ಕಮ್ಯುನಿಸ್ಟ್ ಬುದ್ಧಿಯ ಸ್ವದೇಶಿ ಲೇಖಕರೇ ಮಾರ್ಗದರ್ಶಕರು. ಅದಕ್ಕೇ ಇಷ್ಟೆಲ್ಲ ಸಮಸ್ಯೆಗಳು.

**೮. ಪ್ರಾದೇಶಿಕ ಇತಿಹಾಸದ ನಿರ್ಲಕ್ಷ್ಯ**

ಜಾಗತಿಕ ಇತಿಹಾಸ ತಿಳಿದುಕೊಳ್ಳುವ ಮುನ್ನ, ಪ್ರಾದೇಶಿಕ ಸ್ಥಿತಿಗತಿಗಳ ಅವಲೋಕನವಾಗ ಬೇಕಾದದ್ದು ಅತ್ಯಗತ್ಯ. ಬಾಗಲಕೋಟೆಯ ವಿದ್ಯಾರ್ಥಿಗಳಿಗೆ ಹಲಗಲಿಯ ಬೇಡರೇ ಗೊತ್ತಿಲ್ಲವಾದರೆ ಹೇಗೆ? ಶಿವಮೊಗ್ಗದ ಮಕ್ಕಳು ನಗರದ ಕೋಟೆಯನ್ನೇ ನೋಡಿಲ್ಲವೆಂದರೆ ಸರಿಯೇ? ಉತ್ತರ ಕನ್ನಡದ ಶಾಲೆಗೆ ಹೋಗಿ ಮೀರ್ಜಾನ್ ಕೋಟೆಯ ಕಥೆ ಕೇಳಿ. ಅದು ಕರಿಯ ಚಲನಚಿತ್ರದ ಚಿತ್ರೀಕರಣ ನಡೆದ ಜಾಗ ಅನ್ನುತ್ತಾರೆ. ಇದಕ್ಕೇನು ಹೇಳುವುದು!? ೧೮೫೭ರ ಹೋರಾಟದಲ್ಲಿ ಸುರಪುರದ ವೆಂಕಟಪ್ಪ ನಾಯಕ ಹೋರಾಡಿದ ಜಾಗ ಅದು. ವೆಂಕಟಪ್ಪನಾಯಕನ ಮುಂದಿನ ಪೀಳಿಗೆಯ ರಾಜರು ಅಲ್ಲಿದ್ದಾರೆ. ಅವರು ಅಂದಿನ ದಿನಗಳಲ್ಲಿದ್ದ ನವಾಬರ, ರಾಜರುಗಳ ಇಂದಿನ ಪೀಳಿಗೆಯವರನ್ನು ಒಟ್ಟು ಸೇರಿಸಿ ಮಹತ್ವದ ಕಾರ್ಯಕ್ರಮವೊಂದಕ್ಕೆ ಭಾಷ್ಯ ಬರೆದಿದ್ದರು. ಅದಕ್ಕೂ ವರ್ಷ ಮೊದಲು, ಶಾಲೆ ಮಕ್ಕಳಿಗೆಂದೇ ಇತಿಹಾಸ ಮೇಳವನ್ನು ಅಲ್ಲಿನ ಮಿತ್ರರು

ಆಯೋಜಿಸಿದ್ದರು. ಆ ಮಕ್ಕಳು ತಮ್ಮ ಆಸುಪಾಸಿನ ಚಾರಿತ್ರಿಕ ಸ್ಥಳಗಳನ್ನು, ವ್ಯಕ್ತಿಗಳನ್ನು ಭೇಟಿ ಮಾಡಿ, ತಮ್ಮೂರಿನ-ತಮ್ಮ ಜನರ ಕುರಿತಂತೆ ಗೌರವ ತಾಳಿದರು. ಎಲ್ಲ ಕಡೆಯೂ ಹೀಗೆ ಆದರೆ ಅಷ್ಟು ಚೆಂದ ಅಲ್ಲವೆ?

ನಾವು ಇತ್ತೀಚೆಗೆ ವಿಜ್ಞಾನದ ಮಹತ್ವ ಕುರಿತಂತೆ ತುಂಬಾ ಗಮನಹರಿಸುತ್ತ ಇದ್ದೇವೆ, ಸರಿ. ಆದರೆ ಚರಿತ್ರೆಯನ್ನು ಅತ್ಯಂತ ಬೇಸರ ಮಾಡಿಬಿಟ್ಟಿದ್ದೇವೆ. ಅಷ್ಟೇ ಅಲ್ಲ, ಅದನ್ನು ತಿರುತಿರುಚಿ ಇತಿಹಾಸ ಪುರುಷರಿಗೆ ಮೈತುಂಬ ಅವಮಾನ ಮಾಡುತ್ತಿದ್ದೇವೆ. ಇವೆಲ್ಲವನ್ನು ಸರಿ ಮಾಡುವ ಯತ್ನಕ್ಕೆ ಯಾರಾದರೂ ಕೈಹಾಕಿದರೆ ಕೇಸರೀಕರಣ ಎಂದು ಆರೋಪ ಮಾಡುತ್ತಾರೆ. ಭಾರತದ ಚರಿತ್ರೆಯನ್ನು ಭಾರತಿಯರೇ ಬರೆಯೋದು, ಭಾರತೀಯರು ಓದೋದು ಬೇಡ ಅನ್ನಿಸುತ್ತದೆಯೇನು.[೨೭]

**೯. ಚರಿತ್ರೆಪಠ್ಯಗಳಲ್ಲಿ ಹಿಂದೂ ಅಥವಾ ಜನಾಂಗ ಶ್ರೇಷ್ಠತೆಯ ವಾದಗಳು**

ಜಗತ್ತಿನೆಲ್ಲೆಡೆಯ ಅಧಿಕಾರಾಕಾಂಕ್ಷಿ ಮೂಲಭೂತವಾದಿಗಳ ಬತ್ತಳಿಕೆಯಲ್ಲಿರುವ ಅತ್ಯಂತ ಶಕ್ತಿಶಾಲಿ ಅಸ್ತ್ರವೆಂದರೆ ಧರ್ಮಶ್ರೇಷ್ಠತೆ ಮತ್ತು ಜನಾಂಗ ಶ್ರೇಷ್ಠತೆಯ ಅಮಲು., ಮುಸಲೋನಿ, ಹಿಟ್ಲರ್‌ರಂಥವರ ಫ್ಯಾಸಿಸಂ, ನಾಝಿಸಂ ತತ್ವಗಳು ಬಳಸಿದ್ದು ಇದೇ ಅಸ್ತ್ರವನ್ನು. ನಮ್ಮ ದೇಶೀಯ ಹಿಂದುತ್ವವಾದಿಗಳ ಮೂಲ ಸಿದ್ಧಾಂತವೂ ಇದೇ ಬುನಾದಿಯ ಮೇಲೆ ನಿಂತಿದೆ. ಭಾರತದ ಸಮ್ಮಿಳಿತ ಸಂಸ್ಕೃತಿಯನ್ನು ನಿರಾಕರಿಸುವ ಇವರು ಅಖಂಡ ಭಾರತದಲ್ಲಿ ಆರ್ಯರೇ ಅತ್ಯಂತ ಶ್ರೇಷ್ಠರು, ಅವರ ವೈದಿಕ (ಹಿಂದೂ) ಧರ್ಮವೇ ಅತ್ಯಂತ ಶ್ರೇಷ್ಠ ಧರ್ಮವೆಂದು ಪ್ರತಿಪಾದಿಸುತ್ತಾರೆ. ಈ ಪ್ರತಿಪಾದನೆಗೆ ಬೆನ್ನೆಲುಬಾಗಿರುವುದು ಚಾರಿತ್ರಿಕ ಮಿಥ್ಯೆಗಳು ಮತ್ತಿತರ ಸಂಗತಿಗಳು. 'ಚರಿತ್ರೆಯು ಪ್ರಚಾರದ ಸಾಧನವಾಗಿದ್ದು ಅಂತಹ ಪ್ರಚಾರದಲ್ಲಿ ಹಿಂದೂ ರಾಷ್ಟ್ರಕ್ಕೆ ಸಂಬಂಧಪಟ್ಟ ವಿಷಯಗಳು ಮತ್ತು ಮುಸ್ಲಿಂ ದಾಳಿಕೋರರ ಜೊತೆಗಿನ ಸಂಘರ್ಷಗಳ ವಿವರಗಳಿರಬೇಕು' ಎನ್ನುತ್ತಾರೆ ಹಿಂದುತ್ವದ ಸಿದ್ಧಾಂತದ ಮೂಲಪುರುಷ ಸಾವರ್ಕರ್. ಇದೇ ಚಿಂತನೆಗಳ ಫಲವಾದ ಇತಿಹಾಸದ ತಿರುಚುವಿಕೆ, ಮೂಗಿನ ನೇರದ ವ್ಯಾಖ್ಯಾನ ಮತ್ತು ವೈಭವೀಕರಣಗಳೇ ಇವತ್ತು ನಾವು ಕಾಣುತ್ತಿರುವ ದೇಶಭಕ್ತಿಯ ಉದ್ದೀಪನ, ಕೋಮು ದುರಾಭಿಮಾನ ಮತ್ತು ಆನುಷಂಗಿಕ ಅಸಹನೆಯ ನಿರಂತರ ಪ್ರಜ್ವಲನೆಗೆ ಕಾರಣವಾಗಿವೆ. ಇದರ ಅಂತಿಮ ಗುರಿ ಅಲ್ಪಸಂಖ್ಯಾತರು, ದಲಿತರು, ಆದಿವಾಸಿಗಳು ಮೊದಲಾದವರೆಲ್ಲ ಎರಡನೇ ದರ್ಜೆಯ ಪ್ರಜೆಗಳಾಗಿರುವಂತಹ ಹಿಂದೂ ರಾಷ್ಟ್ರದ ನಿರ್ಮಾಣವಾಗಿದೆ.[೨೮]

**೧೦. ಪಠ್ಯಪುಸ್ತಕಗಳಲ್ಲಿ ಕೇಸರೀಕರಣದಂತಹ ವಿಷಯಗಳಿಗೆ ಆಸ್ಪದ**

ಕರ್ನಾಟಕ ರಾಜ್ಯದ ಪ್ರಜ್ಞಾವಂತ ಜನತೆ ನಿರೀಕ್ಷಿಸುತ್ತಿದ್ದಂತೆ ರಾಜ್ಯ ಬಿಜೆಪಿ ಸರ್ಕಾರವು ಶಾಲಾ ಪಠ್ಯಪುಸ್ತಕಗಳನ್ನು ಆರೆಸೆಸ್ಸಿನ ಮತಾಂಧ, ಜಾತಿವಾದಿ, ಪ್ರಗತಿ ವಿರೋಧಿ, ಕಂದಾಚಾರಿ ವಿಚಾರಗಳನ್ನು ತುರುಕುವ ಮೂಲಕ ಪಠ್ಯಪುಸ್ತಕಗಳನ್ನು ವಿಕೃತಗೊಳಿಸಿರುವ ಪ್ರಕರಣ ಬಯಲಾಗಿದೆ. ೨೦೧೨ರ ಶೈಕ್ಷಣಿಕ ವರ್ಷದಲ್ಲಿ ರಾಜ್ಯದಲ್ಲಿ ಜಾರಿಗೆ ಬಂದ ೫ನೇ ತರಗತಿಯ ಪಠ್ಯಪುಸ್ತಕದಲ್ಲಿ ಕೆಲವು ವಿಚಾರಗಳು ಕೇಸರೀಕರಣಕ್ಕೊಳಗಾಗಿವೆಂದು ರಾಜ್ಯಾದ್ಯಾಂತ ಚರ್ಚೆಗಳು ನಡೆದವು. ೫ನೇ ತರಗತಿಯ ಸಮಾಜ ವಿಜ್ಞಾನದ ಪಠ್ಯಪುಸ್ತಕದಲ್ಲಿ ಪುಟ ೬ರಲ್ಲಿ ಚೆನ್ನಮ್ಮ ಮತ್ತು

ಹೈದರಾಲಿಯ ನಡುವಿನ ಹೋರಾಟದಲ್ಲಿ ಟಿಪ್ಪುವನ್ನ ಶತ್ರುವೆಂದು ಚಿತ್ರಿಸಲಾಗಿದೆ. ಪುಟ ೬೭ರಲ್ಲಿ ಮರುಮತಾಂತರವನ್ನೇ ದೇಶದ ಪ್ರೇಮ, ತ್ಯಾಗವೆಂಬಂತೆ ವೈಭವೀಕರಿಸಲಾಗಿದೆ. ಹೀಗೆ ಇನ್ನೂ ಅನೇಕ ಉದಾಹರಣೆಗಳನ್ನು ಪಠ್ಯಪುಸ್ತಕದಲ್ಲಿ ಕಾಣಬಹುದಾಗಿದೆ.[೨]

ಶಿಕ್ಷಣದ ಪರಿಕಲ್ಪನೆ ಇಂದು ನಿನ್ನೆಯದಲ್ಲ. ಮಾನವನಿಗೆ ಯೋಚನಾಶಕ್ತಿ, ಕಲಿಯುವ ಕಾತರ, ಹುಡುಕುವ ತವಕ ಮೂಡಿಬಂದ ದಿನಗಳಿಂದ ಶಿಕ್ಷಣದ ಪ್ರಕ್ರಿಯೆ ಹುಟ್ಟಿ ಬೆಳೆಯುತ್ತಾ ಸಾಗಿದೆ. ಅಂದಿನಿಂದ ಇಂದಿನವರೆಗೆ ಅನೇಕ ಶಿಕ್ಷಣ ಪದ್ಧತಿಗಳು ಕಾಲಗರ್ಭದಲ್ಲಿ ಹುದುಗಿ ಇತಿಹಾಸ ಸೇರಿವೆ. ಅವುಗಳನ್ನೆಲ್ಲಾ ಅವಲೋಕಿಸಿದಾಗ ಕಲಿಯುವವರಲ್ಲಿ ಕಲಿಕೆಯನ್ನು ಮೂಡಿಸಿ ಶಾಶ್ವತಗೊಳಿಸುವುದೇ ಪ್ರಮುಖ ಗುರಿಯಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯಕ್ಕಿಂತ (೧೯೪೭) ಮೊದಲು ನಮ್ಮ ದೇಶದ ಶಿಕ್ಷಣ ವ್ಯವಸ್ಥೆಯತ್ತ ಕಣ್ಣು ಹಾಯಿಸಿದರೆ ನಮಗೆ ಮೊದಲು ಗೋಚರಿಸುವುದು 'ವೇದಗಳ ಕಾಲದ ಶಿಕ್ಷಣ' ಅಂದಿನ ಶಿಕ್ಷಣ ಗುರುಕುಲಗಳಲ್ಲಿ ನಡೆಯುತ್ತಿದ್ದು, ಅದು ಸಮಾಜದ ಕೆಲವೇ ವ್ಯಕ್ತಿಗಳಿಗೆ ಸೀಮಿತವಾಗಿತ್ತು. ಅಂದರೆ ಅಂದಿನ ಸಮುದಾಯದ ಮೇಲ್ವರ್ಗಗಳೆನಿಸಿಕೊಂಡ ಕ್ಷತ್ರಿಯರು, ಬ್ರಾಹ್ಮಣರು ಮತ್ತು ವೈಶಿಕರಲ್ಲಿ ಕೇವಲ ಪುರುಷರಿಗೆ ಮಾತ್ರ ಮೀಸಲಾಗಿತ್ತು. ಮಹಿಳೆಯರು ಮತ್ತು ಶೂದ್ರರು ಶಿಕ್ಷಣದಿಂದ ವಂಚಿತರಾಗಿದ್ದರು. ಕ್ಷತ್ರಿಯರಿಗೆ ಶಸ್ತ್ರಾಭ್ಯಾಸ, ಗಜಶಾಸ್ತ್ರ ಮತ್ತು ರಾಜನೀತಿಶಾಸ್ತ್ರಗಳು ಮೀಸಲಾಗಿದ್ದರೆ, ಬ್ರಾಹ್ಮಣರಿಗೆ ವೇದ ಮತ್ತು ಉಪನಿಷತ್ತುಗಳ ಅಧ್ಯಯನ ಹಾಗೂ ಪಠಣ ಹಾಗೂ ವೈಶಿಕರಿಗೆ ವಿಜ್ಞಾನ ಮತ್ತು ಗಣಿತಶಾಸ್ತ್ರ ಮೀಸಲಾಗಿತ್ತು. ಹೀಗೆ ಅಂದಿನ ಶಿಕ್ಷಣವು ನಿರ್ದಿಷ್ಟ ವ್ಯಕ್ತಿಗಳಿಗೆ, ನಿರ್ದಿಷ್ಟ ವಿಷಯಗಳಿಗೆ ಮಾತ್ರ ಸೀಮಿತಗೊಂಡಿತ್ತು. 'ಮನುಸ್ಮೃತಿ'ಯ ಪ್ರಕಾರ ಕೆಳಜಾತಿಯವರು ಮತ್ತು ಮಹಿಳೆಯರನ್ನು ಶಿಕ್ಷಣದಿಂದ ದೂರವಿಡಲಾಗಿತ್ತು. ಅವರು ಶಿಕ್ಷಣ ಪಡೆಯುವುದು ಅಪರಾಧವಾಗಿತ್ತು. ವೇದಗಳ ಕಾಲದ ಕೊನೆಗೆ ಈ ಕಟ್ಟುಪಾಡುಗಳಲ್ಲಿ ಸ್ವಲ್ಪ ಬದಲಾವಣೆಯಾಗಿ ಮಹಿಳೆಯರೂ ಶಿಕ್ಷಣ ಪಡೆಯುವ ಅವಕಾಶ ಕಲ್ಪಿಸಲಾಯಿತು.

ಬ್ರಿಟಿಷರು ಭಾರತಕ್ಕೆ ಬಂದ ಸಂದರ್ಭದ ಶಿಕ್ಷಣದಲ್ಲಿಯೂ ಯಾವ ಮಹತ್ತರವಾದ ಬದಲಾವಣೆಗಳೇನೂ ಸಂಭವಿಸಲಿಲ್ಲ. ಈ ಸಮಯದಲ್ಲಿ ಶಿಕ್ಷಣದ ಮೇಲಿನ ನಿರ್ಬಂಧಗಳು ಸ್ವಲ್ಪ ಸಡಿಲಗೊಂಡವಾದರೂ ಕೆಳವರ್ಗದವರು, ಮಹಿಳೆಯರು ಶಿಕ್ಷಣ ಪಡೆಯುವಲ್ಲಿ ಹೆಚ್ಚಿನ ಆಸಕ್ತಿ ತೋರಲಿಲ್ಲ. ಬ್ರಿಟಿಷರು ಶಿಕ್ಷಣ ಕ್ಷೇತ್ರದ ಮೇಲೆ ತಮ್ಮ ಹಿಡಿತ ಸಾಧಿಸಿದ ಮೇಲೆ ತಮ್ಮ ಆಡಳಿತಕ್ಕನುಗುಣವಾಗುವಂತಹ ಶಿಕ್ಷಣವನ್ನು ನೀಡಿದರು. ಆದರೆ ಅದು ಜನರಿಗಾಗಲೀ, ಜನಸಮುದಾಯದ ಏಳಿಗೆಗಾಗಲೀ ಸಹಕಾರಿಯಾಗಲಿಲ್ಲ.

೧೯೫೦ರಲ್ಲಿ ಸಂವಿಧಾನದ ಮೂಲಕ ನಮ್ಮ ದೇಶವು ಪ್ರಜಾಪ್ರಭುತ್ವದ ಆಶೋತ್ತರಗಳನ್ನು ಘೋಷಿಸಿಕೊಂಡು ಶಿಕ್ಷಣದ ಸಾರ್ವತ್ರೀಕರಣದ ಕನಸನ್ನು ಕಂಡಿತು. ಶಿಕ್ಷಣವು ಸಾರ್ವತ್ರೀಕರಣ ಗೊಳ್ಳದಿದ್ದರೆ 'ಮನುಷ್ಯರೆಲ್ಲ ಹುಟ್ಟಿನಿಂದ ಸಮಾನರು' ಎಂಬ ತತ್ವದ ಆಧಾರದ ಮೇಲೆ ರೂಪಿತಗೊಂಡ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಅರ್ಥವಿಲ್ಲವೆಂಬುದನ್ನು ತಿಳಿದ ಅಂದಿನ ರಾಷ್ಟ್ರನಾಯಕರು,

ತತ್ವಜ್ಞಾನಿಗಳು ಹಾಗೂ ಶಿಕ್ಷಣತಜ್ಞರು ಶಿಕ್ಷಣದ ಸಾರ್ವತ್ರೀಕರಣವನ್ನು ಸಾಧಿಸುವ ಗುರಿ ಹೊಂದಿದ್ದರು. ಇದರಿಂದ ಸಮುದಾಯದ ಎಲ್ಲಾ ಜನರಿಗೂ ಹೆಣ್ಣು-ಗಂಡು ಎಂಬ ಬೇಧವಿಲ್ಲದೇ(ಅವರಿಗೆ ಇಷ್ಟವಾದ) ಶಿಕ್ಷಣ ಪಡೆಯುವ ಅವಕಾಶ ದೊರೆಯಿತು. ಅಂದಿನಿಂದ ಇಂದಿನವರೆಗೆ ಸಮಾಜದ ಎಲ್ಲಾ ವರ್ಗದ ಜನರಿಗೆ ಶಿಕ್ಷಣ ದೊರೆಯುತ್ತಿದೆಯಾದರೂ ಇನ್ನೂ ನಾವು ತಲುಪಿಲ್ಲ. ಸರ್ಕಾರವು ೬-೧೪ ವಯೋಮಾನದ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ಪ್ರಯತ್ನಗಳಂತೂ ಮುಂದುವರಿಯುತ್ತಿವೆ.

ಪ್ರಸಕ್ತ ರಾಜ್ಯದಲ್ಲಿ ಒಟ್ಟು ೫೯,೪೨೮ ಪ್ರಾಥಮಿಕ ಶಾಲೆಗಳಿದ್ದು ಅಲ್ಲಿ ೧೭೫.೨೩ ಲಕ್ಷ ವಿದ್ಯಾರ್ಥಿಗಳು ಅಭ್ಯಾಸನಿರತರಾಗಿದ್ದಾರೆ.

| ಕ್ರ.ಸಂ. | ವಿವರ | ಒಟ್ಟು ಶಾಲೆಗಳು | ೧-೭ನೇ ತರಗತಿಯ ವಿದ್ಯಾರ್ಥಿಗಳು ಸಂಖ್ಯೆ(ಲಕ್ಷಗಳಲ್ಲಿ) |
|---|---|---|---|
| ೧. | ಸರ್ಕಾರಿ ಪ್ರಾಥಮಿಕ ಶಾಲೆಗಳು | ೪೫,೬೭೭ | ೪೩.೯೨ ಲಕ್ಷ |
| ೨. | ಅನುದಾನಿತ ಪ್ರಾಥಮಿಕ ಶಾಲೆಗಳು | ೨,೬೫೭ | ೬.೯೫ ಲಕ್ಷ |
| ೩. | ಅನುದಾನರಹಿತ ಪ್ರಾಥಮಿಕ ಶಾಲೆಗಳು | ೧೦,೨೫೨ | ೨೨.೩೬ ಲಕ್ಷ |
| ೪. | ಕೇಂದ್ರೀಯ ಮತ್ತು ಇತರೆ ಪ್ರಾಥಮಿಕ ಶಾಲೆಗಳು | ೧೧೯ | ೦೦.೩೯ ಲಕ್ಷ |
| ೫. | ಸ್ವಯಂ ಸೇವಾ ಸಂಸ್ಥೆ ಪ್ರಾಥಮಿಕ ಶಾಲೆಗಳು | ೭೨೩ | ೦೦. ೬೩ ಲಕ್ಷ |
| | **ಒಟ್ಟು** | **೫೯,೪೨೮** | **೧೭೫.೨೩ಲಕ್ಷ** |

ಪ್ರಜಾಪ್ರಭುತ್ವ ವ್ಯವಸ್ಥೆಯು ಜಾರಿಗೆ ಬಂದು ಐದು ದಶಕಗಳು ಕಳೆದರೂ, ನಮ್ಮಲ್ಲಿ ಇನ್ನೂ ಪಾಳೆಯಗಾರಿಕೆ ಸಮಾಜ ವ್ಯವಸ್ಥೆ(ಫ್ಯೂಡಲಿಸಂ)ಯ ಲಕ್ಷಣಗಳು ಮರೆಯಾಗಿಲ್ಲ. ಭೂಮಿ ಅಥವಾ ಆಸ್ತಿ ಕೆಲವೇ ಶ್ರೀಮಂತರ ಕೈಯಲ್ಲಿ ಕೇಂದ್ರೀಕೃತವಾಗಿದೆ. ಚಾಮರಾಜನಗರ, ಮಂಡ್ಯ, ಬಳ್ಳಾರಿ, ಕೋಲಾರ, ರಾಯಚೂರು ಹೀಗೆ ಅನೇಕ ಜಿಲ್ಲೆಗಳಲ್ಲಿ ಈಗಲೂ ಜಾರಿಯಲ್ಲಿರುವ ಪಾಳೆಯಗಾರಿಕೆ ಪದ್ಧತಿಯಿಂದ ಶಿಕ್ಷಣ ಕುಂಟಿತಗೊಳ್ಳುತ್ತಿದೆ. ಬಡತನವೆಂಬ ಮಾರಿಯು ಶಿಕ್ಷಣ ಕ್ಷೇತ್ರಕ್ಕೆ ಪೆಡಂಭೂತವಾಗಿ ಕಾಡುತ್ತಿದೆ.[೩೮] ಇದರೊಂದಿಗೆ ಪಕ್ಷ ರಾಜಕೀಯವು ಸೇರಿಕೊಂಡರೆ ಭವಿಷ್ಯದ ಸಮಾಜ ಶೈಕ್ಷಣಿಕವಾಗಿ ಅಧೋಗತಿಯನ್ನು ತಲುಪುತ್ತದೆ. ಈ ಹಿನ್ನೆಲೆಯಲ್ಲಿ ಇಷ್ಟೊಂದು ಮಾನವ ಸಂಪನ್ಮೂಲಕ್ಕೆ ಸರಿಯಾದ ಮಾರ್ಗದರ್ಶನ ತೋರಿಸಬೇಕಾದ ಅವಶ್ಯಕತೆ ಇದೆ.

ಆಡಳಿತಶಾಹಿಯ ಅಧಿಕಾರ ಕೇಂದ್ರೀಕರಣ ವ್ಯವಸ್ಥೆಯೂ ಸಹ ಶಿಕ್ಷಣಕ್ಷೇತ್ರಕ್ಕೆ ಅಡಿಗಲ್ಲಾಗಿದೆ. ಅಂದರೆ ಕೇಂದ್ರ ಸರ್ಕಾರವು ಎನ್.ಸಿ.ಇ.ಆರ್.ಟಿ. ಮೂಲಕ, ರಾಜ್ಯ ಸರ್ಕಾರವು ಡಿ.ಎಸ್.ಇ.ಆರ್.ಟಿ.

ಮೂಲಕ ಅವರ ಪರಿಕಲ್ಪನೆಗಳನ್ನು ಧರಿಸಿದ ಪಠ್ಯ ಚೌಕಟ್ಟು ರೂಪಿಸಿ ಸಿದ್ಧಪಡಿಸುತ್ತಿರುವುದು ಆಡಳಿತ ವ್ಯವಸ್ಥೆಯ ಪ್ರತಿರೂಪ. ಇತ್ತೀಚಿನ ಶಿಕ್ಷಣವು ಶಿಕ್ಷಕರಿಗೆ ಪ್ರತಿಬಂಧಕಾಜ್ಞೆಗಳನ್ನು ಹೇರುತ್ತಿದೆ. ಇದನ್ನೇ ಕಲಿಸಬೇಕು. ಹೀಗೇ ಕಲಿಸಬೇಕು, ಇಷ್ಟೇ ಕಲಿಸಬೇಕು, ಹೀಗೇ ಇರಬೇಕು ಎಂಬಿತ್ಯಾದಿ ಹೆಚ್ಚಿನ ಹೊರೆ ಶಿಕ್ಷಕನ ಮೇಲಿದೆ. ಆದರೆ ಕಲಿಸುವವರಿಗೆ ಕಲಿಸುವ ಕ್ರಿಯೆಯಲ್ಲಿನ ತಮ್ಮದೇ ಆದ ಸ್ವಾತಂತ್ರ್ಯಕ್ಕೆ ಕವಡೆ ಕಾಸಿನ ಕಿಮ್ಮತ್ತಿಲ್ಲದಂತಾಗಿದೆ. ಇಂದಿನ ಶಿಕ್ಷಣ ಶಿಕ್ಷಕರಿಗೆ ಕುದುರೆ ಲಗಾಮಿನಂತಾಗಿದೆ.

ಕೆಲವು ಶಿಕ್ಷರಲ್ಲಿ ಸಹ ಅಶಿಸ್ತಿನ ಪ್ರವೃತ್ತಿಗಳು ಮನೆಮಾಡಿವೆ. ಅಂದರೆ ಮಕ್ಕಳು ಮತ್ತು ಶಿಕ್ಷಕರ ನಡುವಿನ ಮುಕ್ತ ಸಂವಹನಕ್ಕೆ ಅವಕಾಶವಿಲ್ಲದಂತಾಗಿದೆ. ನಾವು ಮಕ್ಕಳನ್ನು ಪ್ರಶ್ನಿಸಲು ಬಿಡುತ್ತಿಲ್ಲ. ಅವರದೇ ಆದ ಕಲಿಕಾ ಸ್ವಾತಂತ್ರ್ಯವನ್ನು ನಾವು ಕಿತ್ತುಕೊಳ್ಳುತ್ತಿದ್ದೇವೆ. ಇಂದು ಮಗು-ಕೇಂದ್ರಿತ ಶಿಕ್ಷಣ ವ್ಯವಸ್ಥೆ ಜಾರಿಯಲ್ಲಿದೆ ಎಂದು ಹೇಳುತ್ತೇವೆ. ಆದರೆ ನಮ್ಮ ಎಷ್ಟು ಶಾಲೆಗಳಲ್ಲಿ ಮಕ್ಕಳಿಗೆ ಮುಕ್ತ ಅವಕಾಶಗಳನ್ನು ಕಲ್ಪಿಸಿದ್ದೇವೆ? ಶಿಸ್ತಿನ ಹೆಸರಿನಲ್ಲಿ ಮಕ್ಕಳ ವೈಯಕ್ತಿಕತೆ ಮತ್ತು ಸ್ವತಂತ್ರ ಮನೋಭಾವವನ್ನು ಕಸಿದುಕೊಳ್ಳುತ್ತಿದ್ದೇವೆ.

ಇಂದಿನ ಶಿಕ್ಷಣವು ಅನೇಕ ಮುಕ್ತ ಅವಕಾಶಗಳನ್ನು ಕಲ್ಪಿಸಿಕೊಡುತ್ತಿದೆ. ಆದರೆ ಅದನ್ನು ಕೊಡುವವರು ಮತ್ತು ಪಡೆದುಕೊಳ್ಳುವವರ ಮಧ್ಯೆ ಬಿರುಕು ಕಾಣಿಸಿಕೊಂಡಿದೆ. ಶಿಕ್ಷಣ ಪಡೆದುಕೊಳ್ಳುವುದು ಪ್ರತಿಯೊಬ್ಬರ ಹಕ್ಕು ಎಂದು ಹೇಳುತ್ತೇವೆ. ಆದರೆ ಶಿಕ್ಷಣ ಕೊಡಿಸುವುದು ಪ್ರತಿಯೊಬ್ಬರ ಕರ್ತವ್ಯವು ಹೌದು. ಅದನ್ನು ಸಮುದಾಯದ ಎಲ್ಲಾ ವರ್ಗವೂ ಅರಿತು, ಮಕ್ಕಳ ಇಷ್ಟಪಡುವಂತಹ ಮತ್ತು ಸಮಗ್ರ ಸಮುದಾಯಗಳ ಆಶೋತ್ತರಗಳನ್ನು ಪ್ರತಿನಿಧಿಸುವ, ವಾಸ್ತವಿಕ ತತ್ವಗಳಡಿಯಲ್ಲಿ ರೂಪಿತವಾದ ಶಿಕ್ಷಣ ನೀಡಬೇಕು. ಶಿಕ್ಷಣ ಕ್ಷೇತ್ರದಲ್ಲಿನ ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಗಳನ್ನು ಇನ್ನೊಬ್ಬರ ಮೇಲೆ ಹಾಕದೆ ತಾವೇ ನಿಭಾಯಿಸಿಕೊಂಡು ಹೋಗಬೇಕು. ನಾವಿಂದು ವಾಸ್ತವಿಕತೆಯನ್ನು ಮರೆತು ಆದರ್ಶಗಳಲ್ಲಿ ತೇಲಾಡುತ್ತಿದ್ದೇವೆ. ಆಕಾಶದಲ್ಲಿ ಹಾರಾಡುವ ಬದಲು ನಿಂತ ನೆಲವನ್ನು ತಿಳಿಯಲು ಪ್ರಯತ್ನಿಸಬೇಕು. ಶಿಕ್ಷಣದಲ್ಲಿ ಕನಸು ಕಾಣುವುದರ ಜೊತೆಗೆ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನವಾಗಬೇಕು. ಎಲ್ಲಿಯವರೆಗೆ ಪ್ರಾಥಮಿಕ ಶಿಕ್ಷಣ ಬಲವಾಗುವುದಿಲ್ಲವೋ ಅಲ್ಲಿಯವರೆಗೆ ದೇಶದ ಪ್ರಗತಿ ಕುಂಟುತ್ತಾ ಸಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

**ಟಿಪ್ಪಣಿಗಳು**

೧. ಬಿ.ಯು. ಕನ್ನಪ್ಪ, ಗ್ರಂಥಾಲಯ, ಪು. ೧೧೦.

೨. ಆರ್.ಜಿ. ಪ್ರಭು, ವಿಷಯಾಧಾರಿತ ಬೋಧನಾ ಪದ್ಧತಿ ಇತಿಹಾಸ ಮತ್ತು ಪೌರನೀತಿ, ಪು. ೨೨೨.

೩. ಅದೇ. ಪು. ೧೭೨.

೪. ಎನ್.ಬಿ. ಕೊಂದವಾಡ, ಇತಿಹಾಸ ಮತ್ತು ಪೌರನೀತಿ ಬೋಧನೆ, ಪು. ೧೮೧.

೫. ರಾಜೇಶ್ ಇ. ಬೆಳ್ಳೇರ, ಪಠ್ಯಕ್ರಮ ಸಂವಹನಾ ತತ್ವಗಳು, ಪು. ೨.

೬. ಆರ್.ಜಿ. ಪ್ರಭು, ವಿಷಯಾಧಾರಿತ ಬೋಧನಾ ಪದ್ಧತಿ ಇತಿಹಾಸ ಮತ್ತು ಪೌರನೀತಿ, ಪು. ೨೨೨.

೭. ಎಂ.ಸಿ. ಮೂರ್ತಿ, ವಿಷಯಾಧಾರಿತ ಬೋಧನಾಶಾಸ್ತ್ರ, ಇತಿಹಾಸ ಮತ್ತು ಪೌರನೀತಿ, ಪು. ೨೪೦.

೮. ಎನ್.ಆರ್. ಶಿವರಾಂ, ಡಾ. ಅಂಬೇಡ್ಕರ್ ದರ್ಶನ, ಪು. ೨೪೦.

೯. ಅದೇ. ಪು. ೨೧೪.

೧೦. ನೋಡಿ: ಎ.ವಿ. ವೆಂಕಟರತ್ನಂ ಮತ್ತು ಎಂ.ಬಿ. ಪದ್ಮ ಇತಿಹಾಸ ಸಂಶೋಧನಾ ಮಾರ್ಗ.

೧೧. ಎಂ.ಸಿ. ಮೂರ್ತಿ, ವಿಷಯಾಧಾರಿತ ಬೋಧನಾ ವಿಧಾನ ಇತಿಹಾಸ ಮತ್ತು ಪೌರನೀತಿ, ಪು. ೨೩೯.

೧೨. ಸಂದರ್ಶನ, ಸಿ.ಎಸ್. ದ್ವಾರಕನಾಥ, ೦೪.೧.೨೦೧೩.

೧೩. ಸಂದರ್ಶನ, ಎಸ್. ಮಂಚಯ್ಯ, ೨೩.೧೧.೨೦೧೨.

೧೪. ಕೆ. ಸದಾಶಿವ, ಪ್ರಾಚೀನ ಭಾರತ ಇತಿಹಾಸ, ಪು. ೨೧.

೧೫. ಡಿ.ಡಿ. ಕೊಸಾಂಬಿ, ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ, ಪು. ೨೯.

೧೬. ಎನ್.ಆರ್. ಶಿವರಾಂ, ಡಾ. ಅಂಬೇಡ್ಕರ್ ದರ್ಶನ, ಪು. ೧೬೭.

೧೭. ಆರ್.ಜಿ. ಪ್ರಭು, ವಿಷಯಾಧಾರಿತ ಬೋಧನಾ ಪದ್ಧತಿ ಮತ್ತು ಪೌರನೀತಿ, ಪು. ೧೬೬.

೧೮. ಅದೇ. ಪು. ೧೬೮.

೧೯. ಅದೇ. ಪು. ೧೬೯.

೨೦. ಎಂ.ಸಿ. ಮೂರ್ತಿ, ವಿಷಯಾಧಾರಿತ ಬೋಧನಾ ಶಾಸ್ತ್ರ, ಇತಿಹಾಸ ಮತ್ತು ಪೌರನೀತಿ, ಪು. ೨೦೭.

೨೧. ಅದೇ. ಪು. ೨೦೮.

೨೨. ನೋಡಿ: ಪ್ರವಾ. ಫೆ. ೨.೨೦೧೩ ಮತ್ತು ಪಠ್ಯ ರಾಜಕೀಯ, ಟಿ.ಎಂ. ಕುಮಾರ್, ಪಠ್ಯರಾಜಕೀಯ, ಜನಶಕ್ತಿ ಪತ್ರಿಕೆ, Monthly Archives: May 2013, ಸಂಪುಟ-೬, ಸಂಚಿಕೆ-೯, ದಿನಾಂಕ ಫೆಬ್ರವರಿ ೨೬, ೨೦೧೨.

೨೩. ಅದೇ. ಪತ್ರಿಕೆ.

೨೪. ಪ್ರಜಾವಾಣಿ ದಿನಪತ್ರಿಕೆ ದಿನಾಂಕ ೨-೨-೨೦೧೨, ಪು. ೬

೨೫. ಆರ್. ರಾಮಕೃಷ್ಣ, ಪಠ್ಯ ಬದಲಾವಣೆ, ಮುಗ್ಧ ಮನಸುಗಳಿಗೆ ವಿಷ ತುಂಬುವ ಯತ್ನ, ಸಂಪುಟ-೬, ಸಂಚಿಕೆ-೯, ಫೆಬ್ರವರಿ ೨೬, ೨೦೧೨, ಪು. ೨೯.

೨೬. ಮೂಲ: ಟೀಚರ್ಸ್ ಪ್ಲಸ್/ಕನ್ನಡಾನುವಾದ: ಜೈಕುಮಾರ್ ಮರಿಯಪ್ಪ.

೨೭. ಅದೇ, ನಮ್ಮ ಇತಿಹಾಸ ನಾವೇ ಬರೆದು ಓದೋದು ಬೇಡವೆ?

೨೮. ವೆಬ್ ಆವೃತ್ತಿ, ಇತಿಹಾಸ ಮತ್ತು ಶಿಕ್ಷಣಕ್ಷೇತ್ರದಲ್ಲಿ ಮೂಲಭೂತವಾದ ಸೋಮವಾರ, ಡಿಸೆಂಬರ್-೨, ೨೦೧೩.

೨೯. ನೋಡಿ: ಸಮಾಜ ವಿಜ್ಞಾನ ಪಠ್ಯಪುಸ್ತಕ, ೫ನೇ ತರಗತಿ, ಕರ್ನಾಟಕ ಸರ್ಕಾರ.

□□

ಅಧ್ಯಾಯ : ಮೂರು

# ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪುಠ್ಯಪುಸ್ತಕಗಳು

---


೩.೧. ಪ್ರಾಚೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೩.೨. ಮಧ್ಯಕಾಲೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

೩.೩. ಆಧುನಿಕ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪುಠ್ಯಪುಸ್ತಕಗಳು

೩.೪. ಶಾಲಾ ಪಠ್ಯ ರಚನೆಯ ಉಸ್ತುವಾರಿ ಮತ್ತು ರಾಜಕಾರಣ

ಅಧ್ಯಾಯ : ಮೂರು

# ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

**ಮು**ದ್ರಿತ ಪಠ್ಯಪುಸ್ತಕಗಳು ಯಾವಾಗ ಅಸ್ತಿತ್ವಕ್ಕೆ ಬಂದವು ಎಂದು ಹೇಳುವುದು ಕಷ್ಟ. ಆದರೆ ಮುದ್ರಣ ಯಂತ್ರ ಕಂಡು ಹಿಡಿದ ಜೋಹಾನ್ಸ್ ಗುಟೆನ್ಬರ್ಗ್ ತಾನು ಸ್ವತಃ ಆರ್ಸ್ ಮೈನರ್‌ನ ಸಂಪಾದಕತ್ವದ ಏಲಿಯಸ್ ಡೋನೇಟಸ್(Aelius Donatus)ನಿಂದ ಬರೆಯಲ್ಪಟ್ಟ ಲ್ಯಾಟಿನ್ ವ್ಯಾಕರಣದ ಆವೃತ್ತಿಗಳನ್ನು ವಿಶ್ವದಲ್ಲೇ ಮೊದಲ ಬಾರಿಗೆ ಮುದ್ರಣ ಮಾಡಿರಬಹುದು ಎಂದು ಹೇಳಲಾಗುತ್ತದೆ. ವಿಶ್ವದಲ್ಲಿ ಪ್ರಪ್ರಥಮ ಬಾರಿಗೆ ಪ್ರಾಚೀನ ಗ್ರೀಕರು ಶಿಕ್ಷಣದ ಉದ್ದೇಶಕ್ಕಾಗಿ ಹಲವು ಗ್ರಂಥಗಳನ್ನು ಬರೆದ ಉಲ್ಲೇಖಗಳಿವೆ. ಮುದ್ರಣಾಲಯಗಳು ಹೆಚ್ಚು ಅಸ್ತಿತ್ವಕ್ಕೆ ಬಂದಾಗಿನಿಂದ ಪಠ್ಯಪುಸ್ತಕಗಳು ತನ್ನ ಸ್ಪಷ್ಟ ಸ್ವರೂಪವನ್ನು ಪಡೆದುಕೊಂಡು ಜನಪ್ರಿಯವಾದವು. ಆರಂಭಿಕ ಪಠ್ಯ ಪುಸ್ತಕಗಳನ್ನು ಪ್ರಥಮಬಾರಿಗೆ ಮನೆಪಾಠ ಹೇಳುವವರು ಮತ್ತು ಶಿಕ್ಷಕರು ಬಳಸುತ್ತಿದ್ದರು. ಅವರು ಅವುಗಳನ್ನು ಮಾರ್ಗದರ್ಶನ ಸೂಚಕಗಳನ್ನಾಗಿ(ಉದಾ: ವರ್ಣಮಾಲೆಯ ಪುಸ್ತಕಗಳು) ಬಳಸುತ್ತಿದ್ದರು. ಕಾಲನಂತರ ಅವುಗಳನ್ನು ಅನೇಕರು ತಮ್ಮ ವಿಚಾರಗಳನ್ನು ಇತರರಿಗೆ ತಿಳಿಸಲು ಬಳಕೆ ಮಾಡುತ್ತಿದ್ದರು. ಕ್ರಿಪೂ. ೨,೫೦೦ ವರ್ಷಗಳ ಹಿಂದೆ ಗ್ರೀಕ್ ವರ್ಣಮಾಲೆಯ ಆವಿಷ್ಕಾರದ ಮೊದಲು, ಹೋಮರನ ಮಹಾಕಾವ್ಯಗಳನ್ನು(ಪುರಾಣ), ಜ್ಞಾನಕ್ಕೆ ಸಂಬಂಧಿಸಿದ ಅಂಶಗಳನ್ನು ಮತ್ತು ಕಥೆಗಳನ್ನು ಗಟ್ಟಿಯಾಗಿ ವಾಚಿಸಲಾಗುತ್ತಿತ್ತು. ಏಕೆಂದರೆ ಅಂದು ಅದೊಂದು ಜ್ಞಾನವನ್ನು ಹರಡುವ ಮಾಧ್ಯಮವಾಗಿತ್ತು. ಆದರೆ ಆ ಕಥೆಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಜನರಿಗೆ ಕಷ್ಟವಾಗುತ್ತಿತ್ತು. ಬರವಣಿಗೆಯ ಹೊಸ ತಂತ್ರಜ್ಞಾನ ಬರುವವರೆಗೆ ಈ ರೀತಿ ಜ್ಞಾನ ನಷ್ಟವಾಗುತ್ತಿತ್ತು. ಇದನ್ನು ಗುರುತಿಸಿದವರು ಗ್ರೀಕ್ ತತ್ವಜ್ಞಾನಿ ಸಾಕ್ರೆಟಿಸ್[೧](೪೬೯–೩೯೯ ಕ್ರಿ.ಪೂ.). ಗ್ರೀಕರ ನೆನಪಿನಲ್ಲಿಡುವ ಮಾನಸಿಕ ಸಾಮರ್ಥ್ಯಗಳನ್ನು ದುರ್ಬಲಗೊಳಿಸುವ ಭಯದಿಂದ ಅಭಿವೃದ್ಧಿಯಾಗ ಬೇಕೆಂದು ಆತ ಬಯಿಸಿದ್ದ. ಈ ಕುರಿತಂತೆ ಆತನ ವಿದ್ಯಾರ್ಥಿ ಪ್ಲೇಟೋ ಪ್ರಸಿದ್ಧ ಡೈಲಾಗ್ಸ್ ಎನ್ನುವ ಬರಹದಲ್ಲಿ ಸಾಕ್ರಟೀಸ್ ಈ ಕಾಳಜಿ ಬಗ್ಗೆ ಉಲ್ಲೇಖಿಸಿದ್ದಾನೆ.[೨]

ಲೋಹತಜ್ಞರಾದ ಜೋಹಾನ್ಸ್ ಗುಟೆನ್ಬರ್ಗ್‌ನಿಂದ ೧೫ನೇ ಶತಮಾನದಲ್ಲಿ ಬದಲಾಯಿಸಲಾಗದ ರೀತಿಯ ಮುದ್ರಣ ಯಂತ್ರವನ್ನು ಆವಿಷ್ಕಾರ ಮಾಡಿದ. ಇದರಿಂದ ಮುದ್ರಿತ ಪುಸ್ತಕಗಳಲ್ಲಿ ಕ್ರಾಂತಿ ಉಂಟಾಯಿತು. ಆತ ಮೊದಲಬಾರಿಗೆ ಏಕೈಕ ದೊಡ್ಡ ಪ್ರಮಾಣದ ಮುದ್ರಣ ಪ್ರಯತ್ನವನ್ನು ಕ್ರಿ.ಶ. ೧೪೫೦ರಲ್ಲಿ ಮಾಡಿದ. ಸಾಂಪ್ರದಾಯಿಕವಾಗಿದ್ದ ಹೀಬ್ರೂ ಭಾಷೆಯಲ್ಲಿದ್ದ ಹಳೆಯ

ಒಡಂಬಡಿಕೆ ಎನ್ನುವ ಬೈಬಲ್ ಪುಸ್ತಕವನ್ನು ಮುದ್ರಿಸಿದ. ಇದು ಗುಟೆನ್ಬರ್ಗ್ ಬೈಬಲ್ ಎಂದು ಹೆಸರಾಯಿತು. ಆ ನಂತರ ಗ್ರಂಥಗಳ ಸಮೂಹ ಉತ್ಪಾದನೆ ಆರಂಭವಾಯಿತು. ಇದರಿಂದಾಗಿ ಜ್ಞಾನ ಪಸರಿಸಿತು. ಅಲ್ಲದೆ ಮುಖ್ಯವಾಗಿ ಯುರೋಪಿಯನ್ ವ್ಯಾಪಾರಿ ಮಾರ್ಗಗಳು ಹೆಚ್ಚು ವಿಸ್ತೀರ್ಣ ಪಡೆದವು. ಆನಂತರ ೧೬ನೇ ಶತಮಾನದಲ್ಲಿ ಮುದ್ರಿತ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿದ್ದು ಅಲ್ಲದೆ ವ್ಯಾಪಕವಾಗಿ ಸುಲಭವಾಗಿ ಜನರಿಗೆ ದೊರೆತವು. ಯುರೋಪಿನಲ್ಲಿನ ಕಡ್ಡಾಯ ಶಿಕ್ಷಣ ಮತ್ತು ಶಾಲೆಗಳ ಬೆಳವಣಿಗೆ ಅಧಿಕವಾಗಿದ್ದರಿಂದ ಪುಸ್ತಕಗಳ ಮುದ್ರಣಕ್ಕೆ ಹೆಚ್ಚು ಒತ್ತು ಬಂದಿತು. ಇದರಿಂದ ಮಕ್ಕಳಿಗೆ ಅನೇಕ ಗುಣಮಟ್ಟದ ಗ್ರಂಥಗಳ ಮುದ್ರಣ ದೊರೆಯುವಂತೆ ಆಯಿತು. ಪಠ್ಯಪುಸ್ತಕಗಳು ೧೯ನೇ ಶತಮಾನದಲ್ಲಿ ಮಕ್ಕಳ ಪ್ರಾಥಮಿಕ ಬೋಧನಾ ಸಲಕರಣೆಗಳಾಗಿ ಮಾರ್ಪಟ್ಟಿವೆ. ಇದರಿಂದ ವಿಶ್ವದ ಅನೇಕ ದೇಶಗಳು ಶಿಕ್ಷಣದಲ್ಲಿ ಪಠ್ಯಪುಸ್ತಕಗಳಿಗೆ ಹೆಚ್ಚು ಆದ್ಯತೆಯನ್ನು ನೀಡಿವೆ. ಐತಿಹಾಸಿಕ ಮಹತ್ವ ಪಡೆದ ಎರಡು ಶಾಲಾ ಪಠ್ಯಪುಸ್ತಕಗಳು ನಮ್ಮ ಗಮನ ಸೆಳೆಯುತ್ತವೆ. ಅವುಗಳಲ್ಲಿ ಯುನೈಟೆಡ್ ಸ್ಟೇಟ್ಸ್‌ನ ೧೮ನೇ ಶತಮಾನದ ನ್ಯೂ ಇಂಗ್ಲೆಂಡ್ ಪ್ರೈಮರ್ (New England Primer) ಮತ್ತು ೧೯ನೇ ಶತಮಾನದ MC Guffey Readers ಪ್ರಥಮ ಶಾಲಾ ಪಠ್ಯಪುಸ್ತಕಗಳಾಗಿದ್ದು ಅತಿ ಮಹತ್ವ ಪಡೆದಿವೆ.[೩] ಆನಂತರದಲ್ಲಿ ನಡೆದ ತಾಂತ್ರಿಕ ಬೆಳವಣಿಗೆಗಳು ಜನರು ಪಠ್ಯಪುಸ್ತಕಗಳನ್ನು ಹೆಚ್ಚು ಅವಲಂಬಿಸುವಂತೆ ಮಾಡಿವೆ. ಸಂವಹನಕ್ಕಾಗಿ ಮತ್ತು ಜ್ಞಾನಕ್ಕಾಗಿ ಬಳಸಲ್ಪಡುವ ಪಠ್ಯಪುಸ್ತಕಗಳು ಇಂದು ಆನ್‌ಲೈನ್ ಮತ್ತು ಡಿಜಿಟಲ್ ಮಾದರಿಗಳಲ್ಲಿ ಹೆಚ್ಚೆಚ್ಚು ಸುಲಭವಾಗಿ ವಿದ್ಯಾರ್ಥಿಗಳಿಗೆ ದೊರೆಯುತ್ತವೆ. ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಇಂದು ವಿದ್ಯಾರ್ಥಿಗಳು ಎಲೆಕ್ಟ್ರಾನಿಕ್ ಮತ್ತು ಪಿಡಿಎಫ್ ಪುಸ್ತಕಗಳು, ಎಲೆಕ್ಟ್ರಾನಿಕ್ ಪ್ರಕಟಿಸಿದ ಪುಸ್ತಕ ಅಥವಾ ಇ-ಪುಸ್ತಕಗಳು ಸುಲಭವಾಗಿ ದೊರೆತು ಜ್ಞಾನ ಪ್ರಸಾರಕ್ಕೆ ಕಾರಣವಾಗಿದೆ.

ಪ್ರಾಚೀನ ಭಾರತದಲ್ಲಿ ಕೇವಲ ಹಸ್ತಪ್ರತಿಗಳನ್ನು ಇಲ್ಲವೇ ತಾಳೆಗರಿಗಳನ್ನು ಪಠ್ಯರಚನೆಗೆ ಅವಲಂಬಿಸಿದ್ದರು. ಅದರಲ್ಲೇ ಅವರು ತಮ್ಮ ವ್ಯಾಕರಣ, ವೇದ, ಉಪನಿಷತ್ ಮೊದಲಾದ ಸಾಹಿತ್ಯ ಕೃತಿಗಳನ್ನು ರಚಿಸಿದ್ದರು. ಆದರೆ ಆಧುನಿಕ ಯುಗದಲ್ಲಿ ಬ್ರಿಟಿಷರ ಪ್ರವೇಶದೊಂದಿಗೆ ಮತ್ತು ಮುದ್ರಣ ಯಂತ್ರಗಳ ಶೋಧನೆಯ ಫಲವಾಗಿ ಹಲವು ಕೃತಿಗಳನ್ನು ಮುದ್ರಿಸುವ ಪರಿಪಾಠ ಆರಂಭವಾಯಿತು. ಭಾರತದಲ್ಲಿ ಆರಂಭವಾದ ಆಧುನಿಕ ಶಿಕ್ಷಣ ಪದ್ಧತಿಯಿಂದಾಗಿ ಪಠ್ಯಪುಸ್ತಕಗಳಿಗೆ ಮತ್ತಷ್ಟು ಹೆಚ್ಚು ಮೌಲ್ಯ ಬಂದಿತು. ಅನಂತರ ಮುದ್ರಣಗೊಂಡ ಪಠ್ಯಪುಸ್ತಕಗಳು ಶಿಕ್ಷಣ ವ್ಯವಸ್ಥೆಯಲ್ಲಿ ಹಲವು ಬದಲಾವಣೆಗೆ ಕಾರಣವಾದವು.

ಮನುಷ್ಯನ ಹುಟ್ಟಿನಿಂದ ಆತ ಅಕ್ಷರ ಅಥವಾ ಬರವಣಿಗೆಯನ್ನು ಕಂಡುಕೊಳ್ಳುವವರೆಗಿನ ಕಾಲವನ್ನು ಇತಿಹಾಸಪೂರ್ವ ಕಾಲವೆಂದು ಕರೆಯಲಾಗುತ್ತದೆ. ಮನುಷ್ಯ ಅಕ್ಷರ/ಬರವಣಿಗೆಯನ್ನು ಕಂಡುಕೊಂಡ ನಂತರದ ಕಾಲವನ್ನು ಇತಿಹಾಸ ಕಾಲವೆಂದು ಸಾಮಾನ್ಯವಾಗಿ ಗುರುತಿಸಲಾಗುತ್ತದೆ. ಇತಿಹಾಸದ ಈ ಒಟ್ಟು ಕಾಲಾವಧಿಯನ್ನು ಭಾರತದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಪ್ರಾಚೀನ ಭಾರತ, ಮಧ್ಯಯುಗೀನ ಭಾರತ, ಆಧುನಿಕ ಭಾರತ ಎಂದು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ. ಈ ಕಾಲಘಟ್ಟಗಳಲ್ಲಿದ್ದ, ಚರಿತ್ರೆ ಪಠ್ಯಪುಸ್ತಕಗಳು ಮತ್ತು ಇಲ್ಲಿನ ಶಿಕ್ಷಣ

ಪದ್ಧತಿಗಳನ್ನು ಒಟ್ಟಾಗಿ ಸಂಕ್ಷಿಪ್ತವಾಗಿ ಅವಲೋಕಿಸಬೇಕಾದ ಅಗತ್ಯವಿದೆ. ಭಾರತದ ಇತರ ಪ್ರದೇಶಗಳಂತೆ ಕರ್ನಾಟಕದಲ್ಲಿ ಇಂದು ಅಸ್ತಿತ್ವದಲ್ಲಿರುವ ಶಿಕ್ಷಣ ಪದ್ಧತಿ ಇಂಗ್ಲೆಂಡಿನಿಂದ ಇಲ್ಲಿಗೆ ಆಗಮಿಸಿದ್ದು, ರಾಜಕೀಯ ಕಾರಣಗಳಿಂದಾಗಿ ಅದು ಇಲ್ಲಿ ಬೇರು ಬಿಟ್ಟು ಹೆಮ್ಮರವಾಗಿ ಬೆಳೆದುನಿಂತಿದೆ. ಎರಡೂವರೆ ಸಹಸ್ರ ವರ್ಷಗಳ ಹಿಂದಿನಿಂದಲೂ ಇಲ್ಲಿಯೇ ಇದ್ದ ದೇಶೀಯ ಶಿಕ್ಷಣ ಪದ್ಧತಿ/ಗುರುಕುಲ ಶಿಕ್ಷಣ ಪದ್ಧತಿ ಕಾಲಾನುಕ್ರಮದಲ್ಲಿ ಇಲ್ಲಿಯೇ ಬೆಳೆದು ತನ್ನ ಸುಪ್ರೌಢ ಸ್ವರೂಪವನ್ನು ಮುಟ್ಟಿತು. ಈ ಹಿನ್ನೆಲೆಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಇಲ್ಲಿ ಅಸ್ತಿತ್ವದಲ್ಲಿದ್ದ ಶಿಕ್ಷಣ ಪದ್ಧತಿ ಮತ್ತು ಅವುಗಳಲ್ಲಿನ ಪಠ್ಯಕ್ರಮ ಹಾಗೂ ಚರಿತ್ರೆ ಪಠ್ಯಕ್ರಮದ ಕುರಿತು ಇಲ್ಲಿ ಸಂಯುಕ್ತವಾಗಿ ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

### ೩.೧. ಪ್ರಾಚೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು (ಆರಂಭದಿಂದ–ಕ್ರಿ.ಶ. ೧೨೦೬ರವರಗೆ)

ಮೌರ್ಯರಿಂದ ಅರಬ್ಬರ ದಾಳಿಗಳವರೆಗಿನ ಕಾಲಘಟ್ಟವನ್ನು (ಆರಂಭದಿಂದ–ಕ್ರಿ.ಶ. ೧೨೦೬ರವರೆಗಿನ) ಭಾರತದಲ್ಲಿ ಪ್ರಾಚೀನ ಭಾರತ ಎಂದು ಗುರುತಿಸಲಾಗಿದೆ. ಈ ಅವಧಿಯಲ್ಲಿ ಮೌರ್ಯ, ನಂದರು, ಶಿಶುನಾಗರು (ಮಗದ ಸಾಮ್ರಾಜ್ಯ) ಶುಂಗರು, ಕುಶಾನರು, ಇಂಡೋಗ್ರೀಕರು, ಪರ್ಶಿಯನ್ನರು, ಗುಪ್ತರು, ಶಾತವಾಹನರು, ಚೇರರು, ಪಾಂಡ್ಯರು, ಕಂಚಿಯ ಪಲ್ಲವರು, ತಾಂಜಾವೂರಿನ ಚೋಳರು, ಬದಾಮಿ ಮತ್ತು ಪಶ್ಚಿಮ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಮೊದಲಾದ ರಾಜಮನೆತನಗಳು ಇಲ್ಲಿ ಆಳ್ವಿಕೆ ಮಾಡಿವೆ. ಅದರಂತೆ ವಿಶ್ವದ ಮೊದಲ ನಾಗರಿಕತೆಯಾದ ಸಿಂಧೂ ಬಯಲಿನ ನಾಗರಿಕತೆ ಇಲ್ಲಿ ಹುಟ್ಟಿ ಬೆಳೆದು ಅವಸಾನಗೊಂಡಿದೆ. ಅಲ್ಲದೆ ಗಂಗಾ ಬಯಲಿನಲ್ಲಿ ಎರಡನೇ ಬಾರಿಗೆ ಮಹಾಕಾವ್ಯಗಳ ಕಾಲದಲ್ಲಿ ನಗರೀಕರಣ ರೂಪುಗೊಂಡಿತು.[೪] ಭಾರತದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ರಚನೆಯಾಗಿದ್ದು ಇದೇ ಕಾಲಘಟ್ಟದಲ್ಲಿಯೇ. ಮಹಾಜನಪದಗಳು ಸಹ ಇಲ್ಲಿಯೇ ಅಸ್ತಿತ್ವದಲ್ಲಿದ್ದವು. ಅಲ್ಲದೇ ಇದೇ ಕಾಲದಲ್ಲಿ ಭಾರತದ ವೇದಗಳು ಪ್ರಚಾರಕ್ಕೆ ಬಂದವು. ಈ ಕಾಲಘಟ್ಟ ವೇದಗಳ ಕಾಲವೆಂದೇ ಚರಿತ್ರೆಯಲ್ಲಿ ಪ್ರಸಿದ್ಧಿಯಾಗಿದೆ.

ಭಾರತದಲ್ಲಿ ವೇದಗಳ ಕಾಲದಿಂದ ನಮಗೆ ಶಿಕ್ಷಣ ವ್ಯವಸ್ಥೆಯ ಪ್ರಥಮ ಉಲ್ಲೇಖಗಳು ದೊರೆಯುತ್ತವೆ. ಪ್ರಾಚೀನ ಕಾಲದಲ್ಲಿ ಶಿಕ್ಷಣವು ಅಗ್ರಹಾರ, ಬ್ರಹ್ಮಪುರಿ, ಘಟಿಕಾಲಯಗಳಲ್ಲಿ ನಡೆಯುತ್ತಿದ್ದವು. ತಕ್ಷಶಿಲಾ, ನಲಂದ, ವಲ್ಲಭೀ, ವಿಕ್ರಮಶೀಲಾ, ಒದಂತಪುರಿ ಮೊದಲಾದೆಡೆ ಪ್ರಾಚೀನ ವಿಶ್ವವಿದ್ಯಾಲಯಗಳಿದ್ದು, ಇಲ್ಲಿಗೆ ದೇಶ ವಿದೇಶಗಳಿಂದ ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರೆಂದು ಸಮಕಾಲೀನ ಆಧಾರಗಳು ಸ್ಪಷ್ಟಪಡಿಸುತ್ತವೆ. ಅಲ್ಲದೆ ಅಂದು ಕಾಶಿ, ಪ್ರಯಾಗ, ಹಸ್ತಿನಾಪುರ, ಶೃಂಗವೀರಪುರ, ಕುರುಕ್ಷೇತ್ರ, ಇಂದ್ರಪ್ರಸ್ತ, ಮಥುರಾ, ಪಟ್ನಾ, ಮಿಥಿಲ, ನಾಡಿಯ, ಎನ್ನಾಯಿರಮ್, ಕಂಚಿ, ವಡಗಾಂಮಾಧವಪುರ, ಸಾಲೋಟಗಿ, ತಾಳಗುಂದ, ಬನವಾಸಿ, ಹಂಪಿ, ಅಮರಾವತಿ, ಕೊಂಡವೀಡು, ಬನರಾಸ್ ಮೊದಲಾದ ಸ್ಥಳಗಳು ಅಂದು ಪ್ರಸಿದ್ಧಿ ಪಡೆದ ಶಿಕ್ಷಣ ಕೇಂದ್ರಗಳಾಗಿದ್ದವು. ಇಂಥ ಹಲವು ನೆಲೆ ಮತ್ತು ಕ್ಷೇತ್ರಗಳು ಇಂದಿಗೂ ಕರ್ನಾಟಕದಲ್ಲಿವೆ.

ಪ್ರಾಚೀನ ಭಾರತದ ವಿದ್ಯಾಭ್ಯಾಸ ಕ್ರಮವನ್ನು ಅಭ್ಯಾಸ ಮಾಡಲು ನಮಗೆ ವೇದಗಳು, ಸೂತ್ರಗಳು ಮತ್ತು ಕಾವ್ಯಗಳು ಹಾಗೂ ಬೌದ್ಧ ಕೃತಿಗಳು ಮತ್ತು ಕೆಲ ದೇಶಿ, ವಿದೇಶಿ ಆಕರಗಳು ನಮಗೆ ಸಹಾಯಕವಾಗಿವೆ. ಭಾರತೀಯರ ಇಂದಿನ ಜೀವನ ಮಟ್ಟ, ಮೌಲ್ಯಗಳು, ಪದ್ಧತಿಗಳು, ರೂಢಿ ಸಂಪ್ರದಾಯಗಳು, ಆಚಾರ-ವಿಚಾರಗಳು, ಶಿಕ್ಷಣ ಪದ್ಧತಿ ಪ್ರಾಚೀನ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿವೆ. ಮನುಷ್ಯನಿಗೆ ಜ್ಞಾನ, ತಿಳುವಳಿಕೆ, ಜೀವನ ಮೌಲ್ಯಗಳನ್ನು ಕಲಿಸಲೆತ್ನಿಸಿದ ಶಿಕ್ಷಣ ಎಲ್ಲಾ ಕಾಲದಲ್ಲೂ ತನ್ನದೇ ಆದ ಮಹತ್ವ ಪಡೆದುಕೊಂಡಿದೆ. ಭಾರತದ ಪ್ರಾಚೀನ ಕಾಲದಲ್ಲಿ ವೇದ ಶಿಕ್ಷಣ ಮತ್ತು ಬೌದ್ಧ ಶಿಕ್ಷಣ ಅತಿ ಪ್ರಮುಖ ಸ್ಥಾನ ಪಡೆದುಕೊಂಡು ಪ್ರಚಲಿತದಲಿದ್ದವು. ಈ ಹಿನ್ನೆಲೆಯಲ್ಲಿ ಭಾರತ ಮತ್ತು ಕರ್ನಾಟಕದಲ್ಲಿದ್ದ ಅಂದಿನ ಶೈಕ್ಷಣಿಕ ವ್ಯವಸ್ಥೆಯ ಕುರಿತು ಈ ಮುಂದೆ ವಿವರಿಸಲಾಗಿದೆ.

**೩.೧.೧. ವೇದಗಳ ಕಾಲದಲ್ಲಿ ಶಿಕ್ಷಣ**

ವಿದ್ಯಾರ್ಥಿ ತನ್ನ ೬-೭ನೇ ವಯಸ್ಸಿನಲ್ಲಿ ಉಪನಯನ, ಕರ್ಮಾಚರಣೆ ಪಡೆದ ನಂತರ ಗುರುಕುಲ ಆಶ್ರಮ ಸೇರಿ ಬ್ರಹ್ಮಾಚಾರಿ ಎನಿಸಿಕೊಂಡು ವಿದ್ಯಾರ್ಜನೆಯಲ್ಲಿ ತೊಡಗುತ್ತಿದ್ದ. ಅಲ್ಲಿ ಆತ ಕಠಿಣಕರ ನಿಯಮಗಳನ್ನು ಪಾಲಿಸುತ್ತಾ ಶಿಕ್ಷಣ ಪಡೆಯಬೇಕಿತ್ತು. ಸರಳ ಜೀವನ, ಜ್ಞಾನದ ಅರ್ಜನೆ ಬಹು ಮುಖ್ಯವಾದ ಅಂಶಗಳಾಗಿದ್ದವು. ಸುಮಾರು ೧೨ ವರ್ಷಗಳ ಕಾಲ ಗುರುವಿನ ಮಾರ್ಗದರ್ಶನದಲ್ಲಿ ಶಿಕ್ಷಣ ಪಡೆಯಬೇಕಾಗಿತ್ತು. ಅದು ಕೆಲವೊಮ್ಮೆ ಬಾಲಕನ ೩೨ ವರ್ಷಗಳವರೆಗೆ ಮುಂದುವರೆಯುತ್ತಿತ್ತು. ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು, ನದಿಯಲ್ಲಿ ಮಿಂದು ನಂತರ ವೇದಗಳ ಪಠಣ ಮಾಡಬೇಕಿತ್ತು. ಅನಂತರ ಆಶ್ರಮದ ಇತರೆ ಕೆಲಸಗಳನ್ನು ಮುಗಿಸಿ ಗುರುವಿಗೆ ಭಿಕ್ಷಾನ್ನ ಎತ್ತಲು ಹೋಗಬೇಕಿತ್ತು. ಅರಸು ಕುಮಾರರು, ಬ್ರಾಹ್ಮಣರಿಗೆ ಮಾತ್ರ ಅಂದು ಶಿಕ್ಷಣ ದೊರೆಯುತ್ತಿತ್ತು. ಅನಂತರ ಅದು ವೈಶ್ಯ ಮತ್ತು ಕ್ಷತ್ರಿಯರಿಗೆ ಲಭ್ಯವಾಯಿತಾದರೂ ಶೂದ್ರರು ಈ ಅವಕಾಶದಿಂದ ವಂಚಿತರಾದರು. ಅಂದು ೨ ಬಗೆಯ ಪಾಠ ಶಾಲೆಗಳಿದ್ದವು. ಅವುಗಳಲ್ಲಿ ಸಾಮಾನ್ಯವಾಗಿ ಬ್ರಾಹ್ಮಣರೇ ಉಪಾಧ್ಯಾಯರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು.[೫]

೧. ಚರುಕರ ಶಾಲೆಗಳು-ಊರಿಂದ ಊರಿಗೆ ಸಂಚರಿಸುವ ಕೆಲವು ಚರುಕರು (ಗುರುಗಳು/ಆಚಾರ್ಯರು) ಯಾವುದೇ ಫಲಾಪೇಕ್ಷೆ ಇಲ್ಲದೆ ಕಲಿಯುವ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು.

೨. ವೈಯಕ್ತಿಕ ಶಾಲೆಗಳು-ಗುರುಗಳು ನಡೆಸುತ್ತಿದ್ದ ಶಾಲೆಗಳಿಗೆ ವಿದ್ಯಾರ್ಥಿಗಳು ಸೇರಿ ಅಲ್ಲಿ ಉಪಾಧ್ಯಾಯರು ಅಪೇಕ್ಷಿಸಿದ ಗುರುಕಾಣಿಕೆ ನೀಡಿ ಅವರ ಮಾರ್ಗದರ್ಶನದಲ್ಲಿ ಶಿಕ್ಷಣ ಪಡೆಯುತ್ತಿದ್ದರು.

ಭಾರತೀಯ ತತ್ವ ಚಿಂತನೆಯಲ್ಲಿ ಪ್ರಾಚೀನ ಕಾಲದಿಂದಲೂ ಆಧ್ಯಾತ್ಮಕ್ಕೆ ಪ್ರಾಧಾನ್ಯವಿರುವುದು ಸರ್ವವಿದಿತವಾದ ಅಂಶ. ಆದ್ದರಿಂದಲೇ ಅಂದಿನವರ ಎಲ್ಲಾ ಕ್ಷೇತ್ರಗಳ ಸಾಧನೆಗೂ ಆಧ್ಯಾತ್ಮಿಕ ಆಶೋತ್ತರ ಹಿನ್ನೆಲೆಯೂ ಪ್ರೇರಕವೂ ಆಗಿರುವುದನ್ನು ಕಾಣಬಹುದು. ಆದ್ದರಿಂದಲೇ ಜ್ಞಾನಿಗಳು ತಪೋವನಗಳ ಆಶ್ರಮಗಳಲ್ಲಿ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಂಡಿದ್ದುದು. ಅನಂತರದ ದಿನಗಳಲ್ಲಿ ಗುರುಕುಲಗಳು ಆರಂಭವಾಗಿ ಗುರುಗಳು ತಮ್ಮ ಮನೆಯಲ್ಲಿ ಶಿಷ್ಯರಿಗೆ ಪಾಠ ಹೇಳುವುದು

ಆರಂಭವಾದ ಮೇಲೂ ಶಿಕ್ಷಣಕ್ಕೆ ಆಧ್ಯಾತ್ಮಿಕ ಹಿನ್ನೆಲೆ ಇದ್ದೇ ಇತ್ತು. ಅನಂತರ ಜೈನ, ಬೌದ್ಧ ಧರ್ಮಗಳು ಅಸ್ತಿತ್ವಕ್ಕೆ ಬಂದ ಮೇಲೆ ಅವೂ ತಮ್ಮ ಮನೆಯ ಕೇಂದ್ರಗಳಲ್ಲೇ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಂಡವು. ಮುಂದಿನ ಯುಗಗಳಲ್ಲಿ ಆ ಕಾರ್ಯವನ್ನು ಮಠಗಳೂ, ದೇವಾಲಯಗಳೂ ಕೈಕೊಂಡವು.

ಹಿಂದು, ಜೈನ ಮತ್ತು ಬೌದ್ಧ ಶಿಕ್ಷಣ ಪದ್ಧತಿಗಳಲ್ಲಿ ಶಿಕ್ಷಣದ ಉದ್ದೇಶ ವ್ಯಕ್ತಿಯ ಚಾರಿತ್ರ್ಯ ನಿರೂಪಣೆಗೆ ಪ್ರಥಮ ಪ್ರಾಶಸ್ತ್ಯವಿತ್ತಿವೆ. ಶಿಕ್ಷಣದಿಂದ ಸಿದ್ಧಿಸುವ ಜ್ಞಾನಾರ್ಜನೆಗೆ ಮನ್ನಣೆಯಿದ್ದರೂ ಅದಕ್ಕಿಂತ ಹೆಚ್ಚಿನ ಮನ್ನಣೆ ವ್ಯಕ್ತಿ ಸಾಧಿಸುವ ಶೀಲ ಸಂಪನ್ನತೆಗೆ ಮೀಸಲಾಗಿತ್ತು. ಮನುವಿನಂಥ ಆಚಾರಶೀಲ ಸ್ಮೃತಿಕಾರರು "ಮೂರು ವೇದಗಳಲ್ಲು ಪಾಂಡಿತ್ಯ ಸಾಧಿಸಿರುವ ಅವಗುಣಿಗಿಂತ ಅಷ್ಟಿಷ್ಟು ವೇದಾಧ್ಯಯನ ಮಾಡಿರುವ ಸದ್ಗುಣಿಯೇ ಹೆಚ್ಚು ಗೌರವಾನ್ವಿತನೆಂದು" ಸೂಚಿಸಿರುವುದು(ನೋಡಿ: ಆರ್.ಸಿ. ಮುಜುಂದಾರ್, ದಿ ವೇದಿಕ್ ಎಜ್ಯುಕೇಷನ್). ಈ ಉದ್ದೇಶ ಸಾಧನೆಗಾಗಿಯೇ ಪುರಾಣಗಳು, ಪುರಾಣ ಪುರುಷರು, ಜಾತಕ ಕಥೆಗಳು ಹಾಗೂ ತೀರ್ಥಂಕರರಂಥ ವ್ಯಕ್ತಿಗಳ ಜೀವನವನ್ನು ಅರಿತು ಆ ಆದರ್ಶಗಳನ್ನು ಅನುಸರಿಸಲು ಅವರು ಪ್ರಯತ್ನಿಸಬೇಕಾಗಿತ್ತು.

ಅನಾದಿ ಕಾಲದಿಂದಲೂ ಪವಿತ್ರವೂ, ಧರ್ಮ ಸಂಸ್ಕೃತಿಗಳ ಆಗರವೂ, ಅಪೌರುಷೇಯವೂ ಎಂದು ಪರಿಗಣಿತವಾಗಿರುವ ವೈದಿಕ ಸಾಹಿತ್ಯದ ಸಂರಕ್ಷಣೆ ಶಿಕ್ಷಣದ ಎರಡನೆಯ ಉದ್ದೇಶವಾಗಿತ್ತು. ಬರವಣಿಗೆ ಇನ್ನು ಅಸ್ತಿತ್ವಕ್ಕೇ ಬಾರದಿದ್ದ ತೀರ ಪ್ರಾಚೀನ ಕಾಲದಲ್ಲಿ ಆ ಸಾಹಿತ್ಯವನ್ನು ಒಬ್ಬರಿಂದೊಬ್ಬರು ಕಲಿತು ಅದನ್ನು ಶುದ್ಧ ಸ್ವರೂಪದಲ್ಲಿ ಮುಂದಿನ ಪೀಳಿಗೆಗೆ ವಹಿಸಿಕೊಡುತ್ತ ಹೋಗಬೇಕಾಗಿತ್ತು. ಋಣತ್ರಯಗಳರೊಂದಾದ ಈ ಕಾರ್ಯವನ್ನು ನಿರ್ವಹಿಸುವುದು ಸುಸಂಸ್ಕೃತ ಜನತೆಯ ಪವಿತ್ರ ಕಾರ್ಯವೆಂದು ಭಾವಿಸಲಾಗಿತ್ತು. ಬರವಣಿಗೆ ಅಸ್ತಿತ್ವಕ್ಕೇ ಬಂದು ಪವಿತ್ರ ಸಾಹಿತ್ಯವನ್ನು ಗ್ರಂಥಗಳಾಗಿ ಬರೆದಿಡುವುದು ಪ್ರಚಾರಕ್ಕೆ ಬಂದಂತೆ ಮೇಲಿನ ಶಿಕ್ಷಣದ ಉದ್ದೇಶ ಹಿಂಬದಿಗೆ ಸರಿಯುತ್ತ ಬಂತು. ವಿದ್ಯಾರ್ಥಿಗಳ ವ್ಯಕ್ತಿತ್ವ ನಿರೂಪಣೆಯ ಉದ್ದೇಶಕ್ಕೆ ಪ್ರಾಧಾನ್ಯತೆ ಬಂತು. ವ್ಯಕ್ತಿಗಳಲ್ಲಿ ಆತ್ಮಗೌರವ, ಆತ್ಮ ಸಂಯಮ, ಸ್ವಾವಲಂಬನೆ ಮುಂತಾದ ಲೋಕೋತ್ತರ ಗುಣಗಳ ನಿರೂಪಣೆ ಕಡೆ ಗಮನ ಕೊಡಲಾಗುತ್ತಿತ್ತು "ಈ ಉದ್ದೇಶ ಸಾಧನೆಗಾಗಿ ತತ್ವಶಾಸ್ತ್ರ, ತರ್ಕ, ಕಾವ್ಯ, ಮೀಮಾಂಸೆ, ಸಾಹಿತ್ಯ, ನಿರುಕ್ತ, ವ್ಯಾಕರಣ, ಗಣಿತ, ಯಾಂತ್ರಿಕ ಕಲೆಗಳು, ಜ್ಯೋತಿಷ ಮುಂತಾದ ತರ್ಕ ವಿದ್ಯೆಗಳು ಪಠ್ಯಕ್ರಮದಲ್ಲಿ ಸೇರಿಕೊಂಡವು".[೬] ಅವುಗಳ ಅಧ್ಯಯನದ ಮೂಲಕ ಉತ್ತಮ ವ್ಯಕ್ತಿತ್ವಕ್ಕೆ ಅಗತ್ಯವೆನಿಸಿವ ವಿವೇಚನೆ, ತೀರ್ಮಾನ, ಸಂವೇದನೆ, ಲೌಕಿಕ ಜೀವನದಲ್ಲಿ ಆರ್ಥಿಕ ಸ್ವಾವಲಂಬನೆ ಇವೆಲ್ಲ ಆದರಣೆಯ ವ್ಯಕ್ತಿತ್ವಕ್ಕೆ ಅಗತ್ಯವಾದ್ದರಿಂದ ಜೀವನೋಪಾಯಕ್ಕೆ ಅಗತ್ಯವೆನಿಸುವ ಕಸುಬು ಕಲೆಗಳೂ ಸೇರಿಕೊಂಡವು.

**ಪಠ್ಯಕ್ರಮ**

ಕ್ರಿಸ್ತಶಕದ ಪೂರ್ವದಲ್ಲಿ ಪ್ರಾಥಮಿಕ ಶಿಕ್ಷಣ ಹೇಗಿತ್ತೆಂದು ಊಹಿಸುವುದೂ ಕಷ್ಟವಾಗಿರುವಾಗ ಅದರ ಪಠ್ಯಕ್ರಮದ ಸ್ವರೂಪವನ್ನು ಗ್ರಹಿಸುವುದು ಇನ್ನೂ ಕಷ್ಟವೆನಿಸಿದೆ. ಬರವಣಿಗೆ ಇನ್ನೂ ರೂಪುಗೊಳ್ಳದಿರುವಾಗ ಬಹುಶಃ ತಿಥಿ, ಮಾಸ, ಸಂವತ್ಸರ, ಹಬ್ಬ, ಹುಣ್ಣಿಮೆ ಮುಂತಾದವುಗಳ

ಬಾಯಿಪಾಠವೂ, ಸಂಖ್ಯಾಪಠಣ ಮತ್ತು ಮಗ್ಗಿ ಮುಖ್ಯ ಪಠ್ಯಕ್ರಮವಾಗಿದ್ದಿರಬೇಕು. ಬರವಣಿಗೆ ರೂಪುಗೊಂಡು ಪ್ರಚಾರಕ್ಕೆ ಬಂದ ಮೇಲೆ ಅಕ್ಷರಾಭ್ಯಾಸ ಮೊದಲಾಗಿರಬೇಕು. ಮೊದಲು ಕೇವಲ ಶ್ಲೋಕಗಳನ್ನು ಪಠಿಸುವುದಕ್ಕೆ ಸೀಮಿತವಾಗಿತ್ತು. ಕಾಲಾಂತರದಲ್ಲಿ ವೇದಗಳು, ವ್ಯಾಕರಣ, ಸಂಸ್ಕೃತ, ತತ್ವಶಾಸ್ತ್ರ, ಧರ್ಮಶಾಸ್ತ್ರ, ವೈದ್ಯ ಅಂದಿನ ಪ್ರಮುಖ ಅಧ್ಯಯನದ ವಿಷಯಗಳಾಗಿದ್ದವು. ಅಂದು ಬಾಯಿಪಾಠವೇ ಪ್ರಧಾನವಾಗಿತ್ತು. ಮುದ್ರಣಾಲಯಗಳು ಇಲ್ಲದಿದ್ದರಿಂದ ಅಂದು ಸುಲಭವಾಗಿ ಪಠ್ಯಪುಸ್ತಕಗಳು ಪರಾಮರ್ಶನೆಗೆ ದೊರೆಯುತ್ತಿರಲಿಲ್ಲ. ಅಂದು ಮೈತ್ರೇಯಿ, ಗಾರ್ಗಿ, ಲೋಪಮುದ್ರೆ ಎನ್ನುವ ಮಹಿಳೆಯರು ಉತ್ತಮ ಶಿಕ್ಷಣ ಪಡೆದವರಾಗಿದ್ದರು. ಅವರು ಅನೇಕ ವಿದ್ವತ್‌ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ಕುರು-ಪಾಂಚಾಲ ಗೋಷ್ಠಿಯಲ್ಲಿ ಗಾರ್ಗಿ ವಹಿಸಿದ ಪ್ರಮುಖ ಪಾತ್ರವನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[೭]

### ೩.೧.೨. ಬೌದ್ಧರ ಕಾಲದ ಶಿಕ್ಷಣ ಮತ್ತು ಪಠ್ಯಪುಸ್ತಕ ಅವಲೋಕನ

ಕ್ರಿಪೂ. ೬ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಬೌದ್ಧ ಧರ್ಮ ಭಾರತದಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದೆ. ಅಂದಿನ ಶಿಕ್ಷಣ ಪದ್ಧತಿಯನ್ನು ತಿಳಿಯಲು ಜಾತಕ ಕಥೆಗಳು, ಬೌದ್ಧ ಕೃತಿಗಳು ನಮಗೆ ಮಾಹಿತಿ ನೀಡುತ್ತವೆ. ಭಿಕ್ಷು ಮತ್ತು ಭಿಕ್ಷುಣಿಯರು ಯಾವ ಭಿನ್ನತೆ ಇಲ್ಲದೆ ಸಮಾನವಾಗಿ ಶಿಕ್ಷಣ ಪಡೆಯುತ್ತಿದ್ದರು. ಇಲ್ಲಿ ಜಾತಿ, ಮತ, ಕುಲ, ಗೋತ್ರಗಳಿಗೆ ಪ್ರಾಮುಖ್ಯತೆ ಇರದೆ ಎಲ್ಲಾ ಜಾತಿಯವರಿಗೂ ವಿದ್ಯೆಗೆ ಅವಕಾಶ ಮಾಡಿಕೊಡಲಾಗಿತ್ತು. **ಪಬ್ಬಜ್ಜ ಅಥವಾ ಪ್ರಬ್ರಜ್ಯ** ಎಂಬ ಕರ್ಮಚಾರಣೆಯ ನಂತರ ವಿದ್ಯಾರ್ಥಿಗಳಿಗೆ ಶಿಕ್ಷಣ ಪಡೆಯಲು ಅವಕಾಶ ದೊರೆಯುತ್ತಿತ್ತು.[೮] ವೇದಗಳ ಕಾಲದಲ್ಲಿ ಪ್ರಮುಖವಾಗಿ ಗುರುಕುಲಗಳು ಶಿಕ್ಷಣ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದರೆ ಬೌದ್ಧ ಕಾಲದಲ್ಲಿ ವಿಹಾರಗಳೂ, ಸಂಘರಾಮಗಳು ಈ ಕಾರ್ಯವನ್ನು ನಿರ್ವಹಿಸುತ್ತಿದ್ದವು. ವಿದ್ಯಾರ್ಥಿ ಕಠಿಣಕರ ನಿಯಮಗಳನ್ನು ಪಾಲಿಸಿ ವಿದ್ಯೆ ಪಡೆಯಬೇಕಿತ್ತು. ಹನ್ನೆರಡು ವರ್ಷಗಳ ಶೈಕ್ಷಣಿಕ ಅವಧಿ ಮುಗಿದ ಮೇಲೆ ಅದರ ಮುಕ್ತಾಯದ ಸಂಕೇತವಾಗಿ **ಉಪಸಂಪದ** ಎನ್ನುವ ಕರ್ಮಾಚರಣೆ ನಡೆಯುತ್ತಿತ್ತು. ಎಲ್ಲಾ ವಿಷಯಗಳಲ್ಲೂ ಪಾರಂಗತರಾದ ಭಿಕ್ಷುವಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳು ಲಭ್ಯವಾಗುತ್ತಿದ್ದವು. ಅವರನ್ನು **ಬಹುಶ್ರುತ** ಎನ್ನುವ ಹೆಸರಿನಿಂದ ಕರೆಯಲಾಗುತ್ತಿತ್ತು.[೯] ಬೌದ್ಧ ಕಾಲದ ಶಿಕ್ಷಣ ಕ್ರಮಕ್ಕೂ ಮತ್ತು ವೇದಗಳ ಕಾಲದ ಶಿಕ್ಷಣ ಕ್ರಮಕ್ಕೂ ಮಹತ್ತರ ವ್ಯತ್ಯಾಸಗಳಿರಲಿಲ್ಲ. ವೇದಗಳ ಕಾಲದಲ್ಲಿ ಸಂಸ್ಕೃತಕ್ಕೆ ಪ್ರಧಾನ ಆದ್ಯತೆ ಇತ್ತು. ಆದರೆ ಬೌದ್ಧ ಶಿಕ್ಷಣ ಕ್ರಮದಲ್ಲಿ ಪಾಲಿ, ಪ್ರಾಕೃತ ಬಳಕೆಯನ್ನು ಹೆಚ್ಚು ಮಾಡುತ್ತಿದ್ದರು. ಆಶ್ರಮಗಳು ವೇದಗಳ ಶೈಕ್ಷಣಿಕ ಕೇಂದ್ರಗಳಾದರೆ, ಸಂಘರಾಮಗಳು, ವಿಹಾರಗಳು ಬೌದ್ಧ ಶೈಕ್ಷಣಿಕ ಕೇಂದ್ರಗಳಾದ್ದವು. ಅಂದು ಅಸ್ತಿತ್ವದಲ್ಲಿದ್ದ ನಲಂದ, ತಕ್ಷಶಿಲೆ, ಶ್ರಾವಸ್ತಿ, ಸಾರನಾಥ, ಅಯೋಧ್ಯೆ, ಪ್ರಯಾಗ, ಕನೂಜ್, ಪಾಟೀಲಿಪುತ್ರ, ಮಗಧ, ವಡಗಾಂ ಮಾಧವಪುರ, ರಾಜಘಟ್ಟ, ಬನವಾಸಿ, ನಾಗಾರ್ಜುನಕೊಂಡ, ಅಮರಾವತಿ ಕಾರ್ಲೆ, ಕನ್ಹೇರಿ ಮೊದಲಾದವು ಅವರ ಪ್ರಮುಖ ಶೈಕ್ಷಣಿಕ ಕೇಂದ್ರಗಳಾಗಿದ್ದವು.

**ಪಠ್ಯ ವಸ್ತು**

ಬೌದ್ಧರ ಧಾರ್ಮಿಕ ಗ್ರಂಥಗಳು ಅವರ ಪ್ರಮುಖ ಅಧ್ಯಯನ ವಿಷಯಗಳಾಗಿದ್ದವು. ಅವುಗಳೊಂದಿಗೆ ಸಂಸ್ಕೃತ, ವೇದಾಂಗಗಳು, ವ್ಯಾಕರಣ, ಕಲೆ, ಕುಶಲಕಲೆ, ವೈದ್ಯಕೀಯ, ಇತಿಹಾಸ, ಖಗೋಳ, ತರ್ಕಶಾಸ್ತ್ರ ಇನ್ನು ಮೊದಲಾದ ವಿಷಯಗಳನ್ನು ಕಲಿಸಲಾಗುತ್ತಿತ್ತು. ಕೌಟಿಲ್ಯ ಹೇಳುವಂತೆ ವೇಶ್ಯೆಯರು, ಸ್ತ್ರೀ ಗುಲಾಮರು ಹಾಗೂ ನಟಿಯರಿಗೆ ಲೌಕಿಕ ಶಿಕ್ಷಣ ನೀಡಲಾಗುತ್ತಿತ್ತು. ಇವುಗಳೊಂದಿಗೆ ಈ ಕಾಲದಲ್ಲಿ ಶೈಕ್ಷಣಿಕ ತಾಂತ್ರಿಕ ಮತ್ತು ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಹ ಅಂದು ಶಿಕ್ಷಣ ನೀಡಲಾಗುತ್ತಿತ್ತು. "ಚೀನಾದ ಬೌದ್ಧ ಯಾತ್ರಿಕ ಇತ್ಸಿಂಗನ ಪ್ರಕಾರ ಸಂಜೆಯ ಪ್ರದಕ್ಷಿಣೆಯ ನಂತರ ಭಿಕ್ಷುಗಳು ನಾಗಾರ್ಜುನನ ಸಹುಲ್ಲೇಖ, ಚಂದ್ರ ಸುಧಾನ, ಆಯುತಸೂರನ ಜಾತಕಮಾಲಾ, ಅಶ್ವಾಘೋಷ, ಬುದ್ಧ ಚರಿತೆ ಮುಂತಾದ ಕೃತಿಗಳನ್ನು ನಲಂದದಂತಹ ಬೌದ್ಧ ವಿಹಾರಗಳಲ್ಲಿ ಓದುತ್ತಿದ್ದರು"[೧೦] ನಾಗಾರ್ಜುನನ ಕೃತಿ ಮೂಲತಃ ಸಂಸ್ಕೃತದಲ್ಲಿದ್ದು ಅದನ್ನು ಟಿಬೆಟ್ ಹಾಗೂ ಇಂಗ್ಲೀಷ್ ಭಾಷೆಗಳಿಗೆ ಅನುವಾದಿಸಲಾಗಿದೆ. ಇಲ್ಲಿ ವಿದ್ಯಾರ್ಥಿಯು ತನಗೆ ಬೇಕಾದ ವಿಷಯಗಳನ್ನು ಸ್ವತಂತ್ರವಾಗಿ ಆಯ್ಕೆ ಮಾಡಿಕೊಳ್ಳಬಹುದಾಗಿತ್ತು. ಪಠ್ಯವಸ್ತುವನ್ನು ಎರಡು ರೀತಿಯಲ್ಲಿ ವಿಭಾಗಿಸಲಾಗಿತ್ತು. ಧಾರ್ಮಿಕ ಮತ್ತು ಭೌತಿಕ ಪಠ್ಯವಸ್ತುಗಳು ಅವುಗಳಾಗಿದ್ದವು. ಇವುಗಳಲ್ಲಿ ಕಲೆ, ಮಿಲಿಟರಿಯಲ್ಲಿ ಪಳಗಿಸುವಿಕೆಯ ತರಬೇತಿ, ಭೂಗರ್ಭಶಾಸ್ತ್ರ, ಬರೆಯುವಿಕೆ, ಅಂಕಗಣಿತ, ಧಾರ್ಮಿಕ ಚರ್ಚೆ ಹಾಗು ಸಾಹಿತ್ಯ, ವಾಣಿಜ್ಯ, ವ್ಯವಸಾಯ, ಕಲೆ, ನೂಲುವುದು, ಗಣಿತಶಾಸ್ತ್ರ (ಲೆಕ್ಕಶಾಸ್ತ್ರ), ತೈಲ ಚಿತ್ರಕಲೆ, ಶಸ್ತ್ರಚಿಕಿತ್ಸೆ, ತರ್ಕಶಾಸ್ತ್ರ, ಕಾಯ್ದೆ, ಚಿಕ್ಕ ಉದ್ದಿಮೆಗಳು, ಪಶುಪಾಲನೆ ಮುಂತಾದ ವಿಷಯಗಳು ಅಡಕಗೊಂಡಿದ್ದು, ಅವುಗಳನ್ನು ವ್ಯವಸ್ಥಿತವಾಗಿ ಉಪಾಧ್ಯಾಯರ ಮೂಲಕ ವಿದ್ಯಾರ್ಥಿಗಳಿಗೆ ಕಲಿಸಿಕೊಡಲಾಗುತ್ತಿತ್ತು. ಬೌದ್ಧ ಕಾಲದಲ್ಲಿ ಪಾಲಿ ಸಂಸ್ಕೃತ ಮುಂತಾದ ಭಾಷೆಗಳನ್ನು ಸಹ ಕಲಿಸುತ್ತಿದ್ದರು. ತಕ್ಷಶಿಲಾ ವಿಶ್ವವಿದ್ಯಾಲಯದಲ್ಲಿ ಜಾದೂ, ಮಂತ್ರ, ಯಕ್ಷಿಣಿ, ಬೇಟೆಯಾಡುವುದು, ಗಜವಿದ್ಯೆ, ಬಿಲ್ಲುವಿದ್ಯೆ, ಜ್ಯೋತಿಷ, ವೈದ್ಯಕೀಯ ವಿಷಯಗಳಲ್ಲಿ ಶಿಕ್ಷಣ ನೀಡಲಾಗುತ್ತಿತ್ತು. "ಈ ಕಾಲದಲ್ಲಿ ಬ್ರಾಹ್ಮಣ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಾಲ್ಕು ವೇದಗಳು, ಉಪನಿಷತ್ತುಗಳು, ಸಂಸ್ಕೃತ, ವೇದಾಂಗಗಳು, ಕಾವ್ಯ, ಇತಿಹಾಸ, ಪುರಾಣಗಳು, ವ್ಯಾಕರಣ, ಯೌಗಿಕ, ಜ್ಞಾನ, ಖಗೋಳಶಾಸ್ತ್ರ, ಸಂಗೀತ ಮುಂತಾದ ವಿಷಯಗಳು ಪಠ್ಯವಸ್ತುವಿನ ಮುಖ್ಯ ವಿಷಯಗಳಾಗಿದ್ದವು."[೧೧]

**೩.೧.೩. ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ ಪದ್ಧತಿ**

ಮೌರ್ಯ ವಂಶದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನು ಕ್ರಿಪೂ. ನಾಲ್ಕನೆಯ ಶತಮಾನದ ಕೊನೆಯ ವೇಳೆಗೆ ತನ್ನ ಗುರು ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಆಗಮಿಸಿದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಅವರೊಡನೆ ಜೈನಧರ್ಮದ ಪ್ರಚಾರಕ್ಕಾಗಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಜೈನ ಬಸದಿಗಳು ಆರಂಭವಾದುವು. ಆ ಮೂಲಕ ಶಿಕ್ಷಣಕ್ಕೆ ಧಾರ್ಮಿಕ ಮನ್ನಣೆಯೂ ದೊರಕಿತು. ನಂತರ ಇವನ ಮೊಮ್ಮಗನಾದ ಅಶೋಕ ಚಕ್ರವರ್ತಿ ಬೌದ್ಧ ಧರ್ಮವನ್ನು ಅವಲಂಭಿಸಿ ಅದರ ಪ್ರಚಾರಕ್ಕಾಗಿ ಕರ್ನಾಟಕದ ಮಸ್ಕಿ, ಕೊಪ್ಪಳ, ಬ್ರಹ್ಮಗಿರಿ,

ಸಿದ್ಧಾಪುರ ಮುಂತಾದ ಕಡೆ ಶಿಲಾಶಾಸನಗಳನ್ನು ಕೆತ್ತಿಸಿದನಷ್ಟೆ "ಸುವರ್ಣಗಿರಿ ಮತ್ತು ಇಸಿಲ ನಗರಗಳು ಕರ್ನಾಟಕದಲ್ಲಿ ಅವನ ಪ್ರಾದೇಶಿಕ ರಾಜಧಾನಿಗಳಾಗಿದ್ದವೆಂಬ ಅಂಶ ಅವುಗಳಿಂದ ತಿಳಿದು ಬರುತ್ತದೆ."[೧೨] ಬೌದ್ಧ ಧರ್ಮದೊಡನೆ ಅಂದು ಉತ್ತರದಲ್ಲಿ ಅಸ್ತಿತ್ವದಲ್ಲಿದ್ದ ಸಂಘರಾಮಗಳೂ, ವಿಹಾರಗಳೂ ಇಲ್ಲಿಗೆ ಆಗಮಿಸಿದವು. ಅವುಗಳ ನೇತೃತ್ವ ಹಾಗೂ ನಿಯಂತ್ರಣಗಳಲ್ಲಿ ಬೌದ್ಧ ಭಿಕ್ಷುಗಳ ಹಾಗೂ ಜನತೆಯ ಶಿಕ್ಷಣಕ್ಕೆ ವ್ಯವಸ್ಥೆ ಏರ್ಪಟ್ಟಿತು. ಕ್ರಮೇಣ ಅವು ಪ್ರಮುಖ ಶಿಕ್ಷಣ ಸಂಸ್ಥೆಗಳಾಗಿ ಕೆಲಸ ಮಾಡುತ್ತಿದ್ದವು. ಇವು ಜಾತಿ, ಮತ, ಪಕ್ಷ, ಪಂಗಡ, ಅಂತಸ್ತು, ಲಿಂಗ ಇವುಗಳ ಭೇದವೂ ಇಲ್ಲದೇ ಶಿಕ್ಷಣವನ್ನು ಒದಗಿಸುತ್ತಿದ್ದವು.

ಶಾತವಾಹನ ಅರಸರ ಅನಂತರ ಚುಟು ಕುಲದರಸರು ಕರ್ನಾಟಕದ ಬನವಾಸಿ ಪ್ರಾಂತದಲ್ಲಿ ಆಳುತ್ತಿದ್ದರು. "ಆ ಮನೆತನದ ಚುಟುಕುಲಾನಂದ ಶಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀ ಬನವಾಸಿಯಲ್ಲಿ ಒಂದು ವಿಹಾರವನ್ನು ಸ್ಥಾಪಿಸಿದಳೆಂಬ ಅಂಶ ಮಧುಕೇಶ್ವರ ದೇವಾಲಯದಲ್ಲಿ ರಕ್ಷಿಸಿಟ್ಟಿರುವ ನಾಗಶಿಲಾ ಶಾಸನ (೨ನೆಯ ಶತಮಾನ) ತಿಳಿಸುತ್ತದೆ. ನಮಗೆ ದೊರೆತಿರುವ ಸಾಕ್ಷ್ಯಾಧಾರಗಳ ಪ್ರಕಾರ ಇದು ಇಲ್ಲಿ ಆರಂಭವಾದ ಮೊಟ್ಟಮೊದಲನೆಯ ವಿಹಾರ."[೧೩] ಮಠಗಳಲ್ಲಿ ಪ್ರಾಥಮಿಕ ಹಾಗೂ ಉನ್ನತ ಶಿಕ್ಷಣಗಳೆರಡಕ್ಕೂ ಅವಕಾಶ ಇದ್ದು ವಿಹಾರಗಳು ಉನ್ನತ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿದ್ದವು. "ಶಿವಮೊಗ್ಗೆಯ ತಾಳಗುಂದವು ಒಂದು ಅಗ್ರಹಾರವಾಗಿದ್ದು ಕದಂಬರ ಮಯೂರಶರ್ಮನ ಅಜ್ಜ ಈ ಅಗ್ರಹಾರಕ್ಕೆ ಸೇರಿದ್ದವನಾಗಿದ್ದನು."[೧೪] ಪ್ರತಿಯೊಂದು ಅಗ್ರಹಾರದಲ್ಲಿಯೂ ಒಂದು ಶೈಕ್ಷಣಿಕ ಕೇಂದ್ರ ಇದ್ದು ಅಲ್ಲಿ ಒಬ್ಬ ಪಂಡಿತರು ಇರುತ್ತಿದ್ದರು. ಇಂಥ ಉಪಾಧ್ಯಾಯರು ಒಂದೊಂದು ಭಾಗದಲ್ಲಿ ಕೆಲವು ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಪಡೆದುಕೊಂಡಿದ್ದರು. ಹೆಚ್ಚಿನ ಪಾಂಡಿತ್ಯ ಪಡೆದುಕೊಂಡು ಮಕ್ಕಳಿಗೆ ಬೋಧಿಸುತ್ತಿದ್ದ ಪಂಡಿತರಿಗೆ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಅಂಥವುಗಳಲ್ಲಿ ಧಾರವಾಡ ಜಿಲ್ಲೆಯ ಗುಡಿಗೇರಿಯಲ್ಲಿ ೧೩, ರೋಣದಲ್ಲಿ ೮೪ ಮತ್ತು ನರಗುಂದದಲ್ಲಿ ೨೨೦ ಪಂಡಿತರಿದ್ದರು. ಬೌದ್ಧ ಧರ್ಮದ ಪ್ರಚಾರಕ್ಕಾಗಿ ಪ್ರಾಕೃತವನ್ನು ಹಾಗೂ ಜನರ ಆಡುಭಾಷೆಯನ್ನೂ ಬಳಸಿದುದರ ಫಲವಾಗಿ ಕನ್ನಡ ಅಕ್ಷರಾಭ್ಯಾಸ, ಕನ್ನಡ ಕಾವ್ಯ ಪಠನ ಇವು ಮೊದಲಾಗಿರಬೇಕು. ಮರಳಿನ ಮೇಲೆ ಬೆರಳಿನಲ್ಲಿ ತಿದ್ದಿ ಅಕ್ಷರಾಭ್ಯಾಸ ಮಾಡುತ್ತಿದ್ದರು. ಕಾಗುಣಿತ ಒತ್ತಕ್ಷರಗಳನ್ನು ಕಲಿತ ಮೇಲೆ ಓದುಗಾರಿಕೆ ಆರಂಭಿಸುತ್ತಿದ್ದರು. ಕನ್ನಡದಲ್ಲಿ ಕಾವ್ಯಗಳು ರಚನೆಯಾದಂತೆ ಕಾವ್ಯವಾಚನವೂ ಸೇರಿಕೊಂಡಿರಬೇಕು. ಹ್ಯುಯೆನ್ ತ್ಸಾಂಗನ ಕಾಲಕ್ಕೆ ಕಾವ್ಯವಾಚನದ ಜೊತೆಗೆ ಪದವಿ ಭಾಗ, ಅರ್ಥ ವಿವರಣೆ, ವ್ಯಾಕರಣ ಪಾಠ ಇವೂ ಸೇರಿಕೊಂಡಿರಬೇಕು. ಕ್ರಿ.ಶ. ಎರಡನೆಯ ಶತಮಾನದ ಅನಂತರ ಹಿಂದೂ ಧರ್ಮ ಪುನರುಜ್ಜೀವನಗೊಂಡ ಮೇಲೆ ಮತ್ತೆ ಸಂಸ್ಕೃತಕ್ಕೆ ಪ್ರಾಮುಖ್ಯತೆ ಬಂದು ಪ್ರಾಥಮಿಕ ಶಾಲೆಯಲ್ಲಿ ಸಂಸ್ಕೃತದ ಅಕ್ಷರಾಭ್ಯಾಸ, ಮೂಲ ವ್ಯಾಕರಣ, ಧ್ವನಿ ಪದ್ಧತಿಗಳು ಸೇರಿಕೊಂಡಿರಬೇಕು. ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಕರಣ, ವೇದಾಂಗ, ಆಗಮ, ಪುರಾಣ, ಕಾವ್ಯ, ನಾಟಕಗಳು ಸಾಮಾನ್ಯವಾಗಿದ್ದವು. ಇತರ ವಿಷಯಗಳಲ್ಲೂ ಅಧಿಕೃತ ಪಠ್ಯ ಗ್ರಂಥಗಳು ಬಳಕೆಯಲ್ಲಿದ್ದವು. ಕೋಡಿ ಮಠದಲ್ಲಿ ಭಾರತೀಯ ಷಡ್ದರ್ಶನಗಳು ಬೌದ್ಧ ದರ್ಶನಗಳೂ ಲಾಕುಲಗಳೂ ಯೋಗ ಸೂತ್ರಗಳು ವಿಶೇಷ ವಿಷಯಗಳಾಗಿದ್ದವು. "ಶಿವಮೊಗ್ಗ ಜಿಲ್ಲೆಯ

ಕುಪ್ಪತ್ತೂರು ಮಠದಲ್ಲಿ ವಾತ್ಸಾಯನನ ಕಾಮಸೂತ್ರ ವಿಶೇಷ ಅಧ್ಯಯನ ವಿಷಯವಾಗಿತ್ತು."[೧೫] ಸರ್ವಜ್ಞಪುರದಲ್ಲಿ ಭಾಷಾಶಾಸ್ತ್ರ ವಿಷಯಗಳಿಗೆ ಪ್ರಾಮುಖ್ಯವಿತ್ತು. ನಾಗಾಯಿ ಮಠದಲ್ಲಿ ಮನು ಧರ್ಮಶಾಸ್ತ್ರ, ಶುಕ್ರಶಾಸ್ತ್ರ, ವ್ಯಾಕರಣಶಾಸ್ತ್ರ, ಛಂದಸ್ಸು, ಕಾವ್ಯ ರಚನೆ ಇತ್ಯಾದಿಗಳು ಅಧ್ಯಯನದ ವಿಷಯಗಳಾಗಿ ಕಲಿಸಲ್ಪಡುತ್ತಿದ್ದವು.

ಕ್ರಿ.ಶ. ಹತ್ತನೆಯ ಶತಮಾನದವರೆಗೆ ವೃತ್ತಿ ಶಿಕ್ಷಣದ ಬಗ್ಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ಬೌದ್ಧ ವಿಹಾರಗಳಲ್ಲಿ ಜನೋಪಯುಕ್ತ ವೃತ್ತಿಗಳನ್ನು ಕಲಿಸುತ್ತಿದ್ದರೆಂಬ ಅಂಶಗಳ ಉಲ್ಲೇಖವೇನೋ ಇದೆ. ವೈದ್ಯಶಾಸ್ತ್ರ, ಯಂತ್ರಶಾಸ್ತ್ರಗಳನ್ನು ಅಲ್ಲಿ ಬೋಧಿಸುತ್ತಿದ್ದಂತೆ ತಿಳಿದುಬರುತ್ತದೆ. ಅವುಗಳ ಮೇಲ್ಪಂಕ್ತಿಯನ್ನು ಸರಿಸಿ ದೇವಾಲಯದ ವಿದ್ಯಾಪೀಠಗಳೂ ಅದನ್ನು ಅನುಕರಿಸಿವುದು ಸಂಭವವಿದೆ. ಮುಖ್ಯವಾಗಿ ಅವು ವೈದ್ಯ ವಿದ್ಯೆಯನ್ನು ಬೋಧಿಸುತ್ತಿದ್ದವು. ಕನ್ನಡ ಭಾಷೆಯ ಮೊಟ್ಟಮೊದಲ ವೈಜ್ಞಾನಿಕ ಗ್ರಂಥವೆಂದು ಪರಿಚಿತವಾಗಿರುವ ಶಿವಮಾರನ ಗಜಾಷ್ಟಕವೆಂಬ ಪಶುವೈದ್ಯ ಗ್ರಂಥ ಈ ಕಾಲದ್ದೆ. ದೇಶದಲ್ಲಿ ಆಗಾಗ ಕದನಗಳು ನಡೆಯುತ್ತಿದ್ದುದರಿಂದ ಆಳರಸರು ಯುದ್ಧ ಕಾರ್ಯಾಚರಣೆಗೆ ಸಂಬಂಧಿಸಿದ ಮರಗೆಲಸ, ಲೋಹದ ಕೆಲಸ, ಸೇನಾ ಶಿಕ್ಷಣ ಮುಂತಾದ ವಿದ್ಯೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು.

ಭಾರತದಲ್ಲಿ ಬೌದ್ಧ ಧರ್ಮವನ್ನು ಜನತೆಯಲ್ಲಿ ಪ್ರಚಾರ ಮಾಡುವ ಉದ್ದೇಶದಿಂದ ಕರ್ನಾಟಕಕ್ಕೆ ಆಗಮಿಸಿದ ಬೌದ್ಧ ಧರ್ಮದೊಂದಿಗೆ ಅಂದಿಗಾಗಲೇ ಅಸ್ತಿತ್ವದಲ್ಲಿದ್ದ ಸಂಘರಾಮಗಳು ವಿಹಾರಗಳೂ ಇಲ್ಲಿಗೆ ಆಗಮಿಸಿದವು, ಅವುಗಳ ನೇತೃತ್ವ ಹಾಗೂ ನಿಯಂತ್ರಣದಲ್ಲಿ ಬೌದ್ಧ ಭಿಕ್ಷುಗಳ ಹಾಗೂ ಜನತೆಯ ಶಿಕ್ಷಣಕ್ಕೆ ವ್ಯವಸ್ಥೆ ಏರ್ಪಟ್ಟಿತು. ಕ್ರಮೇಣ ಅವು ಪ್ರಮುಖ ಶಿಕ್ಷಣ ಕೇಂದ್ರಗಳಾಗಿ ಕೆಲಸ ಮಾಡುತ್ತಿದ್ದವು. ಉತ್ತರ ಭಾರತದಲ್ಲಿ ಪ್ರಚಾರದಲ್ಲಿದ್ದ ಮಠಗಳ ಮತ್ತು ವಿಹಾರಗಳ ಮಾದರಿಯಲ್ಲಿ ಕರ್ನಾಟಕದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಅವು ಅಸ್ತಿತ್ವಕ್ಕೆ ಬಂದವು. ಇವು ನಮ್ಮ ಸಾರ್ವಜನಿಕ ಶಿಕ್ಷಣಕ್ಕಾಗಿ ಏರ್ಪಟ್ಟ ಅತ್ಯಂತ ಪ್ರಾಚೀನತೆ ಶಿಕ್ಷಣ ಸಂಸ್ಥೆಗಳೆಂದು ಪರಿಗಣಿತವಾಗಿವೆ.

ಶಾತವಾಹನರ ಅರಸರ ನಂತರ ಚುಟು ಕುಲದರಸರು ಕರ್ನಾಟಕದ ಬನವಾಸಿ ಪ್ರಾಂತದಲ್ಲಿ ಆಳುತ್ತಿದ್ದರು. ಆ ಮನೆತನದ ಚುಟುಕುಲಾನಂದ ಶಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀ ಬನವಾಸಿಯಲ್ಲಿ ಬಂದು ವಿಹಾರವನ್ನು ಸ್ಥಾಪಿಸಿದಳೆಂಬ ಅಂಶ ಅಲ್ಲಿನ ಮಧುಕೇಶ್ವರ ದೇವಾಲಯದಲ್ಲಿ ರಕ್ಷಿಸಲ್ಪಟ್ಟಿರುವ ನಾಗಶಿಲಾ ಶಾಸನ ತಿಳಿಸುತ್ತದೆ ದೊರೆತಿರುವ ಸಾಕ್ಷ್ಯಾಧಾರಗಳ ಪ್ರಕಾರ ಇದು ಇಲ್ಲಿ ಆರಂಭವಾದ ಮೊಟ್ಟಮೊದಲ ವಿಹಾರ. ಮಠಗಳಲ್ಲಿ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣಗಳೆರಡಕ್ಕೂ ಅವಕಾಶ ಕಲ್ಪಿಸಿದ್ದರೂ ವಿಹಾರಗಳೂ ಉನ್ನತ ಶಿಕ್ಷಣಕ್ಕೆ ಮಾತ್ರ ಮೀಸಲಾಗಿದ್ದವು. ಏಳನೆಯ ಶತಮಾನದ ಎರಡನೆಯ ಪುಲಿಕೇಶಿಯ ಆಳ್ವಿಕೆಯ ಹೊತ್ತಿಗೆ ದೇಶದಲ್ಲಿ ಸುಮಾರು ನೂರು ವಿಹಾರಗಳು ಏರ್ಪಟ್ಟು ಅಲ್ಲಿ ನೂರಾರು ಯತಿಗಳು ಇದ್ದರೆಂಬ ಅಂಶ ಹೂಯೆನ್‌ತ್ಸಾಂಗನ ವರದಿಯಿಂದ ತಿಳಿದು ಬರುತ್ತದೆ. ವಿಹಾರಗಳು, ಮಠಗಳೂ ಸನ್ಯಾಸಿಗಳಿಗೆ ಧಾರ್ಮಿಕ ಶಿಕ್ಷಣವೀಯುವುದರ ಜೊತೆಗೆ, ಜನತೆಗೆ ಲೌಕಿಕ ಶಿಕ್ಷಣವನ್ನು ನೀಡುತ್ತಿದ್ದವು. ಏಳು ವರ್ಷದ

ಅನಂತರ ಕುಶಲವೃತ್ತಿ, ಜ್ಯೋತಿಷ, ಯಂತ್ರ ವಿಜ್ಞಾನ, ತರ್ಕ, ವೈದ್ಯ, ಮಂತ್ರ ಪ್ರಯೋಗ, ಆತ್ಮವಿಜ್ಞಾನ ಮುಂತಾದವನ್ನು ಕಲಿಯುತ್ತಿದ್ದರು. ಉನ್ನತ ಶಿಕ್ಷಣ ಪಡೆಯತಕ್ಕವರು ೨೦, ೨೨ ವರ್ಷ ವಯಸ್ಸಾಗುವವರೆಗೂ ಅಭ್ಯಾಸ ಮಾಡುತ್ತಿದ್ದರು.

ಕರ್ನಾಟಕದ ರಾಜಕೀಯ ಇತಿಹಾಸ ಕ್ರಿಪೂ. ಮೂರನೆಯ ಶತಮಾನದಿಂದ ಆರಂಭ ವಾಗುತ್ತದೆ. ಆದರೆ ಇಲ್ಲಿನ ಶೈಕ್ಷಣಿಕ ಇತಿಹಾಸ ಅದಕ್ಕೂ ಹಿಂದೆ ಹೋಗುತ್ತದೆ. ಕ್ರಿಪೂ. ನಾಲ್ಕನೆಯ ಶತಮಾನಕ್ಕೂ ಹಿಂದೆ ಶಿಕ್ಷಣ ಕೇವಲ ವೈಯಕ್ತಿಕ ಹೊಣೆಗಾರಿಕೆಯದಾಗಿದ್ದು, ಜ್ಞಾನಕ್ಕಾಗಿಯೇ ಜೀವನ ಮುಡುಪಾಗಿರಿಸಿದ್ದ ವಿದ್ವಜರೂ ಮಾತ್ರ ಹೇಳಿಕೊಡುತ್ತಿದ್ದರು.

## ೩.೨. ಮಧ್ಯಕಾಲೀನ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು (ಕ್ರಿ.ಶ. ೧೨೦೬–ಕ್ರಿ.ಶ. ೧೫೫೮ರವರೆಗಿನ)

ದೆಹಲಿ ಸುಲ್ತಾನರ ಕಾಲದಿಂದ ಮೊಘಲರ ಅಂತ್ಯದವರೆಗಿನ (ಯುರೋಪಿಯನ್ನರ ಆಗಮನದವರೆಗಿನ) ಕಾಲವನ್ನು (ಕ್ರಿ.ಶ. ೧೨೦೬–ಕ್ರಿ.ಶ. ೧೫೫೮) ಮಧ್ಯಯುಗೀನ ಕಾಲವೆಂದು ಕರೆಯಲಾಗುತ್ತದೆ. ಇಲ್ಲಿ ದೆಹಲಿ ಸುಲ್ತಾನರು, ಮೊಘಲರು ಪ್ರಧಾನವಾಗಿ ಆಳ್ವಿಕೆ ಮಾಡುತ್ತಾರೆ, ದಕ್ಷಿಣದಲ್ಲಿ ಹೊಯ್ಸಳರು, ವಿಜಯನಗರದ ಅರಸರು, ಬಹುಮನಿ ಸುಲ್ತಾನರು, ಮರಾಠರು ಇನ್ನು ಮೊದಲಾದವರು ಆಳ್ವಿಕೆ ಮಾಡುತ್ತಾರೆ. ಈ ಕಾಲಾವಧಿಯಲ್ಲಿ ಇತರೆ ಕ್ಷೇತ್ರಗಳು ಅಭಿವೃದ್ಧಿ ಹೊಂದಿದಂತೆ ಶಿಕ್ಷಣ ಕ್ಷೇತ್ರದಲ್ಲಿಯೂ ಕೆಲವು ಬದಲಾವಣೆಗಳು ಉಂಟಾದವು. ಹಿಂದಿನಿಂದ ನಡೆದುಕೊಂಡು ಬಂದಿದ್ದ ಶಿಕ್ಷಣ ಪರಂಪರೆಗೆ ಮಧ್ಯಯುಗದಲ್ಲಿ ಹಲವು ನೂತನ ಅಂಶಗಳು ಸೇರಿಕೊಂಡವೆನ್ನಬಹುದು. ಈ ಕಾಲಾವಧಿಯಲ್ಲಿ ಮುಸ್ಲಿಮರು ಹೊಂದಿದ ಹೊರನಾಡಿನ ಸಂಪರ್ಕದ ಫಲವಾಗಿ ಹಲವು ನೂತನ ಅಂಶಗಳು ಪಠ್ಯಕ್ರಮದಲ್ಲಿ ಸೇರಿಕೊಂಡವು. ಮಕ್ತಾಬ್ ಮತ್ತು ಮದರಸಗಳು ಅಂದಿನ ಶಿಕ್ಷಣ ಕೇಂದ್ರಗಳಾಗಿದ್ದವು. ದೆಹಲಿ, ಆಗ್ರಾ, ಫತೇಪುರಸಿಕ್ರಿ, ಅಲಹಾಬಾದ್, ಅಜ್ಮೀರ್, ಖಾನ್‌ದೇಶ್, ಮಲಬಾರ್, ಕಾಲಂಜರ್, ಕಾನ್ಪುರ, ಲಖ್ನೋ, ಮುಲ್ತಾನ್, ಲಾಹೋರ್, ಸಿಯಾಲ್ ಕೋಟೆ, ರಾಯಘಡ, ಮಧುರೆ, ವಾರಂಗಲ್, ಔರಂಗಬಾದ್, ಗೌರ್, ಥಟ್ಟಾ ಮೊದಲಾದವು ಅಂದಿನ ಪ್ರಮುಖ ಶಿಕ್ಷಣ ಕೇಂದ್ರಗಳಿದ್ದವು.

ಮಧ್ಯಯುಗದಲ್ಲಿ ಮುಸ್ಲಿಂ ಅರಸರ ಆಡಳಿತವೇ ಅಧಿಕವಾಗಿದ್ದರಿಂದ ಅಂದು ಅವರು ಆಡಳಿತದ ಎಲ್ಲಾ ಕ್ಷೇತ್ರಗಳನ್ನು ನೋಡಿಕೊಳ್ಳುತ್ತಿದ್ದರು. ಅದರಲ್ಲಿ ಅವರು ಶಿಕ್ಷಣಕ್ಕೂ ಆದ್ಯತೆಯನ್ನು ನೀಡಿ ಅದರ ಜೊತೆಗೆ ಮುಸ್ಲಿಂ ಧರ್ಮ ಪ್ರಚಾರ ಮಾಡುವ ಕೆಲಸ ಮಾಡುತ್ತಿದ್ದರು. ಈ ಅರಸರು ಪ್ರಮುಖವಾಗಿ 'ಮಕ್ತಾಬ್ ಮತ್ತು ಮದರಸ' ಎಂಬ ಎರಡು ಕೇಂದ್ರಗಳಲ್ಲಿ ಶಿಕ್ಷಣವನ್ನು ನೀಡುತ್ತಿದ್ದರು. ಮಕ್ತಾಬ್‌ಗಳು ಅಂದು ಪ್ರಾಥಮಿಕ ಶಿಕ್ಷಣವನ್ನು ನೀಡುತ್ತಿದ್ದ ಕೇಂದ್ರಗಳಾಗಿದ್ದವು. ಮದರಸಗಳು ಉನ್ನತ ಶಿಕ್ಷಣವನ್ನು ನೀಡುವ ಪ್ರಮುಖ ಕೇಂದ್ರಗಳಾಗಿದ್ದವು. ಅಂದು ಶಿಕ್ಷಣ ಪಡೆಯುವುದು ಮನುಷ್ಯನ ಮುಖ್ಯ ಕರ್ತವ್ಯ ಎಂದು ಭಾವಿಸಲಾಗಿತ್ತು. ಶಿಕ್ಷಣವು ಕುರಾನ್ ತತ್ವಗಳಿಗೆ ಅನುಗುಣವಾಗಿ ನಡೆಯುತ್ತಿತ್ತು. ಜೀವನದಲ್ಲಿ ಮೌಲ್ಯಗಳಿಗೆ ಆದ್ಯತೆ ನೀಡಬೇಕು ಎಂದು ಸಾಮಾನ್ಯ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮೌಲ್ವಿಗಳು ಮಸೀದಿ ಮತ್ತು ಮದರಸಾಗಳಲ್ಲಿ

ಶಿಕ್ಷಣ ನೀಡುತ್ತಿದ್ದರು. ಉನ್ನತ ವರ್ಗದವರು ಮತ್ತು ನೋಬಲರು ವಿಶೇಷ ಶಿಕ್ಷಣವನ್ನು ಅಂದು ಪಡೆದಿದ್ದರು. ದೆಹಲಿ ಸುಲ್ತಾನರು ಮತ್ತು ಮೊಘಲ್ ದೊರೆಗಳು ಮತ್ತು ಉನ್ನತ ಅಧಿಕಾರಿಗಳು ಶಿಕ್ಷಣದ ಅಭಿವೃದ್ಧಿಗೆ ಬೇಕಾದ ಕ್ರಮಕೈಗೊಂಡರು. ಶಿಕ್ಷಣ ಪಡೆದವರು ಎಲ್ಲಾ ಕಡೆ ಗೌರವ ಸ್ಥಾನಗಳನ್ನು ಹೊಂದಿದ್ದರು. ನ್ಯಾಯಾಧೀಶರು, ಸೈನಿಕ ಕಮಾಂಡರ್, ಆಡಳಿತಾಧಿಕಾರಿಗಳು, ಮಂತ್ರಿ ಹುದ್ದೆಗಳನ್ನು ಉನ್ನತ ಶಿಕ್ಷಣ ಪಡೆದವರಿಗೆ ನೀಡಲಾಗುತ್ತಿತ್ತು. ಮುಸ್ಲಿಂ ಶಿಕ್ಷಣದಿಂದ ಅನೇಕ ಹಿಂದುಗಳು ಆಕರ್ಷಿತರಾದರು ಮತ್ತು ಜೀವನದ ಪ್ರಾಯೋಗಿಕತನ ಅರಿಯಲು ಆ ಶಿಕ್ಷಣ ಪಡೆಯಲು ಮುಂದಾದರು. ಅಂದು ತಾಂತ್ರಿಕ ಮತ್ತು ವೃತ್ತಿ ಆಧಾರಿತ ಶಿಕ್ಷಣಕ್ಕೂ ಆದ್ಯತೆ ನೀಡಲಾಗುತ್ತಿತ್ತು ಎಂದು ಕೆಲವು ವಿದ್ವಾಂಸರು ಗುರುತಿಸಿದ್ದಾರೆ.

ಅಂದು ಕಾರ್ಖಾನೆಗಳು ಎಂದು ಕರೆಯುವ ಕೇಂದ್ರಗಳ ಮೂಲಕ ತಾಂತ್ರಿಕ ಮತ್ತು ಕರಕುಶಲ ತರಬೇತಿಯನ್ನು ಉತ್ತಮ ಶಿಕ್ಷಕರ ಮೂಲಕ ನೀಡಲಾಗುತ್ತಿತ್ತು. ಈ ತರಬೇತಿಯನ್ನು ಉಚಿತವಾಗಿ ನೀಡಲಾಗುತ್ತಿತ್ತು. ಆದರೂ ಶಿಕ್ಷಣ ಪಡೆದವರು ಅಂದು ನಡೆಯುತ್ತಿದ್ದ ಧಾರ್ಮಿಕ ಕಾರ್ಯಕ್ರಮಗಳಲ್ಲಿ ತಮಗೆ ಇಷ್ಟವಾದ ಕಾಣಿಕೆಗಳನ್ನು ತರಬೇತಿದಾರರು ಮತ್ತು ಶಿಕ್ಷಕರಿಗೆ ನೀಡುತ್ತಿದ್ದರು. ಅಂದು ಹಿಂದೂಗಳು ಸಹಾ ಉತ್ತಮ ಶಿಕ್ಷಣ ಪಡೆಯುತ್ತಿದ್ದರು. ಪ್ರಧಾನವಾಗಿ ಅಂದು ನಗರ ಮತ್ತು ಗ್ರಾಮಗಳಲ್ಲಿ ಅಸ್ತಿತ್ವದಲ್ಲಿದ್ದ ಪಾಠಶಾಲೆಗಳಲ್ಲಿ ಮತ್ತು ಅದಕ್ಕಾಗಿ ನಿಗದಿಯಾಗಿದ್ದ ಕೆಲವು ಮನೆಗಳಲ್ಲಿ, ಮನೆಯ ಮುಂಭಾಗದಲ್ಲಿ, ಮರಗಳ ಕೆಳಗಡೆ ಶಿಷ್ಯರಿಗೆ ಗುರುಗಳು ಶಿಕ್ಷಣವನ್ನು ಹೇಳಿಕೊಡುತ್ತಿದ್ದರು. ಅಂದು ಯಾವುದೇ ನಿಗದಿತ ಶುಲ್ಕವಿರಲಿಲ್ಲ. ಶಿಷ್ಯರು ಗುರುಗಳ ಸೇವೆಯನ್ನು ಮಾಡುವ ಮೂಲಕ ಮತ್ತು ಕೆಲವು ದವಸ ಧಾನ್ಯ, ಇಲ್ಲವೇ ಕಾಣಿಕೆಗಳನ್ನು ನೀಡುವ ಮೂಲಕ ತಮ್ಮ ಶಿಕ್ಷಣವನ್ನು ಪಡೆಯುತ್ತಿದ್ದರು. ತೂಕ ಮತ್ತು ಅಳತೆ, ಅಂಕಗಣಿತವನ್ನು ಅಂದು Elementary ಶಿಕ್ಷಣದಲ್ಲಿ ಕಡ್ಡಾಯವಾಗಿ ಕಲಿಸಲಾಗುತ್ತಿತ್ತು. ಇವುಗಳೊಂದಿಗೆ ಸಾಹಿತ್ಯ, ಹಿಂದೂ ಪುರಾಣ, ನೈತಿಕ ಮತ್ತು ಧಾರ್ಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಕೆಲವು ಪಾಠಶಾಲೆಗಳಲ್ಲಿ ಸರಸ್ವತಿಯನ್ನು ಪೂಜಿಸುವ ಪರಿಪಾಠವಿತ್ತು.

**೩.೨.೧. ಪಠ್ಯಕ್ರಮ**

ಮಧ್ಯಕಾಲೀನ ಭಾರತದಲ್ಲಿ ಮಕ್ತಾಬ್‌ಗಳಲ್ಲಿ ಹೆಚ್ಚಾಗಿ ಓದುವುದು, ಬರೆಯುವುದು, ಗಣಿತ ಹಾಗೂ ಕುರಾನಿನ ಕೆಲವು ಭಾಗಗಳನ್ನು ಹೆಚ್ಚಾಗಿ ಅಳವಡಿಸಲಾಗಿತ್ತು. ಈ ವಿಷಯವನ್ನು ಅಧ್ಯಯನ ವಸ್ತುವಾಗಿ ಪರಿಗಣಿಸಿ ಬೋಧನೆಯನ್ನು ಮಾಡುತ್ತಿದ್ದರು. ಅಲ್ಲದೆ ಇವುಗಳ ಜೊತೆಗೆ ಪರ್ಷಿಯನ್ ಭಾಷೆ, ಸಾಹಿತ್ಯ, ಪತ್ರಲೇಖನ, ಅರ್ಜಿ ಲೇಖನಗಳನ್ನು ಕಳುಹಿಸಲಾಗುತ್ತಿತ್ತು. ಚರಿತ್ರೆಯನ್ನು ಮಕ್ತಾಬ್‌ಗಳಲ್ಲಿ ಪ್ರತ್ಯೇಕ ಅಧ್ಯಯನದ ವಿಷಯವಾಗಿ ಕಲಿಸುತ್ತಿರಲಿಲ್ಲ, ಆದರೆ ಸಾಹಿತ್ಯದ ಒಂದು ಭಾಗವಾಗಿ ಚರಿತ್ರೆಯನ್ನು ಇಲ್ಲಿ ವಿದ್ಯಾರ್ಥಿಗಳು ತಿಳಿಯುತ್ತಿದ್ದರು.

ಇನ್ನು ಮದರಸಗಳಲ್ಲಿ ಹೆಚ್ಚಾಗಿ ಸರ್ಕಾರದ ಅನುದಾನ ಹಾಗೂ ಜಹಗೀರುಗಳು ದೊರೆಯುತ್ತಿದ್ದರಿಂದ ಅಲ್ಲಿ ಧರ್ಮ ಪ್ರಚಾರ ಹೆಚ್ಚಾಗಿ ನಡೆಯುತ್ತಿತು. ಏಕೆಂದರೆ ಮುಸ್ಲಿಂ ಶಿಕ್ಷಣದ ಗುರಿಗಳಲ್ಲಿ ಧಾರ್ಮಿಕ ಪ್ರಚಾರವು ಒಂದು ಪ್ರಧಾನ ಗುರಿಯಾಗಿತ್ತು. "ಅದರ

ಜೊತೆಗೆ ಸೂಫಿ ತತ್ವಜ್ಞಾನ, ಅಕ್ಬರನ ಕಾಲದಲ್ಲಿ ವೈದ್ಯಕೀಯ, ಇತಿಹಾಸ, ಭೂಗೋಳ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ತತ್ವಶಾಸ್ತ್ರ, ಜ್ಯೋತಿಷ, ಕಾನೂನು ಮತ್ತು ಗಣಿತದ ವಿಷಯಗಳು ವಸ್ತುಗಳಾಗಿದ್ದವು."[೧೬] ಒಟ್ಟಾರೆಯಾಗಿ ಮಧ್ಯಕಾಲಿನ ಭಾರತದಲ್ಲಿ ಪ್ರಾಥಮಿಕ ಹಂತದಲ್ಲಿ ಚರಿತ್ರೆಯನ್ನು ಒಂದು ಪ್ರತ್ಯೇಕ ಅಧ್ಯಯನದ ವಿಷಯವಾಗಿ ವಿದ್ಯಾರ್ಥಿಗಳು ಅಭ್ಯಾಸ ಮಾಡದೇ ಹೋದರೂ ಉನ್ನತ ಹಂತದಲ್ಲಿ ಮದರಸಗಳಲ್ಲಿ ಚರಿತ್ರೆಯನ್ನು ಒಂದು ಪ್ರತ್ಯೇಕ ವಿಷಯವಾಗಿ ಅಭ್ಯಾಸ ಮಾಡುತ್ತಿದ್ದರು ಎಂಬುದು ಕಂಡು ಬರುತ್ತದೆ.

### ೩.೨.೨. ಮಧ್ಯಕಾಲೀನ ಕರ್ನಾಟಕದ ಶಿಕ್ಷಣ ವ್ಯವಸ್ಥೆ

ಸುಮಾರು ಒಂದೂವರೆ ಸಹಸ್ರ ವರ್ಷಗಳ ಹಿಂದೆ ಆರಂಭವಾಗಿ ಕ್ರಮೇಣವಾಗಿ ಪ್ರಗತಿ ಸಾಧಿಸುತ್ತ ಬಂದ ಕರ್ನಾಟಕ ಶಿಕ್ಷಣ ಪರಂಪರೆ ಹನ್ನೆರಡು–ಹದಿಮೂರನೆಯ ಶತಮಾನಗಳ ವೇಳೆಗೆ ಪ್ರಬುದ್ಧ ಸ್ವರೂಪವನ್ನು ತಾಳಿತ್ತು. ಹೊಯ್ಸಳರ ಕಾಲದ ಶಾಂತಿ ಸಮೃದ್ಧಿಗಳೂ ಆಗ ನಿರ್ಮಿತವಾದ ಭವ್ಯ ಕಲಾಕೃತಿಗಳೂ, ಸಾಹಿತ್ಯ ಕೃತಿಗಳೂ, ಇದಕ್ಕೆ ಸಾಕ್ಷಿಯಂತಿದ್ದವು. ಆದರೆ ಅವನ ಆಳ್ವಿಕೆಯ ಕೊನೆಗಾಲಕ್ಕೆ ಸಂಭವಿಸಿದ ಮುಸಲ್ಮಾನರ ದಾಳಿಯಿಂದ ಈ ಪರಂಪರೆಗೆ ಅಡ್ಡಿಯಾಯಿತು. ಮತಾಂಧತೆಯ ಹುಮ್ಮಸ್ಸಿನಿಂದ ದಾಳಿಕಾರರು ಅನೇಕ ಹಿಂದೂ ದೇವಾಲಯಗಳನ್ನೂ, ಮಠಗಳನ್ನೂ ಪಾಳ್ಗೆಡವಿದರೆಂದು ತಿಳಿಯುತ್ತದೆ. ಅದರ ಫಲವಾಗಿ ಅವು ನಡೆಸುತ್ತಿದ್ದ ಶಿಕ್ಷಣ ಸಂಸ್ಥೆಗಳು ಮುಚ್ಚಿಹೋದವು. ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣ ಸೌಲಭ್ಯ ಅಷ್ಟಿಷ್ಟು ಉಳಿದುಕೊಂಡು ಮುಂದುವರಿಯುತ್ತಿತ್ತು. ಹದಿನಾಲ್ಕನೆಯ ಶತಮಾನದಲ್ಲಿ ಅವರ ದಾಳಿ ದಕ್ಷಿಣದ ರಾಮೇಶ್ವರದವರೆಗೂ ಮುಂದುವರೆದು ಇಡೀ ಕರ್ನಾಟಕದ ಜನಜೀವನ ಕ್ಷೋಭೆಗೀಡಾಯಿತು. ಇದರಿಂದ ಸಾಮಾನ್ಯ ಜನತೆಗಿದ್ದ ಶಿಕ್ಷಣ ಸೌಲಭ್ಯವೂ ಅಸ್ತವ್ಯಸ್ತವಾಯಿತು, ಹೊಯ್ಸಳ ರಾಜ್ಯದ ಪತನದ ನಂತರ ವಿದ್ಯೆಗೆ ಪ್ರೋತ್ಸಾಹವಿಲ್ಲವಾಯಿತು. ದಾಳಿಗೆ ಸಿಕ್ಕಿ ಹಾಳಾದ ಶಿಕ್ಷಣ ಸಂಸ್ಥೆಗಳನ್ನು ಪುನರುಜ್ಜೀವನಗೊಳಿಸಲು ಪ್ರೋತ್ಸಾಹ ಇಲ್ಲವಾಯಿತು. ಉಳಿದಿದ್ದ ಹಿಂದೂ ರಾಜ್ಯಗಳೂ ಪತನವಾದಾಗ ಇಲ್ಲಿನ ಧರ್ಮ ಸಂಸ್ಕೃತಿಗೆ ವಿನಾಶಕಾಲವೊದಗಿತೆಂಬ ಭೀತಿ ಜನತೆಯಲ್ಲಿ ಆವರಿಸಿತ್ತು. ಮುಂದಿನ ಗತಿ ಏನು ಎಂದು ನಾಡಿನ ನಾಯಕರು ತೀವ್ರವಾಗಿ ಆಲೋಚಿಸುತ್ತಿದ್ದರು. ಇದರ ಫಲವಾಗಿ ಕರ್ನಾಟಕದ ಸಂಸ್ಕೃತಿ ಸಂಪ್ರದಾಯಗಳನ್ನು ಸಂರಕ್ಷಿಸಬಲ್ಲ ಪ್ರಬಲ ಸಾಮ್ರಾಜ್ಯವೊಂದರ ಉದಯಕ್ಕೆ ಕಾರಣವಾಯಿತು. ಹದಿನಾಲ್ಕನೆಯ ಶತಮಾನದ ದ್ವಿತೀಯ ಪಾದದಲ್ಲಿ ಕರ್ನಾಟಕ ಧರ್ಮ ಸಂಸ್ಕೃತಿಗಳ ಸಂರಕ್ಷಣೆಗೆಂದು ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದಿತು. ಈ ಸಾಮ್ರಾಜ್ಯದ ಸ್ಥಾಪಕರಾದ ಹರಿಹರ ಸ್ವತಃ ಪಂಡಿತನಾಗಿದ್ದು ಕರ್ನಾಟಕ ವಿದ್ಯಾವಿಲಾಸನೆಂಬ ಕೀರ್ತಿಗೆ ಪಾತ್ರನಾಗಿದ್ದವನು. ಇವನ ವಿದ್ಯಾಪ್ರೇಮದ ಫಲವಾಗಿ ಕರ್ನಾಟಕದಲ್ಲಿ ಮೂಲೆಗುಂಪಾಗಿದ್ದ ಅನೇಕ ಶಿಕ್ಷಣ ಸಂಸ್ಥೆಗಳು ಮತ್ತೆ ತಲೆಯೆತ್ತಿಕೊಂಡು ಶಿಕ್ಷಣ ಪ್ರಸಾರ ಮಾಡಲಾರಂಭಿಸಿದವು. ನಾಡಿನಲ್ಲಿ ಶಾಂತಿ ಸಮೃದ್ಧಿಗಳು ನೆಲೆಸಿದ್ದರಿಂದ ಮತ್ತೆ ಜನತೆ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ಹಿಂದಿದ್ದ ವ್ಯವಸ್ಥೆಯನ್ನು ಮುಂದುವರಿಸಲು ಅವಕಾಶವಾಯಿತು.

ಕನ್ನಡದಲ್ಲಿ ಅಂದಿನಿಂದಲೇ ಪದ್ಯಸಾಹಿತ್ಯ ಸೃಷ್ಟಿಯಾಗಿದ್ದು ಅವುಗಳ ವಾಚನ ಜನಪ್ರಿಯವಾಗುತ್ತ ಬಂತು. "ಪ್ರಾಥಮಿಕ ಶಾಲೆಯಲ್ಲಿ ಲಿಪಿಗ್ರಹಣ, ಪದವಾಕ್ಯ ಪ್ರಮಾಣ, ಪುರಾಣ ಶ್ರವಣ, ಚರಿತ್ರೆ

ಇನ್ನೂ ಮುಂತಾದ ವಿಷಯಗಳನ್ನು ಬೋಧಿಸುತ್ತಿದ್ದರು"[೧೭] ಊರೂರುಗಳಲ್ಲೂ ಸ್ಥಾಪನೆಯಾಗಿದ್ದ ವೀರಶೈವ ಮಠಗಳು ಅಯ್ಯಗಳ ಪಾಠಶಾಲೆಗಳಾಗಿ ಕೆಲಸ ಮಾಡುತ್ತಿದ್ದುವು ವಿಜಯನಗರದ ಅರಸರ ವಿದ್ಯಾಪ್ರೇಮ ಜನತೆಯಲ್ಲೂ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂಬ ಕುತೂಹಲವನ್ನು ಬೆಳೆಸಿತು. ಅಂದು ವಿರುಪಾಕ್ಷ ಬಜಾರಿನಲ್ಲಿದ್ದ ಶೈವಮಠಗಳು ವಿಶೇಷವಾಗಿ ಶಿಕ್ಷಣ ನೀಡುತ್ತಿದ್ದವು. ಮರಳಿನ ಮೇಲೆ ಅಕ್ಷರ ತಿದ್ದುವ ಪದ್ಧತಿ ಮುಂದುವರಿಯುತ್ತಿತ್ತು. ಅಳತೆ ತೂಕಗಳ ಲೆಕ್ಕ ಪಠ್ಯಕ್ರಮದಲ್ಲಿ ಸೇರಿಕೊಂಡಿತು. ಸಂಖ್ಯಾ ಪಠನ, ಮಗ್ಗಿ, ಪೂರ್ಣಾಂಕಗಳಿಂದ ಭಿನ್ನಾಂಕಗಳನ್ನು ಗುಣಿಸುವುದು ಇವೂ ಸಹ ಸೇರಿದ್ದವು. ಪ್ರಾಥಮಿಕ ಶಿಕ್ಷಣ ೫–೬ ವರ್ಷಗಳದಾಗಿದ್ದು ಮೇಲಿನ ತರಗತಿಗಳಲ್ಲಿ ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರ, ಸರಳಬಡ್ಡಿ, ತ್ರೈರಾಶಿ–ಈ ಲೆಕ್ಕಗಳನ್ನು ಕಲಿಸುತ್ತಿದ್ದರು. ಜೈಮಿನಿ ಭಾರತ, ವಿದುರ ನೀತಿ, ಸೋಮೇಶ್ವರ ಶತಕ, ಪಂಚತಂತ್ರ ಮುಂತಾದವುಗಳನ್ನು ಕಲಿಸಲಾಗುತ್ತಿತ್ತು.

ಕ್ರಿ.ಶ. ಹದಿನಾಲ್ಕನೆಯ ಶತಮಾನದಲ್ಲಿ ಮೊದಲ ದಶಕದಲ್ಲಿ ಮಕ್ತಾಬ್ ಎಂಬ ಪ್ರಾಥಮಿಕ ಹಂತದ ಮುಸ್ಲಿಂ ಶಿಕ್ಷಣಸಂಸ್ಥೆಗಳು ಉತ್ತರ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದವು. ಅವು ಸಾಮಾನ್ಯವಾಗಿ ಮಸೀದಿಗಳ ಅಂಗವಾಗಿ ಏರ್ಪಟ್ಟಿದ್ದವು. ೧೩೪೩ರಲ್ಲಿ ಇಲ್ಲಿ ಪ್ರವಾಸ ಮಾಡಿದ್ದ ಇಬ್ನ್ ಬತೂತ ವಿವರಿಸುವಂತೆ ಮುಸ್ಲಿಂ ವಿದ್ಯಾರ್ಥಿಗಳು ಮಸೀದಿಯ ನಿಧಿಯಿಂದ ವೇತನ ಪಡೆದು ಮುಸ್ಲಿಂ ಧರ್ಮಶಾಸ್ತ್ರಗಳನ್ನು ಓದುತ್ತಿದ್ದರು. ಹೊನ್ನಾವರ ಪ್ರದೇಶದಲ್ಲಿ ಅವರ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳು ಆರಂಭವಾಗಿದ್ದವು. ಅಲ್ಲಿ ವಿದ್ಯಾರ್ಥಿನಿಯರು ಆಸಕ್ತಿಯಿಂದ ಖುರಾನ್ ಪಠನ ಮಾಡುತ್ತಿದ್ದರು.

"ಬಹಮನಿ ಅರಸ ಎರಡನೆಯ ಮಹಮದ್ ತನ್ನ ಮುಸ್ಲಿಂ ಪ್ರಜೆಗಳಿಗೆ ಉತ್ತಮ ಶಿಕ್ಷಣ ಸೌಲಭ್ಯವನ್ನು ಒದಗಿಸಿದ್ದನು. ಸ್ವತಃ ವಿದ್ಯಾವಂತನಾಗಿದ್ದ ಅವನು ವಿದ್ಯಾಪಕ್ಷಪಾತಿಯಾಗಿದ್ದನು. ೧೩೭೮ರಲ್ಲಿ ಅವನು ಮದರಸಾಗಳೆಂಬ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಅಲ್ಲಿ ವಿದ್ಯಾರ್ಥಿಗಳ ಊಟ ವಸತಿಗಳಿಗೂ ಶಿಕ್ಷಣಕ್ಕೂ ವ್ಯವಸ್ಥೆಗೊಳಿಸಿದನು."[೧೮] ಗುಲ್ಬರ್ಗ, ಬೀದರ ಮುಂತಾದ ಕಡೆ ಆರಂಭವಾದ ಮದರಸಾಗಳು ತುಂಬ ಪ್ರಸಿದ್ಧಿ ಪಡೆದಿದ್ದವು. ಹದಿನೈದನೆಯ ಶತಮಾನದ ಕೊನೆಯಲ್ಲಿ ಆ ರಾಜ್ಯದ ಮಂತ್ರಿಯಾಗಿದ್ದ ಮಹಮ್ಮದ್ ಗವಾನ್ ಮುಸ್ಲಿಮರ ಉನ್ನತ ಶಿಕ್ಷಣಕ್ಕಾಗಿ ಸ್ವಂತ ಹಣದಿಂದ ಬೀದರ್‌ನಲ್ಲಿ ಮದರಸವನ್ನು ನಿರ್ಮಿಸಿದ್ದು ಗಮನಾರ್ಹ.

ಬಹಮನಿ ಅರಸ ನಂತರ ಅಧಿಕಾರಕ್ಕೆ ಬಂದ ಆದಿಲ್‌ಷಾಹಿ ಅರಸರು ಬಿಜಾಪುರವನ್ನು ರಾಜಧಾನಿಯಾಗಿ ಮಾಡಿಕೊಂಡು ಸಾರ್ವತ್ರಿಕ ಶಿಕ್ಷಣಕ್ಕೂ ತಾಂತ್ರಿಕ ಶಿಕ್ಷಣಕ್ಕೂ ಉತ್ತೇಜನವಿತ್ತರು. ಅರಬ್ಬೀ ಮತ್ತು ಪಾರಸಿ ಭಾಷೆಗಳಿಗೆ ಪ್ರಾಶಸ್ತ್ಯವಿತ್ತರು. ವಾಸ್ತು ಮತ್ತು ಶಿಲ್ಪಿಗಳಿಗೆ ಪ್ರೋತ್ಸಾಹ ನೀಡಿದರು. ಮಕ್ತಾಬ್‌ಗಳಲ್ಲಿ ಉರ್ದು ಭಾಷೆ, ಅಕ್ಷರಾಭ್ಯಾಸ, ಓದುಗಾರಿಕೆ ಬರವಣಿಗೆ ಮುಂತಾದವನ್ನು ಕಲಿಸುತ್ತಿದ್ದರು. ಹೈದರ್, ಟಿಪ್ಪುಸುಲ್ತಾನರ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ಮುಸ್ಲಿಂ ಶಿಕ್ಷಣಕ್ಕೆ ಪ್ರೋತ್ಸಾಹ ದೊರಕಿತು. ಪಾರಸಿಯನ್ನು ಆಡಳಿತ ಭಾಷೆಯನ್ನಾಗಿ ಮಾಡಿಕೊಂಡು ಟಿಪ್ಪುಸುಲ್ತಾನ್ ಮಸೀದಿಗಳಲ್ಲಿ ಮಕ್ತಾಬ್‌ಗಳನ್ನು ಸ್ಥಾಪಿಸಿ ಮುಸ್ಲಿಮರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟನು.

ಆದರೆ ನಿತ್ಯ ಯುದ್ಧಗಳ ಕಡೆ ಗಮನಕೊಟ್ಟಿದ್ದರಿಂದ ಅವನು ವಿದ್ಯಾಸಂಸ್ಥೆಗಳ ಕಡೆ ಗಮನಕೊಡುವುದು ಸಾಧ್ಯವಾಗಲಿಲ್ಲ. ಅನಂತರ ಮುಸಲ್ಮಾನರ ಆಡಳಿತ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಐದು ಶತಮಾನಗಳ ತನಕ ಅಸ್ತಿತ್ವದಲ್ಲಿದ್ದರೂ, ಆ ಅರಸರು ದೇಶೀಯ ಶಿಕ್ಷಣ ಪದ್ಧತಿಗೆ ಪ್ರೋತ್ಸಾಹ ನೀಡಲಿಲ್ಲ. ಇಲ್ಲಿ ಸಹಸ್ರಾರು ವರ್ಷಗಳಿಂದ ಬೆಳೆದುಕೊಂಡು ಬಂದಿದ್ದ ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಪ್ರೋತ್ಸಾಹವಿಲ್ಲವಾಗಿ ಅವು ಕಾರ್ಯ ವಿಮುಖವಾದವು. ದಾಳಿಗೆ ಸಿಕ್ಕಿದ ದೇವಾಲಯಗಳ ಶಿಕ್ಷಣ ಕೇಂದ್ರಗಳೂ, ಗ್ರಂಥಭಂಡಾರಗಳೂ ಹಾಳಾದವು. ದೇಶದಲ್ಲಿ ಮುಸ್ಲಿಂ ಶಿಕ್ಷಣ ಪ್ರಚಾರಕ್ಕೆ ಬಂದಿದ್ದರೂ ಇಲ್ಲಿನ ಜನಸಾಮಾನ್ಯರಿಗೆ ಅದು ರುಚಿಸಲಿಲ್ಲ. ಕ್ರಿಸ್ತ ಪೂರ್ವದಲ್ಲಿ ಜೈನ-ಬೌದ್ಧ ಶಿಕ್ಷಣ ಪದ್ಧತಿಗಳು ಹಿಂದೂ ಶಿಕ್ಷಣ ಪದ್ಧತಿಯ ಮೇಲೆ ದಾಳಿ ಮಾಡಿದ್ದರೂ ಇಲ್ಲಿನ ಪರಿಸ್ಥಿತಿಗೆ ಅವು ಪರಕೀಯವಾಗಿ ಉಳಿಯದೆ ಅದನ್ನು ಪರಿಪುಷ್ಟಿಗೊಳಿಸಿದ್ದವು. ಜೀವನದ ಮೌಲ್ಯದಲ್ಲಿ ಹೊಸ ದಿಗಂತವನ್ನು ಕಂಡುಕೊಳ್ಳುವಂಥ ಅಮೃತ ಪರಿಣಾಮವನ್ನು ಬೀರಿದ್ದವು. ಹಿಂದೂ ರಾಜ್ಯಗಳಲ್ಲಿ ಇನ್ನೂ ಉಳಿದುಕೊಂಡು ಬಂದ ಉನ್ನತ ಶಿಕ್ಷಣ ಸಂಸ್ಥೆಗಳು ತಮ್ಮ ಪ್ರಾಚೀನ ಪರಂಪರೆಯನ್ನು ಮುಂದುವರೆಸಿದರೂ ಆಧುನಿಕ ಯುಗದಲ್ಲಿ ಆರಂಭವಾದ ಬ್ರಿಟಿಷ್ ಶಿಕ್ಷಣ ಪದ್ಧತಿಯ ಮುಂದೆ ಅವುಗಳ ಪ್ರಭಾವ ಹೀನವಾಗಿ ಪರಿಣಮಿಸಿದವು.

### ೩.೩. ಆಧುನಿಕ ಭಾರತದ ಶಿಕ್ಷಣ ವ್ಯವಸ್ಥೆ ಮತ್ತು ಚರಿತ್ರೆ ಪಠ್ಯಪುಸ್ತಕಗಳು

ಯುರೋಪಿಯನ್ನರ ಆಗಮನದೊಂದಿಗೆ ಆರಂಭವಾಗುವ ಆಧುನಿಕ ಕಾಲ ಹಲವು ಕಾರಣಗಳಿಗಾಗಿ ಪ್ರಸಿದ್ಧಿ ಪಡೆದಿದೆ. ೧೭೫೭-೧೮೫೭ರವರೆಗೆ ಬ್ರಿಟಿಷರು ತಮ್ಮ ಪ್ರತಿಸ್ಪರ್ಧಿಗಳನ್ನು ನೇರ ಯುದ್ಧಗಳಲ್ಲಿ ಇಲ್ಲವೇ ತಮ್ಮ ಕುತಂತ್ರಗಳ ಮೂಲಕ ಸೋಲಿಸಿ ಮೂಲೆಗುಂಪು ಮಾಡಿದರು. ಅನಂತರ ಬ್ರಿಟಿಷರು ಈ ದೇಶವನ್ನು ತಮ್ಮ ಮುಷ್ಟಿಗೆ ತೆಗೆದುಕೊಂಡು ಇಲ್ಲಿ ಆಳ್ವಿಕೆ ಮಾಡಿದರು. ತಮ್ಮ ಆಳ್ವಿಕಾವಧಿಯ ಈ ಕಾಲಘಟ್ಟದಲ್ಲಿ ಅವರು ಶೈಕ್ಷಣಿಕ ಬದಲಾವಣೆಗೆ ಪ್ರಯತ್ನಿಸಿರುವುದನ್ನು ಇಲ್ಲಿ ಕಾಣಬಹುದು. ಈ ಹಿನ್ನೆಲೆಯಲ್ಲಿ ವಸಾಹತು(ಸ್ವಾತಂತ್ರ್ಯಪೂರ್ವ) ಭಾರತ ಮತ್ತು ಸ್ವಾತಂತ್ರ್ಯ ನಂತರದ ಭಾರತದ ಶಿಕ್ಷಣ ವ್ಯವಸ್ಥೆಯೆಂದು ಇಲ್ಲಿ ವಿಭಾಗಿಸಿಕೊಂಡು ಅಭ್ಯಾಸಿಸಲಾಗಿದ್ದು, ಆ ವಿವರ ಈ ಮುಂದಿನಂತಿದೆ.

### ೩.೩.೧. ವಸಾಹತು(ಸ್ವಾತಂತ್ರ್ಯಪೂರ್ವದಲ್ಲಿ) ಭಾರತದ ಶಿಕ್ಷಣ ವ್ಯವಸ್ಥೆ

ಮುಸ್ಲಿಮರ ದಾಳಿಗೆ ಸಿಕ್ಕಿ ಅಸ್ತವ್ಯಸ್ತವಾದ ಇಲ್ಲಿನ ಶಿಕ್ಷಣ ಪರಂಪರೆ ಅವರ ಆಳ್ವಿಕೆಯ ಅವಧಿಯಲ್ಲಿ ೫-೬ ಶತಮಾನಗಳ ಕಾಲ ಯಾವ ಪ್ರೋತ್ಸಾಹವೂ ಇಲ್ಲದೆ ಕ್ರಮ ಕ್ರಮವಾಗಿ ಅವನತಿಗಿಳಿಯುತ್ತ ಬಂತು. ಹತ್ತೊಂಬತ್ತನೆಯ ಶತಮಾನದ ಆರಂಭದ ವೇಳೆಗೆ ಭಾರತ ಸಂಪೂರ್ಣವಾಗಿ ಬ್ರಿಟಿಷರ ಆಡಳಿತಕ್ಕೊಳಪಟ್ಟಿತು.

ಟಿಪ್ಪು ಸುಲ್ತಾನನ ಮರಣದ ನಂತರ ಕರ್ನಾಟಕ ಹರಿದು ಹಂಚಿಹೋಗಿ ಮಹಾರಾಷ್ಟ್ರ, ಹೈದರಾಬಾದ್, ಮದ್ರಾಸ್, ಈ ಪ್ರಾಂತ್ಯಗಳಿಗೆ ಸ್ವಲ್ಪ ಸ್ವಲ್ಪ ಭಾಗ ಸೇರಿಕೊಂಡಿತು, ಮಿಕ್ಕ ಕೊಡಗು ಮತ್ತು ಮೈಸೂರು ಪ್ರತ್ಯೇಕವಾಗಿ ಉಳಿದವು ಇವೆಲ್ಲ ಮತ್ತೆ ಒಂದುಗೂಡಿ ವಿಶಾಲ ಮೈಸೂರು ಆದದ್ದು ೧೯೫೬ರಲ್ಲಿ. ಅಲ್ಲಿಯವರೆಗೆ ಕರ್ನಾಟಕದಲ್ಲೆಲ್ಲ ಏಕರೀತಿಯ ಶಿಕ್ಷಣ

ಇರಲಿಲ್ಲ. ಏಕೆಂದರೆ ಆಯಾ ಪ್ರಾಂತ್ಯ ತನಗೆ ಸೇರಿದ್ದ ಕರ್ನಾಟಕ ಭಾಗದಲ್ಲಿ ತನ್ನ ದೇಶದ ಶಿಕ್ಷಣ ಪದ್ಧತಿಯನ್ನು ಆಚರಣೆಗೆ ತಂದಿತ್ತು. ಆದರೂ ಅವೆಲ್ಲ ಶಿಕ್ಷಣ ವ್ಯವಸ್ಥೆಗೂ ಅನುಕರಣಕ್ಕೆ ಆಧಾರವಾಗಿದ್ದುದು ಅಖಂಡ ಭಾರತಕ್ಕೆ ಆಳರಸರು ರೂಪಿಸಿದ್ದ ಇಂಗ್ಲಿಷ್ ಶಿಕ್ಷಣ ಪದ್ಧತಿ.

ಭಾರತದಲ್ಲಿ ಅಸ್ತಿತ್ವದಲ್ಲಿರುವ ಇಂಗ್ಲಿಷ್ ಶಿಕ್ಷಣ ಪದ್ಧತಿ ಕಳೆದ ನಾಲ್ಕು ಶತಮಾನಗಳ ಹಿಂದೆ ಆರಂಭವಾದದ್ದು, ಏಕೆಂದರೆ ೧೮೩೫ರಲ್ಲಿ ಲಾರ್ಡ್ ಮೆಕಾಲೆ ಭಾರತದಾದ್ಯಂತ ಐರೋಪ್ಯ ವಿಜ್ಞಾನ ಮತ್ತು ಶಾಸ್ತ್ರ ಸಾಹಿತ್ಯಗಳನ್ನು ಕುರಿತು ಶಿಕ್ಷಣವನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಕೊಡುವ ವ್ಯವಸ್ಥೆ ಮಾಡಬೇಕೆಂದು ಮಾಡಿದ ಸಲಹೆಯನ್ನು ಅಂದಿನ ಭಾರತ ಸರ್ಕಾರ ಒಪ್ಪಿ ಆಚರಣೆಗೆ ತಂದಿತು. ನಮ್ಮ ಆಧುನಿಕ ಶಿಕ್ಷಣ ಪರಂಪರೆ ಅಧಿಕೃತವಾಗಿ ೧೮೩೫ರಲ್ಲಿ ಆರಂಭವಾದರೂ ಅದಕ್ಕೂ ಎಷ್ಟೋ ಹಿಂದೆ ಕ್ರೈಸ್ತ ಪಾದ್ರಿಗಳು ಭಾರತದ ಬೇರೆ-ಬೇರೆ ಭಾಗಗಳಲ್ಲಿ ಈ ಕಾರ್ಯವನ್ನು ಚದುರಿದಂತೆ ಆರಂಭಿಸಿದ್ದರು. ಮತ ಪ್ರಚಾರಕ್ಕಾಗಿ ಬಂದ ಅವರು ಆಸ್ಪತ್ರೆ, ಅನಾಥಾಲಯ, ಪಾಠಶಾಲೆ ಮುಂತಾದ ಜನಹಿತ ಕಾರ್ಯಗಳನ್ನು ಕೈಗೊಂಡರು. ಆ ಮೂಲಕ ಜನರನ್ನು ಕ್ರೈಸ್ತ ಮತಕ್ಕೆ ಮತಾಂತರಿಸುವ ಕಾರ್ಯದಲ್ಲಿ ತೊಡಗಿದ್ದರು. ಅವರು ಭಾರತದ ಕೆಲವು ಪ್ರದೇಶಗಳಿಗೆ ಕ್ರಿಸ್ತಶಕದ ಆದಿಯಲ್ಲೇ ಆಗಮಿಸಿದ್ದರೂ, ಕರ್ನಾಟಕಕ್ಕೆ ಬಂದದ್ದು ಹದಿನಾಲ್ಕನೆಯ ಶತಮಾನದಲ್ಲಿ. ಡೊಮಿನಿಕನ್ ಪಂಥದವರು ತಮ್ಮ ಸುವಾರ್ತೆಯನ್ನು ಮೈಸೂರು ರಾಜ್ಯದಲ್ಲಿ ೧೩೩೫ರಲ್ಲಿ ಪ್ರಚಾರ ಮಾಡಿದರು. ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಪೋರ್ಚುಗೀಸರ ಮೂಲಕ ಕ್ರೈಸ್ತ ಧರ್ಮ ಈ ನಾಡಿನಲ್ಲಿ ಹರಡಿತು. ಹೀಗೆ ೧೬-೧೭ನೇ ಶತಮಾನದಲ್ಲಿ ಯೂರೋಪಿಯನ್ ವರ್ತಕರೊಡನೆ ಕ್ರೈಸ್ತ ಧರ್ಮ ಪ್ರಚಾರವೂ ಹೆಚ್ಚಿತು. ಅಂತೆಯೇ ಆಸ್ಪತ್ರೆ, ಶಾಲೆ, ಅನಾಥಾಲಯಗಳೂ ನಿರ್ಮಾಣಗೊಂಡವು. ಹೀಗೆ ಆರಂಭವಾದ ಶಾಲೆಗಳಲ್ಲಿ ಮೊದಮೊದಲು ದೇಶೀಯ ಭಾಷೆಯಲ್ಲಿ ಧರ್ಮ ಪ್ರಚಾರ ಮಾಡುತ್ತಿದ್ದರು.

ಹೀಗೆ ದೇಶದಾದ್ಯಂತ ಮುಂದೆ ಹಲವು ಕಡೆಗಳಲ್ಲಿ ಶಾಲೆಗಳನ್ನು ಸ್ಥಾಪಿಸುವುದರ ಮೂಲಕ ಸಂಪೂರ್ಣವಾಗಿ ಇದೇ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವ ಕೆಲಸ ಕೈಗೊಂಡರು. ಈ ಶಾಲೆಗಳಲ್ಲಿ ಸುಧಾರಣೆಯನ್ನು ತರುವ ಉದ್ದೇಶದಿಂದ ಶಿಕ್ಷಣ ಪ್ರತಿಯೊಂದು ಹಂತದಲ್ಲಿಯೂ ಅನೇಕ ಬದಲಾವಣೆಗೆ ಕೆಲವು ಆಯೋಗಗಳನ್ನು ನೇಮಕ ಮಾಡಿದರು. ಈ ಆಯೋಗಗಳು ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣ ಹಂತದವರೆಗೂ ಎಲ್ಲಾ ವಿಧಗಳಲ್ಲಿಯೂ ಸುಧಾರಣೆಗೆ ಸಲಹೆ ಸೂಚನೆಗಳನ್ನು ನೀಡುತ್ತಾ ಬಂದವು. ಅದರಲ್ಲಿ ಪಠ್ಯವಸ್ತುವಿಗೆ ಸಂಬಂಧಿಸಿದಂತೆಯೂ ಸಾಕಷ್ಟು ಬದಲಾವಣೆಗಳನ್ನು ಈ ಆಯೋಗಗಳು ಮಾಡುತ್ತಾ ಬಂದವು. ಅವುಗಳನ್ನು ಅಳವಡಿಸಿಕೊಂಡು ಇಡಿ ದೇಶಾದ್ಯಂತ ಶಿಕ್ಷಣವನ್ನು ನೀಡುತ್ತಾ ಹೋದರು. ಅಂತಹ ಪ್ರಮುಖ ಆಯೋಗಗಳು ನೀಡಿರುವ ಶಿಫಾರಸ್ಸುಗಳು ಈ ಕೆಳಗಿನಂತಿವೆ.

• **ಲಾರ್ಡ್ ಮೆಕಾಲೆ**

ಲಾರ್ಡ್ ಮೆಕಾಲೆ ಒಬ್ಬ ಉತ್ತಮ ವ್ಯಕ್ತಿ ಹಾಗೂ ಶ್ರೇಷ್ಠ ಶಿಕ್ಷಣ ತಜ್ಞನಾಗಿದ್ದವನು. ಇವನು ಕ್ರಿ.ಶ. ೧೮೩೪ರಲ್ಲಿ ಗವರ್ನರ್ ಜನರಲ್ ಕೌನ್ಸಿಲಿನ ಕಾನೂನು ಸಲಹೆಗಾರನಾಗಿ ಕರ್ತವ್ಯ

ನಿರ್ವಹಿಸುತ್ತಿದನು. ಲಾರ್ಡ್ ವಿಲಿಯಂ ಬೆಂಟಿಂಕನು ಇವನನ್ನು ಸಾರ್ವಜನಿಕ ಶಿಕ್ಷಣದ ಸಾಮಾನ್ಯ ಸಮಿತಿಯ ಅಧ್ಯಕ್ಷನನ್ನಾಗಿ ೧೮೩೪ರ ಜೂನ್ ೧೦ರಂದು ನೇಮಿಸಿದನು. "ಇವನು ೧೮೩೧ರ ರಾಜಶಾಸನದ ಆದೇಶದಂತೆ ದೊರೆತ ಒಂದು ಲಕ್ಷ ರೂಪಾಯಿ ಹಣವನ್ನು ಭಾರತೀಯ ಶಿಕ್ಷಣ ಪದ್ಧತಿಯ ಮೇಲೆ ವಿನಿಯೋಗಿಸಬೇಕೇ ಅಥವಾ ಪಾಶ್ಚಾತ್ಯ ಶಿಕ್ಷಣ ಪದ್ಧತಿಯ ಮೇಲೆ ವಿನಿಯೋಗಿಸಬೇಕೇ ಎಂಬ ವಿವಾದವನ್ನು ಕುರಿತು ವರದಿ ಸಲ್ಲಿಸಲು ಇವನನ್ನು ನೇಮಿಸಲಾಯಿತು. ಇದರ ವರದಿಯಿಂದಾಗಿಯೇ ಅದು 'ಮೆಕಾಲೆ ವರದಿ' ಎಂದು ಹೆಸರಾಯಿತು; ಅಷ್ಟೇ ಅಲ್ಲ ಭಾರತದ ಶಿಕ್ಷಣ ಇತಿಹಾಸದಲ್ಲಿ ಇದು ಒಂದು ಪ್ರಮುಖ ಮೈಲಿಗಲ್ಲು ಎಂದು ಕರೆಸಿಕೊಂಡಿದೆ."[೧೯] ಇವನು ತನ್ನ ವರದಿಯಲ್ಲಿ ಇಂಗ್ಲೀಷ್ ಶಿಕ್ಷಣವನ್ನು ಪ್ರಚಾರ ಮಾಡುವುದೇ ಪ್ರಧಾನ ಗುರಿ ಎಂದು ತಿಳಿಸಿದನು. "ಲಾರ್ಡ್ ಮೆಕಾಲೆಯ ೧೮೧೩ರ ಚಾರ್ಟರ್ ಆಕ್ಟ್‌ನ ೪೩ನೆಯ ನಿಬಂಧನೆಯ ಅರ್ಥ ವಿವರಣೆಯಂತೆ ಸಾಹಿತ್ಯವೆಂದರೆ ಇಂಗ್ಲಿಷ್ ಸಾಹಿತ್ಯ ಮಾತ್ರ ಆಗಿದೆ" ಎಂದಿದ್ದಾನೆ. ಮೆಕಾಲೆಯ ವರದಿಯ ಅನುಮೋದನೆಯೊಡನೆ ಭಾರತಕ್ಕೆ ಬಂದ ಇಂಗ್ಲಿಷ್ ಶಿಕ್ಷಣ ಪದ್ಧತಿ ಕರ್ನಾಟಕಕ್ಕೂ ಆಗಮಿಸಿತು. ಆ ಸುಮಾರಿಗೆ ಮೈಸೂರು ರಾಜ್ಯದ ಆಡಳಿತಾಧಿಕಾರ (೧೮೩೧) ಒಡೆಯರ್ ಮನೆತನದ ಕೈತಪ್ಪಿ ಕಮೀಷನರ ವಶಕ್ಕೆ ಹೋಯಿತು. ಹೈದರಾಬಾದು ಕರ್ನಾಟಕದ ಭಾಗ ನಿಜಾಮರಿಗೆ ಸೇರಿತ್ತು. ೧೮೩೪ರಿಂದ ಕೊಡಗೂ ಬ್ರಿಟಿಷರ ಆಡಳಿತಕ್ಕೆ ಸೇರಿಹೋಯಿತು ಎಂದರೆ ಕರ್ನಾಟಕದ ಬಹುಭಾಗ ಬ್ರಿಟಿಷರ ಆಡಳಿತಕ್ಕೆ ಸೇರಿತ್ತು. ಆದ್ದರಿಂದ ಇಲ್ಲಿ ಪಾದ್ರಿಗಳು ಹೆಚ್ಚಿನ ಸವಲತ್ತು ಪಡೆದುಕೊಂಡು ಶಿಕ್ಷಣ ಪ್ರಚಾರವನ್ನು ಆರಂಭಿಸಿದರು. ೧೮೩೩ರಲ್ಲಿ ಮೈಸೂರು ಮಹಾರಾಜರು ಉಚಿತ ಇಂಗ್ಲಿಷ್ ಶಾಲೆಯೊಂದನ್ನು ಆರಂಭಿಸಿದರು. ಬೆಂಗಳೂರಿನಲ್ಲಿಯೂ ಸಹ ಸರ್ಕಾರ ಒಂದು ಇಂಗ್ಲಿಷ್ ಶಾಲೆಯನ್ನು ಆರಂಭಿಸಿತು.

ಆದರೆ ಇಂಗ್ಲಿಷ್ ಮಾಧ್ಯಮದಲ್ಲಿ ಇಂಗ್ಲಿಷ್, ವಿಜ್ಞಾನ, ಮತ್ತು ಸಾಹಿತ್ಯವನ್ನು ಶಿಕ್ಷಣ ಕ್ಷೇತ್ರದಲ್ಲಿ ಪ್ರಸಾರ ಮಾಡುವುದೇ ತನ್ನ ಶೈಕ್ಷಣಿಕ ನೀತಿಯೆಂದು ಸಾರಿದ ಫಲವಾಗಿ ದೇಶಿಯ ಭಾಷೆಗಳ ಅವನತಿಗೆ ಕಾರಣನಾದ ಮೆಕಾಲೆ ತನ್ನ ವರದಿಯಲ್ಲಿ ಪೌರತ್ಯ ಸಂಸ್ಕೃತಿ ಮತ್ತು ಧರ್ಮಗಳ ಬಗ್ಗೆ ಮಾಡಿರುವ ಟೀಕೆ ಅಕ್ಷಮ್ಯವಾದದ್ದು. ಯಾವ ಕಾಲದಲ್ಲಿ ಅವನ ಪೂರ್ವಜರು ಇನ್ನೂ ಮಾನವೀಯತೆಯ, ಅನಾಗರಿಕತೆಯ ಅಂಧಕಾರದಲ್ಲಿ ಇದ್ದರೋ ಆಗಲೇ ಭಾರತದ ಸಂಸ್ಕೃತಿ ಹಾಗೂ ನಾಗರಿಕತೆ, ಧರ್ಮ, ವಿಜ್ಞಾನ, ಉನ್ನತ ಸ್ಥಿತಿಯಲ್ಲಿತ್ತು ಎಂಬ ಅಂಶ ಅವನ ಚಾಣಾಕ್ಷತೆಗೆ ತಿಳಿಯದಾಗಿತ್ತು. ಒಟ್ಟಾರೆಯಾಗಿ ಮೆಕಾಲೆ ತನ್ನ ಭಾಷಾಂಧತೆಯಿಂದಾಗಿ ಈ ರೀತಿ ವರ್ತಿಸಿರಬಹುದು ಎಂದು ತಿಳಿಯಬಹುದಾಗಿದೆ. ಮೆಕಾಲೆಯು ಒಟ್ಟು ಅಭಿಪ್ರಾಯದಿಂದ ಇಡೀ ಭಾರತದಲ್ಲಿ ಆಂಗ್ಲ ಪಠ್ಯವಸ್ತುವನ್ನು ಜಾರಿಗೆ ತರುವ ಪ್ರಯತ್ನ ಮಾಡಿದ. ಅದು ಇಂದಿಗೂ ಹಾಗೆಯೇ ಮುಂದುವರೆದುಕೊಂಡು ಬಂದಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಅಗ್ರಹಾರದ ಕೃಷ್ಣಮೂರ್ತಿಯವರು ತಮ್ಮ ಸಂಸ್ಕೃತಿ ಕಥನ ಎಂಬ ಪುಸ್ತಕದ ಸಂಪಾದಕೀಯ "ವಸಾಹತೀಕರಣ ದಿಂದ ಲಾಭ ಪಡೆದವರು ಮತ್ತು ಈಗಿನ ಅಭಿವೃದ್ಧಿ ಪಥದಿಂದ ಲಾಭ ಪಡೆಯುತ್ತಿರುವವರು

ಇಬ್ಬರೂ ಒಂದೇ ಸಂತಾನವೇ, ಇಬ್ಬರಿಗೂ ಈ ದೇಶದ ಬಗ್ಗೆ ಮೂಲಭೂತವಾಗಿ ಮಹಾ ತಿರಸ್ಕಾರ, ಹೇಳಿಕೇಳಿ ಮೆಕಾಲೆಯ ಮಕ್ಕಳು. ಮೆಕಾಲೆ ಹೇಳಿದ್ದ "ಯೂರೋಪಿನ ಲೈಬ್ರರಿಯ ಒಂದು ಶೆಲ್ಫು ಇಂಡಿಯಾ ಮತ್ತು ಅರೇಬಿಯಾಗಳ ಸಮಸ್ತ ಸೃಷ್ಟಿಗೆ ಸಮ. ಈ ದೇಶಿ ಜನಗಳದು ಅಸಂಬದ್ಧ ಚರಿತ್ರೆ, ಅಸಂಬದ್ಧ ತತ್ವಜ್ಞಾನ, ಅಸಂಬದ್ಧ ಭೌತಶಾಸ್ತ್ರ"[೨೦] ಇದರ ಅರ್ಥ. ಈ ದೇಶದ ಚರಿತ್ರೆ ಸುವ್ಯವಸ್ಥಿತವಾಗಿಲ್ಲ, ಪ್ರಾಚೀನ ಚರಿತ್ರೆಯನ್ನು ಹೊಂದಿಲ್ಲ ಎಂಬುದಾಗಿ ತಿಳಿದಿದ್ದ. ಆದರೆ ನಂತರ ನಡೆದ ಸಂಶೋಧನೆಗಳು ಈ ದೇಶದ ಚರಿತ್ರೆಯನ್ನು ಬಹು ಪ್ರಾಚೀನತೆಗೆ ಕೊಂಡೊಯ್ದುದ್ದು ಈಗ ಆದೇಶಕ್ಕೆ ಅರಿವಾಗಿರಬಹುದು.

### ೧. ವುಡ್ಸ್ ವರದಿ-ಕ್ರಿ.ಶ.೧೮೫೪

ಭಾರತದ ಶಿಕ್ಷಣದ ಪ್ರಗತಿಯನ್ನು ಕುರಿತಾಗಿ ವಿಚಾರ ಮಾಡಲು ೧೮೫೩ರಲ್ಲಿ ಸಾಮಾನ್ಯ ಸಭೆಯನ್ನು ಕರೆಯಲಾಯಿತು. ಈ ಸಭೆಯ ಅಧ್ಯಕ್ಷರನ್ನಾಗಿ ಸರ್ ಚಾರ್ಲ್ಸ್ ವುಡ್‌ರವರನ್ನು ನೇಮಿಸಲಾಯಿತು. ಹಾಗಾಗಿ ಈ ಪರಿಪತ್ರಕ್ಕೆ ಅವರ ಹೆಸರನ್ನೇ ಇಡಲಾಯಿತು. ಭಾರತೀಯ ಶೈಕ್ಷಣಿಕ ಇತಿಹಾಸದಲ್ಲಿ ವುಡ್‌ರವರ ಪತ್ರ ಏಕಮೇವಾದ್ವಿತೀಯ ಸ್ಥಾನವನ್ನು ಪಡೆದುಕೊಂಡಿದೆ. ಏಕೆಂದರೆ ೧೮೫೪ರ ಈ ವರದಿಯನ್ನು ಭಾರತೀಯ ಪ್ರಚಲಿತ ಶಿಕ್ಷಣದ ಬುನಾದಿಯಾಗಿದೆ ಎಂದೇ ಹೇಳಬಹುದು. ಈ ವರದಿಯ ಮಹತ್ವನ್ನು ಅರಿತ ಅನೇಕರು ಇದನ್ನು ಹೊಗಳಿ ಕೊಂಡಾಡಿದ್ದಾರೆ. ಅದರಲ್ಲಿ ಮುಖರ್ಜಿಯವರು ಈ ವರದಿಯನ್ನು ಓದಿ ಇದೊಂದು ಭಾರತೀಯ ಶಿಕ್ಷಣದ ಮೈಲಿಗಲ್ಲು ಎಂದಿದ್ದಾರೆ. ಮತ್ತೊಬ್ಬ ವಿದ್ವಾಂಸರಾದ "ಸರ್ ಡಬ್ಲ್ಯೂ ಜೇಮ್ಸ್‌ರವರು ವುಡ್‌ರ ವರದಿಯು ಒಂದು ಮ್ಯಾಗ್ನಾಕಾರ್ಟ್ ಅಥವಾ ಮಹಾ ಸನ್ನದು ಎಂದು ಕರೆದಿದ್ದಾರೆ."[೨೧] ಈ ವರದಿಯ ಸಲಹೆಗಳನ್ನಾಧರಿಸಿ ಅಂದು ಮೈಸೂರು ಸಂಸ್ಥಾನದಲ್ಲಿ ನ್ಯಾಯಾಂಗ ಕಮೀಷನರ್ ಡಿವ್ಯಾರೋ ಅವರು ಒಂದು ಶಿಕ್ಷಣ ಯೋಜನೆಯನ್ನು ರೂಪಿಸಿ ಸರ್ಕಾರಕ್ಕೆ ಸಲ್ಲಿಸಿದರು. ಅವರ ಪ್ರಕಾರ ೧೮೫೭ರಲ್ಲಿ ಮೈಸೂರು ಸಂಸ್ಥಾನದಲ್ಲಿ ಸಾರ್ವಜನಿಕ ವಿದ್ಯಾಭ್ಯಾಸದ ಇಲಾಖೆ ಸ್ಥಾಪನೆಯಾಯಿತು. ರಾಜ್ಯದಲ್ಲಿ ೮ ಕನ್ನಡ ಶಾಲೆಗಳೂ ಹಲವು ಇಂಗ್ಲಿಷ್ ಶಾಲೆಗಳೂ ಆರಂಭವಾದವು. ಈ ಮೂಲಕ ಮೈಸೂರು ರಾಜ್ಯದ ಸಾರ್ವಜನಿಕ ಶಿಕ್ಷಣಕ್ಕೆ ಅಸ್ತಿಭಾರ ಹಾಕಿದಂತಾಯಿತು. ೧೮೭೪ರಲ್ಲಿ ಪಠ್ಯಪುಸ್ತಕಗಳ ಮುದ್ರಣಕ್ಕಾಗಿ ಸರ್ಕಾರದ ಮುದ್ರಣಾಲಯವನ್ನು ಸ್ಥಾಪಿಸಲಾಯಿತು. ಇಲ್ಲಿಯವರೆಗೆ ಅವುಗಳ ಕೂಲಿಮಠಗಳಾಗಿ ನಡೆದುಕೊಂಡು ಬರುತ್ತಿದ್ದ ಶಾಲೆಗಳಿಗೆ ಇಂಗ್ಲಿಷ್ ಶಾಲೆಗಳು ಮಾದರಿಯ ಪಠ್ಯಕ್ರಮವನ್ನು ಅಳವಡಿಸಿತು.

### ೨. ಹಂಟರ್ ಆಯೋಗ-ಕ್ರಿ.ಶ.೧೮೮೨

ವುಡ್ಸ್ ವರದಿಯು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದ ಕಾರಣ ಹೆಚ್ಚಿನ ಶಾಲೆಗಳು ತೆರೆಯಲ್ಪಟ್ಟವು. ಇಂತಹ ಶಾಲೆಗಳ ಮೇಲೆ ಆಂಗ್ಲ ಪಾದ್ರಿಗಳು ಸಂಪೂರ್ಣ ನಿಯಂತ್ರಣವನ್ನು ಹೊಂದಿದ್ದರು. ಹೀಗಾಗಿ ಈ ಪಾದ್ರಿಗಳ ಕಪಿಮುಷ್ಠಿಯಿಂದ ಶಾಲೆಗಳು ಮುಕ್ತವಾಗಬೇಕೆಂದು ಇಂಗ್ಲೆಂಡ್ ಸರ್ಕಾರವು ಒಂದು ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯು ಲಾರ್ಡ್ ಹೆಲಿಫಾಕ್ಸ್ ಮತ್ತು ಲಾರ್ಡ್ ಲಾರೆನ್ಸ್‌ರವರ ಸಹಕಾರದಿಂದ 'ಭಾರತದ

ಸಾಮಾನ್ಯ ಶಿಕ್ಷಣ ಸಮಿತಿ' ಎಂದು ಗುರುತಿಸಿಕೊಂಡು ಕೆಲಸ ಪ್ರಾರಂಭ ಮಾಡಿತು. ತದನಂತರ ೧೮೮೨ರಲ್ಲಿ ಭಾರತದ ವೈಸರಾಯ್ ಆಗಿದ್ದಂತಹ ಲಾರ್ಡ್ ರಿಪ್ಪನ್‌ರವರನ್ನು ಈ ಸಮಿತಿಗೆ ನೇಮಕ ಮಾಡಲಾಯಿತು. ಲಾರ್ಡ್ ರಿಪ್ಪನ್ ಅವರು ಇಡೀ ದೇಶದಾದ್ಯಂತ ತನಿಖೆ ಕೈಗೊಂಡು ಬ್ರಿಟಿಷ್ ಸರ್ಕಾರಕ್ಕೆ ಒಂದು ಮನವಿಯನ್ನು ಕಳುಹಿಸಿದರು. "ಈ ಮನವಿಯನ್ನಾಧರಿಸಿ ಬ್ರಿಟಿಷ್ ಸರ್ಕಾರ ಈ ಸಮಿತಿಗೆ ಆಡಳಿತ ಮಂಡಳಿಯ ಸದಸ್ಯರಾದ ಶ್ರೀ ವಿಲಿಯಂ ಹಂಟರ್ ಅವರನ್ನು ಅಧ್ಯಕ್ಷರನ್ನಾಗಿ ನಿಯೋಜಿಸಿತು."[೨೨] ಹೀಗಾಗಿ ಈ ಆಯೋಗಕ್ಕೆ ಹಂಟರ್ ಆಯೋಗ ಎಂದು ಕರೆಯಲಾಯಿತು.

ಹಂಟರ್ ಆಯೋಗವು ಪ್ರಾಥಮಿಕ ಶಿಕ್ಷಣಕ್ಕೆ ತನ್ನ ಹೆಚ್ಚಿನ ಗಮನವನ್ನು ನೀಡಿತು. ಏಕೆಂದರೆ ನಿಜವಾಗಿಯೂ ಪ್ರಾಥಮಿಕ ಶಿಕ್ಷಣವೇ ಇದರ ಕ್ಷೇತ್ರವಾಗಿತ್ತು. "ಪ್ರಸ್ತುತ ದಿನಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಹತ್ವನ್ನು ಅರಿತಿದ್ದ ಆಯೋಗವು ಪ್ರಾಥಮಿಕ ಶಿಕ್ಷಣದ ಯೋಜನೆ, ಸಂಘಟನೆ, ಪಠ್ಯಕ್ರಮ, ಶಿಕ್ಷಕರ ತರಬೇತಿ, ಅನುದಾನ ಸಂಹಿತೆ ಮುಂತಾದ ವಿಷಯಗಳನ್ನೂ ಕುರಿತು ಸಲಹೆ ನೀಡಿದೆ."[೨೩] ಆಯೋಗವು ಎಲ್ಲಾ ವಿಷಯಗಳ ಪಠ್ಯಪುಸ್ತಕ ರಚನೆಗೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡಿತು. ಪಠ್ಯಪುಸ್ತಕವನ್ನು ರಚಿಸಲು ಸ್ಥಳೀಯ ಸ್ವಸರ್ಕಾರಗಳಿಗೆ ಸ್ವಾತಂತ್ರ್ಯವನ್ನು ನೀಡಿತು. ಅಂದರೆ ಪ್ರಾಂತೀಯ ಸರ್ಕಾರಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಶಾಲೆಗಳಿಗೆ ಪಠ್ಯಪುಸ್ತಕವನ್ನು ಸಿದ್ಧಪಡಿಸುವ ಹೊಣೆಗಾರಿಕೆಯನ್ನು ಪಡೆದುಕೊಂಡವು. ಹೀಗಾಗಿ ಸ್ಥಳೀಯ ಸರ್ಕಾರಗಳು ಅಂದಿನ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದ ಪಠ್ಯಪುಸ್ತಕಗಳನ್ನು ರಚಿಸಿ ಸಿದ್ಧಪಡಿಸಿ ಸರಬರಾಜು ಮಾಡುತ್ತಿದ್ದವು. ಈ ಪಠ್ಯಪುಸ್ತಕಗಳು ವಿದ್ಯಾರ್ಥಿಗಳ ಬೇಡಿಕೆಗಳನ್ನು ಈಡೇರಿಸುವಂತೆ, ವೈವಿಧ್ಯತೆಯಿಂದ ಕೂಡಿರುವಂತೆ ರಚನೆಯಾಗಬೇಕು ಎಂದು ಆಯೋಗವು ಶಿಫಾರಸ್ಸು ಮಾಡಿತು.

ಆಯೋಗವು ಪಠ್ಯವಸ್ತುವಿನ ಬಗ್ಗೆ ತನ್ನದೇಯಾದ ಕೆಲವು ಸಲಹೆ ಹಾಗೂ ಶಿಫಾರಸ್ಸುಗಳನ್ನು ಮಾಡಿದೆ. ಪಠ್ಯವಸ್ತುವು ಮಕ್ಕಳಿಗೆ ಉಪಯುಕ್ತ ವಿಷಯಗಳನ್ನು ಸರಿಯಾಗಿ ಸಮೀಕ್ಷೆ ಮಾಡಬೇಕು ಎಂದು ತಿಳಿಸಿದೆ. ಭೌತಶಾಸ್ತ್ರ, ವ್ಯವಸಾಯ, ಪ್ರಥಮ ಚಿಕಿತ್ಸೆ, ಬ್ಯಾಂಕಿಂಗ್, ರೇಖಾಗಣಿತ ಇನ್ನೂ ಮುಂತಾದ ಬೋಧಿಸಲ್ಪಡುವ ವಿಷಯಗಳನ್ನು ಇರುವ ವಿಷಯಗಳ ಜೊತೆ ಸೇರ್ಪಡೆಗೊಳಿಸಿ ಅವು ಜೀವನಕ್ಕೆ ಉಪಯುಕ್ತವಾಗುವಂತೆ ಮಾಡಬೇಕು ಎಂದು ತಿಳಿಸಿತು. "ಇದಲ್ಲದೆ ಮಕ್ಕಳ ಪರಿಸರ ಮತ್ತು ಮಾನಸಿಕ ಸಾಮರ್ಥ್ಯಕ್ಕೆ ಅನುಗುಣವಾಗಿರಬೇಕು ಎಂಬ ಮನೋವಿಜ್ಞಾನದ ಅಂಶವನ್ನು ಆಧರಿಸಿ ಹೇಳಿತು. ಪಠ್ಯವಸ್ತುವನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಶಾಲಾ ಶಿಕ್ಷಕರಿಗೆ ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಮಕ್ಕಳಿಗೆ ವಿಷಯವು ಸರಳವಾಗಿ ಹಾಗೂ ಸುಲಭವಾಗಿ ಗ್ರಹಿಸುವಂತೆ ಮತ್ತು ಮಾತೃಭಾಷೆಯಲ್ಲಿ ಪಠ್ಯಪುಸ್ತಕವಿರಬೇಕು ಎಂಬುದಾಗಿ ಆಯೋಗವು ಶಿಫಾರಸ್ಸು ಮಾಡಿತು."[೨೪]

**೩. ಭಾರತ ಸರ್ಕಾರದ ಗೊತ್ತುವಳಿ–ಕ್ರಿ.ಶ.೧೯೧೩**

ಕ್ರಿ.ಶ. ೧೯೧೧–೧೯೧೨ರಲ್ಲಿ ಭಾರತಕ್ಕೆ ಐದನೇ ಜಾರ್ಜ್ ದೊರೆ ಭೇಟಿ ನೀಡಿದರು. ಈ ಸಂದರ್ಭದಲ್ಲಿ ಅವರು ದೆಹಲಿಯಲ್ಲಿ ಒಂದು ದರ್ಬಾರನ್ನು ನಡೆಸಿದರು. ಈ ದರ್ಬಾರಿನಲ್ಲಿ

ಭಾರತ ದೇಶದ ಆಡಳಿತಾತ್ಮಕ ಬದಲಾವಣೆಗೆ ಸಂಬಂಧಿಸಿದಂತೆ ಅನೇಕ ವಿಷಯವನ್ನು ಚರ್ಚೆ ಮಾಡಲಾಯಿತು. ನಂತರ ಈ ದರ್ಬಾರಿನಲ್ಲಿ ಜನತಾ ಶಿಕ್ಷಣಕ್ಕಾಗಿ ಕಿರೀಟಧಾರಣೆಯ ಸಮಾರಂಭದಲ್ಲಿ ಶಿಕ್ಷಣಕ್ಕಾಗಿ ಐವತ್ತು ಲಕ್ಷ ರೂಪಾಯಿಗಳನ್ನು ಮೀಸಲಾಗಿಡುವಂತೆ ತಿಳಿಸಿದನು. ಮುಂದೆ ಫೆಬ್ರವರಿ ೧೯೧೩ರಂದು ಶಿಕ್ಷಣದ ಬಗೆಗೆ ತನ್ನ ನೀತಿಯನ್ನು ಪ್ರಕಟಿಸಿ ಹೊಸ ನಿರ್ಣಯವನ್ನು ಕೈಗೊಂಡಿತು. ಪ್ರಾಥಮಿಕ ಶಿಕ್ಷಣದ ವಿಸ್ತರಣೆಗಾಗಿ ಹಾಗೂ ಶಿಕ್ಷಣದ ಗುಣಾತ್ಮಕ ಬೆಳವಣಿಗೆಗೆ ಹೊಸ ನಿರ್ಣಯವು ಸೇರಿದಂತೆ ಹಲವಾರು ಅಂಶಗಳನ್ನು ಶಿಫಾರಸ್ಸು ಮಾಡಿತು.

೧೯೧೩ರ ಭಾರತ ಸರ್ಕಾರದ ಗೊತ್ತುವಳಿಯು ಪಠ್ಯಪುಸ್ತಕಕ್ಕೆ ಸಂಬಂಧಿಸಿದಂತೆ ತನ್ನದೇಯಾದ ಅಭಿಪ್ರಾಯವನ್ನು ಸೂಚಿಸಿದೆ. ಪಠ್ಯಪುಸ್ತಕವು ನಗರ ಮತ್ತು ಗ್ರಾಮೀಣ ಪ್ರದೇಶಗಳಿಗೆ ಭಿನ್ನಭಿನ್ನವಾಗಿರದೆ ಏಕರೀತಿಯಲ್ಲಿ ಇರಬೇಕು ಎಂದು ತಿಳಿಸಿದೆ. ನಗರ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಭಿನ್ನ-ಭಿನ್ನ ಪಠ್ಯವಸ್ತುವನ್ನು ಅಳವಡಿಸುವುದರಿಂದ ಭಾರತದಲ್ಲಿ ಯಾವ ಕಾರ್ಯ ಫಲ ಲಭಿಸುವುದಿಲ್ಲ ಎಂಬ ಅಭಿಪ್ರಾಯ ಸೂಚಿಸಿತು. "ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಭೂ ವಿವರಣೆ, ಪ್ರವಾಸ ಇತ್ಯಾದಿ ಪಾಠಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕು ಎಂದಿದೆ."[೨೫] ಈ ರೀತಿಯಾದ ವಿಷಯವನ್ನು ಪಠ್ಯವಸ್ತುವಿನಲ್ಲಿ ಅಳವಡಿಸುವುದರಿಂದ ವರ್ಗಾವಣೆಗೊಳ್ಳುವ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲ ವಾಗಲಿದೆ. ಪ್ರವಾಸದ ಮೂಲಕ ಮಕ್ಕಳು ನೈಜವಾದ ಅನುಭವವನ್ನು ಪಡೆದುಕೊಳ್ಳುವವರಲ್ಲದೆ ಅವರ ಜ್ಞಾನವನ್ನು ವಿಸ್ತರಿಸಿಕೊಳ್ಳುವುದಕ್ಕೆ ಇದು ಅನುಕೂಲವಾಗಲಿದೆ. ಅದರಲ್ಲೂ ಐತಿಹಾಸಿಕ ಮಹತ್ವದ ಸ್ಥಳಗಳಿಗೆ ಹೆಚ್ಚಿನ ಪ್ರವಾಸವನ್ನು ಕೈಗೊಳ್ಳಬೇಕು. ಅವುಗಳ ಐತಿಹಾಸಿಕ ಮಹತ್ವವನ್ನು ಮಕ್ಕಳಿಗೆ ತಿಳಿಸಿಕೊಡಬೇಕು ಎಂಬುದಾಗಿ ಶಿಫಾರಸ್ಸು ಮಾಡಿದೆ. ಒಟ್ಟಾರೆಯಾಗಿ ಆಯೋಗವು ಪ್ರಾಥಮಿಕ ಹಂತದ ಚರಿತ್ರೆಯಲ್ಲಿ ಸ್ಥಳೀಯ ಚರಿತ್ರೆಯನ್ನು ಮಕ್ಕಳಿಗೆ ಪರಿಚಯಿಸುವ ಕೆಲಸಕ್ಕೆ ಆಯೋಗ ಆದ್ಯತೆ ನೀಡಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

**೪. ಹಾರ್ಟಾಗ್ ಸಮಿತಿ–ಕ್ರಿಶ.೧೯೨೯**

ಕ್ರಿಶ. ೧೯೦೯ರ ಮಾರ್ಲೆಮಿಂಟೋ ಸುಧಾರಣೆಗಳನ್ನು ೧೯೧೯ರಲ್ಲಿ ಇಂಗ್ಲೆಂಡಿನಲ್ಲಿ ಅನುಮೋದಿಸಿ ನಂತರ ಭಾರತದಲ್ಲಿ ೧೯೨೧ರಲ್ಲಿ ಅದನ್ನು ಜಾರಿಗೆ ತರಲಾಯಿತು. ಆನಂತರ ೧೯೨೭ರಲ್ಲಿ ಬ್ರಿಟಿಷ್ ಸರ್ಕಾರ ಭಾರತದಲ್ಲಿನ ಎಲ್ಲಾ ಕ್ಷೇತ್ರಗಳ ಅಧ್ಯಯನ ಮಾಡಲು ಸೈಮನ್ ಆಯೋಗವನ್ನು ನೇಮಿಸಿತು. ಈ ಸೈಮನ್ ಆಯೋಗವು ಭಾರತದ ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳ ಪ್ರಗತಿಯನ್ನು ಅಧ್ಯಯನ ಮಾಡುವುದಕ್ಕೆ ನೇಮಿಸಲಾಯಿತು. ಆಯೋಗ ಶಿಕ್ಷಣ ಕ್ಷೇತ್ರದಲ್ಲಿ ಆದಂತಹ ಪ್ರಗತಿಯನ್ನು ಅಧ್ಯಯನ ಮಾಡಲು ಅಂದಿನ ಢಾಕಾ ವಿಶ್ವವಿದ್ಯಾಲಯದ ಕುಲಪತಿಗಳು ಹಾಗೂ ಕಲ್ಕತ್ತ ವಿಶ್ವವಿದ್ಯಾಲಯದ ಆಯೋಗದ ಸದಸ್ಯರಲ್ಲೊಬ್ಬರಾದ ಪಿಲಿಫ್ ಹರ್ಟಾಗ್ ಅವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯು ಭಾರತದ ಶಿಕ್ಷಣದ ವಿವಿಧ ಹಂತಗಳ ಸಮಸ್ಯೆಗಳನ್ನು ವಿವರವಾಗಿ ಹಾಗೂ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ೧೯೨೯ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಆಯೋಗ ತನ್ನ ವರದಿಯಲ್ಲಿ ಶಿಕ್ಷಣದ ಪ್ರಗತಿ ಪರಿಮಾಣಾತ್ಮಕವಾಗಿ ಅಲ್ಲ ಗುಣಾತ್ಮಕವಾಗಿ ಇರಬೇಕೆಂದು ತಿಳಿಸಿತು.

ಆಯೋಗವು ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳಿಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಂಡು ಬಂದಿದೆ. ಏಕೆಂದರೆ ಭಾರತವು ಹಳ್ಳಿಗಳ ದೇಶ. ಇಂತಹ ಹಳ್ಳಿಯಲ್ಲಿ ಮೂಲ ಸೌಕರ್ಯಗಳ ಕೊರತೆ, ಮಹಿಳಾ ಶಿಕ್ಷಕಿಯರು ಕೆಲಸ ಮಾಡಲು ಹಿಂದೇಟು ಹಾಕುವುದು, ಸರಿಯಾದ ಮೇಲ್ವಿಚಾರಣೆ ಇಲ್ಲದೆ ಇರುವುದು, ಏಕೋಪಾಧ್ಯಾಯ ಶಾಲೆ ಬಹುವರ್ಗ ಬೋಧನೆ ಮುಂತಾದ ಹತ್ತು ಹಲವಾರು ಸಮಸ್ಯೆಗಳನ್ನು ಗುರುತಿಸಿ ಅವುಗಳಲ್ಲಿ ಶಾಲೆಗಳಲ್ಲಿ ಎದ್ದು ಕಾಣುವ ಎರಡು ಪ್ರಮುಖ ಸಮಸ್ಯೆಗಳನ್ನು ಈ ಹಿಂದೆ ಯಾವ ಆಯೋಗವು ಮಾಡದೆ ಇರುವುದನ್ನು ಮಾಡಿತು. ಅದೇನೆಂದರೆ ಅಪವ್ಯಯ ಹಾಗೂ ನಿಲುಗಡೆ ಇವುಗಳ ಬಗ್ಗೆ ಆಯೋಗವು ವ್ಯಾಖ್ಯಾನಿಸಿ ಅವುಗಳಿಗೆ ಪರಿಹಾರನ್ನು ಸಹ ಸೂಚಿಸಿತು. "ಪ್ರಾಥಮಿಕ ಶಿಕ್ಷಣವು ಪೂರ್ಣಗೊಳ್ಳುವ ಮೊದಲೇ ಯಾವುದೇ ಹಂತದಲ್ಲಿ ಮಕ್ಕಳನ್ನು ಅಕಾಲಿಕವಾಗಿ ಶಾಲೆಗಳಿಂದ ವಾಪಾಸ್ಸು ಕರೆಸಿಕೊಂಡರೆ ನಾವು ಅದನ್ನು ಅಪವ್ಯಯವೆನ್ನುತ್ತೇವೆ. ಹಾಗೂ ಒಂದು ವರ್ಷಕ್ಕಿಂತ ಹೆಚ್ಚು ಅವಧಿ ಒಂದು ಮಗುವು ಕೆಳತರಗತಿಯಲ್ಲಿ ಉಳಿದರೆ ಅದನ್ನು ನಿಲುಗಡೆ ಎನ್ನುತ್ತೇವೆ ಎಂದು ಆಯೋಗವು ವರದಿಯಲ್ಲಿ ತಿಳಿಸಿದೆ."[೨೬]

ಹಾರ್ಟಾಗ್ ಸಮಿತಿಯು ಪ್ರಾಥಮಿಕ ಶಾಲೆಯ ಪಠ್ಯಕ್ರಮಕ್ಕೆ ಸಂಬಂಧಿಸಿದಂತೆ ಕೆಲವು ಶಿಫಾರಸ್ಸು ಮಾಡಿತು. ಪ್ರಾಥಮಿಕ ಶಾಲೆಯಲ್ಲಿ ಪಠ್ಯಕ್ರಮದಲ್ಲಿ ವ್ಯಾಪಕವಾದ ಬದಲಾವಣೆಯನ್ನು ತರಬೇಕು ಎಂದು ತಿಳಿಸಿತು. ಅಲ್ಲದೆ ಪ್ರಾಥಮಿಕ ಶಾಲಾ ಹಂತದಲ್ಲಿ ಪಠ್ಯಪುಸ್ತಕದ ಮುಖ್ಯ ಗುರಿ ಕೇವಲ ಜ್ಞಾನ ಪ್ರಸಾರ ಮಾಡುವುದಕ್ಕೆ ಸೀಮಿತವಾಗಿರದೆ ಅದು ನೈಜ ಜೀವನಕ್ಕೆ ಹತ್ತಿರವಾಗಿರುವಂತೆ ಸಿದ್ಧಪಡಿಸಬೇಕು ಎಂದು ಸೂಚಿಸಿತು. "ವಿಶೇಷವಾಗಿ ಬಾಲಕಿಯರ ಅವಶ್ಯಕತೆಗಳಿಗೆ ಅನುಗುಣವಾಗಿ ಪಠ್ಯವಸ್ತು ಇರಬೇಕು. ಇದು ವೈವಿಧ್ಯತೆಯಿಂದ ಕೂಡಿದ್ದು ವಾಣಿಜ್ಯ ಮತ್ತು ಔದ್ಯೋಗಿಕ ವಿಷಯಗಳನ್ನು ಬೋಧಿಸುವಂತಿರಬೇಕು ಎಂದು ಶಿಫಾರಸ್ಸು ಮಾಡಿದೆ."[೨೭]

### ೫. ಸಾರ್ಜೆಂಟ್ ವರದಿ–ಕ್ರಿ.ಶ.೧೯೪೪

ಕ್ರಿ.ಶ. ೧೯೩೯ರ ನಂತರ ಎರಡನೇ ಮಹಾಯುದ್ಧ ಅಂತ್ಯಗೊಂಡ ನಂತರ ಭಾರತ ಸರ್ಕಾರವು ಭಾರತದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕೆಂದು ಮತ್ತು ಪುನರ್‌ವ್ಯವಸ್ಥೆಗೊಳಿಸಬೇಕೆಂದು ಹಲವು ಯೋಜನೆಗಳನ್ನು ತಯಾರು ಮಾಡಿತು. ಇದರಲ್ಲಿ ಸರ್ ಜಾನ್ ಸಾರ್ಜೆಂಟ್ ವರದಿಯು ಒಂದು ಪ್ರಮುಖ ಯೋಜನೆಯಾಗಿದೆ. ಕ್ರಿ.ಶ. ೧೯೪೪ರಲ್ಲಿ ಸರ್ ಜಾನ್ ಸಾರ್ಜೆಂಟ್ ಅವರ ನೇತೃತ್ವದಲ್ಲಿ ಭಾರತದ ಶಿಕ್ಷಣದ ಅಭಿವೃದ್ಧಿಗೆ ಸಂಬಂಧಿಸಿದಂತೆ ಒಂದು ವರದಿಯನ್ನು ಸಿದ್ಧಪಡಿಸಿ ಸಲ್ಲಿಸಲಾಯಿತು ಹೀಗಾಗಿ ಈ ವರದಿಗೆ ಸಾರ್ಜೆಂಟ್ ವರದಿ ಎಂದು ಕರೆಯಲಾಯಿತು. ಇದನ್ನು ೧೯೪೪ರ ಕೇಂದ್ರ ಶಿಕ್ಷಣ ಸಲಹಾ ಮಂಡಳಿ ಎಂತಲೂ ಇನ್ನೊಂದು ಹೆಸರಿನಿಂದ ಕರೆಯಲಾಗಿದೆ. ಈ ವರದಿಯು ಬಹು ಮುಖ್ಯವಾಗಿ ರಾಷ್ಟ್ರೀಯ ಶಿಕ್ಷಣ ಬೆಳವಣಿಗೆಯ ವ್ಯವಸ್ಥೆಗೆ ಸಂಬಂಧಪಟ್ಟಿದ್ದು ಐತಿಹಾಸಿಕ, ಶೈಕ್ಷಣಿಕ ಮಹತ್ವವನ್ನು ಹೊಂದಿದೆ. ಭಾರತದ ಶೈಕ್ಷಣಿಕ ಸಮಸ್ಯೆಗಳನ್ನು

ಪ್ರಾಥಮಿಕ ಶಿಕ್ಷಣದಿಂದ ವಿಶ್ವವಿದ್ಯಾನಿಲಯ ಹಂತದವರೆಗೆ ಸರಿಯಾಗಿ ಮನದಟ್ಟು ಮಾಡಿಕೊಂಡು ಸಂಗ್ರಹಿಸಿರುವುದರಲ್ಲಿ ಸಾಮಾನ್ಯವಾಗಿ ಇದೇ ಮೊಟ್ಟಮೊದಲ ವರದಿ ಎಂದು ಹೇಳಬಹುದು.

ಆಯೋಗವು ಪ್ರಾಥಮಿಕ ಶಿಕ್ಷಣವನ್ನು ಪ್ರಮುಖವಾಗಿ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಿಕ್ಷಣವೆಂದು ಪ್ರತ್ಯೇಕವಾಗಿ ಅಧ್ಯಯನ ಮಾಡಿದೆ. ಪೂರ್ವ ಪ್ರಾಥಮಿಕ ಶಾಲೆಗಳೆಂದರೆ ಗ್ರಾಮೀಣ ಪ್ರದೇಶದ ಶಿಶುವಿಹಾರಗಳು. ನಗರ ಪ್ರದೇಶದಲ್ಲಿ ಪ್ರತ್ಯೇಕವಾಗಿ ಪೂರ್ವ ಪ್ರಾಥಮಿಕ ಶಾಲೆಗಳಿವೆ ಎಂದು ತಿಳಿಸಿತು. ಈ ಪೂರ್ವ ಪ್ರಾಥಮಿಕ ಶಿಕ್ಷಣವು ಸಂಪೂರ್ಣ ಉಚಿತ ಹಾಗೂ ಕಡ್ಡಾಯವಾಗಿರಬೇಕೆಂದು ತಿಳಿಸಿದೆ. ಇನ್ನೂ ಪ್ರಾಥಮಿಕ ಶಿಕ್ಷಣವು ೬ ರಿಂದ ೧೪ ವಯಸ್ಸಿನ ಮಕ್ಕಳಿಗೆ ಕಡ್ಡಾಯವಾಗಿ ಹಾಗೂ ಉಚಿತವಾಗಿ ಕೊಡಬೇಕೆಂದು ತಿಳಿಸಿತು. ಈ ಹಂತದಲ್ಲಿ ಶಿಕ್ಷಣವು ಮೂಲಭೂತ ಕರಕುಶಲತೆಯ ತಳಹದಿಯ ಮೇಲೆ ನಿಂತಿರಬೇಕು ಎಂದು ಶಿಫಾರಸ್ಸು ಮಾಡಿದೆ.

ಈ ಆಯೋಗವು ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆಗಳ ಬಗ್ಗೆ ಹೆಚ್ಚಿನ ಗಮನಹರಿಸಿದೆ ಆದರೆ ಪಠ್ಯವಸ್ತುವಿನ ಬಗ್ಗೆ ಯಾವುದೇ ರೀತಿಯಾದ ಮಾಹಿತಿಯನ್ನು ಆಯೋಗವು ಶಿಫಾರಸ್ಸು ಮಾಡಿರುವುದು ಪ್ರತ್ಯೇಕವಾಗಿ ಕಂಡುಬಂದಿಲ್ಲ.

ಒಟ್ಟಾರೆಯಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಸರ್ಕಾರ ತನ್ನ ನೇರ ಆಡಳಿತಕ್ಕೆ ಭಾರತವನ್ನು ತೆಗೆದುಕೊಂಡಿದ್ದರಿಂದ ಅದು ಶಿಕ್ಷಣದ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆಗೆ ಅವಕಾಶ ಮಾಡಿಕೊಟ್ಟಿದೆ ಎಂದರೆ ತಪ್ಪಾಗಲ್ಲ. ಏಕೆಂದರೆ ಇಂದಿನ ಆಧುನಿಕ ಶಿಕ್ಷಣ ವ್ಯವಸ್ಥೆಗೆ ಅಂದೇ ಬ್ರಿಟಿಷರು ಬುನಾದಿಯನ್ನು ಹಾಕಿದ್ದರು. ಆದರೆ ಇವುಗಳ ಬಗ್ಗೆ ಅನೇಕ ತಜ್ಞರು, ವಿದ್ವಾಂಸರುಗಳು, ಟೀಕೆ ಮಾಡಿದ್ದಾರೆ. ಆದರೆ ಅವುಗಳನ್ನೆಲ್ಲಾ ಮೀರಿ ಬ್ರಿಟಿಷ್ ಸರ್ಕಾರ ಭಾರತದಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಗೆ ಗಮನಹರಿಸಿರುವುದು ಗಮನಾರ್ಹ ಅಂಶ.

### ೩.೩.೨. ಸ್ವಾತಂತ್ರ್ಯೋತ್ತರ ಭಾರತದ ಶಿಕ್ಷಣ ವ್ಯವಸ್ಥೆ

ಸ್ವಾತಂತ್ರ್ಯ ಲಭಿಸಿದ ಮೇಲೆ ಭಾರತ ಸರ್ಕಾರ ರಾಷ್ಟ್ರದ ಸರ್ವತೋಮುಖವಾದ ಅಭಿವೃದ್ಧಿ ಸಾಧಿಸುವ ಕಾರ್ಯವನ್ನು ಕೈಗೊಂಡಿತು. ಆ ಕಾರ್ಯಕ್ಕೆ ಶಿಕ್ಷಣ ಕ್ಷೇತ್ರದಲ್ಲಿ ಅಗತ್ಯವೆನಿಸುವ ಸುಧಾರಣೆಗಳನ್ನು ಮಾಡಲು ಆಲೋಚಿಸಿತು. ೧೯೪೮ರಲ್ಲಿ ವಿಶ್ವವಿದ್ಯಾಲಯ ಶಿಕ್ಷಣದ ಸುಧಾರಣಾ ಆಯೋಗವನ್ನು ಆ ನಂತರ ೧೯೫೩ರಲ್ಲಿ ಸೆಕೆಂಡರಿ ಶಿಕ್ಷಣದ ಸುಧಾರಣಾ ಆಯೋಗವನ್ನು ನೇಮಿಸಿತು. ಅವುಗಳ ಸಲಹೆಯನ್ನು ಅನುಸರಿಸಿ ಮೈಸೂರು ರಾಜ್ಯದಲ್ಲಿ ಶಿಕ್ಷಣದ ಸುಧಾರಣೆಗೆ ಅವಕಾಶ ಕಲ್ಪಿಸಿದಂತಾಯಿತು. ಈ ಸುಧಾರಣೆ ತರುವ ವೇಳೆಗೆ ರಾಜ್ಯಗಳ ಪುನರ್ವಿಂಗಡಣೆಯಾಗಿ ವಿಶಾಲ ಮೈಸೂರು ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂದಿತು. ಭಾರತ ಸ್ವತಂತ್ರವಾದ ಮೇಲೆ ಶಿಕ್ಷಣಕ್ಕೆ ದೊರೆತ ಪ್ರೋತ್ಸಾಹದ ಫಲವಾಗಿ ಹಳೆಯ ಮೈಸೂರಿನಲ್ಲೂ, ಮದರಾಸು, ಬೊಂಬಾಯಿ, ಹೈದರಾಬಾದ್ ಕರ್ನಾಟಕ ಮತ್ತು ಕೊಡಗು ಈ ಪ್ರದೇಶಗಳಲ್ಲಿ ಎಲ್ಲ ಮಟ್ಟದ ಶಿಕ್ಷಣ ಸಂಸ್ಥೆಗಳೂ ಹೆಚ್ಚುತ್ತಾ ಹೋದವು. ಆದರೆ ಒಂದೊಂದು ಪ್ರದೇಶವೂ ತನ್ನದೇ ಆದ ರೀತಿಯಾದ

ವ್ಯತ್ಯಾಸಗಳನ್ನು ಹೊಂದಿತ್ತು. ರಾಜ್ಯದ ಪುನರ್ವಿಂಗಡಣೆಯಾದ ಮೇಲೆ ಅವೆಲ್ಲವನ್ನು ಸಾಧಿಸಲು ವಿಶಾಲ ಮೈಸೂರಿನ ಶಿಕ್ಷಣವನ್ನು ಹೊಸ ರೀತಿಯಲ್ಲಿ ವ್ಯವಸ್ಥೆಗೊಳಿಸಬೇಕಾಯಿತು. ಹೀಗೆ ವ್ಯವಸ್ಥೆಗೊಳಿಸುವ ಕಾರ್ಯಕ್ರಮ ಕ್ರಮವಾಗಿ ಸಾಗುತ್ತಾ ಬಂದು ೧೯೬೦ರ ವೇಳೆಗೆ ಪೂರ್ಣಗೊಂಡಿತೆನ್ನಬಹುದು. ಇದರ ಫಲವಾಗಿ ವಿಶಾಲ ಮೈಸೂರಿನ ಶಿಕ್ಷಣ ವ್ಯವಸ್ಥೆಗೆ ಹೊಸ ರೂಪ ಬಂತು.

**೧. ಪ್ರೌಢ ಶಿಕ್ಷಣ ಆಯೋಗ ಅಥವಾ ಮಾಧ್ಯಮಿಕ ಶಿಕ್ಷಣ ಆಯೋಗ-ಕ್ರಿ.ಶ.೧೯೫೩**

ಭಾರತ ದೇಶವು ಬಂಧ ವಿಮೋಚನೆಯಾಗಬೇಕೆಂದು ರಾಜಕೀಯ, ಸಾಮಾಜಿಕ, ಧಾರ್ಮಿಕ, ವಿಷಯಗಳಲ್ಲಿ ಸಮಗ್ರತೆಯನ್ನು ಸಾಧಿಸಿ ತೀವ್ರಗತಿಯಲ್ಲಿ ಬದಲಾವಣೆ ಮಾಡಲು ಶಿಕ್ಷಣದಲ್ಲಿ ಒಂದು ಹೊಸ ತಿರುವು ಬಗ್ಗೆ ಭಾರತ ಸರ್ಕಾರ ಯೋಚಿಸಿತು. ಈ ಸಂದರ್ಭದಲ್ಲಿ ೧೯೪೮ರಲ್ಲಿ ಕೇಂದ್ರ ಶಿಕ್ಷಣ ಸಲಹಾ ಮಂಡಳಿಯು (ಸಿ.ಎ.ಬಿ.ಇ.) ಪ್ರೌಢ ಶಿಕ್ಷಣ ಪದ್ಧತಿಯನ್ನು ಪುನರ್‌ವ್ಯವಸ್ಥೆ ಮಾಡಿ ಶಿಕ್ಷಣದ ಅಭಿವೃದ್ಧಿಗೆ ಸೂಕ್ತ ಸಲಹೆಗಳನ್ನು ಕೊಡಲು ಮತ್ತು ಪ್ರೌಢ ಶಿಕ್ಷಣ ಕಂಗಾಲಾಗಿದ್ದು ದುಸ್ಥಿತಿಯಲ್ಲಿರುವುದನ್ನು ಸರಿಯಾಗಿ ಪರಿಶೀಲಿಸಿ ಉತ್ತಮ ಸಲಹೆ ನೀಡಲು ೧೯೫೨ರ ಸೆಪ್ಟೆಂಬರ್ ೨೦ರಂದು ಒಂದು ಆಯೋಗವನ್ನು ನೇಮಿಸಿತು. ಆ ಆಯೋಗಕ್ಕೆ ಮಾಧ್ಯಮಿಕ ಶಿಕ್ಷಣ ಆಯೋಗ ಎಂದು ಕರೆಯಲಾಯಿತು. ಆ ಆಯೋಗದ ಅಧ್ಯಕ್ಷತೆಯನ್ನು ಡಾ. ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರು ವಹಿಸಿಕೊಂಡಿದ್ದರಿಂದ ಈ ಆಯೋಗವನ್ನು ಮೊದಲಿಯಾರ್ ಆಯೋಗವೆಂತಲೂ ಕರೆಯುತ್ತಾರೆ. ಈ ಆಯೋಗದಲ್ಲಿ ಮೊದಲಿಯಾರ್ ಅವರನ್ನು ಒಳಗೊಂಡಂತೆ ಇತರೆ ಒಂಬತ್ತು ಸದಸ್ಯರು ಇದ್ದರು. ಆಯೋಗವು ಪ್ರೌಢ ಶಿಕ್ಷಣಕ್ಕೆ ಬೇಕಾದ ಪಠ್ಯವಸ್ತು, ಬೋಧನಾಕ್ರಮ, ಪರೀಕ್ಷೆಗಳು, ಶಿಕ್ಷಕರ ಪಾತ್ರವನ್ನು ಒಳಗೊಂಡಂತೆ ೧೯೫೩ರ ಆಗಸ್ಟ್ ೨೩ರಂದು ತನ್ನ ವರದಿಯನ್ನು ಸಿದ್ಧಪಡಿಸಿ ಮಂಡಿಸಿತು. ಮುಂದೆ ೧೯೫೪ರ ಫೆಬ್ರವರಿಯಲ್ಲಿ ಈ ಸಲಹೆಗಳನ್ನು ಕೇಂದ್ರೀಯ ಶಿಕ್ಷಣ ಸಲಹಾ ಮಂಡಳಿ ಅಂಗೀಕರಿಸಿತು.

**ಪಠ್ಯವಸ್ತು**

ಮೊದಲಿಯಾರ್ ಆಯೋಗವು ಅಂದು ಇದ್ದ ಪ್ರೌಢ ಶಿಕ್ಷಣದ ಪಠ್ಯವಸ್ತುವಿನ ಬಗ್ಗೆ ಅತೃಪ್ತಿಯನ್ನು ಹೊಂದಿತ್ತು. ಅಲ್ಲದೆ ಪಠ್ಯವಸ್ತುವಿನಲ್ಲಿ ದೋಷಗಳನ್ನು ಗುರುತಿಸಿ ಅವುಗಳನ್ನು ಸರಿಪಡಿಸಲು ಕೆಲವು ಉತ್ತಮ ಸಲಹೆಗಳನ್ನು ನೀಡಿತು. "ಇದರಲ್ಲಿ ಆಯೋಗವು ಗುರುತಿಸಿದ ಪ್ರಮುಖ ಸಮಸ್ಯೆಗಳೆಂದರೆ ಪಠ್ಯವಸ್ತುವು ಅಲ್ಪಮತೀಯವಾಗಿದೆ ಮತ್ತು ಸೈದ್ಧಾಂತಿಕವಾಗಿದೆ ವಿಷಯಗಳು ಗೊಂದಲಮಯವಾಗಿವೆ ಎಂದು ತಿಳಿಸಿತು. ಪಠ್ಯವಸ್ತುವು ಯಾವುದೇ ಪ್ರಯೋಗ ಚಟುವಟಿಕೆಗಳಿಗೆ ಅವಕಾಶವನ್ನು ಕಲ್ಪಿಸಿಲ್ಲ. ಇದರಿಂದ ಮಕ್ಕಳ ಸರ್ವತೋಮುಖವಾದ ಅಭಿವೃದ್ಧಿ ಸಾಧಿಸಲು ಸಾಧ್ಯವಿಲ್ಲವೆಂದು ಹೇಳಿತು. ಜೊತೆಗೆ ಮಕ್ಕಳ ಅವಶ್ಯಕತೆಗಳನ್ನು ಪೂರೈಸುವಂತಹ ಪಠ್ಯವಸ್ತುಗಳು ಇವುಗಳಾಗಿಲ್ಲ ಎಂದು ಗುರುತಿಸಿತು."[೨೮] ಈ ರೀತಿಯಾಗಿ ಆಯೋಗವು ಗುರುತಿಸಿದ ಲೋಪದೋಷಗಳಿಗೆ ಆಯೋಗವೇ ಕೆಲವು ಪರಿಹಾರವನ್ನು ಕೂಡ ಸೂಚಿಸಿತು. ಅವುಗಳೆಂದರೆ

ಚಟುವಟಿಕೆ ಆಧಾರಿತವಾದಂತಹ, ವೈಯಕ್ತಿಕ ಭಿನ್ನತೆಯನ್ನು ಆಧರಿತ ಮಗುವಿನ ಅಭಿರುಚಿಗೆ ತಕ್ಕಂತೆ ಇರಬೇಕು. ಪಠ್ಯವಸ್ತುವು ಸಾಮಾಜಿಕ ಮತ್ತು ಸಾಮುದಾಯಿಕತೆಗೆ ಹೊಂದಿಕೊಳ್ಳುವಂತಿರಬೇಕು. "ವಿರಾಮ ವೇಳೆಯನ್ನು ಸದುಪಯೋಗಪಡಿಸಿಕೊಳ್ಳುವಂತೆ ಇರಬೇಕು. ಪಠ್ಯವಸ್ತುವಿನ ವಿಷಯಗಳು ಒಂದಕ್ಕೊಂದು ಅಂತರಸಂಬಂಧ ಹೊಂದಿರಬೇಕು. ಅದು ಮಗುವಿನ ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು ಎಂದು ಕೆಲವು ಸಲಹೆಗಳನ್ನು ಸೂಚಿಸಿದೆ."[೨೯]

ಆಯೋಗವು ಪಠ್ಯಪುಸ್ತಕಗಳ ಆಯ್ಕೆಯ ಬಗ್ಗೆ ತನ್ನದೇಯಾದ ಕೆಲವು ಉಪಯುಕ್ತವಾದ ಸಲಹೆಗಳನ್ನು ಸೂಚಿಸಿದೆ. ಪಠ್ಯಪುಸ್ತಕಗಳನ್ನು ಆಯ್ಕೆ ಮಾಡುವಾಗ ಉತ್ತಮ ಅಂಶ ಮತ್ತು ಉಪಯುಕ್ತತೆಯ ಆಧಾರದ ಮೇಲೆ ಆಯ್ಕೆ ಮಾಡಬೇಕು. ಅದಕ್ಕಾಗಿ ಉನ್ನತ ಅಧಿಕಾರದ ಸಮಿತಿಯೊಂದನ್ನು ಪ್ರಾರಂಭಿಸಬೇಕೆಂದು ಆಯೋಗವು ಶಿಫಾರಸ್ಸು ಮಾಡಿದೆ. ಉತ್ತಮ ಪಠ್ಯಪುಸ್ತಕಗಳನ್ನು ಆಯ್ಕೆ ಮಾಡುವಾಗ ಅದರಲ್ಲಿ ಕೆಲವು ಅಂಶಗಳನ್ನು ಗಮನಿಸಬೇಕು ಎಂದು ಸೂಚಿಸಿದೆ. ಆ ಅಂಶಗಳು ಈ ರೀತಿಯಾಗಿವೆ. ಉತ್ತಮವಾಗಿ ಮುದ್ರಿಸುವಿಕೆ, ಉತ್ತಮವಾದ ಕಾಗದದ ಬಳಕೆ ಮಾಡಿಕೊಳ್ಳಬೇಕು. ಯೋಗ್ಯವಾದಂತಹ ಉದಾಹರಣೆಗಳನ್ನು ಬಳಸಿರಬೇಕು, ಉತ್ತಮವಾದಂತಹ ಚಿತ್ರಗಳನ್ನು ಒಳಗೊಂಡಿರಬೇಕು ಹಾಗೂ ಯೋಗ್ಯವಾದಂತಹ ವಿಷಯವಸ್ತುವನ್ನು ಒಳಗೊಂಡಿರಬೇಕು ಎಂದು ಸೂಚಿಸಿದೆ. ಇದಲ್ಲದೆ ಆಯೋಗವು ಪಠ್ಯಪುಸ್ತಕ ಸಮಿತಿಯಲ್ಲಿ ಉತ್ತಮವಾದ ಸದಸ್ಯರ ತಂಡ ಇರಬೇಕೆಂದು ಬಯಸಿ ಅದಕ್ಕೆ ಕೆಲವು ಅಧಿಕಾರಿಗಳನ್ನು ಒಳಗೊಂಡಂತೆ ಅದು ಸಿದ್ಧಪಡಿಸಬೇಕು ಎಂದು ತಿಳಿಸಿದೆ. ಅಂತಹ ಅಧಿಕಾರಿಗಳೆಂದರೆ.

೧. ಹೈಕೋರ್ಟ್‌ನ ನ್ಯಾಯಾಧೀಶರು.

೨. ಪಬ್ಲಿಕ್ ಸರ್ವಿಸ್ ಕಮಿಟಿಯ ಸದಸ್ಯ

೩. ವಿಶ್ವವಿದ್ಯಾಲಯದ ಉಪಕುಲಪತಿ

೪. ಸರ್ಕಾರಿ ಶಿಕ್ಷಣ ಸಂಸ್ಥೆಯ ಪ್ರಿನ್ಸಿಪಾಲರು

೫. ಇಬ್ಬರು ಶ್ರೇಷ್ಠ ಶಿಕ್ಷಣ ತಜ್ಞರು ಹಾಗೂ ರಾಜ್ಯ ಶಿಕ್ಷಣದ ನಿರ್ದೇಶಕರು.[೩೦]

ಇಂತಹ ಸದಸ್ಯರಿಂದ ನೇಮಕಗೊಂಡ ಪಠ್ಯಪುಸ್ತಕಗಳನ್ನು ಆಯೋಗವು ಪದೇ ಪದೇ ಬದಲಾವಣೆ ಮಾಡಬಾರದು ಎಂದು ಶಿಫಾರಸ್ಸು ಮಾಡಿದೆ.

**೨. ಕೊಠಾರಿ ಆಯೋಗ-ಕ್ರಿ.ಶ.೧೯೬೪-೬೬**

ಪಂಚವಾರ್ಷಿಕ ಯೋಜನೆಗಳು ಪ್ರಾರಂಭಿಕವಾಗಿ, ರಾಷ್ಟ್ರದ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿಯನ್ನುಂಟು ಮಾಡಿದವು. ಆದರೆ ಈ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಕೆಲವು ತೊಂದರೆ ಗಳುಂಟಾದವು. ಈ ತೊಂದರೆಗಳಿಂದಾಗಿ ಅಪೇಕ್ಷಿತವಾದ ಯಶಸ್ಸನ್ನು ಪಡೆಯಲು ಸಾಧ್ಯವಾಗಲಿಲ್ಲ. ಈ ತೊಂದರೆಗಳಲ್ಲಿ ಶಿಕ್ಷಣವೂ ಸಹ ಒಂದು ಪ್ರಮುಖವಾದ ವಿಷಯವಾಗಿ ಪರಿಣಮಿಸಿತು. ಇದನ್ನು ಸರ್ಕಾರವು ಅರಿತುಕೊಂಡು ಸುಧಾರಣೆಗಳನ್ನು ತರಲು ೧೯೪೮ರಲ್ಲಿ ವಿಶ್ವವಿದ್ಯಾಲಯ

ಶಿಕ್ಷಣ ಆಯೋಗವನ್ನು ಹಾಗೂ ೧೯೫೨ರಲ್ಲಿ ಮಾಧ್ಯಮಿಕ ಶಿಕ್ಷಣ ಆಯೋಗವನ್ನು ನೇಮಿಸಿತು. ಈ ಎರಡೂ ಆಯೋಗಗಳು ತಮ್ಮ ವರದಿಗಳನ್ನು ಸರ್ಕಾರಕ್ಕೆ ಒಪ್ಪಿಸಿದವು. ಆದರೆ ಈ ವರದಿಗಳ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗಲಿಲ್ಲ. ತತ್ಪರಿಣಾಮವಾಗಿ ರಾಷ್ಟ್ರದ ಶಿಕ್ಷಣದ ಕ್ಷೇತ್ರದಲ್ಲಿ ದೋಷಗಳನ್ನು ಪರಿಹರಿಸಲು ಕೇಂದ್ರ ಸರ್ಕಾರವು ೧೯೬೪ರಲ್ಲಿ ಡಾ. ಡಿ.ಎಸ್. ಕೊಠಾರಿಯವರ ಅಧ್ಯಕ್ಷತೆಯಲ್ಲಿ ಒಂದು ಆಯೋಗವನ್ನು ನೇಮಿಸಿತು. ಈ ಆಯೋಗದಲ್ಲಿ ಭಾರತೀಯ ಶಿಕ್ಷಣ ತಜ್ಞರಷ್ಟೇ ಅಲ್ಲದೆ ವಿದೇಶದ ಶಿಕ್ಷಣತಜ್ಞರೂ ಸಹ ಇದ್ದರು. ಈ ಆಯೋಗದಲ್ಲಿ "ಕೊಠಾರಿಯವರು ಅಧ್ಯಕ್ಷರಾಗಿದ್ದರೆ ಉಳಿದ ೧೪ ಜನರು ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ಈ ತಂಡವು ಸುಮಾರು ೨೧ ತಿಂಗಳ ಕಾಲ ಶ್ರಮವಹಿಸಿ ಶೈಕ್ಷಣಿಕ ಸಮಸ್ಯೆಗಳನ್ನು ದೀರ್ಘವಾಗಿ ಸಂಗ್ರಹಿಸಿ ಸುಮಾರು ೧೫೦೦ ಪುಟಗಳ ವರದಿಯನ್ನು ಮಂಡಿಸಿತು. ಈ ವರದಿಯು ೧೯೬೬ರ ಜುಲೈ ೨೯ರಂದು ಮಂಡಿಸಲ್ಪಟ್ಟಿತು."[೫೧] ಆಯೋಗವು ಇಡೀ ಶೈಕ್ಷಣಿಕ ವ್ಯವಸ್ಥೆಯ ಬಗ್ಗೆ ಸಮಗ್ರವಾಗಿ ಕೂಲಂಕಷವಾಗಿ ಅಧ್ಯಯನ ಮಾಡಿದೆ ಅದರಲ್ಲಿ ಪ್ರಮುಖವಾಗಿ ಶಾಲಾ ಪಠ್ಯವಸ್ತುವಿನ ಬಗ್ಗೆ ಆಯೋಗವು ವ್ಯವಸ್ಥಿತವಾದ ಸಮೀಕ್ಷೆ ಕೈಗೊಂಡಿದೆ.

**ಪಠ್ಯವಸ್ತು**

ಆಯೋಗವು ಶಾಲೆಯಲ್ಲಿದ್ದ ಅವ್ಯವಸ್ಥಿತವಾದ ಪಠ್ಯವಸ್ತುಗಳನ್ನು ನೋಡಿ ಬದಲಾಯಿಸಲು ಸೂಚಿಸಿತು. ಅನುಪಯುಕ್ತವಾದಂತಹ ಪಠ್ಯವಸ್ತುಗಳನ್ನು ಬದಲಾಯಿಸಿ ಉಪಯುಕ್ತವಾದಂತಹ ವಿಷಯಗಳನ್ನು ಸೇರ್ಪಡೆಗೊಳಿಸಬೇಕು ಎಂದು ಸೂಚಿಸಿತು. ಆಯೋಗವು ಶಾಲಾ ಶಿಕ್ಷಣವನ್ನು ಕಿರಿಯ ಪ್ರಾಥಮಿಕ, ಉನ್ನತ ಪ್ರಾಥಮಿಕ, ಕಿರಿಯ ಪ್ರೌಢಶಾಲೆ ಮತ್ತು ಉನ್ನತ ಪ್ರೌಢಶಾಲೆ ಎಂದು ವಿಂಗಡಿಸಿತು. ಅಷ್ಟೇ ಅಲ್ಲದೆ ಪ್ರತಿಯೊಂದು ಹಂತಕ್ಕೂ ತನ್ನದೇಯಾದ ಪಠ್ಯವಸ್ತುವಿರಬೇಕೆಂದು ಆಯೋಗವು ಸೂಚಿಸಿತು.

**೧. ಕಿರಿಯ ಪ್ರಾಥಮಿಕ ಹಂತ:** "ಈ ಹಂತದಲ್ಲಿ ಅಂದರೆ ಒಂದರಿಂದ ನಾಲ್ಕನೆಯ ತರಗತಿಯ ಹಂತದವರೆಗೆ ಮಾತೃಭಾಷೆ ಇಲ್ಲವೇ ಪ್ರಾಂತೀಯ ಭಾಷೆಯನ್ನು ಕಲಿಸಬೇಕು. ಇದರಲ್ಲಿ ಒಂದನ್ನು ಮಾತ್ರ ಕಲಿಸಲು ಸೂಚಿಸಿದೆ. ಇದರ ಜೊತೆಗೆ ಗಣಿತ ವಿಷಯವನ್ನು ಕಲಿಸಬೇಕು ಮೂರು ಮತ್ತು ನಾಲ್ಕನೆಯ ತರಗತಿಯಿಂದ ವಿಜ್ಞಾನ ಮತ್ತು ಸಮಾಜ ವಿಜ್ಞಾನ ವಿಷಯಗಳನ್ನು ಕಲಿಸಬೇಕು ಎಂದು ತಿಳಿಸಿದೆ."[೫೨] ಈ ವಿಷಯಗಳು ಕಡ್ಡಾಯವಾಗಿ ಕಲಿಸಬೇಕೆಂದು ಶಿಫಾರಸ್ಸು ಮಾಡಿದೆ. ಇವುಗಳ ಜೊತೆಗೆ ಸೃಜನಾತ್ಮಕ ಚಟುವಟಿಕೆಗಳು, ಕಾರ್ಯಾನುಭವ, ಸಾಮಾಜಿಕ ಸೇವಾ ವಿಷಯ ಹಾಗೂ ಆರೋಗ್ಯ ಶಿಕ್ಷಣದಂತಹ ವಿಷಯಗಳನ್ನು ಈ ಹಂತದಲ್ಲಿ ಕಲಿಸಬೇಕು ಎಂದು ಆಯೋಗವು ಸೂಚಿಸಿತು.

**೨. ಉನ್ನತ ಪ್ರಾಥಮಿಕ ಹಂತ:** ಉನ್ನತ ಪ್ರಾಥಮಿಕ ಹಂತವು ೫ರಿಂದ ೭ನೇ ತರಗತಿಯದಾಗಿತ್ತು. ಆಯೋಗವು ಈ ಹಂತದಲ್ಲಿ ಮಾತೃಭಾಷೆಯ ಜೊತೆಗೆ ಅಥವಾ ಪ್ರಾಂತೀಯ ಭಾಷೆಯ ಅಥವಾ ಇಂಗ್ಲೀಷ್‌ನ್ನು ಕಲಿಸಬೇಕು ಎಂದು ಸೂಚಿಸಿತು. ಇವುಗಳ ಜೊತೆಯಲ್ಲಿ ಗಣಿತ, ವಿಜ್ಞಾನ, ಸಮಾಜವಿಜ್ಞಾನ, ಇತಿಹಾಸ, ಭೂಗೋಳ ಮತ್ತು ಪೌರನೀತಿ ವಿಷಯಗಳನ್ನು

ಕಡ್ಡಾಯ ವಿಷಯಗಳಾಗಿ ವಿದ್ಯಾರ್ಥಿಗಳು ಅಭ್ಯಾಸ ಮಾಡಬೇಕು ಎಂದು ಸೂಚಿಸಿತು. ಇವುಗಳಲ್ಲದೆ ಕಲೆ, ಕಾರ್ಯಾನುಭವ, ಸಾಮಾಜಿಕ ಸೇವಾ ವಿಷಯ, ದೈಹಿಕ ಶಿಕ್ಷಣ, ನೈತಿಕ ಶಿಕ್ಷಣ, ಧಾರ್ಮಿಕ ಶಿಕ್ಷಣದಂತಹ ವಿಷಯಗಳನ್ನು ಸಹ ಈ ಹಂತದಲ್ಲಿ ಕಲಿಸಲು ಶಿಫಾರಸ್ಸು ಮಾಡಿತು.

"ಆಯೋಗವು ಕಿರಿಯ ಪ್ರೌಢಶಾಲಾ ಹಂತದಲ್ಲಿ ಅಂದರೆ ಏಂಟನೆಯ ತರಗತಿಯಿಂದ ಹತ್ತನೆಯ ತರಗತಿಯ ಹಂತದವರೆಗೆ ತ್ರಿಭಾಷಾ ಸೂತ್ರವನ್ನು ಅಳವಡಿಸಿತು."[೩೩] ತ್ರಿಭಾಷಾ ಸೂತ್ರವೆಂದರೆ ಮಾತೃಭಾಷೆ, ಪ್ರಾಂತೀಯ ಭಾಷೆ ಹಿಂದಿ ಮತ್ತು ಇಂಗ್ಲಿಷ್ ಈ ಮೂರು ವಿಷಯಗಳನ್ನು ಈ ಹಂತದಲ್ಲಿ ಕಡ್ಡಾಯವಾಗಿ ಕಲಿಸಬೇಕೆಂದು ತಿಳಿಸಿದೆ.

**೩. ರಾಷ್ಟ್ರೀಯ ಶಿಕ್ಷಣನೀತಿ–೧೯೮೬**

ಭಾರತ ದೇಶದ ಭವಿಷ್ಯ ಉಜ್ವಲಗೊಳಿಸಲು ಹಲವಾರು ಆಯೋಗಗಳು, ವರದಿಗಳು, ಶೈಕ್ಷಣಿಕ ನೀತಿಗಳು ಹಿಂದಿನಿಂದ ಇಂದಿನವರೆಗೂ ಅನುಷ್ಠಾನಕ್ಕೆ ತಂದಿರುವುದಾದರೂ ಶಿಕ್ಷಣದಲ್ಲಿ ಸಂಪೂರ್ಣವಾಗಿ ಸಫಲತೆಯನ್ನು ಸಾಧಿಸಲಾಗಲಿಲ್ಲ. ಆದರೆ ಪೂರ್ಣ ಸಫಲತೆಯನ್ನು ಪಡೆಯಲಿಲ್ಲವೆಂದು ಪ್ರಯತ್ನವನ್ನು ಬಿಡದೆ ಮತ್ತು ಅದರ ಉದ್ದೇಶ ಗುರಿಗಳನ್ನಿಟ್ಟುಕೊಂಡು ನಮ್ಮ ಸಂವಿಧಾನದಲ್ಲಿ ರೂಪಿಸಲ್ಪಟ್ಟಿರುವ ಜಾತ್ಯಾತೀತ ಸಮಾಜವಾದದ ಗುರಿಗಳನ್ನು ಸಾಧಿಸಿ ಪ್ರಜಾಪ್ರಭುತ್ವದೆಡೆಗೆ ಕೊಂಡೊಯ್ಯಲು ಮಾನವ ಶಕ್ತಿಯನ್ನು ಗುಣಾತ್ಮಕವಾಗಿ ಮತ್ತು ಪರಿಮಾಣಾತ್ಮಕವಾಗಿ ಅಭಿವೃದ್ಧಿಪಡಿಸಲು ೧೯೮೫ರಲ್ಲಿ ಭಾರತ ಸರ್ಕಾರವು ಶಿಕ್ಷಣದಲ್ಲಿ ರಾಷ್ಟ್ರೀಯ ನೀತಿಯನ್ನು ತರಲು ಘೋಷಿಸಿತು. ಆದರೆ ಇದು ತಕ್ಷಣ ಜಾರಿಗೆ ಬಾರದೇ ಒಂದು ವರ್ಷ ಕಾಲಾವಕಾಶ ಬೇಕಾಯಿತು. ಅಂದಿನ ಪ್ರಧಾನಮಂತ್ರಿಯಾದ ಶ್ರೀ ರಾಜೀವಗಾಂಧಿಯವರು ತಮ್ಮ ಪ್ರಥಮ ಭಾಷಣದಲ್ಲಿ ರಾಷ್ಟ್ರದ ಪುನರ್‌ರಚನೆಯಾಗಿ ಒಂದು ನವೀನ ಹಾಗೂ ಕ್ರಿಯಾಶೀಲ ಶಿಕ್ಷಣ ನೀತಿಯ ಅವಶ್ಯಕತೆ ಇದೆ ಎಂಬುದನ್ನು ಬಲವಾಗಿ ಹೇಳಿದರು. ಈ ನಿಟ್ಟಿನಲ್ಲಿ ಹೆಚ್ಚಿನ ಪ್ರಮಾಣದ ಮಾನವೀಯ ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ರಾಷ್ಟ್ರದ ಪ್ರಗತಿಯನ್ನು ಸಾಧಿಸಬೇಕಾಗಿದೆ ಎಂದು ತಮ್ಮ ಅಭಿಮತವನ್ನು ವ್ಯಕ್ತಪಡಿಸಿದರು. ಇದರ ಪರಿಣಾಮವಾಗಿ ಶಿಕ್ಷಣ ಮಂತ್ರಿಗಳ ಮಂಡಳಿಯು "ಶಿಕ್ಷಣದ ಆಹ್ವಾನ ಎಂದು ತಲೆಬರೆಹದ ಹೊಸ ಶಿಕ್ಷಣ ನೀತಿಯ ಯಥಾದೃಶ್ಯ ರೂಪಣದ ಪ್ರಬಂಧವನ್ನು ಸಿದ್ಧಪಡಿಸಿತು".[೩೪]

ಶಿಕ್ಷಣದ ಆಹ್ವಾನ ಎಂಬ ಕಾಗದ ಪತ್ರವು ಭಾರತದಾದ್ಯಂತ ವಿವಿಧ ಸಮ್ಮೇಳನಗಳಲ್ಲಿ ಸೆಮಿನಾರುಗಳಲ್ಲಿ ಹಾಗೂ ಅಧ್ಯಯನದ ವೃತ್ತಗಳಲ್ಲಿ ಸಾಕಷ್ಟು ಚರ್ಚೆಗೆ ಒಳಗಾಯಿತು. "ಈ ಕಾಗದ ಪತ್ರವು ಭಾರತದ ಎಲ್ಲಾ ಭಾಷೆಗಳಲ್ಲಿ ಭಾಷಾಂತರಗೊಂಡಿತು. ಇಂಗ್ಲಿಷ್‌ನಲ್ಲಿ ಸುಮಾರು ೫,೮೦,೦೦೦ ಪ್ರತಿಗಳು, ಹಿಂದಿಯಲ್ಲಿ ೨,೪೦,೦೦೦ ಪ್ರತಿಗಳು ಹಾಗೂ ಉರ್ದುವಿನಲ್ಲಿ ೪೦೦೦ ಪ್ರತಿಗಳು ಭಾಷಾಂತರಗೊಂಡವು."[೩೫] ಇದಲ್ಲದೆ ಜನತೆಯಿಂದ ಸಲಹೆ ಸೂಚನೆಗಳನ್ನು ಹಾಗೂ ವಿಮರ್ಶೆ ಮಾಡಲು ಆಮಂತ್ರಿಸಲಾಯಿತು. ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸುವುದಕ್ಕಾಗಿ ಭಾರತದ ಶಿಕ್ಷಣ ಮಂತ್ರಿಮಂಡಲವು ೧೨ ರಾಷ್ಟ್ರೀಯ ವಿಚಾರ ಸಂಕೀರಣಗಳನ್ನು,

೧೭ ಕಾರ್ಯಗಾರಗಳನ್ನು ಏರ್ಪಡಿಸಿತು. ಇಷ್ಟೆಲ್ಲ ಚರ್ಚೆಗಳ ಅನಂತರ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಿಮಂಡಲವು ೧೯೮೬ರ ಪರಿಷ್ಕೃತ ರಾಷ್ಟ್ರೀಯ ಶಿಕ್ಷಣದ ನೀತಿಯನ್ನು ಹೊರತಂದಿತು. ತದನಂತರ ಇದು ೧೯೮೬ರ ಮೇ ೮ರಂದು ಅಂತಿಮವಾಗಿ ಲೋಕಸಭೆಯಲ್ಲಿ ಹಾಗೂ ೧೯೮೬ ಮೇ ೧೩ರಂದು ರಾಜ್ಯಸಭೆಯಲ್ಲಿ ಅಂಗೀಕರಿಸಲ್ಪಟ್ಟಿತು.

## ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ಪಠ್ಯಕ್ರಮ

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಇಡೀ ದೇಶಕ್ಕೆ ಅನ್ವಯವಾಗುವಂತೆ ಏಕ ರೀತಿಯ ಪಠ್ಯಕ್ರಮವನ್ನು ಅಳವಡಿಸಿಕೊಳ್ಳುವಂತೆ ಸೂಚಿಸಿತು. ಈ ಹಿನ್ನೆಲೆಯಲ್ಲಿಯೇ ಪ್ರತಿಯೊಂದು ರಾಜ್ಯದಲ್ಲಿಯೂ ಹೊಸ ಪಠ್ಯಪುಸ್ತಕಗಳು ರಚನೆಗೊಂಡವು. ಕರ್ನಾಟಕದಲ್ಲಿಯೂ ಸಹ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಹಿನ್ನೆಲೆಯಲ್ಲಿಯೇ ಪಠ್ಯಪುಸ್ತಕಗಳು ಹೊರಬಂದಿವೆ. ಈ ರಾಷ್ಟ್ರೀಯ ಶಿಕ್ಷಣ ನೀತಿಯು ಈ ಪಠ್ಯಕ್ರಮದ ಬಗ್ಗೆ ತನ್ನ ವರದಿಯಲ್ಲಿ ಹೇಳಿರುವ ಒಳಗೊಂಡ ಅಂಶಗಳು ಈ ರೀತಿಯಾಗಿದೆ. ಅದೆಂದರೆ ೧೦+೨+೩ ಶಿಕ್ಷಣ ಪದ್ಧತಿ. ಇದರಲ್ಲಿ ೫ ವರ್ಷದ ಪ್ರಾಥಮಿಕ ಶಿಕ್ಷಣ, ೨ ವರ್ಷದ ಹಿರಿಯ ಪ್ರಾಥಮಿಕ ಶಿಕ್ಷಣ ಹಾಗೂ ೩ ವರ್ಷದ ಪ್ರೌಢ ಶಿಕ್ಷಣ ಎಂದು ಸೂಚಿಸಿತು. ಇಡೀ ರಾಷ್ಟ್ರಕ್ಕೆ ಅನ್ವಯಿಸುವ ಸಾಮಾನ್ಯವಾದಂತಹ ಪಠ್ಯಕ್ರಮವಿರಬೇಕು. ಇದು ವಿದ್ಯಾರ್ಥಿಗಳಲ್ಲಿ ರಾಷ್ಟ್ರವು ಒಂದೇ ಎಂಬ ಅರಿವನ್ನುಂಟು ಮಾಡುವಂತಿರಬೇಕು. ಅಲ್ಲದೆ ರಾಜ್ಯದಿಂದ ರಾಜ್ಯಗಳಿಗೆ ವರ್ಗಾಯಿಸಲ್ಪಡುವ ವಿದ್ಯಾರ್ಥಿಗಳಿಗೆ ಸಮಸ್ಯೆಯಾಗದಂತೆ ಇರಬೇಕು. ಸಮಾಜದಲ್ಲಿ ಎದ್ದು ಕಾಣುವ ವರ್ಗ ರಚನೆಗಳಲ್ಲಿ ಎದ್ದು ಕಾಣುವ, ವ್ಯತ್ಯಾಸಗಳನ್ನು ಕಡಿಮೆ ಮಾಡುವಂತಿರಬೇಕು. "ಸಂವಿಧಾನದ ಮೌಲ್ಯಗಳಾದ ಜಾತ್ಯಾತೀತತೆ, ಸರ್ವಧರ್ಮ ಸಮನ್ವಯ, ಸಮಾನತೆ ಎಂಬ ಮೌಲ್ಯಗಳನ್ನು ಹಾಗೂ ಮನೋಭಾವನೆಗಳನ್ನು ಈ ಪಠ್ಯವಸ್ತುಗಳು ಬಿಂಬಿಸುವಂತಿರಬೇಕು. ರಾಷ್ಟ್ರೀಯ ಮೌಲ್ಯಗಳು, ಭಾವನೆಗಳನ್ನು, ಸಾಮಾಜಿಕ ಹಾಗೂ ರಾಷ್ಟ್ರೀಯ ಐಕ್ಯತೆಯನ್ನು ಆಧರಿಸಿ ಇರಬೇಕು. ಮಗುವಿನ ಕಲಿಕಾ ಕನಿಷ್ಠ ಮಟ್ಟವನ್ನು ಆಧರಿಸಿ ರಚಿಸಬೇಕು ಹಾಗೂ ರಾಷ್ಟ್ರದ ಹಾಗೂ ರಾಜ್ಯಗಳು ಮತ್ತು ಪಂಗಡಗಳ ಹಿತಾಸಕ್ತಿಯನ್ನು ಪ್ರತಿಬಿಂಬಿಸುವಂತಿರಬೇಕು".[೩೬] ಈ ರೀತಿಯಾದಂತಹ ಉತ್ತಮಾಂಶಗಳನ್ನು ಇಟ್ಟುಕೊಂಡು ಪಠ್ಯಪುಸ್ತಕಗಳು ರಚನೆಯಾಗಬೇಕು ಎಂದು ತಿಳಿಸಿತು. ಈ ಹಿನ್ನೆಲೆಯ ಪಠ್ಯಪುಸ್ತಕಗಳು ೨೦೦೨ರವರೆಗೂ ಹಾಗೆಯೇ ಮುಂದುವರೆದಿವೆ.

ಆಯೋಗದ ಪ್ರಾಥಮಿಕ ಶಾಲಾ ಹಂತದಲ್ಲಿ ಒಂದು ಭಾಷೆಯನ್ನು ಆರನೆಯ ತರಗತಿಯಿಂದ ಪ್ರೌಢ ಶಾಲಾ ಹಂತದವರೆಗೆ ಮೂರು ಭಾಷೆಗಳನ್ನು ಅಧ್ಯಯನ ಮಾಡಬೇಕು. ಇವುಗಳ ಜೊತೆಯಲ್ಲಿ ಪರಿಸರ ಅಧ್ಯಯನ, ವಿಜ್ಞಾನ ಹಾಗೂ ಸಮಾಜ ವಿಜ್ಞಾನವನ್ನು ಒಳಗೊಂಡಂತೆ ಇರಬೇಕು. ಕಾರ್ಯಾನುಭವ, ಸಾಮಾಜಿಕ ಉಪಯುಕ್ತ ಉತ್ಪಾದನಾ ಕೆಲಸ, ಕಲೆ, ಆರೋಗ್ಯ ಮತ್ತು ದೈಹಿಕ ಶಿಕ್ಷಣ ಇವುಗಳನ್ನು ಒಳಗೊಂಡಿರಬೇಕು. ಈ ಏಕರೂಪ ಅಧ್ಯಯನದ ಕ್ರಮದ ಜೊತೆಗೆ ರಾಷ್ಟ್ರೀಯ ಪಠ್ಯಕ್ರಮದಲ್ಲಿ ಸಂಯೋಜಿಸಲು ತಿಳಿಸಿದೆ. "ಅವೆಂದರೆ ಪಠ್ಯಪುಸ್ತಕಗಳು ರಾಷ್ಟ್ರೀಯ ಚೌಕಟ್ಟಿನ ಮೇಲೆ ಆಧಾರಿತವಾಗಿ ರಚಿಸಬೇಕು. ಪಠ್ಯಕ್ರಮದ ಮೂಲಾಂಶವು

ಭಾರತೀಯ ಸ್ವಾತಂತ್ರ್ಯ ಚಳುವಳಿಯ ಇತಿಹಾಸದ ವಿಷಯಗಳನ್ನು ಒಳಗೊಂಡಿರಬೇಕು. ಸಂವಿಧಾನಾತ್ಮಕ ಕರ್ತವ್ಯಗಳು ಸಹ ಇದರಲ್ಲಿ ಅಡಕವಾಗಿರಬೇಕು. ಮೂಲಾಂಶಗಳನ್ನು ಸೇರಿಸುವ ಉದ್ದೇಶ ರಾಷ್ಟ್ರದ ಅರಿವನ್ನು ವೃದ್ಧಿಸುವುದಾಗಿತ್ತು".[೩೭] ೧೯೮೬ರ ರಾಷ್ಟ್ರೀಯ ಶಿಕ್ಷಣ ಆಯೋಗವು ಚರಿತ್ರೆಯ ಪಠ್ಯಪುಸ್ತಕದಲ್ಲಿ ಹೆಚ್ಚಾಗಿ ಸ್ವಾತಂತ್ರ್ಯಕ್ಕೆ ಹೋರಾಡಿದ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆ, ಅವರ ಹೋರಾಟಗಳು ಹಾಗೂ ಸ್ವಾತಂತ್ರ್ಯ ಸಂಗ್ರಾಮದ ಘಟನೆಗಳಿಗೆ ಪ್ರಾಮುಖ್ಯತೆಯನ್ನು ನೀಡಿತು. ಇವುಗಳಲ್ಲದೆ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರ ಲಾಂಛನ, ರಾಷ್ಟ್ರೀಯ ಪ್ರಾಣಿ, ರಾಷ್ಟ್ರೀಯ ವ್ಯಕ್ತಿಗಳ ಬಗ್ಗೆ ಪಠ್ಯಪುಸ್ತಕದಲ್ಲಿ ಅಳವಡಿಸಿಕೊಳ್ಳುವಂತೆ ಸೂಚಿಸಿತು. ಇದರ ಉದ್ದೇಶ ರಾಷ್ಟ್ರದ ಬಗ್ಗೆ ಹೆಮ್ಮೆಯ ಮನೋಭಾವನೆಯನ್ನು ಮಕ್ಕಳಲ್ಲಿ ಮೂಡಿಸುವ ಉದ್ದೇಶವಿತ್ತು. ಅಲ್ಲದೆ ಸ್ವಾತಂತ್ರ್ಯ ಮನೋಭಾವನೆಯ ಅಂಶಗಳು ಅವರಲ್ಲಿ ಮೈಗೂಡಿಸುವುದಕ್ಕೆ ಅವಶ್ಯಕವಾದಂತಹ ಎಲ್ಲಾ ಅಂಶಗಳನ್ನು ಚರಿತ್ರೆ ಪಠ್ಯಪುಸ್ತಕ ಮೂಲಕ ಈ ಆಯೋಗವು ಮೂಡಿಸಿತು. ಅದರ ಮೂಲ ಉದ್ದೇಶಕ್ಕೆ ಹತ್ತಿರವಾದಂತಹ ಚರಿತ್ರೆ ಪಠ್ಯಪುಸ್ತಕಗಳನ್ನು ಕರ್ನಾಟಕ ರಾಜ್ಯ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಲ್ಲಿ ಅಳವಡಿಸಲಾಯಿತು.

ಈ ಆಯೋಗದ ನಂತರ ಪಠ್ಯಪುಸ್ತಕದ ಬಗ್ಗೆ ಯಾವುದೇ ಆಯೋಗವು ರಚನೆಯಾಗದೇ ಇದ್ದರೂ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಕೆಲವು ಮೂಲ ಸ್ವರೂಪವನ್ನಾಧರಿಸಿ ಅದರ ಬಹುತೇಕ ಉದ್ದೇಶಗಳನ್ನು ಒಳಗೊಂಡಂತೆ ೨೦೦೫ರ ರಾಷ್ಟ್ರೀಯ ಪಠ್ಯಕ್ರಮವನ್ನು ಜಾರಿಗೆ ತರಲಾಗಿದೆ. ಪ್ರಸ್ತುತ ಕರ್ನಾಟಕದಲ್ಲಿಯೂ ೨೦೦೫ರ ರಾಷ್ಟ್ರೀಯ ಪಠ್ಯ ಚೌಕಟ್ಟಿನ ನಿಯಮಾನುಸಾರ ಪಠ್ಯಪುಸ್ತಕಗಳನ್ನು ರಚಿಸಲಾಗುತ್ತಿದೆ.

ಒಟ್ಟಾರೆಯಾಗಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಆಯಾ ಕಾಲಘಟ್ಟಗಳಲ್ಲಿನ ಆಶಯಗಳಿಗೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ರಚಿಸುತ್ತಿದ್ದರು. ಹಾಗೆಯೇ ವಿದ್ಯಾರ್ಥಿಗಳು ಅವುಗಳನ್ನೇ ಅಭ್ಯಾಸದ ವಿಷಯಗಳನ್ನಾಗಿ ಓದಿಕೊಂಡು ಬರುತ್ತಿದ್ದರು. ಈಗಲೂ ಸಹ ಅದೇ ಪರಿಪಾಠ ಮುಂದುವರೆದುಕೊಂಡು ಬಂದಿದೆ. ಆದರೆ ಎಲ್ಲಾ ಕಾಲದಲ್ಲಿಯೂ ಏಕರೀತಿಯಾದ ಪಠ್ಯಪುಸ್ತಕ ಇರುವುದಕ್ಕೆ ಸಾಧ್ಯವಿಲ್ಲ. ಕಾಲ ಬದಲಾದಂತೆ ಪಠ್ಯಪುಸ್ತಕಗಳಲ್ಲಿನ ವಿಚಾರಗಳೂ ಸಹ ಬದಲಾಗುತ್ತಾ ಬಂದಿರುವುದನ್ನು ನಾವು ಗಮನಿಸಬಹುದು. ಇದಕ್ಕೆ ಕಾರಣ ಅಂದಿನ ಆಡಳಿತವರ್ಗ ಪ್ರಮುಖವಾಗಿದೆ. ಪ್ರಾಚೀನ ಕಾಲದಲ್ಲಿ ವೇದ, ಮಂತ್ರ, ಉಪನಿಷತ್ತುಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. ಏಕೆಂದರೆ ಅಂದು ಬ್ರಾಹ್ಮಣ ವರ್ಗದವರು ಆಡಳಿತದಲ್ಲಿ ಹೆಚ್ಚು ಪ್ರಭಾವ ಬೀರುತ್ತಿದ್ದರು. ಅನಂತರ ಮಧ್ಯಕಾಲೀನ ಸಂದರ್ಭಗಳಲ್ಲಿ ಮುಸ್ಲಿಂ ಶಿಕ್ಷಣದಲ್ಲಿ ಖುರಾನ್ ಅಧ್ಯಯನಕ್ಕೆ ಮುಸ್ಲಿಂ ದೊರೆಗಳ ಚರಿತ್ರೆಗೆ ಹೆಚ್ಚಿನ ಆದ್ಯತೆ ನೀಡುತ್ತಿದ್ದರು. ಆಧುನಿಕ ಕಾಲದಲ್ಲಿ ಬ್ರಿಟಿಷರ ಪ್ರಭುತ್ವದಿಂದಾಗಿ ಅವರು ಈ ದೇಶದ ನಿಜವಾದ ಚರಿತ್ರೆಯನ್ನು ತಿದ್ದಿ ಬರೆಯುವ ಕೆಲಸ ಮಾಡಿದರು. ಸ್ವಾತಂತ್ರ್ಯ ಬಂದ ಮೇಲೆ ಸ್ವಾತಂತ್ರ್ಯದ ವಿಷಯಗಳು ಪಠ್ಯಪುಸ್ತಕದಲ್ಲಿ ಹೆಚ್ಚಾಗಿ ಬರತೊಡಗಿದವು. ಹೀಗಾಗಿ ಒಂದೊಂದು ಕಾಲಕ್ಕೆ ಒಂದೊಂದು ಪ್ರಭುತ್ವ ಆಧಾರದ ಮೇಲೆ ಪಠ್ಯಪುಸ್ತಕಗಳು ರಚಿಸಲ್ಪಡುತ್ತವೆ.

## ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯ್ದೆ-ಕ್ರಿಶ. ೨೦೧೦

ಶಾಸನಾಧಿಕಾರದ ರಚನೆ ೪೫ನೇ ಆರ್ಟಿಕಲ್ ಮೂಲತಃ ಭಾರತದ ಸಂವಿಧಾನ ಒಳಗೊಂಡಂತೆ. ೧೦ ವರ್ಷಗಳ ಕಾಲಾವಧಿಯಲ್ಲಿ. ೧೪ ವರ್ಷದವರೆಗಿನ ಎಲ್ಲಾ ಮಕ್ಕಳಿಗಾಗಿ ಸಂವಿಧಾನದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸಲು ರಾಷ್ಟ್ರ ಪ್ರಯತ್ನಿಸಿದೆ. ಭಾರತದ ಸಂವಿಧಾನ ರಾಜ್ಯ ನಿರ್ದೇಶಕ ತತ್ವಗಳ ವಿವರಣೆ ಒಳಗೊಂಡಿದೆ. ರಾಜ್ಯ ನಿರ್ದೇಶಕ ತತ್ವಗಳ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಸಂವಿಧಾನವು ನೀಡಿದ ನಿರ್ದೇಶನಗಳ ಸ್ವರೂಪದಲ್ಲಿದೆ. ಇವುಗಳು ನ್ಯಾಯ ರಕ್ಷಿತವಾದವುಗಳಲ್ಲದಿದ್ದರೂ ದೇಶದ ಆಡಳಿತಕ್ಕೆ ಮೂಲಭೂತ ನಿಯಮಗಳಾಗಿವೆ. ಭಾರತದಲ್ಲಿನ ಸರ್ವೋಚ್ಚ ನ್ಯಾಯಾಲಯ ಸಂವಿಧಾನದಲ್ಲಿ ೧೯೯೦ರ ದಶಕದವರೆಗೆ ೯೩ ತಿದ್ದುಪಡಿ ಸಲಹೆಯಂತೆ ೩ ಪ್ರತ್ಯೇಕ ತಿದ್ದುಪಡಿ ಮಾಡಿದೆ.

ಭಾರತ ಸಂವಿಧಾನದ ೨೧ನೇ ವಿಧಿಯ ತಿದ್ದುಪಡಿಯಂತೆ ೬ ರಿಂದ ೧೪ ವರ್ಷದವರೆಗಿನ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಎಂದು ಕಾನೂನು ದೃಢೀಕರಿಸಿದೆ. ೨೮ ನವೆಂಬರ್ ೨೦೦೧ರಲ್ಲಿ ಭಾರತದ ಕೆಳಮನೆಯಾದ ಲೋಕಸಭೆಯಲ್ಲಿ ಈ ಬಿಲ್‌ನ್ನು ಶಾಸನ ಸರ್ವಾನುಮತದಿಂದ ಅಂಗೀಕರಿಸಲಾಯಿತು. ಆ ನಂತರ ಮೇಲ್ಮನೆಯಾದ ರಾಜ್ಯಸಭೆಯಲ್ಲಿ ೧೪ ಮೇ ೨೦೦೨ರಲ್ಲಿ ಪಾಸಾಯಿತು. ಭಾರತದ ರಾಷ್ಟ್ರಪತಿಯವರಿಂದ ಸಹಿಯಾಯಿತು. ೮೬ ತಿದ್ದುಪಡಿಗಳಾದ ಮೇಲೆ ಈ ಮಸೂದೆ ಪರಿಣಾಮ ಬೀರಿತು. ಅಂದಿನಿಂದ ೬ ರಿಂದ ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೂ ಶಿಕ್ಷಣ ಮೂಲಭೂತ ಹಕ್ಕಾಗಿದೆ. ಭಾರತ ಸರ್ಕಾರದ ೪೬ನೇ ಆರ್ಟಿಕಲ್ ವಿಶೇಷ ಕಾಳಜಿಯೊಂದಿಗೆ ಶಿಕ್ಷಣ ಮತ್ತು ಆರ್ಥಿಕ ಆಸಕ್ತಿ ಹೊಂದಿದ ದುರ್ಬಲ ವರ್ಗದ ಜನರಿಗೆ ಸ್ಟೇಟ್ ಬಡ್ತಿ ನೀಡಿದೆ. ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ಬಡ್ತಿ ನೀಡಿತು ಮತ್ತು ಸಾಮಾಜಿಕ ಅನ್ಯಾಯದಿಂದ ಮತ್ತು ಎಲ್ಲಾ ರೀತಿಯ ಸಾಮಾಜಿಕ ಶೋಷಣೆಯಿಂದ ಅವರನ್ನು ರಕ್ಷಿಸಿತು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಇತರೆ ಮೀಸಲಾತಿ ನೀಡಿದೆ. ಆರ್ಟಿಕಲ್ ೩೩೦, ೩೩೨, ೩೩೫, ೩೩೮, ೩೪೨ ಸಂವಿಧಾನದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟಕ್ಕೆ ೬ನೇ ಶೆಡ್ಯೂಲ್ಸ್ ಸಹ ವಿಶೇಷ ಮೀಸಲಾತಿ ನೀಡಿದೆ.

## ೩.೪. ಶಾಲಾ ಪಠ್ಯ ರಚನೆಯ ಉಸ್ತುವಾರಿ ಮತ್ತು ರಾಜಕಾರಣ

ಪ್ರಾಥಮಿಕ ವಿದ್ಯಾಭ್ಯಾಸವು ಕಲಿಕೆಯ ಮೊದಲ ಹಂತ; ಕ್ರಮೇಣ ಅದಕ್ಕೆ ನರ್ಸರಿ ಪ್ರಿ-ನರ್ಸರಿ ಎಂಬ ಪಾಠದ ಎರಡು ವರ್ಷದ ಶಿಕ್ಷಣವನ್ನು ನಾಲ್ಕು ಮತ್ತು ಐದನೇ ವರ್ಷದ ಮಕ್ಕಳಿಗಾಗಿ ಸೇರಿಸಲಾಯಿತು. ನಮ್ಮ ಶಿಕ್ಷಣ ಪದ್ಧತಿಯು, ೧೭, ೧೮ನೇ ಶತಮಾನದಲ್ಲಿ ಮನೆ/ಕುಟುಂಬ ಮತ್ತು ಮಠದ/ಗುರುಕುಲದ ಕೇಂದ್ರವಾಗಿ ಇದ್ದದ್ದು, ಅಧಿಕೃತ ಶಾಲಾ ಮಂದಿರಗಳಿಗೆ ಸ್ಥಳಾಂತರವಾಯಿತು. ಇದು ಬ್ರಿಟಿಷರ ಯೋಜನೆ. ಕ್ರಮೇಣ ಮಠ-ಮಂದಿರಗಳ/ಗುರುಕುಲ ಶಿಕ್ಷಣ ವ್ಯವಸ್ಥೆ ಕೊನೆಗೊಂಡು ಶಾಲಾಶಿಕ್ಷಣ ಪದ್ಧತಿ ನೆಲೆಗೊಂಡಿತು. ಸರ್ಕಾರಗಳೇ ಶಿಕ್ಷಣದ

ಹೊಣೆಯನ್ನು ಹೊತ್ತುಕೊಂಡು ನಾಡಿನಾದ್ಯಂತ ಶಾಲೆಗಳನ್ನು ಆರಂಭಿಸಿ ಒಂದೇ ಬಗೆಯ ಶಿಕ್ಷಣ ಸಾರ್ವತ್ರಿಕವಾಗಿ ಸಿಗುವಂತೆ ಮಾಡಿದವು. ಅದರ ಜೊತೆ ಜತೆಜೊತೆಯಲ್ಲಿಯೇ ಸರ್ಕಾರೇತರ ಸಂಸ್ಥೆಗಳು ವ್ಯಕ್ತಿಗಳು ಶಾಲಾ ಶಿಕ್ಷಣ ಕೇಂದ್ರಗಳನ್ನು ಸ್ವಲ್ಪ ಅದೇ ಮಾದರಿಯಲ್ಲಿ ಆರಂಭಿಸಿದವು. ಆದರೆ ಕೇಂದ್ರ ರಾಜ್ಯ ಸರ್ಕಾರಗಳು ಪ್ರತಿಯೊಬ್ಬರಿಗೂ ಶಿಕ್ಷಣ ಒದಗಿಸುವುದು ಅದರ ಒಂದು ಅಗತ್ಯ ಕರ್ತವ್ಯವೆಂದು ಕಡ್ಡಾಯ ಶಿಕ್ಷಣದ ಕಾನೂನು ತಂದವು. ಅದರಲ್ಲಿ ರಾಜ್ಯ ಸರ್ಕಾರದ ಪಾತ್ರ ಹಿರಿದು.

ಭಾರತದಲ್ಲಿ ಪಠ್ಯಕ್ಕೆ ಸಂಬಂಧಿಸಿದಂತೆ ಶಾಲಾ ಶಿಕ್ಷಣದಲ್ಲಿ NCERT (National Council of Educational Research and Training) ಅತ್ಯುನ್ನತ ಸಂಸ್ಥೆ. NCERT ತಾಂತ್ರಿಕ ಸಹಾಯ ಹಾಗೂ ಬೆಂಬಲವನ್ನು ಭಾರತದಲ್ಲಿನ ಹಲವಾರು ಶಾಲೆಗಳಿಗೆ ನೀಡುತ್ತದೆ. ಶಿಕ್ಷಣ ನೀತಿಗಳನ್ನು ಜಾರಿಗೆ ತರುವಾಗ ಅವುಗಳ ವಿವಿಧ ಅಂಶಗಳನ್ನು ಅವಲೋಕಿಸುತ್ತದೆ. ಭಾರತದಲ್ಲಿನ ಶಾಲಾ ಶಿಕ್ಷಣ ವ್ಯವಸ್ಥೆಯ ಉಸ್ತುವಾರಿ ನಡೆಸುವ ಮುಖ್ಯ ವಿವಿಧ ಸಂಸ್ಥೆಗಳೆಂದರೆ ಆಯಾ ರಾಜ್ಯ ಸರ್ಕಾರದ ಶಿಕ್ಷಣ ಮಂಡಳಿಗಳು (ಬಹುತೇಕ ಭಾರತದ ಮಕ್ಕಳು ಇದರಲ್ಲಿ ದಾಖಲಾಗಿರುತ್ತಾರೆ) ಇದರೊಂದಿಗೆ ಕೇಂದ್ರ ಸರ್ಕಾರದ ಅಧೀನದಲ್ಲಿ ಬರುವ CBSE (Central Board of Secondary Education) ಮುಖ್ಯವಾಗಿದೆ. ಇದು ಎರಡು ರೀತಿಯ ಪರೀಕ್ಷೆಗಳನ್ನು ನಡೆಸುತ್ತದೆ. ಅವುಗಳಲ್ಲಿ AISSE (All India Secondary School Examination) (೧೦ನೇ ತರಗತಿಗೆ) ಮತ್ತುAISSCE (All India Senior School Certificate Examination) (೧೨ನೇ ತರಗತಿಗೆ) ಪ್ರಮುಖವಾಗಿವೆ. ಅದೇ ರೀತಿ CISCE (Council For The Indian School Certificate Examination) ಮತ್ತೊಂದು ಪ್ರಮುಖ ಅಂಗವಾಗಿದೆ. ಅದು ಮೂರು ರೀತಿಯ ಪರೀಕ್ಷೆಗಳನ್ನು ನಡೆಸುತ್ತದೆ. ಅವುಗಳೆಂದರೆ ICSE (Indian Certificate of Secondary Education) (೧೦ನೇ ತರಗತಿಗೆ) ಮತ್ತು ISC ( Indian School Certificate) (೧೨ನೇ ತರಗತಿಗೆ ಹಾಗೂ CVE (Certificate in Vocational Education) (೧೨ನೇ ತರಗತಿಗೆ) ಅದೇ ರೀತಿ NIOS (National Institue of Open Schooling) ಎನ್ನುವ ಮತ್ತೊಂದು ಅಂಗಸಂಸ್ಥೆ ಇದ್ದು. ಇದು ೨ ರೀತಿಯ ಪರೀಕ್ಷೆಗಳನ್ನು ನಡೆಸುತ್ತದೆ. ಅವುಗಳೆಂದರೆ ಸೆಕೆಂಡರಿ ಎಜುಕೇಷನ್ ಮತ್ತು ಸೀನಿಯರ್ ಸೆಕೆಂಡರಿ ಎಜುಕೇಷನ್ ಪ್ರಮುಖವಾಗಿವೆ. ಇವುಗಳಲ್ಲದೆ ಇಲ್ಲಿ ಅಂತಾರಾಷ್ಟ್ರೀಯ ಶಾಲೆಗಳ ನಿರ್ವಹಿಸುತ್ತಿದ್ದು, ಅವು ಕೇಂಬ್ರಿಡ್ಜ್ ಅಂತಾರಾಷ್ಟ್ರೀಯ ಪರೀಕ್ಷೆಗೆ ಒಳಪಟ್ಟಿರುತ್ತವೆ. ಅಲ್ಲದೆ ಇಸ್ಲಾಮಿಕ್ ಮದರಸಾ ಶಾಲಾಗಳ ನಿಗಮವನ್ನು ಸ್ಥಳೀಯ ರಾಜ್ಯ ಸರ್ಕಾರ ನಿಯಂತ್ರಿಸುತ್ತದೆ. ಇದಷ್ಟೇ ಅಲ್ಲದೆ NUEPA (National University of Educational Planning and Administration) ಎನ್ನುವ ಮತ್ತೊಂದು ಅಂಗಸಂಸ್ಥೆ ಇದ್ದು, ಇದು ಎನ್.ಸಿ.ಟಿ.ಇ. ಶಿಕ್ಷಣ ವ್ಯವಸ್ಥೆಯ ನಿರ್ವಹಣೆಗೆ ಜವಾಬ್ದಾರಿಯಾಗಿದೆ. ಇಷ್ಟೆಲ್ಲಾ ಅಂಗಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದರೂ ಸಹ ಪಠ್ಯಕ್ರಮ ರೂಪಿಸುವ ಜವಾಬ್ದಾರಿಯನ್ನು ಎನ್.ಸಿ.ಈ.ಆರ್.ಟಿ. ರಾಷ್ಟ್ರಮಟ್ಟದಲ್ಲಿ ಅದೇ ರೀತಿ

ಆಯಾ ರಾಜ್ಯಗಳಲ್ಲಿರುವ ಪಠ್ಯಪುಸ್ತಕ ರಚನಾ ಸಮಿತಿಗಳು ಮೇಲಿನ ಸಮಿತಿಯ ನಿರ್ದೇಶನದ ಮೇರೆಗೆ ಮತ್ತು ಆಯಾ ರಾಜ್ಯ ಸರ್ಕಾರಗಳ ಮಾರ್ಗದರ್ಶನದಲ್ಲಿ ಶಿಕ್ಷಣ ಕಾಯ್ದೆಗಳಿಗೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ರಚಿಸುವ ಹೊಣೆ ಹೊತ್ತಿವೆ. ಈ ಸಮಿತಿಗಳಿಂದ ರೂಪಿತವಾಗುತ್ತಿರುವ ಶಾಲಾ ಪಠ್ಯಪುಸ್ತಕಗಳಲ್ಲಿ ಹಲವಾರು ದೌರ್ಬಲ್ಯಗಳಿದ್ದು ಸಾರ್ವಜನಿಕರ ಕಟುಟೀಕೆಗೆ ಗುರಿಯಾಗಿವೆ. ನಮ್ಮದು ರಾಜ್ಯವಾರು, ಜಿಲ್ಲಾವಾರು, ತಾಲೂಕು ಮಟ್ಟದಲ್ಲೂ ಜೀವನದ ವಿವಿಧ ರಂಗಗಳಲ್ಲಿ ವಿವಿಧ ಭಿನ್ನತೆಗಳನ್ನೊಳಗೊಂಡ, ವಿವಿಧ ಜಾತಿ, ಕೋಮುಗಳನ್ನೊಳಗೊಂಡ ಗಣರಾಜ್ಯ. ಇದು ದೇಶಕ್ಕೆ ಅನ್ವಯಿಸಿದ ಹಾಗೆಯೇ ರಾಜ್ಯಗಳಿಗೂ, ಹಾಗೆಯೇ ರಾಜ್ಯದ ಪ್ರತಿಯೊಂದು ಜಿಲ್ಲೆ, ತಾಲ್ಲೂಕು, ಗ್ರಾಮಗಳಿಗೂ ಅನ್ವಯಿಸುತ್ತದೆ. ಯಾವುದೇ ಶಿಕ್ಷಣ ಇಲಾಖೆ ಪಠ್ಯಪುಸ್ತಕಗಳನ್ನು ರಚಿಸುವಾಗ ವೈವಿಧ್ಯತೆಯನ್ನೂ ಗಮನದಲ್ಲಿರಿಸಿಕೊಳ್ಳಲೇಬೇಕು. ಆದರೆ ವಾಸ್ತವದಲ್ಲಿ ಹಾಗಾಗುವುದಿಲ್ಲ. ನಮ್ಮ ಪಠ್ಯಪುಸ್ತಕಗಳು ಏಕರೂಪಿ. ಇಲ್ಲಿನ ಪುರೋಹಿತಶಾಹಿ ಮನಸ್ಸು ಬಹುರೂಪಿಯನ್ನು ನಿರಾಕರಿಸುತ್ತದೆ. ಶಂಕರಾಚಾರ್ಯ, ರಾಮಾನುಜಾಚಾರ್ಯರ ಬಗ್ಗೆ ಪುಸ್ತಕಗಳಲ್ಲಿ ಪಾಠವಾಗಿ ಬರುತ್ತದೆ. ಆದರೆ ಅಲ್ಲಮ, ಮಂಟೇಸ್ವಾಮಿ, ವಿಶಿಷ್ಟ ಸಾಧನೆ ಮಾಡಿದ ಅವಧೂತ ಸಾಧುಗಳ ಮಾಹಿತಿ ಬರುವುದೇ ಇಲ್ಲ. ಏಕೆಂದರೆ ಒಂದು ವೇಳೆ ಈ ಅಲ್ಲಮ, ಮಂಟೇಸ್ವಾಮಿಯವರು ಪಠ್ಯಪುಸ್ತಕಗಳಲ್ಲಿ ಪ್ರಾಥಮಿಕ ಹಂತದಿಂದಲೇ ಸೇರಿಕೊಂಡಿದ್ದರೆ ಇಂದು ವೈದಿಕಶಾಹಿ ಪರಂಪರೆಯ ಭಗವದ್ಗೀತೆ ಅಲ್ಲಿ ಇರುತ್ತಲೇ ಇರಲಿಲ್ಲ. ಅಷ್ಟೊಂದು ವೈಚಾರಿಕ ಪ್ರಖರತೆ, ಜನಪರತೆ ಈ ಧರೆಗೆ ದೊಡ್ಡವರದು. ಆದರೆ ಸಾರ್ವಜನಿಕ ಶಿಕ್ಷಣ ಇಲಾಖೆ ಮಂಟೇಸ್ವಾಮಿ, ಮಲೆಮಹದೇಶ್ವರ, ಸಿದ್ದಯ್ಯ ದೇವರುಗಳನ್ನು ತಮ್ಮ ಗರ್ಭಗುಡಿಯೊಳಗೆ ಬಿಟ್ಟುಕೊಂಡೇ ಇಲ್ಲ. ಇದು ಅತ್ಯಂತ ಮಾರಕ. ಇದಲ್ಲದೆ ಪುಸ್ತಕಗಳು ಜಾತಿವಾದವನ್ನು ಕೋಮುವಾದವನ್ನು, ಫ್ಯೂಡಲಿಸಂನ್ನೂ ತನ್ನೊಡಲೊಳಗೆ ತುಂಬಿಕೊಂಡು ಹುಟ್ಟಿಬರುತ್ತಿವೆ ಎನ್ನುವ ಮತ್ತೊಂದು ಅಪವಾದವು ಅವುಗಳ ಮೇಲಿದೆ. ಅನೇಕ ವೇಳೆ ರಾಜಕೀಯ ಪಕ್ಷಗಳ ಸಿದ್ಧಾಂತಗಳಿಗೆ ಅನುಗುಣವಾಗಿ ಇಲ್ಲವೇ ರಾಜಕಾರಣಿಗಳ ಮೂಗಿನಡಿಯಲ್ಲೇ ರೂಪಿತಗೊಳ್ಳುವುದರಿಂದ ಈ ರೀತಿಯ ಸಮಸ್ಯೆಗಳು ಪಠ್ಯಪುಸ್ತಕಗಳಲ್ಲಿ ಅಧಿಕವಾಗಿ ಕಾಣಿಸಿಕೊಳ್ಳುತ್ತಿವೆ. ಇದು ಅಂತಿಮವಾಗಿ ಬಹುಸಂಖ್ಯಾತರಾದ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಪ್ರತಿಕೂಲ ಪರಿಣಾಮ ಬೀರುತ್ತದೆ.[೩೨] ಇದರ ಕೆಲ ಉದಾರಣೆಗಳು ಈ ಮುಂದಿವೆ. ಎನ್.ಸಿ.ಈ.ಆರ್.ಟಿ.ಯಿಂದ ೨೦೦೬ರಲ್ಲಿ ಪ್ರಕಟವಾದ ಪದವಿಪೂರ್ವ ಪಠ್ಯಪುಸ್ತಕದಲ್ಲಿ ಸಂವಿಧಾನಾತ್ಮಕ ತೀವ್ರಗಾಮಿ ಕಾಂಗ್ರೆಸ್ ಮುಖಂಡರಾಗಿದ್ದ ತಿಲಕ್, ಬಿಪಿನ್ ಚಂದ್ರಪಾಲ್ ಮೊದಲಾದವರನ್ನು ಭಯೋತ್ಪಾದಕರೆಂದು ಮಾರ್ಕ್ಸ್‌ವಾದಿ ಇತಿಹಾಸಕಾರರಾದ ಸುಮಿತ್ ಸರ್ಕಾರ್, ಕೆ.ಎನ್. ಪಣಿಕ್ಕರ್ ಬಣ್ಣಿಸಿದ್ದಾರೆ. ಅಲ್ಲದೆ ಅದರಲ್ಲಿಯೇ ಹರಿಯಾಣ, ಪಂಜಾಬ್ ಭಾಗದ ಜಾಟ್ ರೈತ ಜನಾಂಗದವರನ್ನು ಕೊಲೆಗಡುಕರೆಂದು ಬಣ್ಣಿಸಲಾಗಿದೆ. ಇದು ವಿದ್ಯಾರ್ಥಿಗಳ ತಪ್ಪು ಭಾವನೆಗೆ ದಾರಿ ಮಾಡಿಕೊಡುತ್ತದೆ. ಆದ್ದರಿಂದ ಇದನ್ನು ಸರಿಪಡಿಸಿದರು. ೧೯೭೫ರಲ್ಲಿ ಪ್ರಧಾನಿ ಇಂದಿರಾಗಾಂಧಿ ಘೋಷಿಸಿದ ಆಂತರಿಕ

ತುರ್ತುಪರಿಸ್ಥಿತಿ, ೧೯೮೪ರಲ್ಲಿ ದೆಹಲಿಯಲ್ಲಿ ಸಂಭವಿಸಿದ ಶಿಖ್ಖರ ನರಮೇಧ, ೧೯೯೨ರ ಅಯೋಧ್ಯೆಯ ಬಾಬರಿ ಮಸೀದಿ ವಿವಾದ, ೨೦೦೨ರ ಗುಜರಾತಿನ ಗೋದ್ರಾ ರೈಲ್ವೆ ದುರಂತ, ಕೋಮುವಾದದ ಸವಾಲುಗಳು, ಜಾಗತೀಕರಣ, ಹಿಂದುಳಿದ ವರ್ಗಗಳ ಕಲ್ಯಾಣ ಕಾರ್ಯಕ್ರಮ ಮೊದಲಾದ ಸಮಕಾಲೀನ ಘಟನೆಗಳು ವಿವಾದಾತ್ಮಕ, ರಾಷ್ಟ್ರೀಯ ಐಕ್ಯತೆಗೆ ಭಂಗ ಬರುತ್ತವೆ. ಸಂಘರ್ಷಕ್ಕೆ ದಾರಿ ಮಾಡಿಕೊಡುತ್ತವೆ ಎನ್ನುವ ಕಾರಣಗಳನ್ನು ನೀಡಿ ಪಠ್ಯಪುಸ್ತಕ ಸಮಿತಿಗಳು ಈ ವಿಷಯಗಳನ್ನು ಚರಿತ್ರೆ ಪಠ್ಯಗಳಿಂದ ಹೊರಗಿಡಲಾಗಿದೆ.[೩೮]

ತಿಳುವಳಿಕೆಯ ಒಂದು ಭಾಗವಾಗಿರುವ ಮತ್ತು ರಾಷ್ಟ್ರೀಯ ಮಹತ್ವ ಪಡೆದ ಇಂತಹ ವಿಷಯಗಳನ್ನು ಪಕ್ಷಪಾತವಿಲ್ಲದೆ ಪಠ್ಯದಲ್ಲಿ ಅಳವಡಿಸಿ ಅವುಗಳನ್ನು ಪಕ್ಷಪಾತವಿಲ್ಲದೆ ಬೋಧಿಸಬೇಕಾದ ಅವಶ್ಯಕತೆ ಇದೆ. ಎನ್.ಸಿ.ಈ.ಆರ್.ಟಿ. ವತಿಯಿಂದ ಪ್ರಕಟವಾಗುವ ಮತ್ತು ರಾಜ್ಯದ ಪಠ್ಯಪುಸ್ತಕ ಸಮಿತಿಗಳಿಂದ ರಚನೆಯಾಗಿ ಪ್ರಕಟವಾಗುವ ಚರಿತ್ರೆ ಪಠ್ಯಪುಸ್ತಕಗಳು ಕೆಲವಾರು ಭಿನ್ನತೆ ಮತ್ತು ವ್ಯತ್ಯಾಸಗಳಿರುವುದನ್ನು ಗುರುತಿಸಬಹುದಾಗಿದೆ.

**ಎನ್.ಸಿ.ಈ.ಆರ್.ಟಿ.ಯಿಂದ ಪ್ರಕಟವಾಗುವ ಪುಸ್ತಕಗಳ ಆದ್ಯತೆಯ ಪಠ್ಯ ವಿಷಯಗಳು**

ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿಯು (ಎನ್.ಸಿ.ಈ.ಆರ್.ಟಿ.) ೧೯೬೧ರಲ್ಲಿ ದೆಹಲಿಯಲ್ಲಿ ಸ್ಥಾಪನೆಯಾಯಿತು. ಇಂದು ಕೇಂದ್ರ ಶಿಕ್ಷಣ ಸಚಿವಾಲಯದ ಅಡಿಯಲ್ಲಿ ಹಾಗೂ ಸ್ವಾಯತ್ತ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಶಾಲಾ ಶಿಕ್ಷಣದ ಗುಣಮಟ್ಟ ಸುಧಾರಣೆ ಮಾಡುವುದು ಇದರ ಮುಖ್ಯ ಉದ್ದೇಶವಾಗಿದೆ. ಕೇಂದ್ರ ಶಿಕ್ಷಣ ಮಂತ್ರಿಗಳು ಇದರ ಅಧ್ಯಕ್ಷರಾಗಿರುತ್ತಾರೆ. ಎನ್.ಸಿ.ಈ.ಆರ್.ಟಿ.ಯು ಅನೇಕ ಕಾರ್ಯಗಳನ್ನು ಮಾಡಿಕೊಂಡು ಬರುತ್ತಿದೆ. ಅದರಲ್ಲಿ ಪಠ್ಯಕ್ರಮ ರಚನೆಯ ಕಾರ್ಯವೂ ಸಹ ಒಂದಾಗಿದೆ. ಇಂತಹ ಪಠ್ಯಕ್ರಮದ ಬಗ್ಗೆ ರಾಷ್ಟ್ರಮಟ್ಟದಲ್ಲಿ ಪಠ್ಯಕ್ರಮವನ್ನು ಸಿದ್ಧಪಡಿಸುತ್ತದೆ. ಅದರಂತೆ ರಾಜ್ಯಗಳಿಗೂ ಪಾಲನೆಯಾಗುವಂತೆ ಪಠ್ಯಕ್ರಮವನ್ನು ಸಿದ್ಧಗೊಳಿಸಿ ಅದನ್ನೇ ಪಾಲನೆ ಮಾಡುವಂತೆ ಶಿಫಾರಸ್ಸು ಮಾಡುತ್ತದೆ. ರಾಜ್ಯಗಳು ಇದರನ್ವಯ ತಮ್ಮ ಪ್ರಾದೇಶಿಕ ಅನುಕೂಲಗಳಿಗೆ ಹೆಚ್ಚು ಬದಲಾವಣೆ ಇಲ್ಲದಂತೆ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುತ್ತವೆ. ರಾಷ್ಟ್ರೀಯ ಪಠ್ಯಕ್ರಮದ ಹಿನ್ನೆಲೆಯಲ್ಲಿ ರಚಿತವಾದ ಪಠ್ಯಪುಸ್ತಕದಲ್ಲಿ ಕೆಲವು ವಿಷಯಗಳು ಸೇರ್ಪಡೆಯಾಗಬೇಕಾದ ಅಗತ್ಯತೆ ಇದೆ. ಅವುಗಳಲ್ಲಿ ಕೆಳಗಿನವು ಈ ರೀತಿಯಾಗಿವೆ.

೧. ರಾಷ್ಟ್ರೀಯ ಮಹತ್ವ ಪಡೆದ ಕೆಲವು ವಿಷಯಗಳಿಗೆ ಮಾತ್ರ ಆದ್ಯತೆ ಕೊಟ್ಟು ರಚನೆ ಮಾಡಲಾಗಿರುತ್ತದೆ. ಇದರಲ್ಲಿ ಸಂವಿಧಾನ, ರಾಷ್ಟ್ರೀಯ ಹೋರಾಟ, ರಾಷ್ಟ್ರಚಿಹ್ನೆ, ರಾಷ್ಟ್ರಧ್ವಜ, ರಾಷ್ಟ್ರಮಟ್ಟದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ/ಸಾಮ್ರಾಜ್ಯ ಮೊದಲಾದ ವಿಷಯಗಳಿಗೆ ಆದ್ಯತೆ ಕೊಡಲಾಗುತ್ತಿದೆ.

೨. ಆಳುವ ಸರ್ಕಾರಗಳ ಸಿದ್ಧಾಂತಕ್ಕನುಗುಣವಾಗಿ ಇಲ್ಲವೇ ಅವುಗಳ ಅಣತಿಯಂತೆ ಪಠ್ಯಗಳ ರಚನೆ.

೩. ಪ್ರಾದೇಶಿಕ ಇತಿಹಾಸಗಳ ಕಡೆಗಣನೆ

೪. ಶ್ರೀಸಾಮಾನ್ಯರ ರೈತರ/ಬುಡಕಟ್ಟು/ಕೆಳವರ್ಗದ ಜನರ ವೈಶಿಷ್ಟ್ಯ ಮತ್ತು ಆ ವರ್ಗಗಳ ಇತಿಹಾಸ ಹಾಗೂ ಹೋರಾಟಗಳನ್ನು ಕಡೆಗಣಿಸಿರುವುದು.

೫. ಮಹಿಳಾ ವಿಷಯಗಳಿಗೆ ಆದ್ಯತೆ ನೀಡದೇ ಇರುವುದು.

**ಡಿ.ಎಸ್.ಈ.ಆರ್.ಟಿ.ಯಿಂದ ಪ್ರಕಟವಾಗುವ ಪಠ್ಯಪುಸ್ತಕಗಳ ಆದ್ಯತೆಯ ಪಠ್ಯ ವಿಷಯಗಳು**

ಪ್ರಸ್ತುತ ದಿನಗಳಲ್ಲಿ ಶಿಕ್ಷಕರ ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತರುವ ಉದ್ದೇಶದಿಂದ ೧೯೬೪ರಲ್ಲಿ ರಾಜ್ಯ ಶಿಕ್ಷಣ ಸಂಸ್ಥೆ (ಎಸ್.ಐ.ಇ.) ಎಂಬ ಹೆಸರಿನಲ್ಲಿ ಕರ್ನಾಟಕದ ಉತ್ತರ ಭಾಗದ ಧಾರವಾಡದಲ್ಲಿ ಈ ಸಂಸ್ಥೆ ಸ್ಥಾಪನೆಯಾಯಿತು. ಕ್ರಿ.ಶ. ೧೯೭೫ ಡಿಸೆಂಬರ್ ೨೭ರಂದು ಈ ಸಂಸ್ಥೆಯನ್ನು ಬೆಂಗಳೂರಿಗೆ ವರ್ಗಾಯಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಗಳಲ್ಲಿ ವಿಲೀನಗೊಳಿಸಲಾಯಿತು. ಈ ಇಲಾಖೆಯೇ ಡಿ.ಎಸ್.ಈ.ಆರ್.ಟಿ. ಕ್ರಿ.ಶ. ೧೯೮೩ರಲ್ಲಿ ಪಠ್ಯಪುಸ್ತಕ ನಿರ್ದೇಶನಾಲಯವನ್ನು ಡಿ.ಎಸ್.ಈ.ಆರ್.ಟಿ.ಯೊಂದಿಗೆ ಸೇರಿಸಲಾಗಿದೆ. ಡಿ.ಎಸ್.ಈ.ಆರ್.ಟಿ.ಯು ಇಂದು ಪ್ರಮುಖವಾಗಿ ಆರು ಅಂಗಸಂಸ್ಥೆಗಳನ್ನು ಒಳಗೊಂಡಿದೆ.

೧. ಶಿಕ್ಷಕರ ಶಿಕ್ಷಣ ಘಟಕ, ೨. ರಾಜ್ಯಮೌಲ್ಯಮಾಪನ ಘಟಕ, ೩. ರಾಜ್ಯ ವಿಜ್ಞಾನ ಸಂಸ್ಥೆ, ೪. ಶೈಕ್ಷಣಿಕ ತಂತ್ರಜ್ಞಾನ ವಿಭಾಗ, ೫. ಪಠ್ಯಪುಸ್ತಕ ನಿರ್ದೇಶನಾಲಯ, ೬. ಶೈಕ್ಷಣಿಕ ಮತ್ತು ವೃತ್ತಿ ಮಾರ್ಗದರ್ಶನ

ಪಠ್ಯಪುಸ್ತಕ ನಿರ್ದೇಶನಾಲಯವು ಡಿ.ಎಸ್.ಈ.ಆರ್.ಟಿ.ಯ ಒಂದು ಅಂಗಸಂಸ್ಥೆಯಾಗಿದ್ದು, ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲೆಗಳಿಗೆ ಅಗತ್ಯವಾದ ಪಠ್ಯಪುಸ್ತಕವನ್ನು ರೂಪಿಸುತ್ತದೆ. ಕರ್ನಾಟಕ ರಾಜ್ಯ ಸರ್ಕಾರವು ಪಠ್ಯಪುಸ್ತಕಗಳ ರಾಷ್ಟ್ರೀಕರಣ ನೀತಿಯನ್ನು ಒಪ್ಪಿಕೊಂಡು ೧೯೫೯ರಲ್ಲಿ ರಾಜ್ಯ ಶೈಕ್ಷಣಿಕ ಸಂಶೋಧನಾ ವಿಭಾಗವನ್ನು ಸ್ಥಾಪಿಸಿತು. ೧೯೭೮ರಲ್ಲಿ ಈ ನಿರ್ದೇಶನಾಲಯವನ್ನು ದೃಢೀಕರಿಸಿ ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆಯಲ್ಲಿ ಪಠ್ಯಪುಸ್ತಕ ವಿಭಾಗವನ್ನು ತೆರೆಯಲಾಯಿತು. ಈ ವಿಭಾಗವು ಶಾಲೆಗಳಿಗೆ ಮತ್ತು ಶಿಕ್ಷಕ ತರಬೇತಿ ಸಂಸ್ಥೆಗಳಿಗೆ ಪಠ್ಯಪುಸ್ತಕಗಳನ್ನು ಅನೇಕ ಸಮಿತಿಗಳಿಂದ ಬರೆಸಿ, ಮುದ್ರಿಸಿ, ಸರಬರಾಜು ಮಾಡುವ ಕಾರ್ಯದಲ್ಲಿ ಇಂದಿಗೂ ನಿರತವಾಗಿದೆ. ಇಂತಹ ಸಮಿತಿಯಿಂದ ರಚಿತವಾದ ಪಠ್ಯಪುಸ್ತಕಗಳಿಂದ ಇನ್ನು ಚರಿತ್ರೆಯ ಪಠ್ಯಪುಸ್ತಕಗಳು ಒಳಗೊಳ್ಳದೇ ಇರುವ ವಿಷಯಗಳು ಈ ರೀತಿಯಾಗಿವೆ.

೧. ಆಯಾ ರಾಜ್ಯಗಳಲ್ಲಿ ರಾಜ್ಯ ಮಹತ್ವ ಪಡೆದ ಕೆಲವು ವಿಷಯಗಳಿಗೆ ಮಾತ್ರ ಆದ್ಯತೆ ಕೊಟ್ಟು ರಚನೆ ಮಾಡಲಾಗಿರುತ್ತದೆ. ಇದರೊಂದಿಗೆ ನಮ್ಮ ಸಂವಿಧಾನ, ರಾಷ್ಟ್ರೀಯ ಹೋರಾಟ, ರಾಷ್ಟ್ರಚಿಹ್ನೆ, ರಾಷ್ಟ್ರಧ್ವಜ ಮೊದಲಾದ ವಿಷಯಗಳಿಗೆ ಆದ್ಯತೆ ಕೊಡಲಾಗಿರುತ್ತದೆ.

೨. ಪ್ರಾದೇಶಿಕ ಇತಿಹಾಸಗಳಿಗೆ ಹೆಚ್ಚು ಆದ್ಯತೆ ಕೊಟ್ಟು ಇತಿಹಾಸ ರಚನೆ.

೩. ಶ್ರೀಸಾಮಾನ್ಯರ ರೈತರ/ಬುಡಕಟ್ಟು/ಕೆಳವರ್ಗದ ಜನರ ವೈಶಿಷ್ಟ್ಯ ಮತ್ತು ಆ ವರ್ಗಗಳ ಇತಿಹಾಸ ಹಾಗೂ ಹೋರಾಟಗಳನ್ನು ಕಡೆಗಣಿಸಿರುವುದು.

೪. ಮಹಿಳಾ ವಿಷಯಗಳಿಗೆ ಆದ್ಯತೆ ನೀಡದೇ ಇರುವುದು.

೫. ಕಲೆ ಮತ್ತು ಪರಂಪರೆಯ ವಿಷಯಗಳ ನಿರ್ಲಕ್ಷ್ಯ.

೬. ಕುಲಕಸುಬುಗಳ ಇತಿಹಾಸ ಕಣ್ಮರೆ ಇತ್ಯಾದಿ.

ಪ್ರಾಚೀನ ಕಾಲದಿಂದ ಬೆಳೆದು ಬಂದಿರುವ ಶಿಕ್ಷಣ ಪದ್ಧತಿ ಮತ್ತು ಚರಿತ್ರೆ ಪಠ್ಯಪುಸ್ತಕಗಳು ಕಾಲಾನುಕ್ರಮವಾಗಿ ಬೆಳೆದು ಬಂದಿರುವುದನ್ನು ಕಾಣಬಹುದು. ಈ ರೀತಿ ಅಭಿವೃದ್ಧಿ ಹೊಂದಿರುವ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಭಾರತದಲ್ಲಿ ತನ್ನದೇ ಆದ ಮಿತಿಯಲ್ಲಿ ಇರುವುದನ್ನು ಕಾಣಬಹುದು. ಇದಕ್ಕೆ ಉತ್ತಮ ಪರಿಹಾರದ ಅಗತ್ಯವಿದೆ.

**ಟಿಪ್ಪಣಿಗಳು**

೧. ವೆಬ್ ಆವೃತ್ತಿ, ವಿಕೀಪಿಡಿಯಾ.

೨. ಅದೇ.

೩. ಅದೇ.

೪. ಕೋಸಾಂಬಿ ಡಿ.ಡಿ.(ಮೂ), ವೇಣುಗೋಪಾಲ್ ಶೈಲಜಾ ಬಿ., ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ, ಪು. ೧೪೫-೧೫೦.

೫. ನೋಡಿ: Agarwal, 2004, Development of Education System in India.

೬. ಎಚ್.ವಿ. ಶಿವಶಂಕರ್, ಪ್ರಚಲಿತ ಭಾರತದಲ್ಲಿ ಶಿಕ್ಷಣ, ಪು. ೧೪.

೭. ಡಾ. ಕೆ. ಸದಾಶಿವ, ಪ್ರಾಚೀನ ಭಾರತ ಇತಿಹಾಸ, ಪು. ೨.

೮. Aggarwal J.C., ಅದೇ. ಮತ್ತು ಎಜುಕೇಷನ್ ಸಿಸ್ಟಂ ಇನ್ ಇಂಡಿಯಾ, ಪು. ೧೫.

೯. ನೋಡಿ: Dash B.N., 2003, History of Education in India.

೧೦. ಎಸ್.ಬಿ. ಯಾದವಾಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪು. ೧೩೯.

೧೧. ಕೆ.ವಿ. ಶಂಕರಗೌಡ, (ಅಭಿನಂದನ ಗ್ರಂಥ), ಕಬ್ಬಿನಹಾಲು, ಪು. ೭೫೧.

೧೨. ಅದೇ, ಪು. ೭೨೬.

೧೩. ಅದೇ, ಪು. ೭೩೭.

೧೪. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಪು. ೧.

೧೫. ಎಸ್.ಬಿ. ಯಾದವಾಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪು. ೧೩೯.

೧೬. ಎ. ಬಸಪ್ಪ, ಭಾರತೀಯ ಸಮಗ್ರ ಶಿಕ್ಷಣ, ಪು. ೧೧೨.

೧೭. ಎನ್.ಬಿ. ಯಾದವಾಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪು. ೨೫೦.

೧೮. ಅಗ್ರಹಾರ ಕೃಷ್ಣಮೂರ್ತಿ(ಸಂ), ಸಂಸ್ಕೃತಿ ಕಥನ, ಪು. ೮೨.

೧೯. ಓಬಳೇಶ ಘಟ್ಟಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೨೭೪.

೨೦. ಎನ್.ಜಿ. ಅಶೋಕ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೨೦೫.

೨೧. ಓಬಳೇಶ ಘಟ್ಟಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೨೭೫.

೨೨. ಎನ್.ಬಿ. ಯಾದವಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪು. ೨೬೨.

೨೩. ಹನುಮಂತರೆಡ್ಡಿ ಜಿ., ಸ್ವಾತಂತ್ರ್ಯಪೂರ್ವ ಭಾರತದ ಶಿಕ್ಷಣ, ಪು. ೮೭.

೨೪. ಕೆ.ಜಿ. ಕುಲಕರ್ಣಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೯೯.

೨೫. ಎಸ್. ಶಿವಯ್ಯ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೧೪೯.

೨೬. ಕೆ.ಜಿ. ಕುಲಕರ್ಣಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೯೭.

೨೭. ಅದೇ, ಪು. ೯೯.

೨೮. ಅಂತರಜಾಲದ ಮಾಹಿತಿ.

೨೯. ಎನ್.ಜಿ. ಅಶೋಕ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೨೦೨.

೩೦. ಓಬಳೇಶ ಘಟ್ಟಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೩೨೧.

೩೧. ಕೆ.ಜಿ. ಕುಲಕರ್ಣಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೧೦೮.

೩೨. ಅದೇ, ಪು. ೧೦೯.

೩೩. ಎನ್.ಜಿ. ಅಶೋಕ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪು. ೨೧೭.

೩೪. ಕೆ.ಜಿ. ಕುಲಕರ್ಣಿ, ಉದಯೋನ್ಮುಖ, ಭಾರತದಲ್ಲಿ ಶಿಕ್ಷಣ, ಪು. ೧೧೩.

೩೫. ನೋಡಿ: ಹಿಂದೂ ದೇಶದ ಚರಿತ್ರೆ, ಈಸ್ಟ್ ಇಂಡಿಯಾ ಕಂಪನಿಯ ಆಡಳಿತ, E.W. Thomson, M.A.

೩೬. ಅಂಕಿ-ಅಂಶಗಳು ವಿಧಾನಸಭೆ ಕಲಾಪ, ೨೪-೬-೨೦೧೪, ಪ್ರಜಾವಾಣಿ ವರದಿ, ೨೬-೬-೨೦೧೪.

೩೭. ಕೆ.ಜಿ. ಕುಲಕರ್ಣಿ, ಉದಯೋನ್ಮುಖ, ಭಾರತದಲ್ಲಿ ಶಿಕ್ಷಣ, ಪು. ೧೧೩.

೩೮. ಘಾಲಾಕ್ಷ, ಸಮಗ್ರ ಭಾರತದ ಇತಿಹಾಸ, ಸಂ. ೨, ಭಾಗ ೨, ೨೦೦೯, ಪು. xvii-xvii.

□□

ಅಧ್ಯಾಯ : ನಾಲ್ಕು

# ಶಿಕ್ಷಣ ತಜ್ಞರ ಚಿಂತನೆಗಳ ಹಿನ್ನೆಲೆಯಲ್ಲಿ ಚರಿತ್ರೆ ಪುಠ್ಯಪುಸ್ತಕ

---

೪.೧. ಪಾಶ್ಚಿಮಾತ್ಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

೪.೨. ಭಾರತೀಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

೪.೩. ಕರ್ನಾಟಕ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

ಅಧ್ಯಾಯ : ನಾಲ್ಕು

# ಶಿಕ್ಷಣ ತಜ್ಞರ ಚಿಂತನೆಗಳ ಹಿನ್ನೆಲೆಯಲ್ಲಿ ಚರಿತ್ರೆ ಪಠ್ಯಪುಸ್ತಕ

ಶಿಕ್ಷಣ ರಂಗಕ್ಕೆ ಪ್ರಪಂಚದ ಅನೇಕ ಶ್ರೇಷ್ಠ ಶಿಕ್ಷಣತಜ್ಞರು, ಚಿಂತಕರು, ಸಾಹಿತಿಗಳು, ವಿಚಾರವಂತರು, ವಿದ್ವಾಂಸರು ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಈ ಕೊಡುಗೆಗಳು ಅವರ ಆಲೋಚನಾ ಲಹರಿಯ ಮೇಲೆ ರೂಪುಗೊಂಡಿರುವಂತಹವು. ಇಂತಹ ಆಲೋಚನೆಯು ಕೇವಲ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರುವಂತಹದ್ದಲ್ಲ. ಶಿಕ್ಷಣ ಎಂದರೆ ಕೇವಲ ಓದು ಬರಹವಲ್ಲ. ಅದರಲ್ಲಿ ಸಾಕಷ್ಟು ಜೀವನದ ಅಂಶಗಳು ಅಡಕವಾಗಿವೆ. ಇಂತಹ ಜೀವನಕ್ಕೆ ಉಪಯುಕ್ತವಾಗುವಂತಹ ಶಿಕ್ಷಣವನ್ನು ನೀಡಬೇಕೆಂಬುದು ಅವರೆಲ್ಲರ ಚಿಂತನೆಗಳಾಗಿವೆ. ಪಠ್ಯಪುಸ್ತಕಗಳು ಶಿಕ್ಷಣ ವ್ಯವಸ್ಥೆಯಲ್ಲಿ ಅತಿ ಮುಖ್ಯವಾದ ಪಾತ್ರ ವಹಿಸುತ್ತವೆ. ಅವುಗಳಿಲ್ಲದ ಶಿಕ್ಷಣ ಜೀವ ಇಲ್ಲದ ಮನುಷ್ಯನಿದ್ದಂತೆ. ಅವುಗಳಿಲ್ಲದ ಶಿಕ್ಷಣ ಪರಿಪೂರ್ಣವಾಗಲಾರದು. ಜಾಗತೀಕರಣದ ಇಂದಿನ ಸವಾಲುಗಳನ್ನು ಸಮರ್ಥವಾಗಿ ಎದುರಿಸಲು ಅಗತ್ಯವಾದ ಶಿಕ್ಷಣ ನೀಡಬೇಕಾದದು ಇಂದಿನ ಅವಶ್ಯಕತೆಯಾಗಿದೆ. ಆದರೆ ಇಂದು ಶಿಕ್ಷಣ ವ್ಯಾಪಾರೀಕರಣಕ್ಕೊಳಗಾಗಿದೆ. ಇಂದಿನ ನಮ್ಮ ಶಿಕ್ಷಣ ನೀತಿಗಳು ಯಾರನ್ನೂ ತೃಪ್ತಿಪಡಿಸಲು ನಿರೂಪಿತವಾಗುತ್ತಿವೆ. ಇದಕ್ಕನುಗುಣವಾಗಿಯೇ ಪಠ್ಯಪುಸ್ತಕಗಳು ಇಂದಿನ ಮಕ್ಕಳ ಆಶೋತ್ತರಗಳನ್ನು ಪೂರೈಸಲು ವಿಫಲವಾಗಿದ್ದು, ಅವು ಮಕ್ಕಳಿಗೆ ಒಂದು ಹೊರೆ ಎನ್ನುವಂತೆ ರೂಪಿತವಾಗುತ್ತಿವೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕಗಳು (ಚರಿತ್ರೆ ಪಠ್ಯಪುಸ್ತಕಗಳು ಸೇರಿದಂತೆ) ಹೇಗೆ ರೂಪಿತವಾಗಬೇಕು. ಯಾವ ಉದ್ದೇಶ ಮತ್ತು ಆಶಯಗಳನ್ನು ಇಟ್ಟುಕೊಂಡು ಅವು ರಚನೆಯಾಗಬೇಕು ಎನ್ನುವ ಕುರಿತಂತೆ ಪಾಶ್ಚಿಮಾತ್ಯ ವಿದ್ವಾಂಸರು ಮತ್ತು ಭಾರತೀಯ ವಿದ್ವಾಂಸರು ಹಾಗು ಕರ್ನಾಟಕದ ವಿದ್ವಾಂಸರು ತಮ್ಮದೇ ಆದ ದೃಷ್ಟಿಕೋನದಲ್ಲಿ ಅವುಗಳನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ.

## ೪.೧. ಪಾಶ್ಚಿಮಾತ್ಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

ಅನೇಕ ಪಾಶ್ಚಾತ್ಯ ಶಿಕ್ಷಣ ತಜ್ಞರು ಮಕ್ಕಳಿಗೆ ಶಿಕ್ಷಣ ನೀಡಿ ಅವರು ಸರಿದಾರಿಯಲ್ಲಿ ತಮ್ಮ ಜೀವನ ರೂಪಿಸಿಕೊಳ್ಳಲು ಸಹಾಯಕವಾಗಬಲ್ಲ ಹಲವಾರು ಚಿಂತನೆಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಮಗುವಿಗೆ ಯಾವ ಪಠ್ಯಕ್ರಮವನ್ನು ಅಳವಡಿಸಬೇಕು, ಶಿಕ್ಷಣದ ಗುರಿ ಏನಾಗಿರಬೇಕು ಎಂಬ ಅನೇಕ ಅಂಶಗಳ ಬಗ್ಗೆ ಸಾಕಷ್ಟು ಚರ್ಚೆಗಳನ್ನು ನಡೆಸಿ ಅವರು ತಮ್ಮದೇ ಆದ ದೃಷ್ಟಿಯಲ್ಲಿ

ಕೆಲವು ಅಂಶಗಳನ್ನು ನಿರೂಪಿಸಿದ್ದಾರೆ. ಅವರಲ್ಲಿ ಅರಿಸ್ಟಾಟಲ್, ಪ್ಲೇಟೋ, ರೂಸೋ ಮೊದಲಾದವರು ವಿಶ್ವಮಟ್ಟದಲ್ಲಿ ಪ್ರಮುಖರಾಗಿದ್ದಾರೆ. ಪ್ರತಿ ತಜ್ಞರ ಚಿಂತನಾ ಕ್ರಮಗಳನ್ನು ನಾವು ಕೂಲಂಕಷವಾಗಿ ಪರಿಶೀಲಿಸಿ ಮಗುವಿನ ಸರ್ವತೋಮುಖವಾದ ಅಭಿವೃದ್ಧಿಗೆ ಅವುಗಳನ್ನು ಬಳಸಿಕೊಳ್ಳಬಹುದಾಗಿದೆ. ಪಾಶ್ಚಾತ್ಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಉತ್ತಮ ಶಿಕ್ಷಣ ಎಂದರೆ ಯಾವುದು? ಅವರ ದೃಷ್ಟಿಕೋನದಲ್ಲಿ ಶಿಕ್ಷಣವೆಂದರೆ ಏನು? ಹಾಗೂ ಪಠ್ಯಕ್ರಮದ ಬಗ್ಗೆ ಅವರ ನಿಲುವು ಏನಾಗಿತ್ತು ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಎಲ್ಲಾ ಪಾಶ್ಚಾತ್ಯ ಶಿಕ್ಷಣ ತಜ್ಞರು ಪ್ರತ್ಯೇಕ ಚರಿತ್ರೆ ಪಠ್ಯಕ್ರಮದ ಬಗ್ಗೆ ಚಿಂತನೆಗಳನ್ನು ನಡೆಸದಿದ್ದರೂ ಅವರಿಗೆ ಇಡೀ ಶಿಕ್ಷಣದ ಎಲ್ಲಾ ಪಠ್ಯಕ್ರಮ ಹೇಗಿರಬೇಕು ಮತ್ತು ಯಾವ ರೀತಿಯ ವಿಷಯಗಳ ಬೋಧನೆಯ ಅವಶ್ಯಕತೆ ಇದೆ ಎನ್ನುವುದನ್ನು ಅವಲೋಕಿಸಿದ್ದಾರೆ. ಅವರು ನಡೆಸಿರುವ ಕೆಲ ಪ್ರಮುಖ ಚಿಂತನೆಗಳನ್ನು ಈ ಅಧ್ಯಾಯದಲ್ಲಿ ಚರಿತ್ರೆ ಪಠ್ಯಪುಸ್ತಕಗಳಿಗೆ ಅನ್ವಯಿಸಿಕೊಳ್ಳಲಾಗಿದೆ. ಅಲ್ಲದೆ ಚರಿತ್ರೆ ವಿಷಯಗಳನ್ನು ಶಾಲಾ ಹಂತದಲ್ಲಿ ಹೇಗೆ ಮಕ್ಕಳಿಗೆ ಕಲಿಸಬೇಕೆಂದು ಕೆಲವರು ಚಿಂತಿಸಿದ್ದಾರೆ.

### ೪.೧.೧. ಪ್ಲೇಟೋ

ಸಾಕ್ರೇಟಿಸ್‌ನ ಶಿಷ್ಯನೂ ಆದ ಮತ್ತು ಅವನ ಪಾಂಡಿತ್ಯದಿಂದ ಆಕರ್ಷಿತನಾದ ಪ್ಲೇಟೋ ಪಶ್ಚಿಮ ದೇಶದ ಪ್ರಥಮ ಶೈಕ್ಷಣಿಕ ತತ್ವಜ್ಞಾನಿ. ಕ್ರಿಪೂ. ೪೨೭ರಲ್ಲಿ ಅಥೇನ್ಸ್‌ನಲ್ಲಿ ಜನಿಸಿದ ಇವನು ಮುಂದೆ ಸಾಕ್ರೇಟಿಸ್‌ನ ಮರಣದ ನಂತರ ಸಾಕಷ್ಟು ಘಾಸಿಗೊಂಡು ಮನಸ್ಸು ಪರಿವರ್ತನೆ ಮಾಡಿಕೊಂಡವನು, ಮೊದಲು ರಾಜಕಾರಣಿಯಾಗ ಹೊರಟ ಇವನು ಆದದ್ದು ದೊಡ್ಡ ತತ್ವಜ್ಞಾನಿಯಾಗಿ. ಪ್ಲೇಟೋ ಗ್ರಂಥ ರಚನೆಯ ವಿರೋಧಿಯಾಗಿದ್ದರೂ ಸಹ ಸುಮಾರು ಮೂವತ್ತು ಪುಸ್ತಕಗಳನ್ನು ಬರೆದಿದ್ದನು. ಪುಸ್ತಕಗಳ ಬಗ್ಗೆ ಪ್ಲೇಟೋ "ಅವುಗಳು ಚಿತ್ರಗಳಂತೆ ನಿರ್ಜೀವ ವಸ್ತುಗಳು, ಅವುಗಳಿಂದ ನಮ್ಮ ಕುತೂಹಲಗಳು ಮತ್ತು ಸಂಶಯಗಳಿಗೆ ಪರಿಹಾರ ದೊರೆಯಲಾರದು ಎಂಬ ಅಭಿಪ್ರಾಯವನ್ನು ಹೊಂದಿದ್ದನು."[೧]

### ಪಠ್ಯಕ್ರಮದ ಬಗ್ಗೆ ಪ್ಲೇಟೋನ ಚಿಂತನೆ

ಪ್ಲೇಟೋ ಚರಿತ್ರೆ ಪಠ್ಯಪುಸ್ತಕಗಳ ಬಗ್ಗೆ ನೇರವಾಗಿ ಯಾವುದೇ ಚಿಂತನೆಯನ್ನು ಮಾಡಿಲ್ಲ. ಆದರೆ ಒಟ್ಟಾರೆಯಾಗಿ ಪಠ್ಯಕ್ರಮ ಹೇಗಿರಬೇಕು ಎಂಬುದರ ಬಗ್ಗೆ ಹಿಂದೆ ಇದ್ದ ಪಠ್ಯಕ್ರಮವನ್ನು ನೋಡಿ ತನ್ನದೇ ಆದ ಒಂದು ಪಠ್ಯಕ್ರಮ ಹೀಗೆ ಇರಬೇಕು ಎಂಬುದನ್ನು ತಿಳಿಸಿದ್ದಾನೆ. ಏಕೆಂದರೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸುಮಾರು ಸಾವಿರದ ಐದುನೂರು ವರ್ಷಗಳವರೆಗೆ ಪಠ್ಯಕ್ರಮ ಬದಲಾಯಿಸದೇ ಹಳೇ ಪಠ್ಯಕ್ರಮವನ್ನೇ ಅನುಸರಿಸಿಕೊಂಡು ಬಂದಿದ್ದರು. "ಹೀಗಾಗಿ ಅವುಗಳ ಬದಲಾವಣೆಗೆ ಇವನು ಪ್ರಯತ್ನಿಸಿ ಪ್ರಾಥಮಿಕ ಶಿಕ್ಷಣದಲ್ಲಿ ಗ್ರೀಕರ ಅಂಗಸಾಧನೆ ಮತ್ತು ಸಂಗೀತ ಪ್ರಧಾನವಾದ ಪಠ್ಯಕ್ರಮವನ್ನು ಬೋಧಿಸಬೇಕೆಂದು ಸೂಚಿಸಿದ್ದಾನೆ. ಇವನ ಪಠ್ಯಕ್ರಮದ ದೃಷ್ಟಿಕೋನವು ತಾತ್ವಿಕ ಹಾಗೂ ಐತಿಹಾಸಿಕ ಎಂಬ ಎರಡು ದೃಷ್ಟಿಗಳನ್ನು ಒಳಗೊಂಡಿತು".[೨]

ಪ್ಲೇಟೋ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದ ತರಗತಿಗಳಲ್ಲಿ ನಿಖರವಾದ ಕೆಲವು ವಿಷಯಗಳನ್ನು ಬೋಧಿಸಬೇಕು ಎಂದು ತಿಳಿಸಿದ್ದಾನೆ. ಬಾಲ್ಯಾವಸ್ಥೆಯಲ್ಲಿ ಸಂಗೀತವನ್ನು ಕಲಿಸಬೇಕು, ಕವಿತೆಗಳನ್ನು ರಾಗಬದ್ಧವಾಗಿ ಹಾಡುವುದು ಇದರ ಮುಖ್ಯ ಉದ್ದೇಶವಾಗಿರಬೇಕು, ಇದರಿಂದ ಮನಸ್ಸು ಮತ್ತು ದೇಹಗಳ ಬೆಳವಣಿಗೆಗೆ ಸಹಕಾರಿಯಾಗುತ್ತದೆ ಎಂಬುದಾಗಿ ತಿಳಿದಿದ್ದನು. ಇವುಗಳ ಜೊತೆಗೆ ಗಣಿತ, ಭೂಗೋಳದಂತಹ ಮಹತ್ವದ ವಿಷಯಗಳನ್ನು ಸಹ ಈ ಹಂತದಲ್ಲಿ ಮಕ್ಕಳಿಗೆ ಕಲಿಸಬೇಕೆಂದು ಅಭಿಪ್ರಾಯಪಡುತ್ತಾನೆ. ಇತಿಹಾಸದ ಬಗ್ಗೆ ಇವನು ಏನನ್ನು ಹೇಳದಿರುವುದಕ್ಕೆ ಕಾರಣವೇನೆಂದರೆ ಇತಿಹಾಸದ ರಚನೆಯಾಗದೆ ಇರುವುದೇ ಅದಕ್ಕೆ ಪ್ರಮುಖ ಕಾರಣವಾಗಿರಬೇಕು. ಏಕೆಂದರೆ ಇವನ ಕಾಲಕ್ಕೆ ಇತಿಹಾಸ ರಚನೆಯ ಕೆಲಸ ಇನ್ನು ಮಂದಗತಿಯಲ್ಲಿತ್ತು. ಇಂತಹ ವಿಷಯವನ್ನು ಶಾಲಾ ತರಗತಿಯಲ್ಲಿ ಅಧ್ಯಯನದ ವಿಷಯವಾಗಿ ಸೇರ್ಪಡೆ ಮಾಡಬೇಕು ಎಂಬುದರ ಬಗ್ಗೆ ಇವನು ಚಿಂತನೆ ಮಾಡಿರುವುದಕ್ಕೆ ಸಾಧ್ಯವಿಲ್ಲವೇನೋ. ಆದರೂ ಸಹ ಇಂದು ಚರಿತ್ರೆಯಲ್ಲಿ ಅಡಕವಾಗಿರುವ ನೈತಿಕ ಅಂಶಗಳನ್ನು ಕಲಿಸುವುದು ಅಂದು ಪ್ರಧಾನ ಉದ್ದೇಶವಾಗಿತ್ತು. ಪ್ಲೇಟೋ ಹೇಳುವಂತೆಯೇ ಹಿರಿಯರ ಆದರ್ಶಗಳನ್ನು, ತತ್ವಗಳನ್ನು, ಮುಂದಿನವರಿಗೆ ತಿಳಿಸುವುದು ಒಂದು ರೀತಿಯಾಗಿ ಇಂದಿನ ಚರಿತ್ರೆ ಪಠ್ಯಪುಸ್ತಕದಲ್ಲಿ ರಾಷ್ಟ್ರೀಯ ನಾಯಕರ ಆದರ್ಶ ಗುಣಗಳನ್ನು ಮಕ್ಕಳಿಗೆ ಬೋಧಿಸುವುದು ಒಂದು ಪರ್ಯಾಯ ವ್ಯವಸ್ಥೆಯಾಗಿತ್ತು ಎಂದರೆ ಸುಳ್ಳಾಗಲಾರದು.

### ೪.೧.೨. ಅರಿಸ್ಟಾಟಲ್

ಅರಿಸ್ಟಾಟಲ್‌ನು ಗ್ರೀಕ್ ದೇಶದ ಒಬ್ಬ ಶ್ರೇಷ್ಠ ಶಿಕ್ಷಣ ತಜ್ಞ, ಇವನು ಗ್ರೀಕ್ ದೇಶದ ಅಥೇನ್ಸ್ ಎಂಬ ನಗರದಲ್ಲಿ ಜನಿಸಿದನು. ಅಂದು ಸಮಾಜದಲ್ಲಿ ಇದ್ದಂತಹ ಹಲವಾರು ದೋಷಗಳನ್ನು ಕಂಡು ಅವುಗಳ ನಿರ್ಮೂಲನೆಗಾಗಿ ಪ್ರಯತ್ನಿಸಿದನು. ಮನುಷ್ಯ ಜೀವನದ ಸುಧಾರಣೆಗಾಗಿ ಇರುವ ದಾರಿಯೆಂದರೆ ಅದು ಶಿಕ್ಷಣ ಎಂಬುದನ್ನು ಮನಗಂಡಿದ್ದನು. ಅಂದಿನ ದಿನಗಳಲ್ಲಿದ್ದ ಕೆಟ್ಟ ಸಂಪ್ರದಾಯಗಳು, ರೂಢಿಗಳನ್ನು ನಾಶ ಮಾಡಲು ಶಿಕ್ಷಣದಿಂದ ಮಾತ್ರ ಸಾಧ್ಯ ಎಂದಿದ್ದನು. ಕ್ರಿ.ಪೂ. ೪೭೦ ರಲ್ಲಿ ಒಬ್ಬ ಶಿಲ್ಪಿಯ ಮಗನಾಗಿ ಜನಿಸಿದ ಇವನು ಮುಂದೆ ಒಬ್ಬ ಶ್ರೇಷ್ಠ ಶಿಕ್ಷಣ ತಜ್ಞ, ರಾಜ್ಯಶಾಸ್ತ್ರದ ಪಿತಾಮಹ ಎಂದು ಕರೆಸಿಕೊಂಡನು. ಆರಂಭದಲ್ಲಿ ವಿಜ್ಞಾನ ವಿಷಯದ ಕಡೆಗೆ ಹೆಚ್ಚು ಒಲವನ್ನು ಹೊಂದಿದ್ದ, ನಂತರ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಧರ್ಮಶಾಸ್ತ್ರ ಮತ್ತು ಆಧ್ಯಾತ್ಮ ಮುಂತಾದ ವಿಷಯಗಳನ್ನು ಆಸಕ್ತಿಯಿಂದ ಅಧ್ಯಯನ ಮಾಡಿದನು ಮುಂದೆ ತನ್ನ ಗುರು ಪ್ಲೇಟೋನ ತತ್ವಜ್ಞಾನ ಮತ್ತು ಅಕಾಡೆಮಿಯ ಶಾಲೆಯ ಪ್ರಭಾವ ಅರಿಸ್ಟಾಟಲನ ಮೇಲೆ ತುಂಬಾ ಪ್ರಭಾವ ಬೀರಿತು.

### ಪಠ್ಯಕ್ರಮದ ಬಗ್ಗೆ ಅರಿಸ್ಟಾಟಲನ ಚಿಂತನೆ

ಅರಿಸ್ಟಾಟಲನು ಸಹ ಚರಿತ್ರೆಯ ಪಠ್ಯಪುಸ್ತಕದ ಬಗ್ಗೆ ಎಲ್ಲಿಯೂ ನೇರವಾಗಿ ಹೇಳಿಲ್ಲ. ಕಾರಣ ಈ ಕಾಲಕ್ಕೆ ಚರಿತ್ರೆಯ ಬರವಣಿಗೆ ಇನ್ನು ಕೂಸಾಗಿರುವುದು. ಆದ್ದರಿಂದ ಚರಿತ್ರೆಯ ಸಂಗತಿಗಳ್ಯಾವುವೂ ಎಲ್ಲಿಯೂ ಅರಿಸ್ಟಾಟಲನ ಶೈಕ್ಷಣಿಕ ವಿಚಾರದಲ್ಲಿ ನೇರವಾಗಿ ಬರುವುದಿಲ್ಲ.

ಆದರೆ ಪಠ್ಯಕ್ರಮದ ಬಗ್ಗೆ ಇವನು ತನ್ನದೇ ಆದ ಕೆಲವು ಚಿಂತನೆಗಳನ್ನು ನಡೆಸಿದ್ದಾನೆ. ಶತಮಾನಗಳ ಹಿಂದೆಯೇ ಅರಿಸ್ಟಾಟಲನು ಯಾರೂ ಗುರುತಿಸದೇ ಇದ್ದಂತಹ ಶಿಕ್ಷಣ ಕೊಡಬೇಕು ಎಂಬುದನ್ನು ತೋರಿಸಿಕೊಟ್ಟವನು. ಮಗು ಪಡೆಯುವ ಅನುಭವದ ಮೂಲಕವೇ ಶಿಕ್ಷಣ ನೀಡಬೇಕು ಎಂದು ತಿಳಿಸಿದ್ದಾನೆ. ಶಿಕ್ಷಣದಲ್ಲಿ ಮಗುವಿನ ಮನಸ್ಸು ಗೊತ್ತಿರುವ ವಿಚಾರ/ಸಂಗತಿಗಳಿಂದ ಗೊತ್ತಿಲ್ಲದೇ ಇರುವ ವಿಚಾರ/ಸಂಗತಿಗಳ ಕಡೆಗೆ ಸಾಗಬೇಕು. ಮಕ್ಕಳಿಗೆ ಗಣಿತ, ಭೂಗೋಳ, ಭೂಮಿತಿ, ಸಂಗೀತ ಮುಂತಾದ ವಿಷಯಗಳನ್ನು ಪ್ರಾರಂಭದ ಹಂತದಲ್ಲಿ ಕಲಿಸಬೇಕು ಎಂದು ಸೂಚಿಸಿದ್ದಾನೆ.

ಅರಿಸ್ಟಾಟಲ್ ಇತಿಹಾಸದ ಬಗ್ಗೆ ಈ ರೀತಿಯಾಗಿ ಹೇಳಿದ್ದಾನೆ "ಇತಿಹಾಸವು ಸಂಶೋಧನೆಗಳನ್ನು ತಾರತಮ್ಯ ನಿಜ ಸ್ವರೂಪಕ್ಕೆ ತಂದು ತರ್ಕಬದ್ಧವಾಗಿ ವಿವರಿಸುತ್ತದೆ ಎಂದು ವಿಶದಪಡಿಸಿದ್ದಾನೆ"[೩] ಇವನ ಪ್ರಕಾರ, ಇತಿಹಾಸ ಎಂಬುದು ಇದುವರೆಗೆ ಇದ್ದ ಗೊಂದಲಗಳನ್ನು ಸಂಶೋಧನೆಗಳ ಮೂಲಕ ಹುಡುಕಿ ಅವುಗಳಿಗೆ ಒಂದು ನಿಜವಾದ ಸತ್ಯಸಂಗತಿಯನ್ನು ಒದಗಿಸುವ ವಿಷಯವಾಗಿದೆ ಎಂಬುದು ಮನವರಿಕೆಯಾಗುತ್ತದೆ.

### ೪.೧.೩. ಜೆ.ಜೆ. ರೂಸೋ

ಫ್ರೆಂಚ್‌ನ ಖ್ಯಾತ ಲೇಖಕನು, ತತ್ವಜ್ಞಾನಿಯೂ ಹಾಗೂ ಶಿಕ್ಷಣ ಸುಧಾರಕನೂ ಆಗಿದ್ದ ಜೀನ್ ಜೇಕ್ಸ್ ರೂಸೋ ಹುಟ್ಟಿದ್ದು ಜೀನಿವಾದಲ್ಲಿ. ಇವನ ತಂದೆ ಬಹು ಮುಂಗೋಪಿ ಆಗಿದ್ದನು. ತಾಯಿ ಒಳ್ಳೆಯವಳಾಗಿದ್ದರೂ ಸಹ ಇವನ ಜನನದ ಒಂದು ತಿಂಗಳ ನಂತರ ಮರಣ ಹೊಂದಿದಳು. ಆದ್ದರಿಂದ ಇವನನ್ನು ಅವನ ತಂದೆಯೇ ಸಾಕಬೇಕಾಗಿ ಬಂದಿದ್ದರಿಂದ ರೂಸೋವಿಗೆ ಪ್ರೀತಿ, ವಾತ್ಸಲ್ಯ, ಮಮತೆ ಇದ್ಯಾವು ಸಿಗಲಿಲ್ಲ. ಇದರ ಜೊತೆಗೆ ಇವನ ಸೋದರತ್ತೆಯ ಅತಿಯಾದ ಪ್ರೀತಿಯೂ ಇವನನ್ನು ಸೋಮಾರಿಯನ್ನಾಗಿ ಮಾಡಿತು. ಆದರೂ ಸಹ ಚಿಕ್ಕನಿರುವಾಗಲೇ ತನ್ನ ವೇಳೆಯನ್ನೆಲ್ಲ ಕಲ್ಪನಾಪರ ಕಾದಂಬರಿಗಳನ್ನು ಓದುವುದರಲ್ಲಿ ಕಳೆದನು. ಶಾಲೆಯೆಂದರೆ ಬಲು ಬೇಸರವಾಗಿ ಕಂಡುಬಂದಿತು. ಹನ್ನೆರಡು ವರ್ಷದವನಿರುವಾಗಲೇ ಶಾಲೆಯನ್ನು ಬಿಟ್ಟು ಬಡಗಿ ಕೆಲಸಕ್ಕೆ ಸೇರಿದನು. ಆದರೆ ಇಲ್ಲಿ ಕೆಲಸ ಕಲಿಯುವುದರ ಬದಲು ದುಶ್ಚಟಗಳಿಗೆ ಬಲಿಯಾದ. ಇವನು ಮುಂದೆ ತಾನು ಸಂಚರಿಸಿದ ಕಡೆಯಿಂದ ಅನುಭವ ಪಡೆದುಕೊಂಡ ಪ್ಯಾರಿಸಿಗೆ ಬಂದು ನೆಲೆಸಿದನು. ಇದೇ ಸಂದರ್ಭಕ್ಕೆ ಫ್ರಾನ್ಸಿನಲ್ಲಿ ೧೬ನೇ ಲೂಯಿಯ ಆಡಳಿತದ ವಿರುದ್ಧ ಜನರು ಕ್ರಾಂತಿಯಲ್ಲಿ ತೊಡಗಿದ್ದರು. ಇವನ ದುರಾಡಳಿತದಿಂದ ಬೆಂದಿದ್ದ ಬಡಜನರ ಮೇಲೆ ರೂಸೋ ಬಹಳ ಸಹಾನುಭೂತಿ ತೋರಿದನು. ಫ್ರಾನ್ಸ್‌ನ ಬಡಜನರ ದುರ್ದೆಸೆಯನ್ನು ಕಂಡು ಅವನು ಮರುಗಿದನು. ತಾನು ಬರೆದ ಗ್ರಂಥಗಳಲ್ಲಿ ಕ್ರಾಂತಿಕಾರ ಈ ತತ್ವಗಳನ್ನೇ ತುಂಬಿದನು. ಸಾರ್ವಜನಿಕ ಹಕ್ಕು ಬಾಧ್ಯತೆಗಳಿಗೆ ಮಹತ್ವ ಕೊಟ್ಟು "ಶಿಕ್ಷಣವು ಪ್ರತಿಯೊಬ್ಬ ಮಾನವನ ಜನ್ಮಸಿದ್ಧವಾದ ಹಕ್ಕು" ಎಂಬ ತತ್ವವನ್ನು ಎತ್ತಿಹಿಡಿದ ಮಹಾಪುರುಷರಲ್ಲಿ ಇವನು ಒಬ್ಬನಾಗಿದ್ದಾನೆ.

ರೂಸೋ ಬರೆದ ಅನೇಕ ಗ್ರಂಥಗಳಲ್ಲಿ 'ದಿ ಎಮಿಲಿ' ಎಂಬ ಪುಸ್ತಕವು ಒಂದು.[೪] ಇದು ಶಿಕ್ಷಣ ಪ್ರಪಂಚದಲ್ಲೆಲ್ಲ ಪ್ರತಿಷ್ಠೆಯನ್ನು ಪಡೆದ ಗ್ರಂಥ. ಸುಮಾರು ಎರಡು ನೂರು ವರ್ಷಗಳಿಂದಲೂ ಶೈಕ್ಷಣಿಕ ಚಟುವಟಿಕೆಗಳನ್ನು ಹಲವು ಬಗೆಗಳಲ್ಲಿ ಪ್ರೋತ್ಸಾಹಿಸುತ್ತಾ ಬಂದಿದೆಯಲ್ಲದೇ, ಆಧುನಿಕ ಶಿಕ್ಷಣದ ಸಮಗ್ರ ವಿಚಾರಗಳೂ ಬಾಲೋದ್ಯಾನದ ಮೂಲ ತತ್ವಗಳು ಇವನಿಂದಲೇ ಹೊರಹೊಮ್ಮಿದವು.

**ಪಠ್ಯಕ್ರಮದ ಬಗ್ಗೆ ರೂಸೋವಿನ ಚಿಂತನೆ**

ರೂಸೋನ ಪ್ರಕಾರ ಮಗುವಿನ ಮನಸ್ಸಿನ ಅಭ್ಯಾಸವು ಶಿಕ್ಷಣದ ತಳಹದಿಯಾಗಿರಬೇಕು ಮಗುವಿನ ಶೈಶವ ಮತ್ತು ಬಾಲ್ಯದಲ್ಲಿ ನಿಷೇಧಾತ್ಮಕ ಶಿಕ್ಷಣವಿರಬೇಕು ಎಂದು ಅವನು ಹೇಳಿದ್ದಾನೆ. ಇದರ ಅರ್ಥ ಸ್ವಾಭಾವಿಕ ಪರಿಸರದಲ್ಲಿ ಮಕ್ಕಳ ಇಂದ್ರಿಯಗಳ ತರಬೇತಿಯಾಗಬೇಕೆಂದೂ ೧೨ ವರ್ಷಗಳ ನಂತರ ಓದು ಬರಹ, ವಿಜ್ಞಾನಗಳ ಬೋಧನೆ ಇರಬೇಕು. ನಿರೀಕ್ಷೆ ಹಾಗೂ ಪ್ರಯೋಗಗಳು ಸಂಶೋಧನಾ ಪದ್ಧತಿಯ ಪ್ರಕಾರವಿರಬೇಕು. "ಇತಿಹಾಸ, ಭೂಗೋಳ ಹಾಗೂ ಸಾಮಾಜಿಕ ವಿಷಯಗಳ ಅಭ್ಯಾಸವು ಪ್ರತ್ಯಕ್ಷ ವೀಕ್ಷಣೆ ಹಾಗೂ ಇಂದ್ರಿಯಗಳ ಅನುಭವದಿಂದ ಆಗಬೇಕೆಂದು ತಿಳಿಸಿದ್ದಾನೆ".[೫] ಅಂದರೆ ರೂಸೋವಿನ ಪ್ರಕಾರ ಐತಿಹಾಸದ ವಿಷಯವನ್ನು ಪ್ರತ್ಯಕ್ಷವಾಗಿ ಭೇಟಿ ನೀಡಿ ಅವುಗಳಿಂದ ಅನುಭವ ಪಡೆದುಕೊಂಡು ವಿಷಯ ಜ್ಞಾನವನ್ನು ಸಂಗ್ರಹಿಸಬೇಕು ಎಂಬುದಾಗಿದೆ. ಇದರಿಂದ ಮಗುವಿನ ಮನಸ್ಸಿನ ಇತಿಹಾಸದ ವಿಷಯಗಳು ಸತ್ಯಾಸತ್ಯತೆಯನ್ನು ಅರಿಯಲು ಸಹಾಯಕವಾಗಿದೆ. ರೂಸೋ ಮುಂದುವರೆದು ೧೮ನೇ ವಯಸ್ಸಿನ ನಂತರ ನೀತಿ ಶಿಕ್ಷಣ, ಧಾರ್ಮಿಕ ಶಿಕ್ಷಣ ಹಾಗೂ ತತ್ವಜ್ಞಾನವನ್ನು ಮಕ್ಕಳಿಗೆ ಬೋಧಿಸಬೇಕು. ಮಕ್ಕಳಿಗೆ ಪುಸ್ತಕದ ಜ್ಞಾನಕ್ಕಿಂತ ಸಾಮಾಜಿಕ ಪರಿಸರದಲ್ಲಿ ವೈಯಕ್ತಿಕ ಅನುಭವವಗಳಿಗೆ ಆದ್ಯತೆಯನ್ನು ನೀಡಿದ್ದಾನೆ. ಇದರ ಜೊತೆಯಲ್ಲಿ ರೂಸೋ ಎಮಿಲಿ ಒಂದು ಪುಸ್ತಕದಲ್ಲಿ ಉದಾಹರಣೆಗಳ ಸಹಿತ ಮಕ್ಕಳ ಮನಸ್ಸಿಗನುಗುಣವಾಗಿ ವಿವಿಧ ಗುರಿಗಳು ಹೊಂದುತ್ತವೆ. ಅವು ಒಂದೊಂದು ಹಂತ ದಾಟಿದಂತೆ ಬೋಧನೆಯ ಧ್ಯೇಯಗಳು ಸಹ ಬದಲಾಗುತ್ತವೆ ಎಂದು ತಿಳಿಸಿದ್ದಾನೆ. ಎಮಿಲಿಯನ್ನು ದೃಷ್ಟಿಯಲ್ಲಿಟ್ಟು ಕೊಂಡು ರೂಸೋ ಶಿಕ್ಷಣದ ಯೋಜನೆಗಳನ್ನು ೫ ಭಾಗಗಳಾಗಿ ವಿಂಗಡಿಸಿದ್ದಾನೆ ಮೊದಲ ಹಂತದಲ್ಲಿ ಮಕ್ಕಳ ದೈಹಿಕ ಅಭಿವೃದ್ಧಿಗೆ ಗಮನ ಕೊಡಬೇಕು. ಎರಡನೇ ಹಂತದಲ್ಲಿ ಮಕ್ಕಳಿಗೆ ನಿಷೇಧಾತ್ಮಕ ಶಿಕ್ಷಣ ಕೊಡಬೇಕು, ದೈಹಿಕ ಶಿಕ್ಷೆಯನ್ನು ಕೊಡಬಾರದು ಎಂದಿದ್ದಾನೆ. ಮೂರನೆಯ ಹಂತದಲ್ಲಿ ಬೌದ್ಧಿಕ ಶಿಕ್ಷೆ ಕೊಡಬೇಕು ಅಂದರೆ ಭಾಷೆ, ಗಣಿತ, ಶ್ರಮದಾನ, ಸಾಮಾಜಿಕ ಸಂಬಂಧಗಳ ಶಿಕ್ಷಣ ನೀಡಬೇಕು ಎಂದರ್ಥ. ನಾಲ್ಕನೆಯ ಹಂತದಲ್ಲಿ ಸಾಮಾಜಿಕ ತರಬೇತಿ, ನೈತಿಕ ಹಾಗೂ ಧಾರ್ಮಿಕ ಶಿಕ್ಷಣ ಕೊಡಬೇಕು. ಐದನೆಯ ಹಂತದಲ್ಲಿ ಸ್ತ್ರೀ ಶಿಕ್ಷಣಕ್ಕೆ ರೂಸೋ ಆದ್ಯತೆ ನೀಡಿದ್ದಾನೆ.

**೪.೧.೪. ಪೆಸ್ಟಾಲಜಿ**

ಪೆಸ್ಟಾಲಜಿ ರೂಸೋವಿನ ಕಾಲದಲ್ಲಿ ರೂಢವಾಗಿದ್ದ ಕೃತಕವಾದ ಶಿಕ್ಷಣ ಪದ್ಧತಿಯನ್ನು ಬಲವಾಗಿ ನಿಷೇಧಿಸಿ ಅದಕ್ಕೆ ಪ್ರತಿಯಾಗಿ ಮಕ್ಕಳಿಗೆ ನೈಸರ್ಗಿಕ ಶಿಕ್ಷಣವು ದೊರೆಯಬೇಕೆಂದು

ಪ್ರತಿಪಾದಿಸಿದ್ದನು. ರೂಸೋ ಪ್ರತಿಪಾದಿಸಿದ ಶೈಕ್ಷಣಿಕ ತತ್ವಗಳು ಕಾರ್ಯರೂಪಕ್ಕೆ ಬರಲಿಲ್ಲ. ಅಲ್ಲದೆ ರೂಸೋ ನಿರೂಪಿಸಿದ್ದ ಶಿಕ್ಷಣ ಕ್ರಮವೂ ಸಹ ಅಷ್ಟ ಸುಲಭದ್ದಾಗಿರಲಿಲ್ಲ. ಹಾಗಾಗಿ ಹಳೆಯ ಸಾಂಪ್ರಾದಾಯಿಕ ಶಿಕ್ಷಣ ಪದ್ಧತಿಯನ್ನು ಮುಂದುವರೆಸಿದರು. ಆದರೆ ರೂಸೋ ಬೋಧಿಸಿದ ನೈಸರ್ಗಿಕ ಶಿಕ್ಷಣ ಪದ್ಧತಿಯನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿ ಸಾಹಸ ಮಾಡಿದವರಲ್ಲಿ ಪೆಸ್ಟಾಲಜಿ ಮೊದಲನೆಯವನು. ಇವನು ಶಿಕ್ಷಣಕ್ಕೆ ಮನಶಾಸ್ತ್ರದ ತಳಹದಿಯನ್ನು ಹಾಕಿಕೊಟ್ಟವನು. ಇಂತಹ ಪೆಸ್ಟಾಲಜಿಯು ಕ್ರಿ.ಶ. ೧೭೪೬ರಲ್ಲಿ ಸ್ವಿಟ್ಜರ್ಲೆಂಡಿನ ಝುರಿಚ್ ಎಂಬಲ್ಲಿ ಜನಿಸಿದನು. ಬಾಲ್ಯದಲ್ಲಿಯೇ ತನ್ನ ತಂದೆಯನ್ನು ಕಳೆದುಕೊಂಡ ಇವನು ತನ್ನ ತಾಯಿಯ ಆಸರೆಯಲ್ಲಿ ಬೆಳೆದನು. ತನ್ನ ತಾಯಿಯಿಂದ ಉತ್ತಮ ಗುಣಗಳನ್ನು ಮೈಗೂಡಿಸಿಕೊಂಡನು. "ಇವನ ಮೇಲೆ ಗ್ರೀಕ್ ಮತ್ತು ಹಿಬ್ರು ಭಾಷೆಯ ಶಿಕ್ಷಕರಾಗಿದ್ದ ಜೆ.ಎ. ಬ್ರೆಟ್ಟಿಂಗನ್ ಮತ್ತು ಇತಿಹಾಸ, ರಾಜ್ಯಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಜೆ.ಜೆ. ಬ್ರಾಡಮರ್ ತುಂಬಾ ಪ್ರಭಾವ ಬೀರಿದರು".[೬] ಇವರ ಪ್ರಭಾವದಿಂದಲೇ ಪೆಸ್ಟಾಲಜಿ ಆತ್ಮದ ಮತ್ತು ಮನಸ್ಸಿನ ಸಂತೋಷಕ್ಕಿಂತ ಹೆಚ್ಚಿನದು ಈ ಜಗತ್ತಿನಲ್ಲಿ ಯಾವುದೂ ಇಲ್ಲ ಎಂದು ನಂಬಿದ.

**ಪಠ್ಯಕ್ರಮದ ಬಗ್ಗೆ ಪೆಸ್ಟಾಲಜಿಯ ಚಿಂತನೆ**

ಪೆಸ್ಟಾಲಜಿಯು ತನ್ನದೇ ಆದ ತತ್ವಗಳಂತೆ ನಿರ್ದಿಷ್ಟ ಪಠ್ಯಕ್ರಮವನ್ನು ಸೂಚಿಸಿದನು. ಇದಕ್ಕೂ ಪೂರ್ವದಲ್ಲಿ ಕೆಲವು ಮಹತ್ವದ ವಿಷಯಗಳು ಪಠ್ಯಕ್ರಮದಲ್ಲಿ ಸೇರ್ಪಡೆಗೊಳ್ಳದೇ ಹಾಗೆಯೇ ಇದ್ದವು. ಅಂತಹ ಸೇರ್ಪಡೆಗೊಳ್ಳದೇ ಇರುವ ಪಠ್ಯಕ್ರಮವನ್ನು ಸೇರಿಸಬೇಕೆಂದು ಹೇಳಿದನು. ಅವುಗಳೆಂದರೆ ಭೂಗೋಳ, ಭಾಷೆಗಳು, ಭೂಮಿ ಮತ್ತು ಇತರ ವಿಷಯಗಳು. ಭೂಗೋಳವನ್ನು ಪೆಸ್ಟಾಲಜಿ ಹೊಸದಾಗಿ ಸೇರ್ಪಡೆಗೊಳಿಸಿದನು. ಇದರಿಂದ ಪಠ್ಯಕ್ರಮಕ್ಕೆ ಒಂದು ಹೊಸ ರೂಪ ಬಂದಂತಾಯಿತು. ಇದರಿಂದ ಮಕ್ಕಳು ತಾವೇ ವಸ್ತುಗಳನ್ನು ನಿರೀಕ್ಷಿಸುವ ವಿಧಾನ ಜಾರಿಗೆ ಬಂದಿತು ಭಾಷೆಗಳನ್ನು ಮಕ್ಕಳು ವೈಜ್ಞಾನಿಕ ರೀತಿಯಲ್ಲಿ ಅವರ ಮನಸ್ಸಿಗೆ ಅನುಗುಣವಾಗಿ ಕಲಿಸಬೇಕು ಎಂದಿದ್ದಾನೆ. ಇದರಿಂದ ಮಕ್ಕಳು ಉತ್ತಮವಾದ ಭಾಷಾ ಕೌಶಲ್ಯ, ಉಚ್ಚರಣಾ ಸಾಮರ್ಥ್ಯ, ಉತ್ತಮ ಸಂಭಾಷಣಾ ಕಲೆ ಬೆಳೆಯುತ್ತದೆ. ಭೂಮಿತಿಯ ಬಗ್ಗೆ ಹಿಂದೆ ಮಕ್ಕಳು ಕಂಠಪಾಠ ಮಾಡುತ್ತಿದ್ದರು. ಆದರೆ ಪೆಸ್ಟಾಲಜಿ ಅದರ ಆಕೃತಿಗಳನ್ನು ತೆಗೆದು ಮಕ್ಕಳು ಅರ್ಥ ಮಾಡಿಕೊಳ್ಳುವಂತೆ ಸೂಚಿಸಿದನು. ಇತರೆ ವಿಷಯಗಳಲ್ಲಿ ಸಂಗೀತ, ನೈತಿಕ ಶಿಕ್ಷಣ, ಧಾರ್ಮಿಕ ಶಿಕ್ಷಣ, ಶಾರೀರಿಕ ಶಿಕ್ಷಣ, ಬೇಸಾಯ ಇತಿಹಾಸ ಮುಂತಾದ ವಿಷಯಗಳನ್ನು ಕಲಿಸುವುದರಲ್ಲಿ ತಂದ ಸುಧಾರಣೆಗಳೆಲ್ಲವೂ ಇವನ ಕೊಡುಗೆಯೇ ಎಂದು ಹೇಳಬಹುದು.

**೪.೧.೫. ಜಾನ್ ಫ್ರೆಡ್ರಿಕ್ ಹರ್ಬಾರ್ಟ್**

ಪೆಸ್ಟಾಲಜಿಯ ಶಿಷ್ಯನಾದ ಜಾನ್ ಫ್ರೆಡ್ರಿಕ್ ಹರ್ಬಾರ್ಟನು ಕ್ರಿ.ಶ. ೧೭೭೬ರಲ್ಲಿ ಜರ್ಮನಿಯ ಓಲ್ಡನ್‌ಬರ್ಗ್‌ನಲ್ಲಿ ಜನಿಸಿದನು. ಇವನ ತಂದೆ ವಕೀಲರಾಗಿದ್ದು, ತಾಯಿ ಸುಶಿಕ್ಷಿತಳೂ ಜಾಣೆಯೂ ಆಗಿದ್ದಳು. ಇವನ ತಾಯಿಯು ಗ್ರೀಕ್ ಭಾಷೆ ಮತ್ತು ಗಣಿತ ವಿಷಯದಲ್ಲಿ ಅಸಾಮಾನ್ಯವಾದ ಪ್ರತಿಭೆಯನ್ನು ಹೊಂದಿದ್ದಳು. ಇದೆಲ್ಲವನ್ನೂ ತನ್ನ ಮಗನಿಗೆ ಕೊಡಲು ಸಾಕಷ್ಟು ಪ್ರಯತ್ನ

ಮಾಡಿದಳು. ಅವಳ ತಾಯಿ ಶ್ರಮದಿಂದಾಗಿಯೇ ಹರ್ಬಾರ್ಟ್ ಒಬ್ಬ ಶ್ರೇಷ್ಠ ಶಿಕ್ಷಣ ತಜ್ಞನಾಗಿ ಬೆಳೆದನು. ತತ್ವಶಾಸ್ತ್ರದ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದ್ದ ಇವನು ಒಬ್ಬ ತತ್ವಜ್ಞಾನಿಯೂ ಸಹ ಆಗಿದ್ದನು. ಅಭ್ಯಾಸವನ್ನು ಬಿಟ್ಟು ಹೆಚ್ಚು ತತ್ವಶಾಸ್ತ್ರವನ್ನು ಅಭ್ಯಸಿಸಲು ಮುಂದಾದನು. ತತ್ವಜ್ಞಾನಿಯಾದ ಶಿಲ್ಲಿಂಗನ ಕೃತಿಗಳ ಬಗ್ಗೆ ಟೀಕೆ ಟಿಪ್ಪಣಿ ಬರೆಯಲು ಮುಂದಾದ ಇವನಿಗೆ ಅದು ಮುಂದೆ ಹೆಸರು ತಂದುಕೊಟ್ಟಿತು. ಅನೇಕ ಪಂಡಿತರ ಒಡನಾಟದಿಂದ ಅಪಾರವಾದ ಅನುಭವ ಪಡೆದುಕೊಂಡ. ಇದರಿಂದಾಗಿಯೇ ಅವನು ಶಿಕ್ಷಣದಲ್ಲಿ ಒಳನೋಟವನ್ನು ಬೆಳೆಸಿಕೊಂಡು ಅವನ ಶೈಕ್ಷಣಿಕ ವಿಚಾರಗಳಿಗೆ ಮೂಲವಾಯಿತು.

**ಪಠ್ಯಕ್ರಮದ ಬಗ್ಗೆ ಹರ್ಬಾರ್ಟ್‌ನ ಚಿಂತನೆಗಳು**

ಹರ್ಬಾರ್ಟ್‌ನು ತಾನು ನಿರ್ಧರಿಸಿದ ಶಿಕ್ಷಣದ ಗುರಿಗಳನ್ನೇ ಮುಂದಿಟ್ಟುಕೊಂಡು ಪಠ್ಯಕ್ರಮವನ್ನು ಹಾಕಿಕೊಟ್ಟಿದ್ದಾನೆ. ವಿದ್ಯಾರ್ಥಿಗಳಲ್ಲಿ ನೈತಿಕತೆ ಬೆಳೆಸುವುದು ಮತ್ತು ವೈವಿಧ್ಯಮಯ ಆಸಕ್ತಿಗಳನ್ನು ಬೆಳೆಸುವುದು ಶಿಕ್ಷಣದ ಪ್ರಮುಖ ಧ್ಯೇಯವಾಗಿದೆ ಎಂದಿದ್ದಾನೆ. ಈ ಧ್ಯೇಯಸಾಧನೆಗೆ ಅನುಗುಣವಾದಂತಹ ಪಠ್ಯಕ್ರಮವನ್ನು ಸೂಚಿಸಿದ್ದಾನೆ ಈ ರೀತಿಯಾದ ಪಠ್ಯಕ್ರಮವನ್ನು ಅವನು ಎರಡು ಭಾಗಗಳಾಗಿ ಮಾಡಿದ್ದಾನೆ.

೧. "**ಐತಿಹಾಸಿಕ ಪಠ್ಯಕ್ರಮ:**– ಇದರಲ್ಲಿ ಪ್ರಮುಖವಾಗಿ ಇತಿಹಾಸ, ಸಾಹಿತ್ಯ, ಭಾಷೆ, ಸಮಾಜವಿಜ್ಞಾನ ಮುಂತಾದ ವಿಷಯಗಳನ್ನು ಸೇರ್ಪಡೆಗೊಳಿಸಿದ್ದಾನೆ.

೨. **ವೈಜ್ಞಾನಿಕ ಪಠ್ಯಕ್ರಮ:**– ಗಣಿತ, ಭೂಗೋಳ ಮತ್ತು ನೈಸರ್ಗಿಕ ವಿಜ್ಞಾನಗಳನ್ನು ಈ ಪಠ್ಯಕ್ರಮದಲ್ಲಿ ಸೇರ್ಪಡೆಗೊಳಿಸಿದ್ದಾನೆ"[೬]

ಈ ರೀತಿ ಎರಡು ಭಾಗ ಮಾಡಿದ ಪಠ್ಯಕ್ರಮಕ್ಕೆ ಹರ್ಬಾರ್ಟ್‌ನು ಸಮಾನವಾದಂತಹ ಪ್ರಾತಿನಿಧ್ಯವನ್ನು ಕೊಟ್ಟಿದ್ದಾನೆ. ಆದರೆ ಪೆಸ್ಟಾಲಜಿಯು ಮೊದಲ ಗುಂಪಿನ ಪಠ್ಯಕ್ರಮಗಳಿಗೆ ಹೆಚ್ಚು ಆದ್ಯತೆಯನ್ನು ನೀಡಿರಲಿಲ್ಲ. ಆದರೆ ಹರ್ಬಾರ್ಟ್‌ನು ಎರಡೂ ಗುಂಪಿನ ಪಠ್ಯಕ್ರಮಗಳಿಗೆ ಸಮಾನವಾದ ಪ್ರಾತಿನಿಧ್ಯವನ್ನು ನೀಡಿ ವೈಜ್ಞಾನಿಕ ವಿಷಯಗಳಷ್ಟೇ ಮಹತ್ವವನ್ನು ಐತಿಹಾಸಿಕ ವಿಷಯಗಳು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಅವಶ್ಯಕವೆಂಬುದು ತಿಳಿದು ಬರುತ್ತದೆ. ಕಾರಣ ಇತಿಹಾಸದಂತಹ, ಸಾಹಿತ್ಯದಂತಹ ಮತ್ತು ಭಾಷಾ ವಿಷಯಗಳಿಂದ ಮಕ್ಕಳು ನೈತಿಕ ಗುಣಗಳನ್ನು ಬೆಳೆಸಿಕೊಳ್ಳಲು ಸಾಧ್ಯವೆಂಬುದು ಇವನ ಅಭಿಪ್ರಾಯವಾಗಿರಬೇಕು. ಏಕೆಂದರೆ ತನ್ನ ಶಿಕ್ಷಣದ ಗುರಿಯಲ್ಲಿ ನೈತಿಕ ಅಂಶಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದು ನೋಡಿದರೆ ಇದು ಸತ್ಯವೆಂದು ಕಾಣುತ್ತದೆ.

**೪.೧.೬. ಫ್ರೋಬೆಲ್**

ಆಧುನಿಕ ಶಿಕ್ಷಣದ ಕಿಂಡರ್ ಗಾರ್ಟನ್ ಪದ್ಧತಿಯನ್ನು ಪರಿಚಯಿಸಿದ ನಿರ್ಮಾತೃವೇ ಫ್ರೋಬೆಲ್ ಇವನ ಪೂರ್ಣ ಹೆಸರು ಫ್ರೆಡಿಕ್ ವಿಲಿಯಂ ಆಗಸ್ಟ್ ಫ್ರೋಬೆಲ್ ಎಂದು. ಚಟುವಟಿಕೆಯ ಆಂದೋಲನಕ್ಕೆ ಕ್ರಮಬದ್ಧ ರೂಪವನ್ನು ತೊಡಿಸಿ ಶಿಕ್ಷಣದ ಸಂಪೂರ್ಣವಾದ ಸ್ವರೂಪವನ್ನೆಲ್ಲಾ

ಸೃಜನಶೀಲತೆಯಿಂದ ಕೂಡಿರಬೇಕೆಂದು ಹೇಳಿದ ಮಹಾಶಯ. ನಿಸರ್ಗ ಮತ್ತು ಆದರ್ಶವಾದ ಎರಡನ್ನೂ ಸಮೀಕರಿಸಿ ತನ್ನ ಶೈಕ್ಷಣಿಕ ತತ್ವಗಳು ಹಾಗೂ ತತ್ವಜ್ಞಾನವನ್ನು ರೂಪಿಸಿದಂತಹವನು. ತನ್ನ ಜೀವನದಲ್ಲಿ ಹತ್ತು ಹಲವು ವೃತ್ತಿಗಳಿಗೆ ಕೈಹಾಕಿ ಯಾವುದರಲ್ಲಿಯೂ ಯಶಸ್ಸು ಕಾಣದೇ ಅಂತಿಮವಾಗಿ ಶಿಕ್ಷಣ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡವನು. ಶಿಕ್ಷಕ ವೃತ್ತಿಯೇ ಉತ್ತಮವಾದ ವೃತ್ತಿಯೆಂದು ಬಯಸಿ ಜೀವನಪೂರ್ತಿ ಶಿಕ್ಷಕನಾಗಿ ದುಡಿದು ಈ ವೃತ್ತಿಯಲ್ಲಿಯೇ ಯಶಸ್ಸು ಕಂಡುಕೊಂಡು ಶ್ರೇಷ್ಠ ಶಿಕ್ಷಣತಜ್ಞನೆಂದು ಕರೆಸಿಕೊಂಡಿದ್ದಾನೆ. ಶಿಕ್ಷಕವೃತ್ತಿಯ ಪಾವಿತ್ರ್ಯ ಹಾಗೂ ಘನತೆಯನ್ನು ಹಾಗೂ ದಕ್ಷತೆಯನ್ನು ಉತ್ತುಂಗ ಶಿಖರಕ್ಕೆ ಕೊಂಡೊಯ್ದ ಮಹಾನ್ ವ್ಯಕ್ತಿಯಾಗಿದ್ದಾನೆ. ಇಂತಹ ಪ್ರೊಬೆಲ್ ಜರ್ಮನಿಯಲ್ಲಿ ೧೭೮೨ರಲ್ಲಿ ಜನಿಸಿದನು. ಬಾಲ್ಯದಲ್ಲಿಯೇ ತನ್ನ ತಾಯಿಯನ್ನು ಕಳೆದುಕೊಂಡು ಚಿಕ್ಕಮ್ಮನ ಆಶ್ರಯದಲ್ಲಿ ಬೆಳೆದನು. ಶಾಲೆಗೆ ಸೇರಿದ ಇವನನ್ನು ಎಲ್ಲರು ದಡ್ಡನೆಂದು ಕಳುಹಿಸಿದರು. ಆದರೆ ೧೫ನೇ ವಯಸ್ಸಿನಲ್ಲಿ ಅರಣ್ಯ ಉದ್ಯೋಗಕ್ಕೆ ಸೇರಿಕೊಂಡನು. ಇಲ್ಲಿ ನಿಸರ್ಗದ ಚಿತ್ರಣವು ಇವನನ್ನು ಬಹಳವಾಗಿ ಬದಲಾಯಿಸಿತು. ಆದರೆ ಮುಂದೆ ಜೆನ್ನು ವಿಶ್ವವಿದ್ಯಾಲಯವನ್ನು ಸೇರಿಕೊಂಡನು. ಪೆಸ್ಟಾಲಜಿಯ ಶಾಲೆಯಲ್ಲಿ ನಾಲ್ಕು ವರ್ಷ ದುಡಿದು ಆತನ ಪ್ರಭಾವಕ್ಕೆ ಒಳಗಾದನು. ಇಲ್ಲಿ ಚಟುವಟಿಕೆಗಳ ಮೂಲಕ ಶಿಕ್ಷಣ ಕೊಡುವುದನ್ನು ಪ್ರಾರಂಭಿಸಿದನು. ಇದೇ ಮುಂದೆ ಕಿಂಡರ್ ಗಾರ್ಟನ್ ಪದ್ಧತಿಯಾಗಿ ಪ್ರಸಿದ್ಧಿ ಹೊಂದಿತು ಹಾಗೂ ಅದು ಇಂದು ಎಲ್ಲಾ ದೇಶಗಳಲ್ಲಿಯೂ ಶಾಶ್ವತವಾಗಿ ರೂಪುಗೊಂಡಿದೆ.

### ಪಠ್ಯಕ್ರಮದ ಬಗ್ಗೆ ಪ್ರೊಬೆಲ್‌ನ ಚಿಂತನೆಗಳು

ಪ್ರೊಬೆಲ್ ಕಿಂಡರ್ ಗಾರ್ಟನ್ ಪದ್ಧತಿಯ ಜನಕನಾಗಿರುವುದರಿಂದ ಈ ಹಂತದಲ್ಲಿ ಮಕ್ಕಳ ಪಠ್ಯಪುಸ್ತಕ ಬಗ್ಗೆಯಾಗಲಿ ಅಥವಾ ಪಠ್ಯಕ್ರಮದ ಬಗ್ಗೆಯಾಗಲಿ ಯಾವುದೇ ರೀತಿಯಾದ ಸಲಹೆಗಳನ್ನು ನೀಡಿಲ್ಲ, ಏಕೆಂದರೆ ಇಲ್ಲಿ ಆಟವಾಡುವುದರ ಮೂಲಕ ಕುಣಿದಾಡುವುದರ ಮೂಲಕ, ಓಡುವುದರ ಮೂಲಕ ಚಟುವಟಿಕೆ ಮಾಡುತ್ತಾರೆ.[೮] ಆದ್ದರಿಂದ ಇಲ್ಲಿ ಪಾಠಗಳ ಮತ್ತು ಪಠ್ಯಕ್ರಮ ನಿರ್ಬಂಧವಿಲ್ಲ ಎಂದಿದ್ದಾನೆ. ಹಾಗೆಯೇ ಮಕ್ಕಳಿಗೆ ಸಮಯದ ನಿಗದಿಯು ಸಹ ಇರುವುದಿಲ್ಲ. ಒಟ್ಟಿನಲ್ಲಿ ಹೇಳುವುದಾರೆ ಹಾಡುಗಳು, ಚಿತ್ರಗಳು, ಆಟಿಕೆಗಳು, ಗೊಂಬೆಗಳು ಮುಂತಾದವುಗಳೇ ಇಲ್ಲಿಯ ಪಠ್ಯಕ್ರಮವೆಂದರೆ ತಪ್ಪಾಗಲಾರದು.

### ೪.೧.೭. ಕಾರ್ಲ್‌ಮಾರ್ಕ್ಸ್

ಕಾರ್ಲ್‌ಮಾರ್ಕ್ಸ್ ಜರ್ಮನಿಯ ರೈನ ಪ್ರಾಂತದ ಟ್ರೀವ್ಸ್ ಎಂಬಲ್ಲಿ ೧೮೧೮ರಲ್ಲಿ ಜನಿಸಿದನು. ಇವನ ತಂದೆ ಹೈನ್ರಿಚ್ ಮಾರ್ಕ್ಸ್ ಮತ್ತು ತಾಯಿ ಹೆನ್ರೀಟ ಪ್ರೆಸ್‌ಬರ್ಗ್. ಇವನು ಜರ್ಮನಿಯಲ್ಲಿ ಜನಿಸಿದರೂ ಇವನ ಹೆಚ್ಚಿನ ಬರಹಗಾರ ಜೀವನವು ಇಂಗ್ಲೆಂಡಿನಲ್ಲಿಯೇ ಕಳೆಯಿತು. ಇವನ ತಂದೆ ಇವನನ್ನು ದೊಡ್ಡ ವಿದ್ವಾಂಸನನ್ನಾಗಿ ಮಾಡಬಯಸಿದ. ಆದರೆ ಇವನು ಆಯ್ದುಕೊಂಡ ದಾರಿಯೇ ಬೇರೆಯದಾಗಿತ್ತು. ಒಮ್ಮೆ ಟ್ರಿಯರ್ ಶಾಲೆಯ ಕೊನೆಯ ಪರೀಕ್ಷೆಯಲ್ಲಿ 'ವೃತ್ತಿ ಆಯ್ಕೆ'ಯ ಬಗ್ಗೆ ಪ್ರಬಂಧ ಬರೆಯುವಾಗ ಮಾನವ ಜನಾಂಗಕ್ಕೆ ಅತ್ಯಂತ ಹೆಚ್ಚು ಸೇವೆ ಸಲ್ಲಿಸಲು ಅವಕಾಶ ಮಾಡಿಕೊಡುವ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವುದು ಮುಖ್ಯ ಎಂದು

ಬರೆದಿದ್ದನು. ಅದರಂತೆ ಅವನು ಮುಂದೆ ನಡೆದುಕೊಂಡನು. ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ವಿಷಯದಲ್ಲಿ ಡಾಕ್ಟರೇಟ್ ಪಡೆದುಕೊಂಡನು. ತತ್ವಶಾಸ್ತ್ರ ಇವನ ವಿಷಯವಾಗಿದ್ದರೂ ಸಹ ಕಲೆ, ವಿಜ್ಞಾನ, ಇತಿಹಾಸ ಮುಂತಾದ ವಿಷಯಗಳೂ ಸಹ ಇವನ ಆಸಕ್ತಿಯ ವಿಷಯ ಗಳಾಗಿದ್ದವು. ನಂತರದಲ್ಲಿ ೧೮೪೨ರಲ್ಲಿ ಮೊದಲ ಬಾರಿಗೆ ಏಂಜೆಲ್ಸ್ ಮಾರ್ಕ್ಸ್‌ನನ್ನು ಭೇಟಿಯಾದ. ಇದರಿಂದ ಅವನ ಸ್ನೇಹ ಬೆಳೆಸಿಕೊಂಡನು. ತಾವಿಬ್ಬರೂ ಒಂದೇ ಸೈದ್ಧಾಂತಿಕ ಪಂಥದಲ್ಲಿರುವುದ ರಿಂದ ಮುಂದಿನ ರಾಜಕೀಯ ಚಟುವಟಿಕೆಗಳೆಲ್ಲವೂ ಒಟ್ಟಿಗೆ ಇರುವಂತೆ ಮಾಡಬೇಕು ಎಂಬುದು ಇವನ ಅಭಿಪ್ರಾಯವಾಗಿತ್ತು. ಇವನ ಮುಂದಿನ ಜೀವನ ಕಮ್ಯುನಿಸ್ಟ್ ಸಿದ್ಧಾಂತದ ಮೇಲೆ ರೂಪುಗೊಂಡಿತು. ೧೮೪೭ರಲ್ಲಿ ಕಮ್ಯುನಿಸ್ಟ್ ಲೀಗ್ ಸ್ಥಾಪನೆ ಮಾಡಿ ೧೮೬೪ರಲ್ಲಿ ಅಂತರರಾಷ್ಟ್ರೀಯ ದುಡಿಮೆಗಾರರ ಸಂಘ ಸ್ಥಾಪಿಸಿದರು.

ಕಾರ್ಲ್‌ಮಾರ್ಕ್ಸ್ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಅದರಲ್ಲಿ ಏಂಜೆಲ್ಸ್‌ನ ಜೊತೆಗೂಡಿ ಬರೆದ 'ದಿ ಹೋಲಿ ಪ್ಯಾಮಿಲಿ' ಸಮತಾವಾದದ ಬೆಳವಣಿಗೆ ಮೊದಲ ಹಂತವನ್ನು ಸೂಚಿಸುತ್ತದೆ.[೯] ಇವನ 'ದಿ ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ' ವರ್ಗ ಸಂಘರ್ಷ, ಬಂಡವಾಳಶಾಹಿಯ ವೈಷಮ್ಯಗಳು, ಸಮಾಜ ರಚನೆ ಮುಂತಾದವುಗಳನ್ನು ವಿವರಿಸುವುದಾಗಿದೆ. ಇದು ಕಾರ್ಮಿಕರ ಚಳುವಳಿಯ ಚರಿತ್ರೆಯೂ ಹೌದು. ಇನ್ನು 'ದಿ ಕ್ಯಾಪಿಟಲ್' ಕೃತಿಯು ಇವನ ಮೇರುಕೃತಿಯಾಗಿದೆ. ಇದರಲ್ಲಿ ಶ್ರಮಜೀವಿಗಳ ಐತಿಹಾಸಿಕ ಪಾತ್ರದ ಮಹತ್ವ ಬಂಡವಾಳಶಾಹಿ ವ್ಯವಸ್ಥೆಯ ಕುಸಿತ ಮತ್ತು ಸಮತಾವಾದದ ಬಗ್ಗೆ ತಿಳಿಸಲಾಗಿದೆ.

**ಪಠ್ಯಕ್ರಮದ ಬಗ್ಗೆ ಕಾರ್ಲ್‌ಮಾರ್ಕ್ಸ್‌ನ ಚಿಂತನೆಗಳು**

ಕಾರ್ಲ್‌ಮಾರ್ಕ್ಸ್‌ನ ಪ್ರಕಾರ, ಶಿಕ್ಷಣದ ಅಂತಿಮ ಗುರಿಯೆಂದರೆ ರಾಷ್ಟ್ರವನ್ನು ಬಲಪಡಿಸುವುದು ಮತ್ತು ವರ್ಗರಹಿತ ಸಮಾಜವನ್ನು ನಿರ್ಮಾಣ ಮಾಡುವುದಾಗಿದೆ. ಈ ಉದ್ದೇಶವನ್ನು ಸಾಧಿಸಲು ಮಕ್ಕಳಿಗೆ ಶಾಲೆಯಲ್ಲಿ ವಿವಿಧ ವಿಷಯಗಳ ಜ್ಞಾನ ಅವಶ್ಯಕ ಎಂದು ತಿಳಿಸಿದ್ದಾನೆ. ಅದಕ್ಕಾಗಿ ಗಣಿತ, ವಿಜ್ಞಾನ, ವಿದೇಶಿ ಭಾಷೆ, ಇತಿಹಾಸ ಮುಂತಾದ ವಿಷಯಗಳನ್ನು ಕಲಿಸಬೇಕು. ಈ ಎಲ್ಲಾ ವಿಷಯಗಳ ಜ್ಞಾನವನ್ನು ದೇಶಸೇವೆಗಾಗಿ ಉಪಯೋಗಿಸಬೇಕು ಎಂದಿದ್ದಾನೆ. ಮಾರ್ಕ್ಸ್ ವಾದದಲ್ಲಿ ರಾಜಕೀಯ ಅರ್ಥಶಾಸ್ತ್ರ ಮತ್ತು ರಾಜಕೀಯ ಶಿಕ್ಷಣಗಳಿಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ.[೧೦] ಶಾಲೆಗಳಲ್ಲಿ ಪ್ರಾರಂಭದಿಂದಲೇ ಗಣಿತ, ವಿಜ್ಞಾನ ಮತ್ತು ತಾಂತ್ರಿಕ ಶಿಕ್ಷಣವನ್ನು ಕಲಿಸಲಾಗುತ್ತದೆ. ಮೊದಲಿನ ಹತ್ತು ವರ್ಷಗಳ ಶಿಕ್ಷಣದಲ್ಲಿ ಭೂಗೋಳ, ಜೀವಶಾಸ್ತ್ರ, ಭೂಗರ್ಭ ಶಾಸ್ತ್ರ, ಭಾಷೆ ಸಾಹಿತ್ಯ ಮುಂತಾದ ವಿಷಯಗಳೆಲ್ಲ ಪಠ್ಯಕ್ರಮದಲ್ಲಿ ಸೇರಿರುತ್ತವೆ. ಮಾರ್ಕ್ಸ್‌ವಾದದ ವಿಶೇಷ ಸಂಗತಿ ಎಂದರೆ, ಯುವ ಸಂಘಟನೆಗಳು, ತರುಣರಿಗೆ ಜೀವನದಲ್ಲಿ ಹೊಂದಾಣಿಕೆ ಮತ್ತು ಜೀವನ ಶಿಕ್ಷಣದ ಬಗ್ಗೆ ತರಬೇತಿಯನ್ನು ಕೊಡುವುದಾಗಿದೆ.

**೪.೧.೮. ಜಾನ್ ಡ್ಯೂಯಿ**

ಜಾನ್ ಡ್ಯೂಯಿ ಅಮೇರಿಕದ ಅತ್ಯಂತ ಶ್ರೇಷ್ಠ ಶಿಕ್ಷಣ ತಜ್ಞರಲ್ಲಿ ಒಬ್ಬನಾಗಿದ್ದು, ಜಗತ್ತಿನ ಆಧುನಿಕ ಶ್ರೇಷ್ಠ ಶಿಕ್ಷಣ ತಜ್ಞರಲ್ಲಿ ಅಗ್ರಗಣ್ಯನಾಗಿರುವವನು. ಇವನು ಕ್ರಿ.ಶ. ೧೮೫೯ರಲ್ಲಿ

ಬರ್ಲಿಂಗ್‌ಟನ್‌ನಲ್ಲಿ ಜನಿಸಿದನು. ನಂತರ ಪಬ್ಲಿಕ್ ಶಾಲೆಗಳಲ್ಲಿ ಶಿಕ್ಷಣ ಪಡೆದು ನಂತರ ಅಲ್ಲಿಯೇ ಪದವಿಯನ್ನು ಮುಗಿಸಿದನು. ಜಾನ್ ಹಾಪಕಿನ್ಸ್ ವಿಶ್ವವಿದ್ಯಾಲಯದಲ್ಲಿ ಮನಃಶಾಸ್ತ್ರ, ಇತಿಹಾಸ ಮತ್ತು ತತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡನು. ಪ್ರಾರಂಭದಿಂದಲೂ ಶಿಕ್ಷಕನಾಗಿ ಸೇವೆ ಸಲ್ಲಿಸಬೇಕೆಂಬ ಹಂಬಲ ಹೊಂದಿದ್ದ ಇವನು ೧೮೮೪ರಲ್ಲಿ ಮಿಚಿಗನ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕನಾಗಿ ಸೇರಿಕೊಂಡನು. ಈ ವೃತ್ತಿಯಲ್ಲಿ ಹೊಸ-ಹೊಸ ಜ್ಞಾನ ಸಂಗ್ರಹಿಸಿ ಹೊಸ-ಹೊಸ ಪ್ರಯೋಗಗಳನ್ನು ಮಾಡತೊಡಗಿದ. ಚಿಕಾಗೋದಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದ. ಇದು ಇಡೀ ಅಮೇರಿಕಾದ ಶೈಕ್ಷಣಿಕ ಸಿದ್ಧಾಂತ ಮತ್ತು ಅನ್ವಯಗಳ ಮೇಲೆ ಪ್ರಭಾವ ಬೀರಿತು. ಮುಂದೆ ಈ ಪ್ರಯೋಗಗಳು ಅಮೇರಿಕಾದಲ್ಲಿ ಅಷ್ಟೇ ಅಲ್ಲ, ಇಡೀ ಜಗತ್ತಿನ ಶಾಲೆಗಳ ಮೇಲೆ ಪ್ರಭಾವ ಬೀರಿದವು. ಇವನು ವಿದ್ಯಾರ್ಥಿಯಾಗಿದ್ದಾಗಲೇ ಜಾರ್ಜ್‌ಮಾರಿಸ್, ಸ್ಟಾನ್ಲೆಹಾಲ್, ಹರ್ಬರ್ಟ್, ಆ್ಯಡ್ಸಂರಿಂದ ಸಾಕಷ್ಟು ಜ್ಞಾನವನ್ನು ಪಡೆದುಕೊಂಡ. ಅದರಿಂದ ಅನೇಕ ಗ್ರಂಥಗಳನ್ನು ಬರೆಯಲು ಸಹಾಯಕವಾಗಿತ್ತು.

ಜಾನ್ ಡ್ಯೂಯಿಯು ಒಬ್ಬ ಶ್ರೇಷ್ಠ ತತ್ವಜ್ಞಾನಿಯೂ ಹೌದು. ಹಾಗೆಯೇ ಶಿಕ್ಷಣ ತಜ್ಞನೂ ಹೌದು. ಆಧುನಿಕ ಜಗತ್ತಿನಲ್ಲಿ ಈತನೊಬ್ಬ ಅಗ್ರಗಣ್ಯ ಶಿಕ್ಷಣತಜ್ಞನೆಂದು ಕರೆಸಿಕೊಂಡಿದ್ದಾನೆ. ಈತನ ತತ್ವಗಳು ಇಡೀ ವಿಶ್ವವ್ಯಾಪಿ ಮಾನ್ಯತೆ ಗಳಿಸಿಕೊಂಡಿವೆ. ಇವನ ತಾತ್ವಿಕ ಹಾಗೂ ಶೈಕ್ಷಣಿಕ ವಿಚಾರಗಳ ಮೇಲೆ ಅನೇಕ ಆಧುನಿಕ ಸಂಗತಿಗಳು ಪ್ರಭಾವ ಬೀರಿವೆ. ಅವುಗಳಲ್ಲಿ ಔದ್ಯೋಗಿಕ ಕ್ರಾಂತಿ, ಜನಸಂಖ್ಯೆಯ ಬೆಳವಣಿಗೆ, ಯಂತ್ರಗಳ ಬಳಕೆ, ಪ್ರಜಾಪ್ರಭುತ್ವ ಮುಂತಾದವುಗಳ ಪ್ರಭಾವ ಸ್ಪಷ್ಟವಾಗಿ ಪ್ರತಿಬಿಂಬಿತವಾಗಿದೆ.

ಜಾನ್ ಡ್ಯೂಯಿ ಒಬ್ಬ ವ್ಯವಹಾರಿಕವಾದದ ಪ್ರತಿಪಾದಕ. ಇವನ ಈ ವಾದವು ಜೀವನದ ಎಲ್ಲಾ ರಂಗಗಳ ಮೇಲೆಯೂ ಪ್ರಭಾವ ಬೀರಿದೆ. ಆದ್ದರಿಂದಲೇ ಶಿಕ್ಷಣವು ಡ್ಯೂಯಿಯಿಂದ ವಿಶೇಷವಾಗಿ ಪ್ರಭಾವಿತಗೊಂಡಿದೆ. ಇವನ ಪ್ರಕಾರ ತನ್ನ ಪರಿಸರವನ್ನು ನಿಯಂತ್ರಿಸಲು ಮತ್ತು ತನ್ನಲ್ಲಿಯ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬೆಳೆಸಲು ಸಹಾಯಮಾಡುವ ವ್ಯಕ್ತಿಯಲ್ಲಿಯ ಎಲ್ಲಾ ಶಕ್ತಿಗಳನ್ನು ಬೆಳೆಸುವುದು ಶಿಕ್ಷಣದ ಗುರಿಯಾಗಿದೆ. ಈ ಗುರಿಯನ್ನು ಸಾಧಿಸಲು ಅಂದಿನ ಶಿಕ್ಷಣದಿಂದ ಸಾಧ್ಯವಿರಲಿಲ್ಲ. ಆದ್ದರಿಂದ ಅಲ್ಲಿನ ದೋಷಗಳನ್ನು ತಿಳಿಸಿ ಔದ್ಯೋಗಿಕ ಕ್ರಾಂತಿಯಿಂದಾಗಿ ಮಗು ಕೇವಲ ಪುಸ್ತಕೀಯ ಜ್ಞಾನಕ್ಕೆ ಮಾತ್ರ ಸೀಮಿತವಾಗಿದೆ ಎಂಬುದನ್ನು ಮನಗಂಡ ಇವನು ಪ್ರಾಯೋಗಿಕ ಪದ್ಧತಿಗೆ ಅವಕಾಶವಿಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾನೆ.

**ಪಠ್ಯಕ್ರಮದ ಬಗ್ಗೆ ಜಾನ್ ಡ್ಯೂಯಿಯ ಚಿಂತನೆಗಳು**

ಜಾನ್ ಡ್ಯೂಯಿಯು ೧೮೯೭ರಲ್ಲಿ ಪದಪುಂಜವನ್ನು ಉಪಯೋಗಿಸಿ ಚಟುವಟಿಕೆಯಾಧಾರಿತ ಪಠ್ಯಕ್ರಮವನ್ನು ಬಳಿಸಿದ. ಅದಕ್ಕಾಗಿ ಅವನು ಟಸ್ಕಗೀ ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದನು. ಇದರ ಪ್ರಯೋಗಕ್ಕಾಗಿ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಪೋಷಕರು ಹಾಗೂ ಶಿಕ್ಷಕರ ಸಹಕಾರದೊಂದಿಗೆ ಪ್ರಯೋಗಶಾಲೆಯನ್ನು ಸ್ಥಾಪಿಸಿದನು. ಈ ಪ್ರಯೋಗಶಾಲೆಯಲ್ಲಿ ಪಠ್ಯವಿಷಯವು ನಾಲ್ಕು ಮಾನವಿಕ ಚಿತ್ತವೃತ್ತಿಗಳನ್ನು ಆಶ್ರಯಿಸುತ್ತದೆ. ಇವನ ಪ್ರಯೋಗ ಶಾಲೆಯ ಪಠ್ಯವಿಷಯವು

ಈ ಮೂಲಭೂತ ಬಂಡವಾಳಗಳ ಸಹಾಯದಿಂದ ಮಕ್ಕಳಲ್ಲಿ ಹೇಳಿಕೆ, ಮಾಡುವಿಕೆ, ಶೋಧನೆ ಮತ್ತು ಸೃಜನಾತ್ಮಕ ಶಕ್ತಿಗಳನ್ನು ಬೆಳೆಸಬೇಕು ಎಂದು ಸಾರುತ್ತದೆ. ಈ ಪ್ರವೃತ್ತಿಗಳನ್ನು ಮಕ್ಕಳಲ್ಲಿ ಬೆಳೆಸುವುದು ಶಾಲಾ ಪಠ್ಯವಿಷಯಗಳ ಮೂಲಕವಲ್ಲ; ಉದ್ಯೋಗಗಳ ಮೂಲಕ. ಈ ಅಭಿಪ್ರಾಯ ಕುರಿತು ಡ್ಯೂಯಿಯು "ಶಾಲೆಯ ಮೂಲ ಚಟುವಟಿಕೆಗಳು ಸಾಂಪ್ರದಾಯಿಕ ಅಧ್ಯಯನ ವಿಷಯಗಳಲ್ಲಿ ಕಾಣಸಿಗದ ಔದ್ಯೋಗಿಕ ಚಟುವಟಿಕೆಗಳಲ್ಲಿ ಕಂಡುಬರುತ್ತವೆ. ಅಧ್ಯಯನವೆಂದರೆ, ತನಿಖೆಯ ಮೂಲಕ ವಿಷಯ ಸಂಗ್ರಹಣೆ ಮಾಡಿ ಈ ವಿಷಯಗಳನ್ನು ಔದ್ಯೋಗಿಕ ಚಟುವಟಿಕೆಗಳ ಮೂಲಕ ನೆನಪಿನ ಮಂದಿರದಲ್ಲಿ ಹಿಡಿದಿಡುವುದು ಎಂಬುದಾಗಿ ತಿಳಿಸಿದ್ದಾನೆ".[೧೧] ಪಠ್ಯ ವಸ್ತುವೆಂದರೆ, ಡ್ಯೂಯಿಯ ಪ್ರಕಾರ 'ವಿಷಯಗಳ ನಿಧಿಯಲ್ಲ, ವಿಷಯಗಳ ಜೋಡಣೆಯಲ್ಲ, ಸ್ವಅನುಭವಗಳ ಮತ್ತು ಕ್ರಿಯಾತ್ಮಕ ಚಟುವಟಿಕೆಗಳ ಆಗರವಾಗಿದೆ. ಪಠ್ಯವಸ್ತು ಮಗು ಏನೆಲ್ಲಾ ಕಲಿಯಲು ಇಚ್ಛೆ ಪಡುತ್ತದೆಯೋ ಅದಕ್ಕೆ ತಕ್ಕದಾದ ಅಭಿರುಚಿ, ಆಸಕ್ತಿ ಮತ್ತು ಸಾಮರ್ಥ್ಯಗಳಿಗೆ ಅನುಗುಣವಾಗಿ ಇರಬೇಕು. ಕರಕುಶಲ, ಔದ್ಯೋಗಿಕ, ನೈತಿಕ ಮತ್ತು ಸೌಂದರ್ಯ ಪ್ರಜ್ಞೆ ಬೆಳೆಸುವ ಚಟುವಟಿಕೆಗಳು ಪಠ್ಯವಸ್ತುವಿನಲ್ಲಿ ಸೇರ್ಪಡೆಯಾಗಿರಬೇಕು ಎಂಬುದು ಇವನ ಅಭಿಪ್ರಾಯ. ಇದಲ್ಲದೆ ಮಗುವಿಗೆ ಹೆಚ್ಚು ಆಸಕ್ತಿಯ ಆಂತರಿಕ ಸತ್ವಗಳು ಹೊರಹೊಮ್ಮಿ ಸಾಮಾಜಿಕ ಜೀವನದಲ್ಲಿ ಉನ್ನತ ಮಟ್ಟದ ಜೀವನ ನಡೆಸಲು ಮತ್ತು ಸಾಮಾಜಿಕ ಮೌಲ್ಯಗಳನ್ನು ರೂಢಿಸಿಕೊಂಡು ಸ್ವನಿಯಂತ್ರದಲ್ಲಿ ಜೀವನ ಮಾಡುವಂತೆ ಪಠ್ಯವಸ್ತುವಿನಲ್ಲಿ ಚಟುವಟಿಕೆಗಳು ಇರಬೇಕು ಎಂದು ತಿಳಿಸಿದ್ದಾನೆ. ಒಟ್ಟಾರೆಯಾಗಿ ಜಾನ್ ಡ್ಯೂಯಿಯ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಹೇಳುವುದಾರೆ, ಶಿಕ್ಷಣದಲ್ಲಿ ಪಠ್ಯಕ್ರಮವು ಔದ್ಯೋಗಿಕ ವಿಷಯಗಳನ್ನು ಒಳಗೊಂಡಿರಬೇಕು.

**೪.೧೯. ಮೆರಿಯಾ ಮೊಂಟೆಸೊರಿ**

ಮಹಿಳಾ ಕ್ಷೇತ್ರದಲ್ಲಿ ಅದ್ದೂರಿ ಶ್ರೇಯಸ್ಸನ್ನು ಗಳಿಸಿದ ಡಾ. ಮೆರಿಯಾ ಮೊಂಟೆಸೊರಿಯವರು ಫ್ರೊಬೆಲ್, ಪೆಸ್ಟಾಲಜಿ, ಜಾನ್ ಡ್ಯೂಯಿ, ರೂಸೋ ಮುಂತಾದವರ ಸಾಲಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ರಾರಾಜಿಸುತ್ತಿದ್ದಾರೆ ಎಂಬುದರಲ್ಲಿ ಎರಡನೇ ಮಾತಿಲ್ಲ. ಮಾಂಟೆಸೊರಿಯವರು ಕ್ರಿ.ಶ. ೧೮೭೦ರಲ್ಲಿ ಇಟಲಿಯಲ್ಲಿ ಜನಿಸಿದರು. ವೈದ್ಯಕೀಯ ಶಿಕ್ಷಣವನ್ನು ಸರಿಯಾಗಿ ಜೀರ್ಣಿಸಿಕೊಂಡ ಪ್ರತಿಭಾನ್ವಿತೆ ಮತ್ತು ರೋಮ್ ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ಪದವಿ ಪಡೆದ ಪ್ರಥಮ ಮಹಿಳೆ. ವೈದ್ಯಕೀಯ ಶಿಕ್ಷಣ ಪಡೆದರೂ ಈ ವೃತ್ತಿಯಲ್ಲಿ ಹೆಚ್ಚು ದಿನ ಉಳಿಯದೇ ತಮ್ಮ ಮನಸ್ಸು ಮತ್ತು ಸೇವೆ ಮಕ್ಕಳ ಶಿಕ್ಷಣದ ಬಗ್ಗೆ ಆಳವಾಗಿ ಅಭ್ಯಸಿಸಿ ಅನೇಕ ಪ್ರಯೋಗಗಳನ್ನು ಕೈಗೊಂಡರು. ಬಡಮಕ್ಕಳು ಮತ್ತು ದುರ್ಬಲ ಮನಸ್ಸಿನ ಮಕ್ಕಳ ಬಗ್ಗೆ ಅತಿ ಕಾಳಜಿ ಹೊಂದಿರುವ ಮಾಂಟೆಸೊರಿಯವರು ತಮ್ಮದೇ ಆದ ಅನೇಕ ಚಿಂತನೆ, ತತ್ವಗಳನ್ನು, ಸಮಸ್ಯೆಗಳಿಗೆ ಉತ್ತಮ ಪರಿಹಾರಗಳನ್ನು ಶಿಕ್ಷಣಕ್ಕೆ ಕೊಡುಗೆಯಾಗಿ ನೀಡಿದ್ದಾರೆ.

**ಪಠ್ಯಕ್ರಮದ ಬಗ್ಗೆ ಮಾಂಟೆಸೋರಿಯವರ ಚಿಂತನೆಗಳು**

ಮಾಂಟೆಸೊರಿಯವರ ಶಾಲೆಗಳೆಂದರೆ ಮಕ್ಕಳ ಮನೆಗಳು. ಈ ರೀತಿಯ ಶಾಲೆಗಳಲ್ಲಿ ಮಕ್ಕಳಿಗೆ ಮನೆಯ ವಾತಾರಣವನ್ನೇ ನಿರ್ಮಿಸಲಾಗುತ್ತದೆ. ಮಕ್ಕಳಿಗೆ ತಾವು ಮನೆಯಲ್ಲಿದ್ದುಕೊಂಡೇ ಕಲಿಯುತ್ತಿದ್ದೇವೆ ಎಂಬ ಭಾವನೆ ಮೂಡುತ್ತದೆ. ಮಕ್ಕಳಿಗೆ ಇಲ್ಲಿ ಸಂಪೂರ್ಣ ಸ್ವಾತಂತ್ರ್ಯ

ನೀಡಲಾಗಿರುತ್ತದೆ. ಇಲ್ಲಿ ಕಲಿಯುವಂತಹ ಮಕ್ಕಳಿಗೆ ಮಾಂಟೆಸೊರಿಯವರು ಶಿಕ್ಷಣ ತತ್ವಗಳನ್ನು ಅಕ್ಷರಶಃ ಈ ಶಾಲೆಗಳಲ್ಲಿ ಅನುಷ್ಠಾನಗೊಳಿಸಲು ಶ್ರಮಿಸಿದಳು. ಬದುಕಿನ ಎಲ್ಲಾ ರೀತಿಯ ಅವಶ್ಯಕತೆಗಳನ್ನು ಒದಗಿಸಿಕೊಡುವ ಈ ಶಾಲೆಗಳಲ್ಲಿ ಆಟಕ್ಕಾಗಿ ಒಂದು ಉದ್ಯಾನ, ಊಟ, ಕೆಲಸ, ಆಟ, ಹಾಸ್ಯ, ಮತ್ತು ವಿರಾಮ ಇತ್ಯಾದಿಗಳಿಗಾಗಿ ಪ್ರತ್ಯೇಕವಾದ ಕೋಣೆಗಳಿದ್ದವು. ಇಂತಹ ಶಾಲೆಯಲ್ಲಿ ವಿಷಯಗಳನ್ನು ಕಲಿಸಲು ೧೯೦೪ರಲ್ಲಿ ಮಿಸ್ಸೌರಿ ವಿಶ್ವವಿದ್ಯಾಲಯದ ಪ್ರಾಥಮಿಕ ಶಾಲೆಯಲ್ಲಿ ಹೊಸ ಪಠ್ಯವಿಷಯಗಳನ್ನು ತಯಾರಿಸತೊಡಗಿದರು. ಈ ಪಠ್ಯ ವಿಷಯದಲ್ಲಿ ಸಾಂಪ್ರದಾಯಿಕ ವಿಷಯಗಳಿಗೆ ಆಸ್ಪದವಿರಲಿಲ್ಲ ಇವುಗಳ ಬದಲಾಗಿ ಪರಿಶೀಲನೆ, ಆಟ, ಕತೆ ಮತ್ತು ಕೈಗೆಲಸಗಳಿಗೆ ಪ್ರಾಮುಖ್ಯತೆ ಕೊಡಲಾಯಿತು. ಈ ಪಠ್ಯಪುಸ್ತಕಗಳು ಐದು ತತ್ವಗಳನ್ನು ಒಳಗೊಂಡಂತೆ ರಚಿತವಾದವು.

೧. ಪಠ್ಯವಿಷಯವು ಮಕ್ಕಳ ಪ್ರಸ್ತುತ ಬೇಡಿಕೆಗಳನ್ನು ಈಡೇರಿಸಬೇಕು. ಅನಂತರ ಅವರ ಭವಿಷ್ಯದ ಅವಶ್ಯಕತೆಗಳನ್ನು ಪೂರೈಸಬೇಕು.

೨. ಪಠ್ಯವಿಷಯಗಳನ್ನು ದೈನಂದಿನ ಮಕ್ಕಳ ಮತ್ತು ವಯಸ್ಕರ ಚಟುವಟಿಕೆಗಳ ರೂಪದಲ್ಲಿ ವ್ಯಕ್ತಪಡಿಸಬೇಕೆ ಹೊರತು; ಸಾಂಪ್ರದಾಯಿಕ ವಿಷಯಗಳ ಮೂಲಕವಲ್ಲ.

೩. ಪಠ್ಯವಿಷಯವು ಮಕ್ಕಳಲ್ಲಿನ ವೈಯಕ್ತಿಕ ವೈವಿಧ್ಯತೆಗಳಿಗೆ ಅನುಗುಣವಾಗಿದ್ದು ಅವರ ವ್ಯತ್ಯಾಸ ಅಭಿರುಚಿಗಳಿಗೆ, ಸಾಮರ್ಥ್ಯಕ್ಕೆ ಪ್ರೇರಕ ಶಕ್ತಿಯಾಗಬೇಕು.

೪. ಪಠ್ಯವಿಷಯವು ಬೇಕೆಂದಾಗ ಬದಲಿಸುವಂತಹ ವ್ಯವಸ್ಥೆಯಾಗಿರಬೇಕು.

೫. ಪಠ್ಯವಿಷಯದಲ್ಲಿ ಕೆಲಸ ಮತ್ತು ವಿರಾಮಗಳಿಗೆ ಅವಕಾಶವಿರಬೇಕು ಎಂಬ ಅಂಶಗಳನ್ನು ತಿಳಿಸಿದ್ದಾರೆ.[೨] ಈ ತತ್ವಗಳಿಗೆ ಅನುಗುಣವಾದ ಪಠ್ಯ ವಿಷಯವು ಇರಬೇಕು. ಅದರಲ್ಲಿ ಸಸ್ಯಜೀವನ, ಪ್ರಾಣಿಜೀವನ, ಜನ, ಭೂಮಿ, ಆಕಾಶ, ಸ್ಥಳೀಯ ಕೈಗಾರಿಕೆಗಳು ಮತ್ತು ಚಟುವಟಿಕೆಗಳನ್ನು ಮೊದಲ ಹಂತದಲ್ಲಿ ಕಲಿಸಬೇಕು. ಎರಡು ಮತ್ತು ಮೂರನೆಯ ಹಂತದಲ್ಲಿ ನಿಸರ್ಗದೊಡನೇ ಸರಸ, ವಿದ್ಯುಚ್ಛಕ್ತಿ ಯಂತ್ರ, ನೀರು, ಗಾಳಿ ಇತ್ಯಾದಿಗಳು ಇರಬೇಕು. ಇದರ ಜೊತೆಯಲ್ಲಿ ದೈಹಿಕ ವ್ಯಾಯಾಮ, ಹಾಡುವಿಕೆಗೆ ಹೆಚ್ಚು ಒತ್ತನ್ನು ನೀಡಿರುವುದು ಕಂಡುಬರುತ್ತದೆ. ಮಾಂಟೆಸೊರಿಯವರು ಪ್ರಾಥಮಿಕ ಶಾಲಾ ಹಂತದ ಮಕ್ಕಳಿಗೆ ಈ ರೀತಿಯಾಗಿ ಚಿಂತನೆ ಕೈಗೊಂಡಿರುವುದರಿಂದ ಬೇರೆ ವಿಷಯಗಳನ್ನು ಇಲ್ಲ ಕಲಿಸುವುದಕ್ಕೆ ಅವರು ಆದ್ಯತೆ ನೀಡಿಲ್ಲ. ಒಟ್ಟಿನಲ್ಲಿ ಬಾಲ್ಯದ ಮಕ್ಕಳ ವಯೋಸಾಮರ್ಥ್ಯಕ್ಕೆ ತಕ್ಕಂತಹ ಪಠ್ಯಕ್ರಮದ ಬಗ್ಗೆ ಅವರು ಚಿಂತನೆಯನ್ನು ನಡೆಸಿದ್ದಾರೆ.

### ೪.೧.೧೦. ಟಿ.ಪಿ. ನನ್

ಇಂಗ್ಲೆಂಡಿನ ಶ್ರೇಷ್ಠ ಶೈಕ್ಷಣಿಕ ತತ್ವಶಾಸ್ತ್ರಜ್ಞರಲ್ಲಿ ಸರ್. ಟಿ.ಪಿ. ನನ್‌ರವರು ಒಬ್ಬ ಅಗ್ರಗಣ್ಯ ವ್ಯಕ್ತಿಯಾಗಿದ್ದಾರೆ. ಕ್ರಿ.ಶ. ೧೮೭೦ರಲ್ಲಿ ಜನಿಸಿದ ಇವರು ಚಿಕ್ಕದಿನಿಂದಲೇ ವ್ಯವಸ್ಥಿತ ಶಿಕ್ಷಣವನ್ನು ಪಡೆದುಕೊಂಡರು. ಮುಂದೆ ಅವರು ಪಡೆದ ಶಿಕ್ಷಣದ ಅನುಭವದಿಂದಲೇ ಶಿಕ್ಷಣ ಕ್ಷೇತ್ರಕ್ಕೆ

ಸಾಕಷ್ಟು ಕೊಡುಗೆಯನ್ನು ನೀಡಿದರು. ಕ್ರಿ.ಶ. ೧೯೧೭ರಲ್ಲಿ ಆರಂಭದಲ್ಲಿ ಲಂಡನ್ ವಿಶ್ವವಿದ್ಯಾಲಯದಲ್ಲಿ ಶಿಕ್ಷಣಶಾಸ್ತ್ರದ ಪ್ರಾಧ್ಯಾಪಕರಾಗಿ ಸೇರಿಕೊಂಡರು ನಂತರ ಲಂಡನ್ ಇನ್‌ಸ್ಟಿಟ್ಯೂಟ್ ಆಫ್ ಎಜ್ಯುಕೇಷನ್‌ನ ನಿರ್ದೇಶಕರಾಗಿ ಆಯ್ಕೆಯಾದರು. ಕ್ರಿ.ಶ. ೧೯೩೬ರವರೆಗೆ ಅಲ್ಲಿಯೇ ದುಡಿದು ಮುಂದೆ ಅವರು ಶಿಕ್ಷಣ ಕ್ಷೇತ್ರಕ್ಕೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ಇವರು ಮಗುವಿನ ವೈಯಕ್ತಿಕ ಬೆಳವಣಿಗೆಗೆ ಹೆಚ್ಚು ಮಹತ್ವ ನೀಡಿದಂತಹವರು. ಆದ್ದರಿಂದಾಗಿ ಇವರನ್ನು ವ್ಯಕ್ತಿವಾದ ತತ್ವಶಾಸ್ತ್ರಜ್ಞರೆಂದು ಗುರುತಿಸಲಾಗಿದೆ. ಇವರ ಅಭಿಪ್ರಾಯದಂತೆ, ಮಗುವಿನಲ್ಲಿ ಉತ್ತಮ ಗುಣಗಳನ್ನು ಬೆಳೆಸಲು ಸಮಾಜವು ಪ್ರಮುಖವಾದ ಪಾತ್ರ ನಿರ್ವಹಿಸುತ್ತದೆ. ಆದ್ದರಿಂದ ಸಮಾಜದಲ್ಲಿ ವ್ಯಕ್ತಿಯ ಬೆಳವಣಿಗೆಗೆ ಅಗತ್ಯವಾದಂತಹ ಪರಿಸರವನ್ನು ನಿರ್ಮಿಸಿ ಕೊಡಬೇಕೆಂಬುದು ಇವರ ದೃಷ್ಟಿಕೋನವಾಗಿದೆ. ಪ್ರತಿಯೊಬ್ಬ ಮಗುವಿಗೂ ಶಿಕ್ಷಣ ಕೊಡುವುದು ಸಮಾಜದ ಹಾಗೂ ಸರ್ಕಾರದ ಜವಾಬ್ದಾರಿಯಾಗಿರುತ್ತದೆ ಎಂಬುದು ಇವರ ವಿಚಾರವಾಗಿತ್ತು.

**ಪಠ್ಯಕ್ರಮದ ಬಗ್ಗೆ ಟಿ.ಪಿ. ನನ್‌ರವರ ಚಿಂತನೆಗಳು**

ಟಿ.ಪಿ. ನನ್‌ರವರು ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಕ್ರಮದ ಮಹತ್ವವನ್ನು ಅರಿತಿದ್ದವರು ಆದ್ದರಿಂದ ಶಿಕ್ಷಣದ ಅಪೇಕ್ಷಿತ ಗುರಿಗಳನ್ನು ತಲುಪಲು ಪಠ್ಯಕ್ರಮ ಅವಶ್ಯಕ ಎಂದು ನಂಬಿದ್ದವರು. ಈ ನಂಬಿಕೆಯಿಂದಲೇ ಅವರು ಪಠ್ಯಕ್ರಮದ ಬಗ್ಗೆ ಬಹು ಸಮತೋಲನ ಮತ್ತು ನಂಬಿದ ಸಂಗತಿಗಳನ್ನು ಕೊಟ್ಟಿದ್ದಾರೆ. ಪಠ್ಯಕ್ರಮದಲ್ಲಿ ನನ್‌ರವರು ಪರಿಸರದಿಂದ ಮತ್ತು ವ್ಯಕ್ತಿಗಳಿಂದ ಪಡೆದುಕೊಳ್ಳುವ ಅನುಭವಕ್ಕೆ ಹೆಚ್ಚು ಆದ್ಯತೆ ನೀಡಿದ್ದಾರೆ. ಏಕೆಂದರೆ ಇವರು ಆದರ್ಶವಾದದಿಂದ ಪ್ರಭಾವಿತಗೊಂಡಿದ್ದವರು ಈ ಕಾರಣದಿಂದಾಗಿಯೇ ಮಗುವಿಗೆ ಅನುಭವ ನೀಡುವ ವಿಷಯಗಳಿಗೆ ಮೊದಲು ಪ್ರಾಧಾನ್ಯತೆ ನೀಡಿದ್ದಾರೆ. "ಹೀಗಾಗಿ ಮಾನವನ ಸಂಸ್ಕೃತಿ ಮತ್ತು ನಾಗರಿಕತೆಗೆ ಸಂಬಂಧಿಸಿದ ವಿಷಯಗಳನ್ನು ಕಲಿಸಬೇಕು ಎಂಬುದು ಇವರ ಅಭಿಮತವಾಗಿತ್ತು",[೧೩] ಅಂದರೆ ಮಾನವನು ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಸಾಗಿ ಬರುವ ಮಧ್ಯದಲ್ಲಿ ಸಾಕಷ್ಟು ಅನುಭವಗಳನ್ನು ಪಡೆದುಕೊಂಡಿದ್ದಾನೆ. ಈ ಅನುಭವದಲ್ಲಿ ಅವನ ಸಂಸ್ಕೃತಿ ಅಡಕವಾಗಿರುತ್ತದೆ. ಇಂತಹ ಅನುಭವದಿಂದ ಕೂಡಿರುವ ಸಂಸ್ಕೃತಿಯನ್ನು ಮಕ್ಕಳಿಗೆ ಪಠ್ಯಕ್ರಮದಲ್ಲಿ ಹೇಳಿಕೊಡಬೇಕೆಂದು ತಿಳಿಸಿದ್ದಾರೆ. ಇದಷ್ಟೇ ಅಲ್ಲದೆ ಮಾನವಿಕ ವಿಷಯಗಳಾದ ಸಮಾಜಶಾಸ್ತ್ರ, ಕಲೆ, ಸಾಹಿತ್ಯ, ಕರಕುಶಲ ಕಲೆ ಮುಂತಾದವುಗಳಿಗೆ ಪಠ್ಯಕ್ರಮದಲ್ಲಿ ಅವಕಾಶ ಮಾಡಿಕೊಡಬೇಕೆಂದಿದ್ದಾರೆ. ಇವುಗಳ ಜೊತೆಯಲ್ಲಿ ಸಂಗೀತ, ವಿಜ್ಞಾನ, ಇತಿಹಾಸ, ಭೂಗೋಳ, ಗಣಿತ ಮುಂತಾದ ವಿಷಯಗಳು ಪಠ್ಯಕ್ರಮದಲ್ಲಿ ಇದ್ದರೆ ಮಗುವಿನ ವ್ಯಕ್ತಿತ್ವದ ಬೆಳವಣಿಗೆ ಸಹಾಯವೆಂದಿದ್ದಾರೆ.

ಎಲ್ಲಾ ಪಾಶ್ಚಾತ್ಯ ಶಿಕ್ಷಣ ತಜ್ಞರುಗಳು ತಮ್ಮ ದೇಶದ, ತಮ್ಮ ಕಾಲಘಟ್ಟದ ಶೈಕ್ಷಣಿಕ ಸ್ಥಿತಿಗತಿ, ಅಂದಿನ ಪರಿಸ್ಥಿತಿ ಹಾಗೂ ಇತರೆ ದೇಶಗಳಲ್ಲಿನ ಶಿಕ್ಷಣ ವ್ಯವಸ್ಥೆಯನ್ನು ಗಮನದಲ್ಲಿ ಇಟ್ಟುಕೊಂಡು ಚಿಂತನೆ ನಡೆಸಿದ್ದಾರೆ. ಈ ಚಿಂತನೆ ಅವರ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಅವಲಂಬಿತವಾಗಿರುತ್ತವೆ. ಆದ್ದರಿಂದ ಅವರವರ ದೃಷ್ಟಿಕೋನದಲ್ಲಿ ಅವರು ಶಿಕ್ಷಣವೆಂಬುದನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ. ಹಾಗೆಯೇ ಅದರಲ್ಲಿ ಪಠ್ಯಕ್ರಮ ಬಗ್ಗೆಯೂ ಸಾಕಷ್ಟು ತಮ್ಮ

ಚಿಂತನೆಗಳನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಎಲ್ಲಾ ಚಿಂತನೆಗಳನ್ನು ನಾವು ಇಂದು ಪಠ್ಯಕ್ರಮದಲ್ಲಿ ಅಳವಡಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲವಾದರೂ ಕೆಲವಾರು ಉತ್ತಮವಾದಂತಹ ಪಾಶ್ಚಾತ್ಯರ ಚಿಂತನೆಗಳು ಇಂದು ಸೂಕ್ತವೆಂದು ಕಂಡುಬರುತ್ತದೆ. ಕೆಲವು ವಿದ್ವಾಂಸರು ಚರಿತ್ರೆ ಪಠ್ಯಪುಸ್ತಕಗಳ ಕುರಿತು ಮತ್ತು ಪಠ್ಯಪುಸ್ತಕಗಳ ಕುರಿತು ನೀಡಿದ ಸಲಹೆ/ಚಿಂತನೆಗಳ ಹಿನ್ನೆಲೆಯಲ್ಲಿ ಇಂದು ಪಠ್ಯಪುಸ್ತಕ ಹಾಗೂ ಪಠ್ಯಕ್ರಮಗಳು ಹೊರಬಂದಿದ್ದೇ ಆದಲ್ಲಿ ಶೈಕ್ಷಣಿಕ ವ್ಯವಸ್ಥೆಯ ಕೆಲ ದೌರ್ಬಲ್ಯಗಳನ್ನು ದೂರಮಾಡಬಹುದಾಗಿದೆ.

### ೪.೨. ಭಾರತೀಯ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಚರಿತ್ರೆ ಪಠ್ಯಪುಸ್ತಕ

ಪಾಶ್ಚಿಮಾತ್ಯ ದೇಶದಲ್ಲಿ ಅನೇಕ ಶಿಕ್ಷಣತಜ್ಞರು ಪಠ್ಯಪುಸ್ತಕ, ಪಠ್ಯಕ್ರಮ ಶಿಕ್ಷಣದ ಬಗ್ಗೆ ಸಾಕಷ್ಟು ಚಿಂತನೆಗಳನ್ನು ನಡೆಸಿದ ಹಾಗೆಯೇ ಭಾರತದಲ್ಲಿನ ವಿದ್ವಾಂಸರು ಸಹ ಚಿಂತನೆ ನಡೆಸಿದ್ದಾರೆ. ಭಾರತೀಯ ವಿದ್ವಾಂಸರು, ತತ್ವಜ್ಞಾನಿಗಳು, ಶಿಕ್ಷಣ ವಿವೇಚಕರು, ಸಾಮಾಜಿಕ ಸುಧಾರಕರು ಸಹ ಭಾರತದ ಶೈಕ್ಷಣಿಕ ವ್ಯವಸ್ಥೆಯ ಬಗ್ಗೆ ತಮ್ಮ ಕಾಲಾವಧಿಯಲ್ಲಿನ ಪರಿಸ್ಥಿತಿಯನ್ನು ಮನಗಂಡು ಅದನ್ನು ಬದಲಾಯಿಸಲು ಪ್ರಯತ್ನ ನಡೆಸಿದ್ದಾರೆ. ಈ ಪ್ರಯತ್ನ ಇಂದು–ನಿನ್ನೆಯದಲ್ಲ. ಜನರಲ್ಲಿದ್ದ ಅಂಧಕಾರ, ಮೌಢ್ಯ, ಮೂಢನಂಬಿಕೆ, ಸಂಪ್ರದಾಯಗಳನ್ನು ಕಿತ್ತೊಗೆಯಲು ಶಿಕ್ಷಣವೊಂದೇ ಸರಿಯಾದ ಮಾರ್ಗವೆಂದು ಅರಿತವರೆಲ್ಲರೂ ಸಹ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿ ಜನರಲ್ಲಿನ ಇಂತಹ ತಿಳುವಳಿಕೆಯನ್ನು ತಮ್ಮ ವಚನ ಸಾಹಿತ್ಯ ಮೂಲಕ ತಿಳಿಹೇಳುತ್ತಾ ಬಂದರು. ಅಂದು ಪ್ರಾರಂಭವಾದಂತಹ ಇಂತಹ ಮಹಾನ್‌ಕಾರ್ಯ ಇಂದಿಗೂ ಸತತವಾಗಿ ನಡೆಯುತ್ತಲೇ ಬಂದಿದೆ. ಕಾರಣವೇನೆಂದರೆ ಸಮಾಜ ನಿಂತ ನೀರಲ್ಲ; ಅದು ಸದಾ ಬದಲಾಗುತ್ತಾ ಇರುತ್ತದೆ. ಆದ್ದರಿಂದ ಸಮಾಜದಲ್ಲಿ ಬದಲಾವಣೆಗೆ ಅನುಗುಣವಾಗಿ ಶೈಕ್ಷಣಿಕ ವ್ಯವಸ್ಥೆಯೂ ಬದಲಾಗುತ್ತಾ ಬಂದಿದೆ. ಅದರಂತೆ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳೂ ಸಹ ಬದಲಾಗುತ್ತ ಬಂದಿವೆ. ಈ ಎಲ್ಲಾ ಬದಲಾವಣೆಗೆ ಕಾರಣ ಮಹಾನ್ ಚಿಂತಕರ ಚಿಂತನೆಗಳು. ಈ ಚಿಂತನೆಗಳ ಹಿನ್ನೆಲೆಯಲ್ಲಿರುವ ಸರ್ಕಾರಗಳು, ಆಡಳಿತ ವ್ಯವಸ್ಥೆಗಳು ಬದಲಾವಣೆ ಮಾಡುವ ಪ್ರಯತ್ನವನ್ನು ಮಾಡಿವೆ, ಮಾಡುತ್ತಲೂ ಇವೆ. ಇಂತಹ ಬದಲಾವಣೆಗಳು ಅಂತಿಮವೇನಲ್ಲ; ಅವು ಮುಂದುವರೆದುಕೊಂಡು ಹೋಗುತ್ತಲೇ ಇರುತ್ತವೆ. ಹೀಗಾಗಿ ಅವರವರ ಸೈದ್ಧಾಂತಿಕ, ತಾತ್ವಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಅನೇಕ ಭಾರತೀಯ ಶಿಕ್ಷಣ ತಜ್ಞರು ನಡೆಸಿರುವಂತಹ ಚಿಂತನೆಗಳು ಹೇಗಿವೆ ಎಂಬುದು ಅರಿಯುವುದು ಸೂಕ್ತವಾಗಿದೆ. ಏಕೆಂದರೆ ಅವರ ಚಿಂತನೆಗಳು ಪಠ್ಯಕ್ರಮದಲ್ಲಿ ರೂಪುಗೊಂಡು ಅಂದಿನ ಕಾಲಕ್ಕೆ ಅವು ಜಾರಿಯಲ್ಲಿದ್ದವು. ಅದು ಪ್ರಸ್ತುತಕ್ಕೆ ಸೂಕ್ತವೋ ಅಥವಾ ಅಂದಿನ ಕಾಲಘಟ್ಟಕ್ಕೆ ಸೂಕ್ತವೋ ಎನ್ನುವ ಮಾತು ಬೇರೆ. ಆದರೆ ಅವರ ಚಿಂತನೆಗಳು ಒಂದಲ್ಲ ಒಂದು ರೀತಿಯಲ್ಲಿ ಉತ್ತಮವಾಗಿಯೇ ಇವೆ ಎಂಬುದು ಎಲ್ಲರ ಅಭಿಪ್ರಾಯವಾಗಿದೆ. ಈ ಹಿನ್ನೆಲೆಯಲ್ಲಿ ಭಾರತೀಯ ವಿದ್ವಾಂಸರ ಚಿಂತನೆಗಳ ವಿವರವನ್ನು ಈ ಮುಂದಿನಂತೆ ದಾಖಲಿಸಲಾಗಿದೆ.

### ೪.೨.೧. ಜ್ಯೋತಿಬಾ ಫುಲೆ

ಕ್ರಿ.ಪೂ. ೬ನೆಯ ಶತಮಾನದಲ್ಲಿ ಹುಟ್ಟಿದ ಗೌತಮ ಬುದ್ಧನಿಗೆ ಜ್ಞಾನೋದಯವಾದ ಸಂದರ್ಭದಲ್ಲಿ ಶ್ರೇಣೀಕೃತ ಜಾತಿ ವ್ಯವಸ್ಥೆಯಡಿ ಶೂದ್ರಾತಿಶೂದ್ರರು ಬಲಿಪಶುಗಳಾಗಿ ಪ್ರಾಣಿಗಳಂತೆ ಜೀವನ ಮಾಡುತ್ತಿದ್ದರು. ಇಂತಹ ವ್ಯವಸ್ಥೆಗೆ ಜಾತಿವ್ಯವಸ್ಥೆ ಮೂಲ ಕಾರಣವೆಂದು ಬುದ್ಧನು ಅರಿತುಕೊಂಡನು. ಅದಕ್ಕಾಗಿ ಪಂಚಸೂತ್ರಗಳನ್ನು ಸಾರುತ್ತಾ ೪೦ ವರ್ಷಗಳ ಕಾಲ ಭಾರತದ ಮೂಲೆ ಮೂಲೆಯ ಹಳ್ಳಿ–ಹಳ್ಳಿಗಳಿಗೂ ತನ್ನ ಭಿಕ್ಷುಗಳನ್ನು ಕಳುಹಿಸಿದ. ಹೀಗಾಗಿ ಮೊಟ್ಟ ಮೊದಲಿಗೆ ನಾಗಾ ಜನಾಂಗದವರು ಜ್ಞಾನ ಪಡೆದುಕೊಂಡು ವಿದ್ಯಾವಂತರಾಗಿ ಬುದ್ಧಿವಂತರಾಗಿ, ರಕ್ತರಹಿತ ಕ್ರಾಂತಿಯಲ್ಲಿ ಆರ್ಯರ ಅಟ್ಟಹಾಸವನ್ನು ಮಟ್ಟಹಾಕಿ ಮೌರ್ಯ ಸಾಮ್ರಾಜ್ಯ ಸ್ಥಾಪನೆ ಮಾಡಿದರು. ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತನಿಂದ ಹಿಡಿದು ಕೊನೆಯ ದೊರೆ ಬೃಹದ್ರತನವರೆಗೆ ಸುಮಾರು ನೂರ ಐವತ್ತು ವರ್ಷಗಳ ಕಾಲ ರಾಜಕೀಯದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಮೂಡಿತ್ತು. "ಆದರೆ ಬ್ರಹೃದ್ರತ ತನ್ನ ಬ್ರಾಹ್ಮಣ ಸೇನಾಧಿಪತಿಯಾದ ಪುಷ್ಯಮಿತ್ರ ಶುಂಗನ ವಂಚನೆಗೆ ಬಲಿಯಾಗಿ ಅಧಿಕಾರವನ್ನು ಕಳೆದುಕೊಳ್ಳುತ್ತಾನೆ. ಆನಂತರ ಸುಮತೀ ಭಾರ್ಗವನೆಂಬ ಬ್ರಾಹ್ಮಣ ಪಂಡಿತನನ್ನು ಕರೆಸಿ ಮನುಸ್ಮೃತಿ ಅಥವಾ ಮನುಶಾಸ್ತ್ರವೆಂಬ ಧರ್ಮವೆಂಬ ಕಾನೂನು ಮಾಡಿ ಜಾರಿಗೊಳಿಸುತ್ತಾನೆ"[೧೪] ಇದರಿಂದಾಗಿ ಶೂದ್ರರು ಈ ಕಠಿಣ ಕಾನೂನನ್ನು ವಿರೋಧಿಸಲಾಗದೇ ಆಸ್ತಿ, ವಿದ್ಯೆ, ಅಧಿಕಾರದಿಂದ ವಂಚಿತರಾಗಿ ಸುಮಾರು ೨೪೦೦ ವರ್ಷಗಳ ಕಾಲ ಈ ಕ್ರೂರ ಶೋಷಣೆಯಲ್ಲಿ ಬದುಕಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಭಾರತದ ನೆಲದಲ್ಲಿ ಶೂದ್ರರ ಪಾಲಿಗೆ ಜ್ಯೋತಿಯಂತೆ ಬೆಳಕಾಗಿ ಜನ್ಮ ತಳೆದವರೇ ಜ್ಯೋತಿಬಾ ಫುಲೆ.

ಜ್ಯೋತಿಬಾ ಫುಲೆ ಮಹಾರಾಷ್ಟ್ರದ ಸತಾರ ಜಿಲ್ಲೆಯ ಕಾಟುಗುನ ಎಂಬ ಹಳ್ಳಿಯಲ್ಲಿ ೧೮೨೭ ಫೆಬ್ರವರಿ ೨೦ರಂದು ಜನಿಸಿದರು. ಇವರ ತಂದೆ ಗೋವಿಂದರಾವ್ ಫುಲೆ ಮತ್ತು ತಾಯಿ ಚಿಮನಬಾಯಿ. ಇವರು ಬಲಿಜ ಜನಾಂಗದ(ಹೂವಾಡಿಗ)ಲ್ಲಿ ಜನಿಸಿದರು. ಫುಲೆ ಹುಟ್ಟುವ ಸಂದರ್ಭದಲ್ಲಿ ಅವನ ತಾಯಿಯ ಆರೋಗ್ಯ ತುಂಬಾ ಚಿಂತಾಜನಕವಾಗಿತ್ತು. ಇಂತಹ ಸಂದರ್ಭದಲ್ಲಿ ಇವನ ತಂದೆ ತಾಯಿ ಹಾಗೂ ಮಗುವಿನ ಮುಖವನ್ನು ನೋಡಿ ನಿನ್ನ ಮಗನ ಕಣ್ಣುಗಳು ಸೂರ್ಯನ ಸಣ್ಣ ಸಣ್ಣ ಕಿಡಿಗಳಂತೆ ಕಾಣುತ್ತಿವೆ, ಆ ಎರಡೂ ಕಣ್ಣುಗಳಲ್ಲಿ ಜ್ಯೋತಿಗಳೆರಡು ಕಂಡಹಾಗೆ ಆಗುತ್ತಿದೆ ಎಂದರಂತೆ ಅದಕ್ಕೆ ಆ ತಾಯಿ ಇವನಿಗೆ ಜ್ಯೋತಿ ಎಂದು ಹೆಸರು ಇಟ್ಟರೆ ಹೇಗೆ ಎಂದು ಹೇಳಿ ಮುಂದೆ ಜ್ಯೋತಿಬಾ ಫುಲೆ ಎಂದು ನಾಮಕರಣ ಮಾಡಿದರು. ಫುಲೆ ಎಂಬುದು ಹೂ ಮಾರುವವರು ಎಂದರ್ಥ. ಇವರ ವಂಶಜರು ಹಿಂದಿನಿಂದಲೂ ಈ ವೃತ್ತಿ ಮಾಡಿಕೊಂಡು ಬಂದಿದ್ದರಿಂದ ಇವರಿಗೆ ಜ್ಯೋತಿಬಾ ಫುಲೆ ಎಂದು ಹೆಸರನ್ನಿಟ್ಟರು.

ಜ್ಯೋತಿಬಾ ಫುಲೆ ಹುಟ್ಟಿದಾಗ ಶೂದ್ರರಿಗೆ ಶಿಕ್ಷಣವೆಂಬುದು ಮರಿಚಿಕೆಯಂತೆ ಇತ್ತು ಇಂತಹ ಸಂದರ್ಭದಲ್ಲಿ ತನ್ನ ಮಗನನ್ನು ಶಾಲೆಗೆ ಕಳುಹಿಸಬೇಕೆಂಬ ಇವನ ತಂದೆಯ ಆಸೆ

ಗಾಢವಾಗಿತ್ತು. ಅದಕ್ಕಾಗಿ ಸಾಕಷ್ಟು ಪ್ರಯತ್ನ ಮಾಡುತ್ತಾರೆ. ಆದರೆ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಮಾತ್ರ ಶಿಕ್ಷಣವನ್ನು ಪಡೆದುಕೊಳ್ಳುವ ಹಕ್ಕು ಇತ್ತು. ಹೀಗಾಗಿ ಈ ವರ್ಗದ ಜನರು ಶಿಕ್ಷಣದಿಂದ ವಂಚಿತರಾಗಿದ್ದರು. ಇಂತಹ ಪರಿಸ್ಥಿತಿಯಲ್ಲಿ ಇವನ ತಂದೆ ಹಲವರ ಬಳಿ ತಮ್ಮ ಮಗನಿಗೆ ಶಿಕ್ಷಣ ಹೇಳಿಕೊಡುವಂತೆ ಅಂಗಲಾಚುತ್ತಾರೆ, ಆದರೆ ಅಲ್ಲಿ ದೊರೆತ ಪ್ರತಿಫಲ ಮಾತ್ರ ಅವಮಾನ. ಆದರೂ ಸಹ ಕೊನೆಗೆ ಬ್ರಿಟಿಷರು ಸ್ಥಾಪಿಸಿದಂತಹ 'ಸ್ಕಾಟಿಷ್ ಮಿಷನ್ ಶಾಲೆ'ಗೆ ಇವನನ್ನು ಸೇರಿಸಲಾಗುತ್ತದೆ. ಈ ಶಾಲೆಯಲ್ಲಿ ಅವರು ಇಂಗ್ಲಿಷ್‌ನಲ್ಲಿ ಹೇಳಿಕೊಡುತ್ತಿದದ್ದು ಅರ್ಥವಾಗದಿದ್ದರೂ ಸಹ ಅಲ್ಲಿಯ ಗುರುವಿನ ಪ್ರೀತಿ ಮಮತೆ ಇವನ ಮೇಲೆ ಬಹಳ ಪ್ರಭಾವ ಬೀರಿತು. ಏಕೆಂದರೆ ಸ್ವಧರ್ಮೀಯರು ಮೇಲ್ಜಾತಿಯವರು ತಮಗೆ ಅವಕಾಶ ನೀಡದೆ ಹೋದರೂ ಸಹ ಪರಕೀಯರು, ಅನ್ಯಧರ್ಮೀಯರು ತೋರಿದ ಪ್ರೀತಿ ಇದಕ್ಕೆ ಕಾರಣವಾಗಿತ್ತು ಹೀಗೆ ತಮ್ಮ ವಿದ್ಯಾಭ್ಯಾಸ ಜೀವನದಲ್ಲಿ ಅನೇಕ ಏಳು-ಬೀಳುಗಳನ್ನು ಕಂಡ ಇವರು ಮುಂದೆ ತಮ್ಮ ಜನಾಂಗದವರಿಗೆ ಒಂದು ಶಾಲೆ ತೆರೆದು ಶಿಕ್ಷಣ ನೀಡುವ ಮಟ್ಟಕ್ಕೆ ಬೆಳೆದರು.

"ವಿದ್ಯೆಯಿಲ್ಲದೆ ಬುದ್ಧಿಯಿಲ್ಲ
ಬುದ್ಧಿ ಇಲ್ಲದೆ ಕ್ರಿಯಾಶೀಲತೆ ಇಲ್ಲ
ಕ್ರಿಯಾಶೀಲತೆ ಇಲ್ಲದೆ ಅಭಿವೃದ್ಧಿ ಇಲ್ಲ
ಅಭಿವೃದ್ಧಿ ಇಲ್ಲದ ಜೀವನ ವ್ಯರ್ಥ."[೧೫]

ಫುಲೆಯವರ ಈ ಮಾತು ಅಕ್ಷರಶಃ ನಿಜವಾಗಿದೆ, ಅದರಿಂದಲೇ ಅವರು ಮುಂದೆ ಬರಲು ಸಾಧ್ಯವಾಯಿತು. ಅದಕ್ಕಾಗಿ ಅವರು ಹಿಂದೂ ಧರ್ಮದ ಗ್ರಂಥಗಳು, ಮಾರ್ಕ್ಸ್ ಏಂಜಲ್ಸ್, ನೆಪೋಲಿಯನ್, ಬುದ್ಧ, ಜಾರ್ಜ್ ವಾಷಿಂಗ್‌ಟನ್, ಮಾರ್ಟಿನ್ ಲೂಥರ್ ಕಿಂಗ್, ಬಸವಣ್ಣನಂತಹವರ ವಿಚಾರಧಾರೆಗಳನ್ನು ಓದಿ ಅರ್ಥೈಸಿಕೊಂಡರು. ದೇವರ ರಾಜ್ಯದಲ್ಲಿ ಎಲ್ಲರೂ ಸಮಾನರು ಎಂದು ತಿಳಿದು ಶೋಷಣಾ ರಹಿತ ಸಮಾಜ ನಿರ್ಮಾಣವಾಗಬೇಕು ಎಂಬುದು ಇವರ ಕನಸಾಗಿತ್ತು. ಇದಕ್ಕಾಗಿ ಅವರು ಭಾರತ ದೇಶದ ಇತಿಹಾಸದಲ್ಲೇ ಕೋಟ್ಯಾಂತರ ಶೂದ್ರರ ಬಾಳಿನಲ್ಲಿ ಬೆಳಕು ಮೂಡಿಸಿದರು. ಅಸ್ಪೃಶ್ಯರು ಮತ್ತು ಮಹಿಳೆಯರು ಶಿಕ್ಷಿತರಾಗಬೇಕು ಎಂದು ಹೇಳುವುದೇ ಅಂದು ಮಹಾ ಅಪರಾಧವಾಗಿತ್ತು. ಇಂತಹ ಕಾಲದಲ್ಲಿ ಕ್ರಿ.ಶ. ೧೮೫೧ರ ಜುಲೈ ೩ರಂದು ಪುಣೆಯಲ್ಲಿ ಪ್ರಪ್ರಥಮ ಬಾಲಕಿಯರ ಶಾಲೆಯನ್ನು ಪ್ರಾರಂಭಿಸಿದರು. ಇದು ಮಹಿಳಾ ಚರಿತ್ರೆಯಲ್ಲಿ ಈ ದಿನ ಅತ್ಯಂತ ಮಹತ್ವದ ದಿನವೆಂದು ಗುರುತಿಸಿಕೊಂಡಿದೆ.

ಮುಂದೆ ಈ ಶಾಲೆಯನ್ನು ಬುದುವಾರ್‌ಪೇಟೆಯ ಚಿಪೂಂಕರ್ ಅವರ ಮನೆಯಲ್ಲಿ ಪ್ರಾರಂಭಿಸಿದರು. ಇಂತಹ ಮೊದಲ ಪಾಠಶಾಲೆಯಲ್ಲಿ ಭಾರತ ದೇಶದಲ್ಲೇ ಮೊದಲನೇ ಶೂದ್ರರ ಗುರು ಫುಲೆಯವರೇ ಪಾಠ ಹೇಳಿದರು. ಪ್ರಾರಂಭದಲ್ಲಿ ಅಲ್ಪ ಸಂಖ್ಯೆಯಲ್ಲಿ ಬಾಲಕಿಯರು ಇದ್ದರು. ಆದರೆ ಇವರ ಪರಿಶ್ರಮದ ಫಲವಾಗಿ ಇವರ ಸಂಖ್ಯೆ ಅಧಿಕಗೊಂಡಿತು ಶೂದ್ರ ಜನಾಂಗದಲ್ಲಿ ತಿಳಿವಳಿಕೆ ಮೂಡಿ ಇವರ ಬಗ್ಗೆ ಪ್ರಶಂಸೆಯ ಮಾತುಗಳು ಕೇಳಿ ಬಂದವು. ಇದರಿಂದ ಮೇಲ್ಜಾತಿಗಳಲ್ಲಿ ಕೋಪ, ಅಸೂಯೆಗಳು ಪ್ರಾರಂಭವಾದವು. ಮನುಶಾಸ್ತ್ರದ ಪ್ರಕಾರ

ಬ್ರಾಹ್ಮಣರ ಹೆಣ್ಣುಮಕ್ಕಳೇ ಶೂದ್ರರೆಂದು ಪರಿಗಣಿಸಲ್ಪಟ್ಟಿರುವ ಸಂದರ್ಭದಲ್ಲಿ ಶೂದ್ರರ ಹೆಣ್ಣು ಮಕ್ಕಳಿಗೆ ಶಾಲೆ ತೆರೆದಿರುವುದು ಮಹಾಪರಾಧವೆಂದು ಕಿಡಿಕಾರಿದರು. ಈ ಶಾಲೆಯಲ್ಲಿ ಬೋಧನೆ ಮಾಡಲು ಇಬ್ಬರನ್ನು ನೇಮಿಸಿಕೊಂಡಿದ್ದರು. ಅಂತಹವರಿಗೆ ಬೆದರಿಕೆ ಹಾಕಿ ಕೆಲಸಕ್ಕೆ ಬರುವುದನ್ನು ಬಿಡಿಸಿದರು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತಮ್ಮ ಪತ್ನಿಯಾದ ಸಾವಿತ್ರಿಬಾ ಫುಲೆಯವರನ್ನು ಪಾಠ ಹೇಳಿಕೊಡುವಂತೆ ತಿಳಿಹೇಳಿದರು. ಅದಕ್ಕೆ ಬೇಕಾದ ತಯಾರಿಯನ್ನು ರಾತ್ರಿ ವೇಳೆ ಮಾಡಿದರು. ಇದಲ್ಲದೆ ಫುಲೆಯವರ ಸ್ನೇಹಿತರಾದ ಕೇಶವರಾವ್ ಬಾವೇಕರ್ ಬಳಿ ಹುಡುಗಿಯರಿಗೆ ಹೇಗೆ ಕಲಿಸಬೇಕು ಎಂಬುದರ ಬಗ್ಗೆ ತರಬೇತಿ ಪಡೆದುಕೊಂಡರು. "ಸಾವಿತ್ರಿಬಾಯಿ ಫುಲೆ ಪ್ರಥಮ ಮಹಿಳಾ ಉಪಾಧ್ಯಾಯಿನಿ ಎಂದು ಕರೆಸಿಕೊಂಡರು."[೧೬] ಇಂತಹ ಸಾವಿತ್ರಿಬಾಯಿಯವರು ಪಾಠ ಹೇಳಿಕೊಡುವುದನ್ನು ತಡೆಯಲು ಸಾಕಷ್ಟು ಪ್ರಯತ್ನಗಳು ನಡೆದವು. ಆದರೆ ಅವುಗಳಿಗೆ ಅಂಜದೇ ಅವರು ಮುಂದೆ ಬಂದು ಪಾಠ ಹೇಳಿಕೊಟ್ಟರು. ಇಂತಹ ಸಂದರ್ಭ ಸಾವಿತ್ರಿಬಾ ಫುಲೆಯವರು ನನ್ನ ಮೇಲೆ ನೀವು ಎಸೆಯುವ ಮಣ್ಣು ಕಲ್ಲುಗಳ ಬಗ್ಗೆ ಬೇಸರಗೊಳ್ಳದೆ ಅವರು "ನನ್ನ ತಂಗಿಯರನ್ನು ಅಕ್ಷರಸ್ಥರನ್ನಾಗಿ ಮಾಡಲು ಶ್ರಮಿಸುತ್ತಿದ್ದೆ, ನೀವು ನನ್ನ ಮೇಲೆ ಹೂಗಳನ್ನು ಎಸೆದು ಪ್ರೋತ್ಸಾಹಿಸುತ್ತಿದ್ದಾರೆಂದು ತಿಳಿಯುತ್ತೇನೆ ಎಂದು ಅವರು ಅಭಿಮಾನದಿಂದಲೇ ನುಡಿದರು. ಇದು ಅವರ ದೊಡ್ಡ ವ್ಯಕ್ತಿತ್ವ ಗುಣಗಳನ್ನು ಹಾಗೂ ತಮ್ಮ ಜನಾಂಗದ ಉದ್ಧಾರಕ್ಕಾಗಿ ನುಡಿದ ಮಾತುಗಳಾಗಿವೆ.

ಮುಂದೆ ಜ್ಯೋತಿಬಾ ಫುಲೆಯವರು ಈ ಶಾಲೆಯನ್ನು ಮುಚ್ಚುವ ಪರಿಸ್ಥಿತಿ ತಲೆ ದೋರಿತು. ಹಾಗಾಗಿ ಅವರು ೧೮೮೭ರಲ್ಲಿ ತಮ್ಮೆಲ್ಲ ಸ್ನೇಹಿತರನ್ನು ಕರೆದು ಹೀಗೆ ಹೇಳಿದರು. "ಸಹೋದರರೇ ಶೋಷಿತರ ಮುಕ್ತಿಗಾಗಿ ಸಾಕಷ್ಟು ಕೆಲಸ ಮಾಡಿದ್ದೇನೆ ಮಾನವ ಹಕ್ಕುಗಳನ್ನು ಇನ್ನು ಅರವತ್ತು ವರ್ಷಗಳ ನಂತರ ಪಡೆಯಬಹುದು ಸ್ವಾಭಿಮಾನದಿಂದ ಸಿಂಹದಂತೆ ಬಾಳಿರಿ" ಎಂದು ಹೇಳಿದರು. ವಿದ್ಯೆಗೆ ಪ್ರಥಮ ಪ್ರಾಶಸ್ತ್ಯ ಕೊಡಿ ಎಂದು ಹೇಳಿ ಕ್ರಿ.ಶ. ೧೮೯೦ರಲ್ಲಿ ಮರಣ ಹೊಂದಿದರು.

ಜ್ಯೋತಿಬಾ ಫುಲೆಯವರ ಚಿಂತನೆಗಳು ಸಮಾಜ ಕೆಳವರ್ಗದವರನ್ನು ಮೇಲಕ್ಕೆ ತರುವ ಪ್ರಯತ್ನದಿಂದ ಕೂಡಿದ್ದವು. ಅವರ ಅವಿರತವಾದ ಹೋರಾಟದಿಂದ ಅಂದು ಅನೇಕ ಮಹಿಳೆಯರು ಶಿಕ್ಷಣ ಪಡೆದುಕೊಂಡರು. ಆದರೆ ಈ ಶಾಲೆಗಳಲ್ಲಿ ಯಾವ ರೀತಿಯಾದ ಪಠ್ಯಕ್ರಮ ಇರಬೇಕು ಎಂಬುದರ ಬಗ್ಗೆ ಫುಲೆಯವರು ಎಲ್ಲಿಯೂ ಹೇಳಿಲ್ಲ. ಆದರೆ ಅವರ ಉದ್ದೇಶ ಶಿಕ್ಷಣ ಮಾತ್ರ ದೊರಕಿಸುವುದಾಗಿತ್ತು.

### ೪.೨.೨. ನಾರಾಯಣಗುರು

ಕೇರಳದ ಎಝುವಾ (ಈಳವ) ಎಂಬ ಕೆಳಜಾತಿಯ ಮುಖಂಡರಲ್ಲಿ ಜನಿಸಿದ ನಾರಾಯಣ ಗುರು ಮುಂದೆ ಒಬ್ಬ ದೊಡ್ಡ ಸಮಾಜ ಸುಧಾರಕನಾಗಿ ಕಾಣಿಸಿಕೊಂಡರು. ಇವರು ಕ್ರಿ.ಶ. ೧೮೫೪ರಲ್ಲಿ ಜನಿಸಿದರು. ದೊಡ್ಡವರಾದ ಮೇಲೆ ಶ್ರೀ ನಾರಾಯಣ ಧರ್ಮ ಪರಿಪಾಲನ ಯೋಗಂ ಎಂಬ ಸಂಘಟನೆಯನ್ನು ಕೇರಳ ಮತ್ತು ಕೇರಳದ ಹೊರಗಡೆ ಹಲವು ಪ್ರದೇಶಗಳಲ್ಲಿ

ಸಂಘಟಿಸಿದರು. ಇದರ ಮೂಲ ಎಝುವಾ ಜಾತಿಯ ಜನರನ್ನು ಉದ್ಧಾರ ಮಾಡುವುದಾಗಿತ್ತು. ಅದಕ್ಕಾಗಿ ಇವರು ಅಸ್ಪೃಶ್ಯತೆಯ ಆಚರಣೆಯನ್ನು ನಿಲುಗಡೆಗೊಳಿಸುವುದು ದೇವಾಲಯಗಳ ನಿರ್ಮಾಣ, ಈ ದೇವಾಲಯಗಳಲ್ಲಿ ಎಲ್ಲಾ ಜಾತಿಯವರಿಗೂ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರು. ವಿವಾಹ ಧಾರ್ಮಿಕ ಕ್ರಿಯಾವಿಧಿಗಳು ಮತ್ತು ಅಂತ್ಯಕ್ರಿಯೆಗೆ ಸಂಬಂಧಿಸಿದಂತಹ ಅನೇಕ ಸಂಸ್ಕಾರಗಳನ್ನು ಸರಳಗೊಳಿಸಿದರು. ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದ ನಾರಾಯಣಗುರು ಅಸ್ಪೃಶ್ಯರನ್ನು ಹಿಂದುಳಿದ ವರ್ಗವಾಗಿ ಪರಿವರ್ತಿಸುವಲ್ಲಿ ಯಶಸ್ವಿಯಾದರು.

ಅಸ್ಪೃಶ್ಯತೆಯ ನಿವಾರಣೆಯಲ್ಲಿ ಕಾರ್ಯಪ್ರವೃತ್ತರಾದ ಇವರು ಕ್ರಿಶ ೧೯೦೩ರಲ್ಲಿ ಶ್ರೀನಾರಾಯಣ ಎಂಬ ಸಂಘಟನೆಯನ್ನು ಕೇರಳ ಮತ್ತು ಕೇರಳದ ಹೊರಗಡೆ ಪ್ರದೇಶಗಳಲ್ಲಿ ಸಂಘಟಿಸಿದರು. ಧರ್ಮ ಪರಿಪಾಲನ ಯೋಗಂ (SNDP) ಈ ಸಂಘಟನೆಯಲ್ಲಿ ಮುಕ್ತ ವಾತಾವರಣವನ್ನು ಕಲ್ಪಿಸಿ ಎಲ್ಲಾ ಜಾತಿಯವರು ಭಾಗವಹಿಸಿ, ಚರ್ಚಿಸಲು ಅವಕಾಶ ನೀಡಿದರು. ಇದರಿಂದಾಗಿ ಕೆಳಜಾತಿಯವರು ನಿರ್ಭಯವಾಗಿ ಓಡಾಡಲು ಸಾಧ್ಯವಾಯಿತು. ಶಾಲೆಗಳಲ್ಲಿ ಮುಕ್ತವಾದ ಪ್ರವೇಶ ಲಭ್ಯವಾಯಿತು. ದೇವಾಲಯಗಳನ್ನು ಪ್ರವೇಶಿಸಿ ದೇವರ ದರ್ಶನವನ್ನು ಪಡೆಯಲು ಸಾಧ್ಯವಾಯಿತು. ಮೇಲ್ಜಾತಿಯವರಿಗೆ ಮೀಸಲಾಗಿದ್ದ ಸರ್ಕಾರಿ ಕೆಲಸಗಳನ್ನು ಕೆಳಜಾತಿಯವರು ಪಡೆಯಲು ಸಾಧ್ಯವಾಯಿತು.[೧೭] ಇದಷ್ಟೇ ಅಲ್ಲದೆ ಸರ್ವಸಮಸ್ಯೆಗಳಿಗೂ ಜ್ಞಾನವೇ ಸೂಕ್ತವಾದ ಪರಿಹಾರವೆಂದು ಇವರು ನಂಬಿದ್ದರು. ಹೀಗಾಗಿ ಹಿಂದುಳಿದವರಿಗೆ ಶಿಕ್ಷಣವನ್ನು ನೀಡಲು ರಾತ್ರಿ ಶಾಲೆಗಳನ್ನು ತೆರೆದರು. ಜ್ಞಾನದ ಕೇಂದ್ರವಾಗಿ ಕಾರ್ಯನಿರ್ವಹಿಸಲು ೧೯೧೨ರಲ್ಲಿ ಶಾರದಾ ಮಠವನ್ನು ಆರಂಭಿಸಿದರು.[೧೮] ಈ ಕೇಂದ್ರದ ಮೂಲಕ ಶಿಕ್ಷಣ ನೀಡುವುದಕ್ಕೆ ಪ್ರೋತ್ಸಾಹವನ್ನು ನೀಡಿದರು. ಹೀಗೆ ಒಬ್ಬ ಕೆಳಜಾತಿಯಲ್ಲಿ ಹುಟ್ಟಿದವನು ಇಡೀ ತನ್ನ ಸಮುದಾಯದ ಜನರಿಗೆ ನ್ಯಾಯವನ್ನು ದೊರಕಿಸಿಕೊಡುವಲ್ಲಿ ಯಶಸ್ಸು ಕಂಡರು.

### ೪.೨.೩. ರವೀಂದ್ರನಾಥ ಠಾಕೂರ್

ವಿಶ್ವಕವಿ, ಶ್ರೇಷ್ಠ ತತ್ವಜ್ಞಾನಿಗಳು ಮತ್ತು ಶಿಕ್ಷಣತಜ್ಞರಾದಂತಹ ಗುರುದೇವ ರವೀಂದ್ರನಾಥ ಠಾಕೂರ್ ಕ್ರಿ.ಶ. ೧೮೬೧ರ ಮೇ ೭ ರಂದು ಬಂಗಾಲಿ ಶಕೆ ೧೨೬೮ (ವಿಕ್ರಮಶಕೆ-೧೭೮೩) ವೈಶಾಖ ಬಹುಳದಶಮಿ ಮಂಗಳವಾರ ಬೆಳಗ್ಗೆ ಜನಿಸಿದರು. ಮಹರ್ಷಿ ದೇವೇಂದ್ರನಾಥ ಠಾಕೂರ್ ಮತ್ತು ಶಾರದಾದೇವಿಯವರ ಹದಿನಾಲ್ಕನೆಯ ಮಗನಾಗಿ ಶ್ರೀಮಂತ ಕುಟುಂಬದಲ್ಲಿ ಜನಸಿದರು. ಇವರಿಗೆ ಮನೆಯಲ್ಲಿಯೇ ಖಾಸಗಿ ಶಿಕ್ಷಕರಿಂದಲೇ ಶಿಕ್ಷಣ ಹೇಳಿಕೊಡಿಸಲಾಗುತ್ತಿತ್ತು. ಆದರೆ ರವೀಂದ್ರನಾಥರಿಗೆ ಇದು ಹೊಂದಿಕೆ ಬಾರದಿದ್ದರಿಂದ ಅವುಗಳನ್ನು ತಿರಸ್ಕರಿಸಿದರು. ಇವರಿಗೆ ಹೇಳಿಕೊಡುತ್ತಿದ್ದ ಗಣಿತ, ವಿಜ್ಞಾನ, ಭಾಷೆ ಮುಂತಾದ ವಿಷಯಗಳ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಲಿಲ್ಲ. ನಿಸರ್ಗ ಸೌಂದರ್ಯ, ಕಾವ್ಯ ಮತ್ತು ಸಂಗೀತಗಳನ್ನು ಪ್ರೀತಿಸುವುದು ಅವರ ಹುಟ್ಟುಗುಣವಾಗಿತ್ತು. ಹೀಗಾಗಿ ಅವರನ್ನು ಬೇರೆ-ಬೇರೆ ಶಾಲೆಗಳಿಗೆ ಕಳುಹಿಸಿದರೂ ಸಹ ಅಲ್ಲಿಯ ಪರಿಸರ ಇವರಿಗೆ ಪೂರಕವಾಗಲಿಲ್ಲ. ಹಾಗಾಗಿ ಶಿಕ್ಷಕರು ರವೀಂದ್ರನಾಥರು ಶಿಕ್ಷಣ ಕಲಿಯಲು ಯೋಗ್ಯರಲ್ಲವೆಂದೇ ತೀರ್ಮಾನಿಸಿದ್ದರು. ಇದರಿಂದಾಗಿ ಮತ್ತೆ ಮನೆಯಲ್ಲಿಯೇ

ಶಿಕ್ಷಣ ಮುಂದುವರೆಸಿ ಮುಂದೆ ಕಾನೂನು ಅಭ್ಯಾಸ ಮಾಡಲು ಇಂಗ್ಲೆಂಡಿಗೆ ಹೋದರು. ಆದರೆ ಅಲ್ಲಿಯೂ ಈ ಪದವಿಯನ್ನು ಪೂರ್ಣಗೊಳಿಸದೇ ಅಲ್ಲಿನ ಇಂಗ್ಲಿಷ್ ಭಾಷೆಯ ಅಭಿರುಚಿಯನ್ನು ಆಸ್ವಾದಿಸಿದರು. ಮುಂದೆ ಭಾರತಕ್ಕೆ ಬಂದಮೇಲೆ ಶಾಲೆಯಲ್ಲಿ ಮಕ್ಕಳು ಕಲಿಯುವ ಸಂದರ್ಭದಲ್ಲಿ ಯಾವ-ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದರ ಬಗ್ಗೆ ಚಿಂತನೆ ಮಾಡತೊಡಗಿದರು. ಇಂತಹ ಸಮಸ್ಯೆಗಳನ್ನು ಹೋಗಲಾಡಿಸಲು ತಾವೇ ಒಂದು ಶಾಲೆಯನ್ನು ಪ್ರಾರಂಭಿಸಿದರು. ಈ ಶಾಲೆಗೆ ಶಾಂತಿನಿಕೇತನ ಎಂದು ಹೆಸರಿಟ್ಟರು. ಇದು ೧೯೨೧ರಲ್ಲಿ ವಿಶ್ವಭಾರತಿ ವಿದ್ಯಾಲಯವಾಗಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದುಕೊಂಡಿತು.

**ಪಠ್ಯವಸ್ತುವಿನ ಬಗ್ಗೆ ರವೀಂದ್ರನಾಥ ಠಾಕೂರ್ ಅವರ ಚಿಂತನೆಗಳು**

ರವೀಂದ್ರನಾಥರು ತಮ್ಮ ಶಾಂತಿನಿಕೇತನದಲ್ಲಿ ಸಾಂಪ್ರದಾಯಿಕ ಪಠ್ಯಕ್ರಮಕ್ಕೆ ಆಸ್ಪದ ನೀಡಲಿಲ್ಲ. ಅನೇಕ ಶಿಕ್ಷಣತಜ್ಞರು ಸೂಚಿಸಿದ ವಿಷಯಗಳನ್ನು ಅವರ ಶಾಲೆಯಲ್ಲಿ ಬೋಧಿಸುವುದಕ್ಕೆ ಅವರು ಆದ್ಯತೆ ನೀಡಿದ್ದರು. ಪಠ್ಯವಸ್ತುವು ಭಾರತೀಯ ಜೀವನ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಿರಬೇಕು. ಮಗುವಿನ ಸರ್ವತೋಮುಖ ಬೆಳವಣಿಗೆಗೆ, ದೈಹಿಕ, ಬೌದ್ಧಿಕ, ಸಾಮಾಜಿಕ, ಆರ್ಥಿಕ, ನೈತಿಕ, ಸೌಂದರ್ಯಾತ್ಮಕ ವಿಕಾಸವಾಗುವ ಅಂಶಗಳು ಪಠ್ಯಕ್ರಮದಲ್ಲಿರಬೇಕು. ಪಠ್ಯಕ್ರಮವು ಮಗುವಿನ ಅಥವಾ ಸಮಾಜದ ಅಗತ್ಯತೆಗಳನ್ನು ಪೂರೈಸುವಂತಿರಬೇಕು. ಶಿಕ್ಷಣದ ಗುರಿಗಳನ್ನು ಸಾಧಿಸಬೇಕಾದರೆ ಪಠ್ಯಕ್ರಮ ಸಂಕುಚಿತವಾಗಿರಬಾರದು. "ಪಠ್ಯಕ್ರಮವು ಮಕ್ಕಳಲ್ಲಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ವಿಶಾಲ ಭಾವನೆಗಳನ್ನು ಬೆಳೆಸುವಂತಿರಬೇಕು. ನೈಜ ಜೀವನಕ್ಕೆ ಸಂಬಂಧಿಸಿರಬೇಕು. ಶಿಕ್ಷಣದಲ್ಲಿ ಭಾಷೆ, ವಿಜ್ಞಾನ, ಗಣಿತ, ಆರೋಗ್ಯ ಶಿಕ್ಷಣ, ಸಾಮಾಜಿಕ ವಿಜ್ಞಾನ, ವ್ಯವಸಾಯ, ತಾಂತ್ರಿಕ ವಿಷಯಗಳು, ಕಲೆ, ಸಂಗೀತ, ನೃತ್ಯ, ತತ್ವಶಾಸ್ತ್ರ ಮನೋವಿಜ್ಞಾನ ಇತರೆ ವಿಷಯಗಳು ಪಠ್ಯಕ್ರಮದಲ್ಲಿ ಅಭ್ಯಾಸ ವಿಷಯಗಳಾಗಿರಬೇಕು"[೯] ಎಂಬ ಅಭಿಪ್ರಾಯವನ್ನು ಪ್ರತಿಪಾದಿಸಿದ್ದಾರೆ. ಚರಿತ್ರೆಗೆ ಸಂಬಂಧಿಸಿದಂತೆ ರವೀಂದ್ರನಾಥ ಠಾಕೂರವರು ಮಕ್ಕಳಿಗೆ ಕ್ಷೇತ್ರ ಅಧ್ಯಯನ ಕೈಗೊಳ್ಳುವ ಮೂಲಕ ಚರಿತ್ರೆಯನ್ನು ಪರಿಣಾಮಕಾರಿಯಾಗಿ ಕಲಿಸಬಹುದು ಎಂದಿದ್ದಾರೆ. ಅಂದರೆ ಮಕ್ಕಳು ನೈಜ ಅನುಭವವನ್ನು ಪಡೆದುಕೊಂಡು ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿ ಕಲಿಯಬೇಕು ಎಂಬುದು ಇವರ ಚಿಂತನೆಯಾಗಿತ್ತು. ಇದಲ್ಲದೆ ಪಠ್ಯಕ್ರಮ ವ್ಯಾಪಕವಾಗಿರಬೇಕು. ನಿಸರ್ಗದ ಬಗ್ಗೆ ಒಲವನ್ನು ಮೂಡಿಸುವಂತಿರಬೇಕು, ವಿಚಾರ ತತ್ವಗಳಿಗೆ ಅವಕಾಶವನ್ನು ನೀಡುವಂತೆ ಇರಬೇಕು ಎಂದಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ರವೀಂದ್ರರು ಪಠ್ಯಕ್ರಮದ ಬಗ್ಗೆ ಮಾಡಿರುವ ಚಿಂತನೆಗಳು ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಿಕೊಳ್ಳುವುದಕ್ಕೆ ಅತ್ಯಂತ ಸೂಕ್ತವಾದಂತಹ ಅಂಶಗಳಾಗಿವೆ. ಏಕೆಂದರೆ ಅವರು ನೀಡಿರುವ ತತ್ವಗಳು ಅವುಗಳನ್ನು ಸಾರಿ ಹೇಳುತ್ತಿವೆ. ಹೀಗಾಗಿ ಇಂತಹ ತತ್ವಜ್ಞಾನಿಗಳ ವಿಚಾರಧಾರೆಗಳಿಗೆ ಇಂದು ಪಠ್ಯಕ್ರಮದಲ್ಲಿ ಅವಕಾಶ ನೀಡುವುದು ಸೂಕ್ತವೆಂದೆನಿಸುತ್ತದೆ.

**೪.೨.೪. ಸ್ವಾಮಿ ವಿವೇಕಾನಂದ**

ನಮ್ಮ ದೇಶವು ಪೌರಾತ್ಯ ಮತ್ತು ಪಾಶ್ಚಿಮಾತ್ಯ ಸಾಂಸ್ಕೃತಿಕ ಮೌಲ್ಯಗಳ ಸಂಘರ್ಷಕ್ಕೆ ಒಳಗಾಗಿದೆ. ಭಾರತದ ಆಧ್ಯಾತ್ಮ ಮತ್ತು ಬ್ರಿಟಿಷರ ಭೌತಿಕ ಪ್ರವೃತ್ತಿಯ ನಡುವೆ ತಾಕಲಾಟವನ್ನು

ಏರ್ಪಡಿಸಿತ್ತು. ಬ್ರಿಟಿಷರು ಭಾರತದ ಒಂದೊಂದು ಅಂಗುಲ ನೆಲವನ್ನು ಗೆಲ್ಲುತ್ತಾ ಇಲ್ಲಿನ ಜನತೆಯ ಬುದ್ಧಿ-ಭಾವ, ನಡೆ-ನುಡಿಗಳನ್ನು ತಮ್ಮ ಶಿಕ್ಷಣದಲ್ಲಿ ಮಾರ್ಪಡಿಸತೊಡಗಿದರು. ಸಾಂಸ್ಕೃತಿಕ ಗುಲಾಮಗಿರಿತನ ನಮ್ಮವರಲ್ಲಿ ಕ್ರಮೇಣ ಬೆಳೆಯುತ್ತಾ ಬಂದಿತು. ಇದರಿಂದಾಗಿ ನಮ್ಮ ಸಂಸ್ಕೃತಿ ಸ್ಥಳೀಯರ ಪ್ರೋತ್ಸಾಹ ಬೆಂಬಲಗಳಿಲ್ಲದೆ ಬಳಲಬೇಕಾಯಿತು. ಇಂತಹ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರು ಅದರ ವಿರುದ್ಧ ಸಾಕಷ್ಟು ಹೋರಾಟವನ್ನು ನಡೆಸಿ ಭಾರತದ ಹೆಸರನ್ನು ಇಡೀ ಪ್ರಪಂಚಕ್ಕೆ ಸಾರಿದ ಮಾದರಿ ವ್ಯಕ್ತಿಯಾದರು. ಇಂತಹ ಸ್ವಾಮಿ ವಿವೇಕಾನಂದರು ಕ್ರಿ.ಶ. ೧೮೬೩ರ ಜನವರಿ ೧೨ರಂದು ಕಲ್ಕತ್ತದಲ್ಲಿ ಜನಿಸಿದರು. ಇವರ ತಂದೆ ವಿಶ್ವನಾಥದತ್ತ, ತಾಯಿ ಭುವನೇಶ್ವರಿ ದೇವಿ. ಇವರ ಮನೆತನ ವಿದ್ಯೆಗೆ ಖ್ಯಾತಿಯಾಗಿದ್ದರಿಂದ ಸ್ವಾಮಿ ವಿವೇಕಾನಂದರಿಗೆ ಒಳ್ಳೆಯ ಶಿಕ್ಷಣ ದೊರಕಿತು. ಉನ್ನತ ಶಿಕ್ಷಣವನ್ನು ಪಡೆದುಕೊಂಡ ಇವರು ಸಂಸ್ಕೃತ ಮತ್ತು ಬೆಂಗಾಲಿ ಎರಡು ಭಾಷೆಗಳ ಮೇಲೆ ಸಾಕಷ್ಟು ಪ್ರಭುತ್ವ ಹೊಂದಿದ್ದರು. ಮಿಲ್ ಮತ್ತು ಸ್ಪೆನ್ಸರ್‌ವರ ತತ್ವಗಳನ್ನು ಆಳವಾಗಿ ಅಭ್ಯಸಿಸಿರಲ್ಲದೆ ವುಡ್ಸ್‌ವರ್ಥ್ ಮತ್ತು ಶೆಲ್ಲಿಯವರ ಕಾವ್ಯಗಳನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಆದರೆ ದೇವರ ಬಗ್ಗೆ ಜಿಜ್ಞಾಸೆಯುಂಟಾಗಿ ಪರಿಹಾರ ಕಂಡುಕೊಳ್ಳಲು ಮುಂದೆ ಅವರು ರಾಮಕೃಷ್ಣ ಪರಮಹಂಸರ ಮಾರ್ಗದರ್ಶನ ಪಡೆದುಕೊಂಡರು. ಕ್ರಿ.ಶ. ೧೮೯೩ರ ಸೆಪ್ಟೆಂಬರ್‌ನಲ್ಲಿ ಅಮೇರಿಕಾದ ಚಿಕಾಗೋ ನಗರದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನಕ್ಕೆ ಭಾರತದ ಪ್ರತಿನಿಧಿಯಾಗಿ ಹೋದರು. ಇಲ್ಲಿ ಭಾರತ ಸಂಸ್ಕೃತಿ ಧರ್ಮವನ್ನು ಎತ್ತಿಹಿಡಿದರು.

ಭಾರತದ ಸಾಮಾಜಿಕ ಪ್ರಗತಿಗೆ ಕಂಟಕಪ್ರಾಯವಾಗಿರುವ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಯನ್ನು ಕಿತ್ತೊಗೆಯದೇ ನಿಜವಾದ ಪ್ರಗತಿ ಸಾಧ್ಯವಿಲ್ಲವೆಂದು ವಿವೇಕಾನಂದರು ದೃಢವಾಗಿ ನಂಬಿದ್ದರು. ನಮ್ಮ ಕುಲೀನ ಮನೆತನದ ಪೂರ್ವಜರು ನಮ್ಮ ದೇಶದ ಜನಸಾಮಾನ್ಯರನ್ನು ಕಾಲಿನಿಂದ ತುಳಿದರು. ಎಲ್ಲಿಯವರೆಗೆ ಅಂದರೆ ಅವರು ಸಹಾಯಕರಾಗುವ ತನಕ. ಈ ಬಡಜನತೆ ಚಿತ್ರಹಿಂಸೆಯಲ್ಲಿ ನಲುಗುವ ತನಕ ಮುಂದುವರಿಸಿದರು. ಈ ಬಡಜನತೆ ಕ್ರಮೇಣ ತಾವು ಮನುಷ್ಯ ಜಾತಿಗೆ ಸೇರಿದವರು ಎಂಬುದನ್ನೇ ಮರೆತು ಬಿಟ್ಟರು ಎಂದು ಹೇಳುವ ಮೂಲಕ ವಿವೇಕಾನಂದರು ಅಮಾನವೀಯ ಜಾತಿಪದ್ಧತಿಯನ್ನು ವಿಶ್ಲೇಷಿಸುತ್ತಾರೆ. ಭಾರತದ ಶ್ರೇಣೀಕೃತ ಜಾತಿ ಪದ್ಧತಿಯಲ್ಲಿ ಬೆವರು ಸುರಿಸಿ ದುಡಿಯುವವರೆಲ್ಲರೂ ಶೂದ್ರರು. ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಏಣಿಯ ಮೇಲ್ತುದಿಯಲ್ಲಿರುವವರು. ಅವರು ಆಸ್ತಿವಂತರು, ಅವರು ಆಳುವವರು. ಅವರ ಸೇವೆ ಮಾಡಲು ಅವರಿಗೆ ಬೇಕಾದುದೆಲ್ಲವನ್ನು ಉತ್ಪತ್ತಿ ಮಾಡಿಕೊಡಬೇಕಾದವರು ಶೂದ್ರರು. ಕೃಷಿಯೂ ಸೇರಿದಂತೆ ಎಲ್ಲಾ ಕಸುಬುಗಳನ್ನು ಮಾಡುವವರು ಶೂದ್ರರು. ಆದ್ದರಿಂದ ಶೂದ್ರರೆಂದರೆ ಶ್ರಮಜೀವಿಗಳು. ಮುಂಬರುವ ಯುಗದಲ್ಲಿ ಭಾರತದಲ್ಲಿ ಶೂದ್ರರೇ ಆಳ್ವಿಕೆ ನಡೆಸುತ್ತಾರೆ ಎಂಬುದು ಸ್ವಾಮಿ ವಿವೇಕಾನಂದರ ಭವಿಷ್ಯವಾಣಿ.[೨೦] ಭವಿಷ್ಯವು ಶೂದ್ರರಿಗೆ ಸೇರಿದ್ದಾಗಿದೆ ಎಂಬುದು ಅವರು ಕಂಡ ಕನಸಿಗೆ ತಾರ್ಕಿಕ ಕೊನೆಯಾಗಿತ್ತು. ನಿರಂತರ ತುಳಿತಕ್ಕೊಳಗಾಗಿರುವ ಭಾರತದ ಶ್ರಮಜೀವಿ ವರ್ಗಗಳೇ, ನಾನು ನಿಮಗೆ ಶಿರ ಬಾಗುತ್ತೇನೆ..... ಆ ಹೊಸ ಶಕ್ತಿ ಉದಯಿಸುವ ಮೊದಲು ಕಿರಣಗಳು ಸಾವಕಾಶವಾಗಿ ಪಾಶ್ಚಿಮಾತ್ಯ ಜಗತ್ತಿನಲ್ಲಿ ಮೂಡಿಬರಲು ಈಗಾಗಲೇ ಪ್ರಾರಂಭಿಸಿವೆ. ವಿವೇಕಾನಂದರು ಮೇಲ್ಕಂಡ ಮಾತುಗಳನ್ನು ಹೇಳಿದ

ಕೆಲವೇ ವರ್ಷಗಳಲ್ಲಿ ವಿಶ್ವದಲ್ಲಿ ಪ್ರಪ್ರಥಮ ಬಾರಿಗೆ ಶ್ರಮಿಕ ವರ್ಗದ ಪ್ರಭುತ್ವವೊಂದು ರಶಿಯಾ ದೇಶದಲ್ಲಿ ಅಸ್ತಿತ್ವಕ್ಕೆ ಬಂತು. ಸ್ವಾಮಿ ವಿವೇಕಾನಂದರಿಗೆ ಕಾರ್ಮಿಕ ವರ್ಗದ ಚಳುವಳಿಯ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಇದ್ದಿರಲಿಕ್ಕಿಲ್ಲ. ಅವರು ತಾನೋರ್ವ ಸಮಾಜವಾದಿ ಎಂದು ಬಹಿರಂಗವಾಗಿ ಘೋಷಿಸಿಕೊಂಡ ಮೊದಲ ಭಾರತೀಯರಾಗಿದ್ದರು. ಸಮಾಜವಾದದ ವಿಜ್ಞಾನವನ್ನು ಅಭಿವೃದ್ಧಿಪಡಿಸಿದ ಕಾರ್ಲ್‌ಮಾರ್ಕ್ಸ್ ಹಾಗೂ ಲೆನಿನ್ ಅವರ ಕೃತಿಗಳ ಪರಿಚಯವೂ ವಿವೇಕಾನಂದರಿಗೆ ಇದ್ದಿರಲಿಕ್ಕಿಲ್ಲ. ಆದರೂ ವಿವೇಕಾನಂದರ ಶೂದ್ರ ಪ್ರಭುತ್ವ ಮತ್ತು ಮಾರ್ಕ್ಸ್ ಹಾಗೂ ಲೆನಿನ್ ಅವರು ಪ್ರತಿಪಾದಿಸಿದ ಕಾರ್ಮಿಕ ವರ್ಗದ ಪ್ರಭುತ್ವಗಳ ನಡುವೆ ಸಹಜವಾದ ಸಾಮ್ಯತೆ ಕಂಡುಬರುತ್ತದೆ. ಅವೆರಡರ ನಡುವೆ ಮೂಲಭೂತ ವ್ಯತ್ಯಾಸಗಳೂ ಇವೆ. ಮಾರ್ಕ್ಸ್ ಮತ್ತು ಲೆನಿನ್ ಅವರ ಪ್ರಕಾರ ಕಾರ್ಮಿಕವರ್ಗದ ನೇತೃತ್ವದಲ್ಲಿನ ಸಮಾಜವಾದಿ ಪ್ರಭುತ್ವವೂ ಸಮಾಜವಾದಿ ಕ್ರಾಂತಿಯೊಂದರ ವಿಜಯದ ಪರಿಣಾಮವಾಗಿ ಸ್ಥಾಪಿಸಲ್ಪಡುತ್ತದೆ. ಬಂಡವಾಳಶಾಹಿ ಆಳ್ವಿಕೆಯನ್ನು ಅದು ಕಿತ್ತೆಸೆಯುತ್ತದೆ. ವಿವೇಕಾನಂದರ ಶೂದ್ರರ ಪ್ರಭುತ್ವವು ಸಹ ಬಂಡವಾಳಶಾಹಿಗಳ ಪ್ರಭುತ್ವವನ್ನು ಶೂದ್ರರು ಕಿತ್ತೊಗೆಯುವ ಮೂಲಕವೇ ಸ್ಥಾಪನೆಯಾಗುತ್ತದೆ. ಆದರೆ ಅದನ್ನು ಹೇಗೆ ಸಾಧಿಸಲಾಗುತ್ತದೆ ಎಂಬುದರ ಬಗ್ಗೆ ವಿವೇಕಾನಂದರಿಗೆ ಸ್ಪಷ್ಟತೆ ಇರಲಿಲ್ಲ. ಅದು ಮಾನವ ನಾಗರಿಕತೆಯ ಬೆಳವಣಿಗೆಯ ಮುಂದಿನ ಹಂತ ಎಂದು ತೀರಾ ಸರಳವಾಗಿ ಅವರು ವಿವರಿಸುತ್ತಾರೆ. ಕೆಳವರ್ಗದವರೇ ಆಗಿರುವ ಶ್ರಮಜೀವಿಗಳ ಬಗ್ಗೆ ಅವರು ಹೀಗೆ ಹೇಳುತ್ತಾರೆ. ಯಂತ್ರದ ರೀತಿಯಲ್ಲಿ ಅವರುಗಳು ನಿರಂತರವಾಗಿ, ಏಕಪ್ರಕಾರವಾಗಿ ಕೆಲಸ ಮಾಡುತ್ತಲೇ ಇದ್ದಾರೆ. ಬುದ್ಧಿವಂತ ಜನ ಅವರ ಶ್ರಮದ ಬಹುಪಾಲು ಫಲವನ್ನು ಕೊಂಡೊಯ್ಯುತ್ತಾರೆ. ಇದು ಪ್ರತಿಯೊಂದು ದೇಶದ ಕಥೆಯೂ ಆಗಿದೆ. ಆದರೆ ಈಗ ಕಾಲ ಬದಲಾಗುತ್ತಾ ಬರುತ್ತಿದೆ. ಕೆಳವರ್ಗದ ಈ ಜನ ಸತ್ಯವನ್ನು ನಿಧಾನವಾಗಿ ತಿಳಿದುಕೊಂಡು ಜಾಗೃತರಾಗುತ್ತಿದ್ದಾರೆ. ಅನ್ಯಾಯದ ವಿರುದ್ಧ ಒಂದುಗೂಡುತ್ತಿದ್ದಾರೆ ಮತ್ತು ತಮ್ಮ ನ್ಯಾಯಸಮ್ಮತ ಪಾಲನ್ನು ಪಡೆಯಲು ಕಟಿಬದ್ಧರಾಗುತ್ತಿದ್ದಾರೆ. ಯೂರೋಪ್, ಅಮೇರಿಕದ ದೇಶಗಳ ಈ ಕೆಳವರ್ಗಗಳ ಜನಸಮೂಹ ಪ್ರಪ್ರಥಮ ಬಾರಿಗೆ ಇಂತಹ ಜಾಗೃತಿಯನ್ನು ಪಡೆದುಕೊಂಡು ತಮ್ಮ ಹೋರಾಟವನ್ನು ಪ್ರಾರಂಭಿಸಿದ್ದಾರೆ. ಭಾರತದಲ್ಲೂ ಇತ್ತೀಚೆಗೆ ಕೆಳಸ್ತರದ ಜನರಿಂದ ಬಹಳಷ್ಟು ಸಂಖ್ಯೆಯ ಮುಷ್ಕರಗಳು, ಪ್ರತಿಭಟನೆಗಳು ಬೆಳೆದು ಬರುತ್ತಿವೆ. ಮೇಲ್ವರ್ಗದ ಜನಕ್ಕೆ ಇನ್ನು ಮುಂದೆ ಕೆಳವರ್ಗದ ಜನರನ್ನು ಧಮನಿಸಲು ಸಾಧ್ಯವಾಗಲಾರದು ಎಂದಿದ್ದಾರೆ. ನವಭಾರತದ ಆಗಮನಕ್ಕಾಗಿ ಹಂಬಲಿಸುತ್ತಾ ಭಾರತ ಮಾತೆ ಎದ್ದು ಬರಲಿ, ಬಡ ರೈತರಿಗೆ ಗುಡಿಸಲುಗಳಿಂದ, ಮೀನುಗಾರರ ಜೋಪಡಿಗಳಿಂದ, ಸಮಗಾರರು ಮತ್ತು ಕಸಗುಡಿಸುವವರ ಕೇರಿಗಳಿಂದ, ಕಾರ್ಖಾನೆಗಳಿಂದ, ಮಾರಾಟದ ಮಳಿಗೆಗಳಿಂದ ಮೂಡಿಬರಲಿ ಎಂದು ಅವರು ಹಾರೈಸುತ್ತಾರೆ. ಸ್ವಾಮಿ ವಿವೇಕಾನಂದರ ಈ ಕೆಲವು ವಿಚಾರಗಳು ಅವರ ಬಗ್ಗೆ ಗೌರವವನ್ನು ಹೆಚ್ಚಿಸುತ್ತದೆ.

**ಪಠ್ಯಕ್ರಮದ ಬಗ್ಗೆ ಸ್ವಾಮಿವಿವೇಕಾನಂದರ ಚಿಂತನೆಗಳು**

ಸ್ವಾಮಿ ವಿವೇಕಾನಂದರು ಭಾರತದ ಹಿಂದಿನ ಮತ್ತು ಇಂದಿನ ಜೀವನದ ಎಲ್ಲಾ ಸಮಸ್ಯೆಗಳಿಗೂ ಸೇತುವೆಯಾಗಿ ಆಧುನಿಕ ಮಾರ್ಗದ ದಾರಿಯನ್ನು ತೋರಿಸಿದವರು. ಇವರು ಕೇವಲ ಆಧ್ಯಾತ್ಮಿಕ ವಿಷಯಗಳಿಗೆ ಅಷ್ಟೇ ಮಹತ್ವ ನೀಡದೆ ಪ್ರಾಯೋಗಿಕ ವಿಷಯಗಳಿಗೂ ಸಹ

ಮಹತ್ವವನ್ನು ನೀಡಿದ್ದಾರೆ. ಜೊತೆಗೆ ಪಾಶ್ಚಿಮಾತ್ಯ ರೀತಿಯಲ್ಲಿ ತಾಂತ್ರಿಕ ಶಿಕ್ಷಣವನ್ನು ಸಹ ಅಳವಡಿಸಿಕೊಳ್ಳಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ವಿಜ್ಞಾನ ಮತ್ತು ವೇದಾಂತ ವಿಷಯಗಳ ಮಧ್ಯೆ ಸಮನ್ವಯವನ್ನು ಸಾಧಿಸಬೇಕು ಎಂದಿದ್ದಾರೆ. ಏಕೆಂದರೆ ಕಾರ್ಖಾನೆಗಳು ಮತ್ತು ಉದ್ದಿಮೆಗಳು ದುಷ್ಪರಿಣಾಮದ ಗಾಳಿಯನ್ನು ಬೀರುವಂತಹವುಗಳಾಗಿದ್ದು, ಅವುಗಳನ್ನು ಸರಿಯಾದ ದಾರಿಯಲ್ಲಿ ತರುವಂತಹ ಶಿಕ್ಷಣವನ್ನು ಮಕ್ಕಳಿಗೆ ನೀಡಬೇಕು ಎಂದಿದ್ದಾರೆ, ಅದಕ್ಕಾಗಿ ಅವರು ಸೂಚಿಸಿರುವಂತಹ ಪಠ್ಯಕ್ರಮ ಈ ರೀತಿಯಾಗಿದೆ.

"ವಿದ್ಯಾರ್ಥಿಗಳು ತಮ್ಮ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಕಲಿಯುವುದು ಅವಶ್ಯಕ. ಇದಕ್ಕಾಗಿ ಇತಿಹಾಸ, ಕಾವ್ಯ, ಭಾಷೆ, ಮಹಾತ್ಮರ ಚರಿತ್ರೆ, ವೇದಾಂತ, ರಾಮಾಯಣ ಮತ್ತು ಮಹಾಭಾರತದ ಮೂಲಕ ಕಲಿಸಬೇಕು ಎಂದಿದ್ದಾರೆ".[೨೦] ಏಕೆಂದರೆ ನಮ್ಮ ದೇಶದ ಪ್ರಾಚೀನ ಚರಿತ್ರೆಯನ್ನು ಮಕ್ಕಳಿಗೆ ತಿಳಿಸುವುದು ಸೂಕ್ತವೆಂದು ಅವರು ನಂಬಿದ್ದರು. ನಮ್ಮ ಪ್ರಾಚೀನತೆ ಎಷ್ಟಿದೆ, ನಮ್ಮಲ್ಲಿರುವ ಮಹಾನ್ ಗ್ರಂಥಗಳ ಸಾರ ವಿಶ್ವ ಸಂದೇಶವನ್ನು ಸಾರುವ ಅಂಶಗಳಿಂದ ತುಂಬಿದೆ ಎಂಬುದನ್ನು ಅವರು ಓದಿ ಅರ್ಥೈಸಿಕೊಂಡಿದ್ದರು. ಆದ್ದರಿಂದ ಇಂತಹ ಸಂಪದ್ಭರಿತ ವಿಷಯಗಳನ್ನು ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಯನ್ನು ತಿಳಿಸಬೇಕು ಎಂಬುದು ಅವರ ಅಭಿಮತವಾಗಿತ್ತು. ಇದರ ಜೊತೆಯಲ್ಲಿ ಆಧುನಿಕ ವಿಜ್ಞಾನದ ವಿವಿಧ ವಿಷಯಗಳನ್ನು ಕಲಿಸಬೇಕು ಎಂದಿದ್ದಾರೆ, ವಿಜ್ಞಾನ ಮತ್ತು ತಂತ್ರಜ್ಞಾನವನ್ನು ನೀಡುವಾಗ ಪಾಶ್ಚಿಮಾತ್ಯ ಮತ್ತು ಪೂರ್ವದ ರಾಷ್ಟ್ರಗಳ ತತ್ವಗಳನ್ನು ಮಿಶ್ರಣ ಮಾಡಿ ಕಲಿಸಬೇಕು ಎಂದಿದ್ದಾರೆ ಪಾಶ್ಚಿಮಾತ್ಯ ರಾಷ್ಟ್ರಗಳ ಜ್ಞಾನವನ್ನು ನಾವು ಪಡೆದುಕೊಳ್ಳಬೇಕಾದರೆ ಇಂಗ್ಲಿಷ್ ಭಾಷೆಯನ್ನು ಕಲಿಸಬೇಕು ಎಂದು ಮನವರಿಕೆ ಮಾಡಿಕೊಟ್ಟಿದ್ದಾರೆ. ವಾಣಿಜ್ಯಶಾಸ್ತ್ರ, ಮನಶಾಸ್ತ್ರ, ವ್ಯಾಕರಣ, ಅರ್ಥಶಾಸ್ತ್ರ, ಹೊಲಿಗೆ, ಅಡುಗೆ, ಶಿಶುಪಾಲನೆ, ಕರಕುಶಲ ಕಲೆ ಮುಂತಾದ ಎಲ್ಲಾ ವಿಷಯಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಬೇಕೆಂಬುದು ಇವರ ಚಿಂತನೆಯಾಗಿತ್ತು. ಒಟ್ಟಾರೆಯಾಗಿ ಹೇಳುವುದಾದರೆ ಸ್ವಾಮಿ ವಿವೇಕಾನಂದರವರ ದೂರದೃಷ್ಟಿಯು ಅತ್ಯುತ್ತಮವಾಗಿತ್ತು. ಏಕೆಂದರೆ ನಮ್ಮ ದೇಶದ ಸಂಸ್ಕೃತಿಯನ್ನು ಮತ್ತು ಪಾಶ್ಚಿಮಾತ್ಯ ದೇಶದ ವಿಜ್ಞಾನ ತಂತ್ರಜ್ಞಾನ ಎರಡಕ್ಕೂ ಅವರು ಸಮಾನವಾದಂತಹ ಆದ್ಯತೆಯನ್ನು ನೀಡಿದ್ದಾರೆ. ಇದರಿಂದ ಇವರ ಚಿಂತನೆ ಇತರ ಚಿಂತಕರಿಗಿಂತಲೂ ತುಂಬ ವಿಭಿನ್ನವಾಗಿದೆ ಎಂದರೆ ತಪ್ಪಾಗಲಾರದು. ಪ್ರಸ್ತುತ ಶಿಕ್ಷಣದಲ್ಲಿ ಬೇಕಾಗಿರುವುದು ಇದೇ ರೀತಿಯಾದಂತಹ ಪಠ್ಯಕ್ರಮವೆಂದು ಕಾಣಬರುತ್ತದೆ. ಏಕೆಂದರೆ ಭಾರತ ಸಂಸ್ಕೃತಿಯು ನಶಿಸಿ ಹೋಗುತ್ತಿರುವಾಗ ಅದನ್ನು ಉಳಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

### ೪.೨.೫. ಮಹಾತ್ಮ ಗಾಂಧೀಜಿ

ಮಹಾತ್ಮ ಗಾಂಧೀಜಿಯವರು ಒಬ್ಬ ಉತ್ಕೃಷ್ಟ ರಾಜನೀತಿಜ್ಞ, ಸಮಾಜ ಸುಧಾರಕ. ಎಲ್ಲಕ್ಕಿಂತ ಹೆಚ್ಚಾಗಿ ಸರ್ವಶ್ರೇಷ್ಠ ಶಿಕ್ಷಕ ಮತ್ತು ಶಿಕ್ಷಣ ತಜ್ಞ, ರಾಜಕೀಯ ಮತ್ತು ಸಮಾಜ ಸುಧಾರಣೆಗಾಗಿ ನೀಡಿದ ಕೊಡುಗೆಗಿಂತಲೂ ಶಿಕ್ಷಣಕ್ಕಾಗಿ ಅವರು ಕೊಟ್ಟಿರುವ ಕೊಡುಗೆಗಳನ್ನು

ನೋಡಿದರೆ ಆಶ್ಚರ್ಯವೆಂದೆನ್ನಿಸುತ್ತದೆ. ಭಾರತದ ಶಿಕ್ಷಣ ರಂಗ ದಿಗಂತದಲ್ಲಿ ಧ್ರುವತಾರೆಯಂತೆ ಕಂಗೊಳಿಸುವ ಗಾಂಧಿ ದೀನ, ದುರ್ಬಲರ ಹಾಗೂ ರಾಷ್ಟ್ರದ ಏಳ್ಗೆಗಾಗಿ ದುಡಿದಂತಹವರು. ಇಂತಹ ವ್ಯಕ್ತಿ ರಾಷ್ಟ್ರಪಿತನೆಂದು ಖ್ಯಾತಿಗಳಿಸಿ ರಾಮರಾಜ್ಯದ ಕನಸನ್ನು ಕಂಡು ನನಸುಗೊಳಿಸಲು ಹಗಲಿರುಳು ದುಡಿದವರು. ಗಾಂಧೀಜಿ ಕ್ರಿ.ಶ. ೧೮೬೯ ಅಕ್ಟೋಬರ್ ೨ ರಂದು ಗುಜರಾತಿನ ಪೋರಬಂದರಿನಲ್ಲಿ ಜನಿಸಿದರು. ಇವರ ಮೂಲ ಹೆಸರು ಮೋಹನದಾಸ ತಂದೆ ಕರಮಚಂದ ಗಾಂಧಿ; ತಾಯಿ ಪುತಲಿಬಾಯಿ, ಬಾಲ್ಯದಲ್ಲಿ ತಾಯಿಯಿಂದ ಒಳ್ಳೆಯ ಸದ್ಗುಣಗಳನ್ನು, ದೈವತಾಭಾವನೆಯನ್ನು ಬೆಳೆಸಿಕೊಂಡರು. ಹದಿನೇಳನೇ ವರ್ಷದವರಿದ್ದಾಗ ಅವರು ಬ್ಯಾರಿಸ್ಟರ್ ಪದವಿಯನ್ನು ಪಡೆಯಲು ಇಂಗ್ಲೆಂಡಿಗೆ ಹೋದರು. ನಂತರ ಭಾರತಕ್ಕೆ ಬಂದು ವಕೀಲಿ ವೃತ್ತಿಯನ್ನು ಮಾಡತೊಡಗಿದರು. ಈ ಸಮಯದಲ್ಲಿ ದಕ್ಷಿಣ ಆಫ್ರಿಕಾಕ್ಕೆ ಭಾರತೀಯನ ದಾವೆ ನಡೆಸಲು ಹೋದರು. ಆಗ ದಕ್ಷಿಣ ಆಫ್ರಿಕದಲ್ಲಿಯ ಭಾರತೀಯರ ಜೀವನವು ಕರುಣಾಜನಕವಾಗಿತ್ತು. ಅದು ಗಾಂಧೀಜಿಯವರ ಜೀವನದ ಗತಿಯನ್ನೇ ಬದಲಾಯಿಸಿತು. ಸತ್ಯ ಅಹಿಂಸೆ ಸೂತ್ರಗಳ ಮೂಲಕ ಆ ಎಲ್ಲ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯಲು ಅವರು ಪ್ರಯತ್ನಿಸಿದರು.

**ಪಠ್ಯಕ್ರಮದ ಬಗ್ಗೆ ಮಹಾತ್ಮ ಗಾಂಧೀಜಿಯವರ ಚಿಂತನೆಗಳು**

ಮಹಾತ್ಮ ಗಾಂಧೀಜಿಯವರು ಮಕ್ಕಳಲ್ಲಿರುವ ಪರಿಸರ ಬುದ್ಧಿಶಕ್ತಿ, ವಿಚಾರಶಕ್ತಿಗಳಿಗೆ ತಕ್ಕಂತೆ ಪಠ್ಯಕ್ರಮಗಳನ್ನು ರಚಿಸಬೇಕು. ಅವರು ಏಳು ವರ್ಷದಿಂದ ಹದಿನಾಲ್ಕು ವರ್ಷದ ವಯಸ್ಸಿನ ಮಕ್ಕಳಿಗೆ ಸಾರ್ವತ್ರಿಕವಾಗಿ, ಉಚಿತವಾಗಿ ಪ್ರಾಥಮಿಕ ಶಿಕ್ಷಣವನ್ನು ಕೊಡಬೇಕೆಂದರು. ಶಿಕ್ಷಣವು ಶಿಶುಕೇಂದ್ರಿತ, ಜೀವನಕೇಂದ್ರಿತ, ಚಟುವಟಿಕೆ ಆಧಾರಿತ, ಸಾಮಾಜಿಕ ಬದುಕು ಆಧಾರಿತ, ಉತ್ಪಾದನಾಧಾರಿತ ಜೀವಂತ ಪಠ್ಯಕ್ರಮವನ್ನು ಹೊಂದಿರಬೇಕು ಎಂದು ಸಲಹೆ ಮಾಡಿದರು. ಮೂಲಶಿಕ್ಷಣವು ಚಟುವಟಿಕೆಯಾಧಾರಿತವಾಗಿದ್ದು ಮಾತೃಭಾಷೆಯಲ್ಲಿಯೇ ಕಲಿಸಬೇಕೆಂದಿದ್ದಾರೆ. ತಮ್ಮ ಆತ್ಮಕಥನದಲ್ಲಿ ಅಕ್ಷರ ಶಿಕ್ಷಣಕ್ಕೆ ನಾವು ಹೆಚ್ಚೆಂದರೆ ಮೂರು ಗಂಟೆ ವಿನಿಯೋಗಿಸುತ್ತಿದ್ದವು. ಹಿಂದಿ, ತಮಿಳು, ಗುಜರಾತಿ, ಮತ್ತು ಉರ್ದು ಭಾಷೆಗಳನ್ನು ಹೇಳಿಕೊಡುತ್ತಿದ್ದವು. ಬಾಲಕರಿಗೆಲ್ಲ ಅವರವರ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಕೊಡುತ್ತಿದ್ದೆವು. ಇಂಗ್ಲಿಷನ್ನು ಸಹ ಕಲಿಸಲಾಗುತ್ತಿತ್ತು ಎಂದು ಹೇಳಿಕೊಂಡಿದ್ದಾರೆ. "ಇದರ ಜೊತೆಯಲ್ಲಿ ವಿದ್ಯಾರ್ಥಿಗಳಿಗೆ ಚರಿತ್ರೆ ಭೂಗೋಳ ಮತ್ತು ಗಣಿತದ ವಿಷಯಗಳನ್ನು ಪ್ರಾಥಮಿಕ ಶಿಕ್ಷಣದಲ್ಲಿ ಕೊಡುವುದು ಅವಶ್ಯಕವೆಂದು ಹೇಳಿದ್ದಾರೆ."[೨] ಇದಲ್ಲದೆ ಮೂಲ ಉದ್ಯೋಗ, ಗಣಿತ, ಸಾಮಾಜಿಕ ಅಭ್ಯಾಸ, ಸಾಮಾನ್ಯ ವಿಜ್ಞಾನ, ಕಲೆ, ಸಂಗೀತ, ಗೃಹವಿಜ್ಞಾನ, ಶಾರೀರಿಕ ಶಿಕ್ಷಣ ಇತ್ಯಾದಿ ವಿಷಯಗಳು ಪಠ್ಯಕ್ರಮದಲ್ಲಿರಬೇಕು ಎಂದು ಅವರು ಸೂಚಿಸಿದ್ದಾರೆ. ಒಟ್ಟಾರೆಯಾಗಿ ಗಾಂಧೀಜಿಯವರು ಜೀವನ ಶಾಶ್ವತ ಮೌಲ್ಯಗಳನ್ನಾಧರಿಸಿದ ಪಠ್ಯವಸ್ತುವನ್ನು ಪ್ರತಿಪಾದಿಸಿ ಅದರಲ್ಲಿ ನೀತಿ, ಧರ್ಮ, ಆಧ್ಯಾತ್ಮಿಕ, ಸಂಸ್ಕೃತಿ ಮುಂತಾದ ಮಾನವೀಯ ಶಾಸ್ತ್ರಗಳ ಅಧ್ಯಯನಕ್ಕೆ ಮಹತ್ವವನ್ನು ಪಠ್ಯಕ್ರಮದಲ್ಲಿ ತಿಳಿಸಿದ್ದಾರೆ.

## ೪.೨.೬. ಅರವಿಂದ ಘೋಷ್

ಅರವಿಂದ ಘೋಷರು ಭಾರತದ ಅಗ್ರಗಣ್ಯ ದಾರ್ಶನಿಕರು, ಶಿಕ್ಷಣತಜ್ಞರು, ಕವಿ ರಾಷ್ಟ್ರಭಕ್ತ, ಎಲ್ಲಕ್ಕೂ ಹೆಚ್ಚಾಗಿ ಆಧ್ಯಾತ್ಮಜೀವಿ. ಇಂದಿಗೂ ಕೂಡ ಅಸ್ತಿತ್ವದಲ್ಲಿರುವ ಪಾಂಡಿಚೇರಿ ಆಶ್ರಮವು ಅವರ ಮೇಧಾವಿತನದ ಸಂಕೇತ ಅರವಿಂದರ ಆಧ್ಯಾತ್ಮಿಕ ಚಿಂತನೆಯ ಒಳನೋಟವನ್ನು ಅವರ ಅಂತರರಾಷ್ಟ್ರೀಯ ತಿಳುವಳಿಕೆಯನ್ನು ಅದು ಸಾದರಪಡಿಸುತ್ತದೆ. ಅರವಿಂದರು ವ್ಯಕ್ತಿಯಾಗಿ ಸಮೂಹಕ್ಕಾಗಿ ತಾರ್ಕಿಕ ಜೀವಿಯಾಗಿ ಹಾಗೂ ಆಧ್ಯಾತ್ಮಿಕ ಪುರುಷನಾಗಿ ಮೆರೆದ ಬದುಕು ತುಂಬಾ ಅಪೂರ್ವವಾದದ್ದು. ಇಂತಹ ಘನ ವ್ಯಕ್ತಿತ್ವ ಹೊಂದಿರುವ ಇವರು ಕ್ರಿ.ಶ. ೧೮೭೨ರ ಆಗಸ್ಟ್ ೧೫ರಂದು ಬಂಗಾಳದ ಕಲ್ಕತ್ತದಲ್ಲಿ ಜನಿಸಿದರು. ತಂದೆ ಕೃಷ್ಣಧನಘೋಷ್ ಹಾಗೂ ತಾಯಿ ಸ್ವರ್ಣಲತಾದೇವಿ. ಇಂಗ್ಲೆಂಡಿನ ಪ್ರಖ್ಯಾತ ಮಹಾವಿದ್ಯಾಲಯದಲ್ಲಿ ಉಚ್ಚಶಿಕ್ಷಣ ಪಡೆದುಕೊಂಡು ೧೮೯೦ರಲ್ಲಿ ತೇರ್ಗಡೆಯಾದರು. ಮುಂದೆ ಬ್ರಿಟಿಷ್ ಸರ್ಕಾರದಲ್ಲಿ ೧೩ ವರ್ಷಗಳ ಕಾಲ ಉನ್ನತ ಹುದ್ದೆಯಲ್ಲಿ ಸೇವೆ ಸಲ್ಲಿಸಿದರು. ಆದರೆ ೧೯೦೫ರ ಬಂಗಾಳ ವಿಭಜನೆಯು ಇವರ ಮೇಲೆ ತುಂಬಾ ಪ್ರಭಾವ ಬೀರಿತು. ಅಲ್ಲಿಗೆ ತಮ್ಮ ವೃತ್ತಿಗೆ ರಾಜೀನಾಮೆ ನೀಡಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ 'ವಂದೇ ಮಾತರಂ' ಪತ್ರಿಕೆಯನ್ನು ಪ್ರಾರಂಭಿಸಿದರು. ಇವರು ಉಗ್ರಗಾಮಿ ಪಂಥದ ಮುಂಚೂಣಿಯಲ್ಲಿ ನಿಂತವರು. ಕಾಂಗ್ರೆಸ್ಸಿನ ಪಾಳೆಯದಲ್ಲೂ ಆಂಗ್ಲರ ದರ್ಬಾರಿನಲ್ಲೂ ಬಿರುಗಾಳಿಯನ್ನು ಎಬ್ಬಿಸಿದಂತಹವರು. ಆದರೆ ಬ್ರಿಟಿಷರಿಂದ ಬಂಧಿತರಾದ ಇವರು ಅಲ್ಲಿ ತಮ್ಮ ಮನಃ ಪರಿವರ್ತನೆಯಾಗಿ ಆಧ್ಯಾತ್ಮದ ಕಡೆ ಚಿಂತಿಸತೊಡಗಿದರು. ಈ ದಿಸೆಯಲ್ಲಿ ಸಾಧನೆಯ ಹಂಬಲದಿಂದ ಪಾಂಡಿಚೆರಿಗೆ ೧೯೧೦ರಲ್ಲಿ ಬಂದು ನೆಲೆಸಿದರು.

### ಪಠ್ಯಕ್ರಮದ ಬಗ್ಗೆ ಅರವಿಂದರ ಚಿಂತನೆಗಳು

ಅರವಿಂದ ಘೋಷ್‌ರವರ ಅಂತಾರಾಷ್ಟ್ರೀಯ ಶಿಕ್ಷಣ ಕೇಂದ್ರದಲ್ಲಿ ವಿದ್ಯಾರ್ಥಿಗಳ ಸಮಗ್ರ ಬೆಳವಣಿಗೆಗೆ ಅವಶ್ಯಕವೆನಿಸುವ ಎಲ್ಲಾ ವಿಷಯಗಳನ್ನು ಕಲಿಸಲಾಗುತ್ತಿತ್ತು. ಅಲ್ಲದೆ ದೈಹಿಕ, ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಂಗತಿಗಳೆಲ್ಲವನ್ನು ಇವರ ಶಿಕ್ಷಣ ಕೇಂದ್ರಗಳಲ್ಲಿ ಕಲಿಸಲಾಗುತ್ತಿತ್ತು. ಪ್ರಾಥಮಿಕ ಹಂತದಲ್ಲಿ ಮಾತೃಭಾಷೆ ಶಿಕ್ಷಣದ ಮಾಧ್ಯಮವಾಗಿರಬೇಕು. ಪಠ್ಯವಸ್ತು ಕಠಿಣವಾಗಿರಬಾರದು, ಮನುಷ್ಯನ ಸ್ವಭಾವಕ್ಕನುಗುಣವಾಗಿ ಪಠ್ಯವಸ್ತುವಿರಬೇಕು. ಅದು ಒಂದೇ ತೆರನಾಗಿರದೇ ವಿಭಿನ್ನ ಮಕ್ಕಳಿಗೆ ವಿಭಿನ್ನವಾಗಿರಬೇಕು. ಪಠ್ಯ ವಸ್ತುವಿನಲ್ಲಿ ನೈತಿಕ ಮತ್ತು ಧಾರ್ಮಿಕ ಶಿಕ್ಷಣವನ್ನು ಕೊಡುವುದರ ಮೂಲಕ ಸರಿಯಾದ ಹವ್ಯಾಸಗಳನ್ನು ಮತ್ತು ಅಭಿರುಚಿಯ ಸೂಕ್ಷ್ಮತೆಯ ಸಂವೇಗಾತ್ಮಕತೆಯನ್ನು ಬೆಳೆಸುವಂತಿರಬೇಕು. ಆಧುನಿಕ ಅಥವಾ ಪಾಶ್ಚಿಮಾತ್ಯರ ಶಿಕ್ಷಣತಜ್ಞರ ಚಿಂತನೆಗೂ ಪಠ್ಯವಸ್ತುವಿನಲ್ಲಿ ಸ್ಥಾನ ಕಲ್ಪಿಸಿಕೊಡಬೇಕು ಎಂಬುದಾಗಿತ್ತು. ಏಕೆಂದರೆ ಕೇವಲ ಭಾರತೀಯ ಸಂಸ್ಕೃತಿ ನೆಲ, ಜಲ, ಪರಿಸರಕ್ಕೆ ಸಂಬಂಧಿಸಿದಂತೆ ಚಿಂತನೆ ನಡೆಸಿ ಪಠ್ಯಕ್ರಮವನ್ನು ರಚಿಸಬಾರದು. ಪಾಶ್ಚಿಮಾತ್ಯರು ಆಲೋಚಿಸಬಹುದಾದ ವಿಭಿನ್ನ ರೀತಿಯ ಪಠ್ಯಕ್ರಮಕ್ಕೆ ಆದ್ಯತೆ ನೀಡಬೇಕು ಎಂದಿದ್ದಾರೆ.[೨೩] ಇದಲ್ಲದೆ ವಿದ್ಯಾರ್ಥಿಗಳು ಕಲೆ, ಕಾವ್ಯಗಾಯನ, ಸಂಗೀತ, ನಾಟಕ, ಫೋಟೋಗ್ರಾಫಿ, ಕರಕುಶಲ ಕೆಲಸ ಮತ್ತು ನೃತ್ಯಗಳು, ಇವುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತಿರಬೇಕು. ಈ ಎಲ್ಲಾ ವಿಷಯಗಳ ಜೊತೆಗೆ ಶರೀರ

ಶಾಸ್ತ್ರ, ನೈಸರ್ಗಿಕ ಅಧ್ಯಯನ, ಆತ್ಮಸಂಯಮದ ವಿಷಯ ಚಟುವಟಿಕೆಗಳನ್ನು ಪಠ್ಯಕ್ರಮದಲ್ಲಿ ಸೇರಿಸಲು ಇಚ್ಚಿಸಿದರು. ಸತ್ಯ ಮತ್ತು ವಸ್ತುನಿಷ್ಠ ಜ್ಞಾನವನ್ನು ಪತ್ತೆಹಚ್ಚುವ ಶೋಧನ ಮನೋಭೂಮಿಕೆಯನ್ನು ಪಠ್ಯಕ್ರಮವು ಬೆಳೆಸುವಂತಿರಬೇಕು. ಅಲ್ಲದೆ ಆತ್ಮ ಹಾಗೂ ಮನಸ್ಸುಗಳನ್ನು ಅಭ್ಯಸಿಸುವುದರಿಂದ ಮನೋವಿಜ್ಞಾನದ ಅಭ್ಯಾಸವನ್ನು ಅವರು ಅನುಮೋದಿಸಿದ್ದರು. ಆದರೆ ಅಂತರರಾಷ್ಟ್ರೀಯ ಶಿಕ್ಷಣ ನೀಡುವಲ್ಲಿ ಅದು ಸೇರ್ಪಡೆಗೊಂಡಿರುವುದು ಕಂಡು ಬರುತ್ತದೆ. ಏಕೆಂದರೆ ಸಾಹಿತ್ಯ ಶಿಕ್ಷಣವನ್ನು ನೀಡಿದಾಗ ಅದು ಚರಿತ್ರೆಯ ಒಂದು ಭಾಗವಾಗಿ ಕಂಡು ಬರುತ್ತದೆ.

### ೪.೨.೭. ಪೆರಿಯಾರ್

ಪೆರಿಯಾರ್ ರಾಮಸ್ವಾಮಿಯವರು ಅಚ್ಚ ಕನ್ನಡಿಗರು. ದ್ರಾವಿಡ ನಾಡಿನ ಚರಿತ್ರೆಯಲ್ಲಿ ಅವಿರತ ಸೇವೆಯಿಂದ ತಮಿಳು ಹಾಗೂ ದ್ರಾವಿಡ ಹಿಂದುಳಿದವರ ಬಗ್ಗೆ ಹೆಚ್ಚು ಆಸಕ್ತಿ ವಹಿಸಿ ಅವರ ಜೀವನವನ್ನು ನಾಗರಿಕಗೊಳಿಸಿದವರು. ಇಂತಹ ಪೆರಿಯಾರರು ವೆಂಕಟಪ್ಪನಾಯಕ ಮತ್ತು ಚಿನ್ನತಾಯಮ್ಮನವರ ಮಗನಾಗಿ ೧೭-೯-೧೮೭೯ರಂದು ತಮಿಳುನಾಡಿನ ಸೇಲಂನ ಈರೋಡು ಎಂಬಲ್ಲಿ ಜನಿಸಿದರು. ಇವರಿಗೆ ಬಾಲ್ಯದಲ್ಲಿ ರಾಮಸ್ವಾಮಿ ಎಂದು ನಾಮಕರಣ ಮಾಡಲಾಯಿತು. ರಾಮಸ್ವಾಮಿಯವರು ತಮ್ಮ ಚಿಕ್ಕಮ್ಮನ ಆಶ್ರಯದಲ್ಲಿ ಬೆಳೆದರು. ಅವರ ಚಿಕ್ಕಮ್ಮ ಅಷ್ಟೇನು ಶ್ರೀಮಂತಳಾಗಿರಲಿಲ್ಲ; ಆದರೆ ದತ್ತು ಪಡೆದುಕೊಂಡು ಸಾಕಿದರು. ಇವರು ವಿಶ್ವವಿದ್ಯಾನಿಲಯದವರೆಗೆ ಓದಿದವರಲ್ಲ. ಮಾಧ್ಯಮಿಕ ಶಿಕ್ಷಣವನ್ನು ಪೂರ್ಣಗೊಳಿಸಿದವರೂ ಅಲ್ಲ, ಇವರು ಕಲಿತದ್ದು ಕೇವಲ ಐದು ವರ್ಷ. ಅದರಲ್ಲಿ ಮೂರು ವರ್ಷ ಜಗುಲಿಯ ಮೇಲೆ ನಡೆಸುವ ಶಾಲೆಯಲ್ಲಿ ಉಳಿದ ಎರಡು ವರ್ಷ ಇಂಗ್ಲಿಷ್ ಪದ್ಧತಿಯಂತೆ "ಆದರೆ ಇವರು ಯಾವುದೇ ಪುರಾಣ, ಇತಿಹಾಸವನ್ನು ಓದದೇ ಹೋದರೂ ಹರಿ-ಹರ ಪಂಥಗಳಿಗೆ ಸಂಬಂಧಿಸಿದ ಕಥಾ ಕಾಲಕ್ಷೇಪದಲ್ಲಿ ಪ್ರಾವೀಣ್ಯತೆ ಪಡೆದಿದ್ದ ವಿಚಕ್ಷಣ ಪಂಡಿತರು. ಭಾಗವಂತರುಗಳು ನಮ್ಮ ಮನೆಯಲ್ಲಿ ಸರ್ವಥಾ ತಂಗಿಕೊಳ್ಳುತ್ತಾ ಇದ್ದುದರಿಂದ ಆಯಾ ಪಂಥಗಳ ಪುರಾಣ ಇತಿಹಾಸಗಳ ಬಗ್ಗೆ ಹೆಚ್ಚಿನ ತಿಳುವಳಿಕೆಯನ್ನು ಪಡೆಯುವುದು ನನಗೆ ಸುಲಭವಾಗಿತ್ತು"[೨೪] ಎಂದು ಹೇಳಿಕೊಂಡಿದ್ದಾರೆ. ಇದರಿಂದಾಗಿ ಅವರು ಎಳೆಯ ವಯಸ್ಸಿನಲ್ಲಿಯೇ ಪುರಾಣ ಇತಿಹಾಸಗಳ ಬಗ್ಗೆ ವಿವೇಕಯುತವಾದ ಪ್ರಶ್ನೆಗಳನ್ನು ಕೇಳುವುದಕ್ಕೆ ಸಾಧ್ಯವಾಯಿತು ಎಂದಿದ್ದಾರೆ.

ಚೆನ್ನೈನಲ್ಲಿ ಮಹಿಳೆಯರಿಂದಲೇ ವಿಶೇಷವಾದ ಮಹಾಧಿವೇಶನವೊಂದನ್ನು ದಿನಾಂಕ: ೧೧-೧೩-೧೯೩೮ ರಂದು ಕರೆಯಲಾಯಿತು. ಇದು ದ್ರಾವಿಡ ನಾಡಿನಲ್ಲಿಯೇ ಪ್ರಥಮ ಅಧಿವೇಶನವೆಂತಲೂ ಪ್ರಸಿದ್ಧವಾಯಿತು. ಇಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಮಹಿಳೆಯರು ಸೇರಿದ್ದರು, ಈ ಸಮ್ಮೇಳನದ ಅಧ್ಯಕ್ಷತೆಯನ್ನು ನೀಲಾಂಬಿಕೆ ಅಮ್ಮೈರವರು ವಹಿಸಿದ್ದರು. ಈ ಸಮ್ಮೇಳನದ ಭಾಷಣದಲ್ಲಿ ಡಾ. ಮೂವಲೂರ್ ರಾಮಾಮೃತ ಅಮ್ಮೈರವರು. "ನಾಡಿನ ಮಹಿಳಾ ಸಮಾಜದ ಏಳಿಗೆಗಾಗಿ ಮಾನ್ಯರಾದ ರಾಮಸ್ವಾಮಿಯವರು ಬಹಳಷ್ಟು ದುಡಿದಿದ್ದಾರೆ. ಸ್ತ್ರೀ ಸಮಾಜಕ್ಕೆ ಅವರು ನೀಡಿದಂಥ ಸಂದೇಶಗಳು, ಮಾಡಿದಂತಹ ಸೇವೆಗಳನ್ನು ಗೌರವದಿಂದ ಮನ್ನಿಸಿ

ಇಂದಿನಿಂದ 'ಪೆರಿಯಾರ್' ಅವರನ್ನು 'ಹಿರಿಯವರು' ಎಂದು ಕರೆಯಬೇಕೆಂದರು."[೨೫] ಈ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದ ಎಲ್ಲಾ ಮಹಿಳೆಯರೂ ಒಕ್ಕೊರಲಿನಿಂದ ಇವರ ನಿರ್ಣಯವನ್ನು ಮನ್ನಿಸಿ 'ಪೆರಿಯಾರ್ ದಾಳ್ಗ ದಾಳ್ಗ ಪೆರಿಯಾರ್‌ದಾಳ್ಗ ಪೆರಿಯಾರ್' ಪೆರಿಯಾರ್ ಬಾಳಲಿ ಎಂದು ಉದ್ಘೋಷಿಸಿದರು. ಅಂದಿನಿಂದ ಜೀವನದುದ್ದಕ್ಕೂ ಪೆರಿಯಾರ್ ಎಂದೇ ಖ್ಯಾತಿಯಾದರು.

**ಪಠ್ಯಕ್ರಮದ ಬಗ್ಗೆ ಪೆರಿಯಾರ್ ಅವರ ಚಿಂತನೆಗಳು**

ಪೆರಿಯಾರ್‌ರವರು ಶಿಕ್ಷಣದ ಬಗ್ಗೆಯಾಗಲಿ, ಪಠ್ಯಕ್ರಮದ ಬಗ್ಗೆಯಾಗಲಿ ನಿರ್ದಿಷ್ಟವಾಗಿ ಇದೇ ಇರಬೇಕು ಎಂದು ಹೇಳಲಿಲ್ಲ. ಆದರೆ ಅದು ಇದ್ದ ಪಠ್ಯಕ್ರಮದಲ್ಲಿ ಇಂತಹ ಕೆಲವು ವಿಷಯ ವಸ್ತುಗಳನ್ನು ಬದಲಾಯಿಸಬೇಕು ಎಂಬುದು ಅವರ ಅಭಿಪ್ರಾಯವಾಗಿತ್ತು. 'ಶೂದ್ರನು ಎಷ್ಟರಮಟ್ಟಿಗಾದರೂ ವಿದ್ಯೆಯಲ್ಲಿ ಪಾರಂಗತನಾದರೂ ಬ್ರಾಹ್ಮಣನಿಗೆ ಸಮನಾಗಲಾರನು ಎಂದು ಶಂಕರಾಚಾರ್ಯರು ಹೇಳಿದಾಗ ಕೇಂದ್ರ ಗೃಹಮಂತ್ರಿಗಳಾಗಿದ್ದ ಚವ್ಹಾಣ್ ಅವರು ಉದ್ರಿಕ್ತರಾಗಿದ್ದರು. ಕಾನೂನು ಕಾಯ್ದೆಗಳಿಂದ ಇದಕ್ಕೆ ಪರಿಹಾರವನ್ನು ಕಂಡು ಹಿಡಿಯಲಾಗುವುದಿಲ್ಲ ಎಂದಿದ್ದರು. ಆದರೆ ಪೆರಿಯಾರರು ತಮಿಳುನಾಡಿನ ಮಟ್ಟಿಗೆ ಇಲ್ಲಿ ಮೂಢನಂಬಿಕೆಗಳ ವಿನಾಶಕ್ಕಾಗಿ ಇಲಾಖೆ ಒಂದನ್ನೇ ತೆಗೆಯಬೇಕಾಗುತ್ತದೆ. "ಅದಕ್ಕಾಗಿ ಬದಲಾವಣೆಯಾಗಬೇಕಾದರೆ ಇಂದಿನ ತಿರುಕ್ಕುರಳ ಪಾಠಕ್ಕೆ ಬದಲಾಗಿ 'ಭಾರತಿದಾಸನ್' ಅವರ ಕವನಗಳನ್ನು ಪಠ್ಯಪುಸ್ತಕದಲ್ಲಿ ಸೇರ್ಪಡಿಸಬೇಕು. ಆಗ ಮುಂದಿನ ಇನ್ನೈದು ವರ್ಷದಲ್ಲಿ ಸಮಾಜಕ್ಕೆ ಕಿಂಚಿತ್ತು ಒಳ್ಳೆಯದನ್ನು ಮಾಡಿದಂತಾಗುತ್ತದೆ ಎಂದು ತಮ್ಮ ಸಂಪಾದಕೀಯದಲ್ಲಿ ಬರೆದಿದ್ದರು."[೨೬] ಅಂದರೆ ಕೇವಲ ಉನ್ನತ ವರ್ಗದ ಕವಿಗಳ ಕೃತಿ, ಕವನಗಳನ್ನು ಮಕ್ಕಳಿಗೆ ಪಠ್ಯದಲ್ಲಿ ಹೇಳುತ್ತಾ ಹೋದರೆ ಬಾನನ್ನು ಬದಲಾವಣೆ ಮಾಡಲಿಕ್ಕೆ ಸಾಧ್ಯವಿಲ್ಲ ಕೆಳಸಮುದಾಯದ ಕವಿಗಳು ಬರೆದ ಕವನ ಕೃತಿಗಳನ್ನು ಪಠ್ಯಪುಸ್ತಕದಲ್ಲಿ ಸೇರಿಸುವುದರ ಮೂಲಕ ಬದಲಾವಣೆ ಮಾಡಬಹುದು ಎಂಬುದು ಇವರ ಚಿಂತನೆಯಾಗಿತ್ತು.

**೪.೨.೮. ಡಾ. ಸರ್ವಪಲ್ಲಿ ರಾಧಾಕೃಷ್ಣನ್**

ರಾಧಾಕೃಷ್ಣನ್‌ರ ಪೂರ್ವಜರು ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯ ಸರ್ವಪಲ್ಲಿ ಗ್ರಾಮದವರು. ಅವರ ಊರ ಹೆಸರೇ ಅವರ ಮನೆತನದ ಹೆಸರಾಗಿ ಮಾರ್ಪಟ್ಟಿತ್ತು. ಸೀತಾರಾಮಯ್ಯ ಹಾಗೂ ಶ್ರೀಮತಿ ಕೊಂಡಮ್ಮನವರು ತಿರುತ್ತಣಿಗೆ ಬಂದು ನೆಲೆಸಿದರು. ಇವರು ವೀರಸ್ವಾಮಿಗೆ ಸೀತಮ್ಮ ಎಂಬುವರ ಜೊತೆಯಲ್ಲಿ ವಿವಾಹವನ್ನು ಮಾಡಿದರು. ಈ ದಂಪತಿಗಳಿಬ್ಬರು ಧಾರ್ಮಿಕ ಆಚರಣೆಗೆ ಕಟ್ಟು ಬಿದ್ದು ಬ್ರಾಹ್ಮಣರಾಗಿದ್ದರು. ಬಡತನ ಬೆನ್ನು ಹತ್ತಿದರೂ ನೀತಿ ನಿಯಮಗಳ ಆಚರಣೆಯೇ ಅವರ ಜೀವನದ ಮುಖ್ಯ ಗುರಿಯಾಗಿತ್ತು. ಕಷ್ಟ ಕಾರ್ಪಣ್ಯಗಳನ್ನು ಲೆಕ್ಕಿಸದ ಇಂತಹ ದಂಪತಿಗಳಿಗೆ ೫ನೇ ಸೆಪ್ಟೆಂಬರ್ ೧೮೮೮ ರಂದು ತಮಿಳುನಾಡಿನ ತಿರುತ್ತಣಿಯಲ್ಲಿ ಜನಿಸಿದವರು ರಾಧಾಕೃಷ್ಣನ್. ಇವರು ೧೯೧೦ರಲ್ಲಿ ತತ್ವಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಇಪ್ಪತ್ತು ವರ್ಷಗಳವರೆಗೆ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಇದೇ ಸಮಯದಲ್ಲಿ ಅವರು ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದರಿಂದಾಗಿ ಅವರು ಅನೇಕ ಅತ್ಯಮೂಲ್ಯ ಕೃತಿಗಳನ್ನು ಬರೆಯಲು ಸಾಧ್ಯವಾಯಿತು. ಮುಂದೆ ೧೯೨೯ರಲ್ಲಿ ಆಕ್ಸ್‌ಫರ್ಡ್

ವಿಶ್ವವಿದ್ಯಾಲಯದಲ್ಲಿ ತುಲನಾತ್ಮಕ ಧರ್ಮ ಮತ್ತು ತತ್ವಶಾಸ್ತ್ರದ ಪಾಧ್ಯಾಪಕರಾಗಿ ನೇಮಕಗೊಂಡರು. ೧೯೩೧ರಲ್ಲಿ ಆಂಧ್ರ ವಿಶ್ವವಿದ್ಯಾಲಯದ ಕುಲಪತಿ ನಂತರ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದರು. ೧೯೪೮ರಲ್ಲಿ ವಿಶ್ವವಿದ್ಯಾಲಯ ಶಿಕ್ಷಣ ಆಯೋಗದ ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿದರು. ಇದಲ್ಲದೆ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಮುಂದೆ ರಾಜಕೀಯದಲ್ಲಿ ಇವರು ಬಹು ಪ್ರಖ್ಯಾತಿಯನ್ನು ಪಡೆದುಕೊಂಡರು. ಭಾರತದ ಮೊದಲ ಉಪರಾಷ್ಟ್ರಪತಿ ಹಾಗೂ ದೇಶದ ಎರಡನೆಯ ರಾಷ್ಟ್ರಪತಿಯಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

### ಪಠ್ಯಕ್ರಮದ ಬಗ್ಗೆ ರಾಧಾಕೃಷ್ಣನ್ ಅವರ ಚಿಂತನೆಗಳು

ರಾಧಾಕೃಷ್ಣನ್ ಅವರು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವಲ್ಲಿ ಪಠ್ಯಕ್ರಮವು ಅತ್ಯುಪಯುಕ್ತವಾದುದು ಎಂದಿದ್ದಾರೆ. ಆದ್ದರಿಂದ ಪಠ್ಯಕ್ರಮವು ವೈಜ್ಞಾನಿಕ ಮತ್ತು ತಾಂತ್ರಿಕತೆಯ ಮನೋಭಾನೆಯನ್ನು ಬೆಳೆಸುವಂತೆ ಇರಬೇಕು ಎಂದಿದ್ದಾರೆ.[೨೨] ಇವರು ಪ್ರಾಥಮಿಕ ಹಂತದ ತರಗತಿಯ ಪಠ್ಯಕ್ರಮದ ಚಿಂತೆನೆಯನ್ನು ಎಲ್ಲಿಯೂ ಮಾಡಿಲ್ಲ. ಇವರು ವಿಶ್ವವಿದ್ಯಾಲಯ ಶಿಕ್ಷಣ ಆಯೋಗದ ಅಧ್ಯಕ್ಷರಾಗಿದ್ದಾಗ ಈ ಹಂತಕ್ಕೆ ಅಗತ್ಯವಾದಂತಹ ಪಠ್ಯಕ್ರಮದ ಬಗ್ಗೆ ಚಿಂತನೆ ನಡೆಸಿದ್ದಾರೆ. ಪ್ರಾಚೀನ ಭಾರತದ ಚರಿತ್ರೆಯ ಅಂಶಗಳನ್ನು ಕೈಬಿಡದೆ ಉಳಿಸಿಕೊಂಡು ಹೋಗಬೇಕು ಎಂಬುದು ಅವರ ಅಭಿಪ್ರಾಯವಾಗಿತ್ತು.

### ೪.೨.೯. ಡಾ. ಬಾಬಾಸಾಹೇಬ್ ಅಂಬೇಡ್ಕರ್

ಜಗತ್ತಿನ ಜನಾಂಗಗಳಲ್ಲಿಯೂ ಎಲ್ಲಿಯೂ ಇಲ್ಲದಷ್ಟು ಹೆಚ್ಚಿನ ಪ್ರಮಾಣದಲ್ಲಿ ಹಿಂದುಗಳಲ್ಲಿ 'ಅಸ್ಪೃಶ್ಯತೆ' ಬಳಕೆಯಲ್ಲಿದೆ. ಅದರಲ್ಲಿ ಹಿಂದೂ ಸಮಾಜದಲ್ಲಿ ಅಸ್ಪೃಶ್ಯರು ತಮಗಾಗುತ್ತಿರುವ ಅನ್ಯಾಯವನ್ನು ಸವರ್ಣೀಯರ ಅಮಾನುಷ ವರ್ತನೆಯನ್ನು ಪ್ರತಿಭಟಿಸಲು ಪ್ರಯತ್ನಿಸಿದರು. ಆಗ ಸಹಸ್ರ ವರ್ಷಗಳಿಂದ ಉಚ್ಛವರ್ಗದವರ ಕಾಲ್ತುಳಿತಕ್ಕೆ ಸಿಕ್ಕು ಬಳಲುತ್ತಿರುವ ದಲಿತರ ಧ್ವನಿಯನ್ನು ಕೇಳುವ ಹಾಗೂ ಅವರನ್ನು ಮೇಲೆತ್ತಿ ಅಪ್ಪಿಕೊಳ್ಳುವ ಅಂತಃಕರಣ ಹೃದಯದ ಅವಶ್ಯಕತೆಯಿತ್ತು. ಈ ಕೊರತೆಯನ್ನು ನೀಗಿಸಲು ದಲಿತರ ಪಾಲಿಗೆ ಸೂರ್ಯನಾಗಿ ಉದಯಿಸಿದವರು ಡಾ. ಭೀಮರಾವ್ ರಾಮಜಿ ಅಂಬೇಡ್ಕರ್. ಅಂಬೇಡ್ಕರ್ ಕ್ರಿ.ಶ. ೧೮೯೧ ಏಪ್ರಿಲ್ ೧೪ರಂದು ಮುಂಬೈ ಪ್ರಾಂತ್ಯದ ರತ್ನಗಿರಿ ಜಿಲ್ಲೆಯ ಅಂಬವಾಡೆ ಎಂಬ ಹಳ್ಳಿಯಲ್ಲಿ ರಾಮಜೀ ಸತ್ಪಾಲ್ ಹಾಗೂ ಭೀಮಬಾಯಿ ಎಂಬುವರ ಮಗನಾಗಿ ಜನಿಸಿದರು. ಮಹರ್ ಜಾತಿಯಲ್ಲಿ ಜನಿಸಿದ ಅಂಬೇಡ್ಕರ್ ಅವರು ಜೀವನದಲ್ಲಿ ಅಸ್ಪೃಶ್ಯತೆಯ ಘೋರತರವಾದ ಪರಿಣಾಮವನ್ನು ಎದುರಿಸಬೇಕಾಯಿತು. ಇದು ಅವರ ಶಾಲಾ ದಿನಗಳಲ್ಲಿ ಅವರ ಮನಸ್ಸಿನ ಮೇಲೆ ತುಂಬಾ ಪರಿಣಾಮವನ್ನು ಬೀರಿತು. ಜೀವನದಲ್ಲಿ ಅಪಾರ ಕಷ್ಟಗಳನ್ನು ಅನುಭವಿಸಿದ ಇವರು ಅಮೇರಿಕಾದಲ್ಲಿ ಪಿಎಚ್.ಡಿ ಪದವಿಯನ್ನು ಪಡೆದುಕೊಂಡರು. ಭಾರತದ ಸಂಪ್ರದಾಯದ ವಿರುದ್ಧ ಸಿಡಿದೆದ್ದ ಇವರು ೧೯೨೩ರಲ್ಲಿ ಬ್ಯಾರಿಸ್ಟರಾಗಿ ಸ್ವತಂತ್ರ ಜೀವನವನ್ನು ಪ್ರಾರಂಭಿಸಿದರು. ಸಾವಿರಾರು ವರ್ಷಗಳಿಂದ ಉಚ್ಚವರ್ಣಿಯರ ತುಳಿತಕ್ಕೆ ಸಿಕ್ಕು ಸ್ವಾಭಿಮಾನವನ್ನು, ಸ್ವಾತಂತ್ರ್ಯವನ್ನು ಕಳೆದುಕೊಂಡ

ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಕಾರ್ಯದಲ್ಲಿ ತೊಡಗಿದರು. ಇವರು, ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಶೈಕ್ಷಣಿಕ ಸಮಾನತೆಯನ್ನು ದೊರಕಿಸಿಕೊಡುವಲ್ಲಿ ಅಪಾರವಾಗಿ ಶ್ರಮಿಸಿದಂತಹವರು.

**ಪಠ್ಯಕ್ರಮದ ಬಗ್ಗೆ ಅಂಬೇಡ್ಕರವರ ಚಿಂತನೆಗಳು**

ಅಂಬೇಡ್ಕರವರು ಇಡೀ ಶೈಕ್ಷಣಿಕ ವ್ಯವಸ್ಥೆಯ ಹಾಗೂ ಪಠ್ಯಕ್ರಮದ ಬಗ್ಗೆ ನೇರವಾಗಿ ಎಲ್ಲಿಯೂ ಹೇಳಿಲ್ಲ. ಆದರೆ ಅವರ ಭಾಷಣಗಳು ಹಾಗೂ ಬರಹಗಳಲ್ಲಿ ಇಂತಹ ಅಂಶಗಳನ್ನು ಗುರುತಿಸಲಿಕ್ಕೆ ಸಾಧ್ಯವಿದೆ. ಅದರಲ್ಲಿಯೂ ಭಾರತದ ಚರಿತ್ರೆಯ ಪಠ್ಯಪುಸ್ತಕಗಳ ಬಗ್ಗೆ ಅವರು ಹೇಳಿರುವ ಮಾತುಗಳು ನಿಜವಾಗಿ ಸತ್ಯಕ್ಕೆ ಹತ್ತಿರವಾದಂತವುಗಳಾಗಿವೆ. ಅವರೇ ಹೇಳುವಂತೆ "ಪ್ರಾಚೀನ ಭಾರತದ ಚರಿತ್ರೆಯ ಹೆಚ್ಚು ಭಾಗ ಸತ್ಯವಾದ ಚರಿತ್ರೆಯಲ್ಲ". ಇದರರ್ಥ ಪ್ರಾಚೀನ ಭಾರತದ ಚರಿತ್ರೆ ಇಲ್ಲ ಎಂದಲ್ಲ, ಬೇಕಾದಷ್ಟಿದೆ. ಆದರೆ ಅದು ತನ್ನ ಕಳೆಯನ್ನೇ ಕಳೆದುಕೊಂಡಿದೆ. ಹೆಂಗಸರು ಮತ್ತು ಮಕ್ಕಳಿಗೆ ಮನರಂಜನೆ ನೀಡಲೆಂದೇ ಅದನ್ನು ಪುರಾಣ ರೂಪಕ್ಕೆ ಭಟ್ಟಿ ಇಳಿಸಲಾಗಿದೆ. ಈ ಕೆಲಸವನ್ನು ಬ್ರಾಹ್ಮಣ ಪ್ರತಿಪಾದಕ ಲೇಖಕರು ಬೇಕಂತಲೇ ಮಾಡಿದಂತಿದೆ"[೨೮] ಎಂದಿದ್ದಾರೆ. ಅಂದರೆ ಪ್ರಾಚೀನ ಭಾರತದ ನಿಜವಾದ ಚರಿತ್ರೆಯನ್ನು ಮರೆಮಾಚಿ ಬ್ರಾಹ್ಮಣ ಚರಿತ್ರೆಕಾರರು ಅಂದು ಇದ್ದ ವೇದ, ಉಪನಿಷತ್ತು, ವೇದಾಂಗ ಮುಂತಾದವುಗಳಲ್ಲಿ ಮೇಲ್ವರ್ಗದವರೇ ಶ್ರೇಷ್ಠ; ಅವುಗಳನ್ನು ಕಲಿಯಕ್ಕೆ ಅವರು ಮಾತ್ರ ಅರ್ಹರು ಎಂಬುದಾಗಿ ಹೇಳಲಾಗಿದೆ. ಇನ್ನು ವರ್ಣ ವ್ಯವಸ್ಥೆಯನ್ನು ಮಾಡಿ ಶೂದ್ರನು ಸಮಾಜದ ಅತ್ಯಂತ ಕೆಳವರ್ಗದವನು ಯಾವುದೇ ಸೌಲಭ್ಯಗಳನ್ನು ಪಡೆದುಕೊಳ್ಳಲಿಕ್ಕೆ ಅರ್ಹತೆ ಇಲ್ಲದವನೆಂದು ಬರೆದಿದ್ದಾರೆ. ಇದರಿಂದಾಗಿ ಅಂದು ನಿಜವಾಗಿ ಬದುಕುತ್ತಿದ್ದ ದುಡಿಯುವ ಈ ವರ್ಗದ ಜನರ ಜೀವನ, ಅವರ ಶ್ರಮ, ಕಷ್ಟ, ಕಾರ್ಪಣ್ಯಗಳನ್ನು ಹೇಳಲು ಯಾರು ಬಯಸಲಿಲ್ಲ. ಒಂದು ರೀತಿಯಲ್ಲಿ ಚರಿತ್ರೆಯನ್ನು ವಿಕೃತಗೊಳಿಸುವ ಕೆಲಸ ಮಾಡಿದ್ದಾರೆ ಎಂದು ಅವರು ನಂಬಿದ್ದರು. "ಹೀಗಾಗಿ ಅವರು ಭಾರತ ಚರಿತ್ರೆಯನ್ನು ಬರೆಯುವ ಒಬ್ಬೊಬ್ಬ ಚರಿತ್ರಕಾರನು ನಿಖರ ವಿಷಯಗ್ರಾಹಿಯಾಗಿರಬೇಕು. ವಿಶ್ವಾಸಕ್ಕೆ ಅರ್ಹ ನಿಷ್ಪಕ್ಷಪಾತಿ, ಆವೇಶರಹಿತ, ಏಕಾಭಿಮುಖಿಯಲ್ಲದ, ವಾತ್ಸಲ್ಯ ಮತ್ತು ಮತ್ಸರಕ್ಕೊಳಗಾಗದ ರೀತಿ ಸತ್ಯಕ್ಕೆ ನಿಷ್ಠವಾಗಿ, ನಿರ್ಭಿತವಾಗಿ ನಿರಪೇಕ್ಷನಾಗಿ ಚರಿತ್ರೆ ರಚಿಸುವ ಕೆಲಸ ಮಾಡಬೇಕು ಎಂದಿದ್ದಾರೆ."[೨೯] ಒಬ್ಬ ನಿಜವಾದ ಚರಿತ್ರಕಾರ ಭವಿಷ್ಯದ ಮೂನ್ಸೂಚಕನಾಗಿ ಮರೆಗುಳಿತನದ ಶತ್ರುವಾಗಿ ಭೂತಕ್ಕೆ ಸಾಕ್ಷಿಯಾಗಿ ಘಟನೆಗಳ ನಿಜ ರಕ್ಷಕನಾಗಬೇಕು ಅವನು ಮುಕ್ತ ಮನಸ್ಸುಳ್ಳವನಾಗಿರ ಬೇಕು ಮತ್ತು ಆಧಾರ ಸಹಿತ ಎಲ್ಲಾ ಸಾಕ್ಷಿಗಳನ್ನು ಸಂಗ್ರಹಿಸಿ ಅವುಗಳ ಅಸಲಿ ನಕಲಿತನಗಳನ್ನು ಪರೀಕ್ಷಿಸಿ ಪ್ರಚುರಪಡಿಸುವವನಾಗಿರಬೇಕು ಎಂದಿದ್ದಾರೆ. ನಿಜವಾಗಿಯೂ ಅಂಬೇಡ್ಕರವರು ಚರಿತ್ರೆಯ ಬಗ್ಗೆ ಹೇಳಿರುವ ಮಾತುಗಳು ಇಂದು ಪಠ್ಯಪುಸ್ತಕಗಳಲ್ಲಿ ದಾಖಲಾಗಬೇಕಾಗಿದೆ. ಹಾಗಾದಾಗ ಮಾತ್ರ ವಿದ್ಯಾರ್ಥಿಗಳಿಗೆ ಪ್ರಾಚೀನ ಭಾರತದ ನಿಜವಾದಂತಹ ಚರಿತ್ರೆ ಏನು ಎಂಬುದು ತಿಳಿಯಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಚರಿತ್ರ ರಚನಾಕಾರರು ಚಿಂತನೆ ನಡೆಸಬೇಕಾಗಿದೆ.

**೪.೨.೧೦. ವಿನೋಬ ಭಾವೆ**

ಆಚಾರ್ಯ ವಿನೋಬ ಭಾವೆಯವರು ಕ್ರಿ.ಶ. ೧೮೯೫ರಲ್ಲಿ ಜನಿಸಿದರು. ಇವರ ತಂದೆ ನರಹರಿ ಶಂಭೂ ಭಾವೆ ಮತ್ತು ತಾಯಿ ರುಕ್ಮೀಣಿಬಾಯಿ. ಇವರು ಮಹಾರಾಷ್ಟ್ರದ ಗಾಗೋದೆ

ಎಂಬಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಇಲ್ಲಿಯೇ ಮುಗಿಸಿದ ಇವರು ಮುಂದೆ ಇಂಗ್ಲಿಷ್ ಓದಲು ಬರೋಡಕ್ಕೆ ಹೋದರು. ಚಿಕ್ಕಂದಿನಿಂದಲೇ ಅವರು ಜ್ಞಾನದ ಕಡೆಗೆ ಒಲವನ್ನು ಉಳ್ಳವರಾಗಿದ್ದರಿಂದ ಇತರೆ ಹುಡುಗರಂತೆ ಇರಲಿಲ್ಲ. ಸ್ವಲ್ಪ ವಿಚಿತ್ರವಾಗಿ ಇದ್ದವರು. ಇದಕ್ಕಾಗಿ ತಂದೆಯ ಸಿಟ್ಟಿಗೆ ಎಷ್ಟೋ ಸಲ ಗುರಿಯಾಗಬೇಕಾಗಿ ಬಂದಿತ್ತು. ಆದರೆ ಇವರ ತಾಯಿ ಧರ್ಮ ಪಾರಾಯಣೆ ಆಗಿದ್ದು ಮಗನಿಗೆ ನಿಜವಾದ ಧರ್ಮ ಸೂಕ್ಷ್ಮವನ್ನು ತಿಳಿಸುತ್ತಿದ್ದಳು. ಚಿಕ್ಕಂದಿನಲ್ಲಿ ಆಕೆಯೇ ಅವರ ಗುರುವಾಗಿದ್ದಳು. ಹಳೆಯ ಸಂಪ್ರದಾಯಿಗಳನ್ನು ಪಾಲಿಸುತ್ತಿದ್ದರೂ ಅರ್ಥವಿಲ್ಲದೆ ಆಕೆ ರೂಢಿಗಳನ್ನು ನಡೆಸುತ್ತಿರಲಿಲ್ಲ. ಅವರ ತಾಯಿಯ ವಿಚಾರಗಳು ಇವರ ಮೇಲೆ ತುಂಬಾ ಸೂಕ್ಷ್ಮವಾಗಿ ಪ್ರಭಾವ ಬೀರುತ್ತಿದ್ದವು. ಚಿಕ್ಕಂದಿನಿಂದಲೇ ಶ್ರೀರಾಮದಾಸರ ಮತ್ತು ಶಂಕರಾಚಾರ್ಯರ ತತ್ವಗಳಿಂದ ಪ್ರಭಾವಿತರಾಗಿದ್ದರು. ಅಜೀವ ಪರ್ಯಂತ ಬ್ರಹ್ಮಚಾರಿ ಯಾಗಿಯೇ ಉಳಿದ ಇವರು ೧೯೧೬ರಲ್ಲಿ ಗಾಂಧೀಜಿಯವರ ಸಂಪರ್ಕ ಬೆಳೆಸಿಕೊಂಡರು. ನಂತರ ಸಾಬರಮತಿ ಆಶ್ರಮದಲ್ಲಿಯೇ ಗಾಂಧೀಜಿಯವರ ಜೊತೆಗೆ ವಾಸಿಸುತ್ತಿದ್ದರು. ೧೯೪೦ರಲ್ಲಿ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿದರು. ಭಾರತ ಸ್ವಾತಂತ್ರ್ಯ ಪಡೆದುಕೊಂಡ ಮೇಲೆ ಯಾವುದೇ ಹುದ್ದೆಯನ್ನು ಅವರು ಸರ್ಕಾರದಲ್ಲಿ ಬಯಸಲಿಲ್ಲ. ಗಾಂಧೀಜಿಯವರ ಮರಣದ ನಂತರ ಸರ್ವೋದಯ ಮತ್ತು ಭೂದಾನ ಚಳುವಳಿಗಳನ್ನು ಪ್ರಾರಂಭಿಸಿದರು.

**ಪಠ್ಯಕ್ರಮದ ಬಗ್ಗೆ ವಿನೋಬ ಭಾವೆಯರ ಚಿಂತನೆಗಳು**

ವಿನೋಬ ಭಾವೆಯವರು ಒಂದು ನಿರ್ದಿಷ್ಟಪಡಿಸಿದ ಪಠ್ಯಕ್ರಮವಿರಬೇಕೆಂಬುದನ್ನು ಒಪ್ಪಲಿಲ್ಲ. "ಏಕೆಂದರೆ ಪಠ್ಯಕ್ರಮವು ಸಮಾಜದ ಅವಶ್ಯಕತೆಗಳು ಬದಲಾವಣೆಗೆ ತಕ್ಕಂತೆ ಅವು ಬದಲಾಗುವುದು ಅವಶ್ಯಕ" ಎಂದಿದ್ದಾರೆ. ಆದ್ದರಿಂದ ದೇಶದ ಮತ್ತು ಸಮಾಜದ ಇಂದಿನ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮ ರಚಿಸಬೇಕು ಮತ್ತು ಬದಲಾಯಿಸಬೇಕು ಎಂದಿದ್ದಾರೆ."[೨೦] ಈ ಹಿನ್ನೆಲೆಯಲ್ಲಿ ಪ್ರಸ್ತುತ ಪಠ್ಯಪುಸ್ತಕದಲ್ಲಿ ಅವರ ಚಿಂತನೆಗಳು ಅಳವಡಿಸಿಕೊಂಡಿಲ್ಲ. ಆದ್ದರಿಂದ ವಿನೋಬ ಭಾವೆ ಅವರ ಪಠ್ಯಕ್ರಮದ ಚಿಂತನೆಗಳು ಅಳವಡಿಸಿಕೊಳ್ಳುವುದು ಅಗತ್ಯವಾಗಿದೆ.

**೪.೨.೧೧. ಜಿದ್ದು ಕೃಷ್ಣಮೂರ್ತಿ**

ಜಿದ್ದು ಕೃಷ್ಣಮೂರ್ತಿಯವರು ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಮದನಪಲ್ಲಿಯಲ್ಲಿ ಕ್ರಿ.ಶ. ೧೧-೫-೧೮೯೫ರಂದು ಜನಿಸಿದರು. ಇವರ ತಂದೆ ನಾರಾಯಣಯ್ಯ ಮತ್ತು ತಾಯಿ ಸಂಜೀವಮ್ಮ ಇವರು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದವರಾಗಿದ್ದರು. ಇವರಿಗೆ ೬ ವರ್ಷ ವಯಸ್ಸಾಗಿದ್ದಾಗ ಉಪನಯನ ಮಾಡಿಸಿ ಶಾಲೆಗೆ ಸೇರಿಸಿದರು. ಆದರೆ ಜಿದ್ದು ಕೃಷ್ಣಮೂರ್ತಿಯವರಿಗೆ ಶಾಲೆಯ ಓದು ಇಷ್ಟವಾಗಲಿಲ್ಲ. ತಮ್ಮ ತಮ್ಮನಾದ ನಿತ್ಯಾನಂದರ ಜೊತೆ ಒಡನಾಟ ಇಟ್ಟುಕೊಂಡಿದ್ದು, ಇವರು ಶಾಲೆಯಲ್ಲಿ ಕನಸು ಕಾಣುವ ಹವ್ಯಾಸವನ್ನು ಹೊಂದಿದ್ದರು. ನಿಸರ್ಗವನ್ನು ನೋಡುತ್ತಾ ಅಲ್ಲಿಯೇ ಮೈಮರೆತು ಬಿಡುತ್ತಿದ್ದರು. ಗಿಡ, ಮರ, ಪಕ್ಷಿಗಳೆಂದರೆ ಅತೀವ ಆಸಕ್ತಿ ಹೊಂದಿದ್ದರು. ಒಟ್ಟಿನಲ್ಲಿ ಇವರೊಬ್ಬರು ನಿಸರ್ಗ ಪ್ರೇಮಿಯಾಗಿದ್ದರು. ಇವರ ತಂದೆ ಮದ್ರಾಸಿನ ಥಿಯೋಸಾಫಿಕಲ್ ಸೊಸೈಟಿಯ ಸದಸ್ಯರಾದರು. ಈ ಕಾಲಕ್ಕೆ ಅನಿಬೆಸೆಂಟರ್‌ವರು ಇದರ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದರು.

ಈ ಸೊಸೈಟಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅನಿಬೆಸೆಂಟ್ ಅವರು ಜಿದ್ದು ಕೃಷ್ಣಮೂರ್ತಿಯವರನ್ನು ಕಂಡು ಅವರಲ್ಲಿರುವ ನಾಯಕತ್ವ ಚಿನ್ಹೆಗಳನ್ನು ಗುರುತಿಸಿದರು. ಇವರ ತಂದೆಯ ಬಳಿ ಚರ್ಚಿಸಿ ಜಿದ್ದು ಕೃಷ್ಣಮೂರ್ತಿ ಲಾಲನೆ-ಪಾಲನೆ, ಶಿಕ್ಷಣದ ಎಲ್ಲಾ ಜವಾಬ್ದಾರಿಯನ್ನು ಅನಿಬೆಸೆಂಟ್ ಅವರೇ ಹೊತ್ತುಕೊಂಡರು. ಮುಂದೆ ಇವರಿಗೆ ಶಿಕ್ಷಣ ಕೊಡಿಸಲು ಇಂಗ್ಲೆಂಡಿಗೆ ಕರೆದುಕೊಂಡು ಹೋದರು. ನಂತರದ ದಿನಗಳಲ್ಲಿ ಇವರು ಥಿಯೋಸಾಫಿಕಲ್ ಸೊಸೈಟಿಯಿಂದ ದೂರವಾದರು.

ಜಿದ್ದು ಕೃಷ್ಣಮೂರ್ತಿಯವರು ಥಿಯೋಸಾಫಿಕಲ್ ಸೊಸೈಟಿಯಿಂದ ದೂರವಾದ ಮೇಲೆ ಯಾವುದೇ ಆಧ್ಯಾತ್ಮಕ ಸಂಘಟನೆಯನ್ನು ಕೈಗೊಳ್ಳಲಿಲ್ಲ. ತಾವು ಕಂಡ ಸತ್ಯವನ್ನು ತಿಳಿಸುತ್ತ, ಪ್ರವಚನ, ಸಂಭಾಷಣೆ, ಚರ್ಚೆ ಹಾಗೂ ವೈಯಕ್ತಿಕ ಸಂದರ್ಶನ ನಡೆಸಿದರು. ತಮ್ಮ ಪ್ರವಚನಗಳನ್ನು ಏರ್ಪಡಿಸಲು ಹಾಗೂ ಪುಸ್ತಕಗಳನ್ನು ಪ್ರಕಟಿಸಲು ಕೆಲವು ದೇಶಗಳಲ್ಲಿ ಜಿದ್ದು ಕೃಷ್ಣಮೂರ್ತಿ ಫೌಂಡೇಶನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅಮೇರಿಕಾ, ಇಂಗ್ಲೆಂಡ್, ರಿಷಿವ್ಯಾಲಿಯ ಮತ್ತು ಭಾರತದ ರಾಜಘಾಟಿನಲ್ಲಿ ಶಾಲೆಯನ್ನು ಸ್ಥಾಪಿಸಿದರು. ಈ ಶಾಲೆಗಳಲ್ಲಿ ತಮಗೆ ಪ್ರಿಯವಾದ ವಿಷಯಗಳನ್ನು ವ್ಯಕ್ತಪಡಿಸಲು ಶಿಕ್ಷಣದ ಮೂಲಕ ಪ್ರಯೋಗ ರೂಪದಲ್ಲಿ ಅಳವಡಿಸಿದರು.

**ಪಠ್ಯಕ್ರಮದ ಬಗ್ಗೆ ಜಿದ್ದು ಕೃಷ್ಣಮೂರ್ತಿಯವರ ಚಿಂತನೆಗಳು**

ಜಿದ್ದು ಕೃಷ್ಣಮೂರ್ತಿಯವರು ಶಾಲೆಗಳಲ್ಲಿ ಪರಿಸರ ಅಧ್ಯಯನದಂತಹ ಪಠ್ಯವಸ್ತುವನ್ನು ಸೇರ್ಪಡೆ ಮಾಡಬೇಕು ಎಂದಿದ್ದಾರೆ. ಅಂದರೆ ಮಕ್ಕಳಿಗೆ ಹೂವು, ಪ್ರಾಣಿ, ಪಕ್ಷಿಗಳ ಬಗ್ಗೆ ತಿಳಿಸಿಕೊಡಬೇಕೆಂದಿದ್ದಾರೆ "ಗ್ರಾಮೀಣ ಮತ್ತು ಸಾಮಾಜಿಕ ಕಾರ್ಯಗಳಾದ ಕಾಡು ಬೆಳೆಸುವುದು, ನೀರಿನ ಸಂರಕ್ಷಣೆ, ಮಣ್ಣಿನ ಪುನಶ್ಚೇತನ, ನೇಯುವಿಕೆ, ಕುಂಬಾರಿಕೆ, ಬಡಗಿತನ, ಕಲೆ, ಕ್ರೀಡೆ ಮುಂತಾದ ವಿಷಯಗಳನ್ನು ಪಠ್ಯಕ್ರಮದಲ್ಲಿ ಸೇರಿಸಬೇಕು" ಎಂದಿದ್ದಾರೆ.[೫] ಅದೇ ರೀತಿಯಲ್ಲಿ ಅವರು ತಮ್ಮ ಸೆಂಟ್ರಲ್ ಬೋರ್ಡ್ ಆಫ್ ಎಜ್ಯುಕೇಷನ್ ನೀಡಿರುವ ಪಠ್ಯಕ್ರಮವನ್ನು ಅನುಸರಿಸುವುದು ಸೂಕ್ತವೆಂದು ಹೇಳಿದ್ದಾರೆ. ಅಂದರೆ ಪಠ್ಯಕ್ರಮದ ಬಗ್ಗೆ ಇವರ ಚಿಂತನೆಗಳು ಪ್ರಕೃತಿದಾಯಕವಾದ ವಿಷಯಗಳನ್ನು ಕಲಿಸಲು ಹೆಚ್ಚು ಒತ್ತು ನೀಡಿವೆ. ಏಕೆಂದರೆ ಇವರು ಒಬ್ಬ ನಿಸರ್ಗವಾದಿಯಾಗಿದ್ದರಿಂದ ಅವರ ವಿವೇಚನೆಗಳು ಕೂಡ ನಿಸರ್ಗದತ್ತ ವಿಷಯಗಳನ್ನು ಕಲಿಸುವುದಕ್ಕೆ ಹೆಚ್ಚು ಆದ್ಯತೆ ನೀಡಿದ್ದಾರೆ.

**೪.೨.೧೨. ರಾಮಮನೋಹರ ಲೋಹಿಯಾ**

ರಾಮಮನೋಹರ ಲೋಹಿಯಾರವರು ಉತ್ತರಪ್ರದೇಶದ ಪೈಜಾಬಾದ್ ಜಿಲ್ಲೆಯ ಅಕ್ಬರ್‌ಪುರದಲ್ಲಿ ೨೩ ಮಾರ್ಚ್ ೧೯೧೦ರಂದು ಜನಿಸಿದರು. ಇವರ ತಂದೆ ಹೀರಾಲಾಲ್, ತಾಯಿ ಚಂದಾ. ಇವರ ತಂದೆ ಮೊದಲಿನಿಂದಲೂ ಗಾಂಧೀಜಿಯವರ ಅನುಯಾಯಿಯಾಗಿದ್ದರು. ಹೀಗಾಗಿ ಲೋಹಿಯಾ ಒಂಬತ್ತು ವರ್ಷದವರಿರುವಾಗಲೇ ಗಾಂಧೀಯ ಸಂಪರ್ಕ ಮಾಡಿಸಿದರು. ಬಾಲ್ಯದಲ್ಲಿಯೇ ಅಕ್ಬರ್‌ಪುರದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಆರಂಭಿಸಿ, ಕಲ್ಕತ್ತದಲ್ಲಿ ಬಿ.ಎ. ಪದವಿಯನ್ನು ಮುಗಿಸಿದರು. ಮುಂದೆ ಜರ್ಮನಿಯ ಬರ್ಲಿನ್ ಹಂಬೋಲ್ಟ್ ವಿಶ್ವವಿದ್ಯಾಲಯದಲ್ಲಿ 'ಎಕಾನಾಮಿಕ್ಸ್ ಆಫ್ ಸಾಲ್ಟ್ ಸತ್ಯಾಗ್ರಹ' ಎಂಬ ವಿಷಯದ ಮೇಲೆ ಸಂಶೋಧನೆ ಮಾಡಿ ಪಿಎಚ್.ಡಿ. ಪದವಿ

ಪಡೆದುಕೊಂಡರು. ಮುಂದೆ ತಮ್ಮ ವಿದ್ಯಾರ್ಥಿ ದೆಸೆಯಲ್ಲಿಯೇ ಸ್ವಾತಂತ್ರ್ಯ ಚಳುವಳಿ ಪ್ರವೇಶಿಸಿ ೧೯೩೪ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸ್ಥಾಪನೆಗಾಗಿ ದುಡಿದರು.

ರಾಮಮನೋಹರ ಲೋಹಿಯಾ ಅವರು ಚರಿತ್ರೆ ಬರೆಯುವಾಗ ಮಹಾಪ್ರತಿಭೆಯ ಪ್ರಬುದ್ಧ ಇತಿಹಾಸಕಾರನಿಲ್ಲದಿದ್ದರೆ ಅದು ಅಸತ್ಯವಾಗುತ್ತದೆ. ಏಕೆಂದರೆ ಇತಿಹಾಸ ಬರೆಯುವಾಗ ಅದನ್ನು ಗತಕಾಲದ ದೃಷ್ಟಿಕೋನದಿಂದ ಕೂಡ ನೋಡಲಾಗುತ್ತದೆ. ಕ್ಷೀಣಗೊಳ್ಳುತ್ತಿದ್ದ ಒಂದು ಆಳ್ವಿಕೆಯ ಕಾಲದಲ್ಲಿ ಸದ್ದುಗದ್ದಲ ಮಾಡಿದ ವ್ಯಕ್ತಿಗಳು ಮತ್ತು ಘಟನೆಗಳು ಬಲಗುಂದಿದ ಆಳರಸರ ದೃಷ್ಟಿಕೋನದಿಂದ ಹೆಚ್ಚಿನ ಪ್ರಾಮುಖ್ಯತೆ ಪಡೆಯುವುದಿಲ್ಲ. ಹಿಂದಿನ ಆಳ್ವಿಕೆಯ ಕನ್ನಡಕವನ್ನೇ ಆಧರಿಸಿ ಇತಿಹಾಸವನ್ನು ನೋಡುವ ಚರಿತ್ರಕಾರನ ಕೃತಿಯಲ್ಲಿ ಇಂತಹ ವ್ಯಕ್ತಿಗಳು ಮತ್ತು ಘಟನೆಗಳು ನಿರ್ಲಕ್ಷಿತವಾಗುತ್ತವೆ. ಹೀಗೆ ಇತಿಹಾಸ ಎರಡು ರೀತಿಯ ಅಶಾಸ್ತ್ರೀಯತೆಗೆ ಹಾಗೂ ಅಸತ್ಯಗೆ ಒಳಗಾಗುವ ಸಾಧ್ಯತೆ ಇದೆ. ಅಂದರೆ ಒಂದು ಹಿಂದೆ ನೋಡುವುದು ಮತ್ತೊಂದು ಕಂಡದ್ದನ್ನೇ ಮತ್ತೆ ಬರೆಯುವುದು. "ಇದರಿಂದ ಚರಿತ್ರೆಯ ದೋಷ ಉಂಟಾಗುತ್ತದೆ ಎಂದಿದ್ದಾರೆ. ಹೀಗಾಗಿ ಇಡೀ ಪ್ರಪಂಚವೇ ಒಮ್ಮೆ ಕಣ್ಣಲ್ಲಿಟ್ಟುಕೊಂಡ ಈ ವಿಷಯವನ್ನು ಇನ್ನೊಮ್ಮೆ ಪ್ರತಿಪಾದಿಸಬೇಕೆಂಬುದು ಇವರ ಆಸೆಯಾಗಿದೆ."[೨] ಚರಿತ್ರೆಯನ್ನು ಓದುವುದರಲ್ಲಿ ಅಥವಾ ಬರೆಯವುದರಲ್ಲಿ ದೋಷವುಂಟಾದರೆ ಅದರ ಪರಿಣಾಮಗಳು ಘೋರವಾಗಬಹುದು. ಚರಿತ್ರೆಯೆಂಬುದು ಅಂತಿಮವಾಗಿ ನಮ್ಮ ಗತವನ್ನು ಅರ್ಥ ಮಾಡಿಕೊಳ್ಳುವಂಥ ಪ್ರಕ್ರಿಯೆಯಾಗಿದೆ. ಹಾಗಾಗಿ ಅದು ಸರಿಯಾಗಿರಲಿ, ತಪ್ಪಾಗಿರಲಿ ಪೂರ್ಣವಾಗಿರಲಿ ಅಥವಾ ಪಾರ್ಶಿಕವಾಗಿರಲಿ ನಮ್ಮ ವರ್ತಮಾನ ಹಾಗೂ ಭವಿಷ್ಯವನ್ನು ನಿರ್ಧರಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ ಎಂಬುದು ಇವರ ಅಭಿಪ್ರಾಯವಾಗಿದೆ.

ಲೋಹಿಯಾರವರನ್ನು ಅನೇಕರು ಮಾರ್ಕ್ಸ್‌ವಾದಿ ಚಿಂತಕ ಮತ್ತು ಗಾಂಧೀಜಿಯ ಧ್ಯೇಯೋದ್ದೇಶಗಳನ್ನು ಇಟ್ಟುಕೊಂಡವರು ಎಂದು ವಿಶ್ಲೇಷಿಸುತ್ತಾರೆ. ಅವರ ಬರಹಗಳಿಂದ ಅವರುಗಳನ್ನು ಸಮಾಜವಾದಿ ಎಂಬ ಒಂದು ತರಹದ ನವ ಗಾಂಧೀವಾದ ಎಂದು ಗುರುತಿಸಲಾಗಿದೆ.

**೪.೩. ಕರ್ನಾಟಕ ಶಿಕ್ಷಣ ತಜ್ಞರ ದೃಷ್ಟಿಯಲ್ಲಿ ಪಠ್ಯಪುಸ್ತಕ**

ಭಾರತದ ಇತರೆ ಚಿಂತಕರ ಹಾಗೇ ಕರ್ನಾಟಕದ ಬುದ್ಧಿಜೀವಿಗಳು, ಚಿಂತಕರು ಶಿಕ್ಷಣ ಹೇಗಿರಬೇಕು, ಶಿಕ್ಷಣದಲ್ಲಿ ಪಠ್ಯಕ್ರಮ ಹೇಗಿರಬೇಕು, ಅದರಿಂದ ಶೈಕ್ಷಣಿಕ ವ್ಯವಸ್ಥೆಯಲ್ಲಿ ಯಾವ ರೀತಿ ಬದಲಾವಣೆ ಸಾಧ್ಯ, ಉತ್ತಮ ಚರಿತ್ರೆ ಪಠ್ಯಗಳು ಸಮಾಜದಲ್ಲಿ ಮಕ್ಕಳ ಜ್ಞಾನ ವಿಕಾಸಕ್ಕೆ ಹೇಗೆ ಕಾರಣವಾಗಬಲ್ಲವು ಎನ್ನುವುದನ್ನು ಅವಲೋಕಿಸಿದ್ದಾರೆ. ಅವರಲ್ಲಿ ಕುವೆಂಪು, ಡಾ. ಎಂ.ಎಂ. ಕಲ್ಬುರ್ಗಿ, ಡಾ. ಎಂ. ಚಿದಾನಂದಮೂರ್ತಿ, ಡಾ. ಎಸ್. ಚಂದ್ರಶೇಖರ್, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಸಿದ್ಧಲಿಂಗಯ್ಯ, ಡಾ. ಯು. ಸೂರ್ಯನಾಥ ಕಾಮತ್, ಡಾ. ಷೇಕ್‌ಅಲಿ, ಡಾ. ಬಿ.ಸಿ. ಮಹಾಬಲೇಶ್ವರಪ್ಪ ಮೊದಲಾದವರ ಚಿಂತನಾಕ್ರಮಗಳು ಇಂತಿವೆ.

### ೪.೩.೧. ಕುವೆಂಪು

ಕುವೆಂಪು ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದವರು ಕೆ.ವಿ. ಪುಟ್ಟಪ್ಪ. ಇವರು ೨೯-೧೨-೧೯೦೪ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿಯಲ್ಲಿ ಜನಿಸಿದರು. ೧೯೧೧ರಿಂದ ೧೯೨೯ರವರೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎಂ.ಎ. ಪದವಿಯವರೆಗೆ ವ್ಯಾಸಂಗ ಮಾಡಿದರು. ೧೯೨೯ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸಕ್ಕೆ ಸೇರಿದ ಇವರು ೧೯೬೦ವರೆಗೆ ಪ್ರಾಧ್ಯಾಪಕ ಮತ್ತು ಕುಲಪತಿಗಳಾಗಿ ಕೆಲಸ ನಿರ್ವಹಿಸಿದವರು. ಸ್ವಾತಂತ್ರ್ಯ ಚಳುವಳಿ, ನಾಡು ನುಡಿ, ಕರ್ನಾಟಕ ಏಕೀಕರಣ ಮತ್ತು ಪ್ರಾದೇಶಿಕ ಭಾಷಾ ಶಿಕ್ಷಣದ ಅವಶ್ಯಕತೆಯನ್ನು ಸದಾ ಒತ್ತಾಯಿಸುತ್ತಿದ್ದ ಇವರು ಕನ್ನಡದ ಮೂಲಕವೇ ಭಾರತ ಮತ್ತು ವಿಶ್ವಗಳಲ್ಲಿ ಕಂಡ ಅಪರೂಪದ ಮನುಷ್ಯ. ಅವರು ರಚಿಸಿರುವ ೮೦ಕ್ಕೂ ಹೆಚ್ಚಿನ ಕೃತಿಗಳಲ್ಲಿ ಕಲೆ, ತತ್ವ, ಆಧ್ಯಾತ್ಮ, ಪ್ರಕೃತಿ, ಪ್ರೀತಿ, ದೇವರು, ನಾಡು, ನುಡಿ, ಪುರಾಣ, ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಮೀಮಾಂಸೆ, ವಿಜ್ಞಾನ ಮುಂತಾದ ನಾನಾ ವಿಚಾರಗಳನ್ನು ಒಳಗೊಂಡಿವೆ.

### ಕುವೆಂಪುರವರ ಪಠ್ಯಪುಸ್ತಕದ ಬಗ್ಗೆ ವಿಚಾರಧಾರೆ

ಶಿಕ್ಷಣ ಕ್ಷೇತ್ರಕ್ಕೆ ಕುವೆಂಪು ಅವರ ಶಿಕ್ಷಣತತ್ವ ವಿಚಾರಗಳು ಅತ್ಯಂತ ಮೌಲಿಕವೂ ಮಹತ್ವವೂ ಆಗಿವೆ. ವಿದ್ಯಾಕೇಂದ್ರವನ್ನು ಕಟ್ಟಿದ ಸಾಹಸಮಯವಾದ ಚೈತನ್ಯ ಇವರದು. ಶಿಕ್ಷಣ ಕ್ಷೇತ್ರದಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಕುಲಪತಿಗಳಾಗಿ ಶ್ರಮಿಸಿ ನಿವೃತ್ತರಾದ ಇವರು ಸಾಹಿತಿಯಾಗಿ, ತತ್ವಜ್ಞಾನಿಯಾಗಿ, ಶಿಕ್ಷಣತಜ್ಞರಾಗಿ ಹೀಗೆ ಅವರ ಪ್ರತಿಭೆ ವೈವಿಧ್ಯಮಯವಾಗಿ ವಿಸ್ತರಿಸಿದೆ. ಶಿಕ್ಷಣ ಕೇತ್ರಕ್ಕೆ ಅವರ ಚಿಂತನೆಗಳನ್ನು ಅಳವಡಿಸಿದ್ದೇ ಆದರೆ ಶಿಕ್ಷಣ ಪದ್ಧತಿಯಲ್ಲಿ ಹೊಸ ಆಯಾಮ ಪಡೆಯಬಹುದಾಗಿದೆ. ಗಾಂಧೀಜಿಯವರ ಶಿಕ್ಷಣದ ಕ್ರಮದ ಆಲೋಚನೆಗಳನ್ನು ಒಳಗೊಂಡ ಕುವೆಂಪುರವರ ಶಿಕ್ಷಣ ತತ್ವ ವಿಚಾರಗಳು ವಿಶಿಷ್ಟವಾಗಿವೆ. "ವಯಸ್ಕರ ಶಿಕ್ಷಣ, ಭಾಷಾ ಸಮಸ್ಯೆ, ಪಠ್ಯಪುಸ್ತಕಗಳಲ್ಲಿ ಮೂಢನಂಬಿಕೆಗಳು ನುಸುಳದಂತೆ ಎಚ್ಚರಿಕೆ ವಹಿಸಬೇಕು ಎಂದು ಹೇಳಿದ್ದಾರೆ."[೩] ಇದಲ್ಲದೆ ಅನಕ್ಷರತೆ ಮತ್ತು ಅಜ್ಞಾನವನ್ನು ತೊಡೆದುಹಾಕಲು ತೆಗೆದುಹಾಕಬೇಕಾದ ಕ್ರಮಗಳ ಬಗ್ಗೆ ವೈಜ್ಞಾನಿಕ ಹಾಗೂ ವೈಚಾರಿಕವಾದ ಎಚ್ಚರಿಕೆಗಳನ್ನು, ಜವಾಬ್ದಾರಿಗಳನ್ನು ಕುವೆಂಪುರವರು ಪ್ರತಿಪಾದಿಸಿದ್ದಾರೆ. ಇವರ ಶಿಕ್ಷಣ ತತ್ವಗಳು ವೈಚಾರಿಕವಾದ ಮಾನವೀಯವಾದ ನೆಲೆಗಟ್ಟಿನ ಮೇಲೆ ರೂಪುಗೊಂಡು ನಿಂತಿರುವಂತಹವು, ವಿಶ್ವವಿದ್ಯಾನಿಲಯದಿಂದ ವಿಶ್ವಪ್ರಜ್ಞೆಯವರೆಗೆ ಇರುವಂತಹವು.

### ೪.೩.೨. ದೇ. ಜವರೇಗೌಡ

ದೇ. ಜವರೇಗೌಡ ಅವರು ಚನ್ನಪಟ್ಟಣ ತಾಲ್ಲೂಕಿನ ಚಕ್ಕರೆ ಗ್ರಾಮದಲ್ಲಿ ೬.೭.೧೯೧೮ರಂದು ಜನಿಸಿದರು. ಕುವೆಂಪುರವರ ಶಿಷ್ಯರಾದ ಇವರು ಅವರ ಮಾರ್ಗದರ್ಶನದಲ್ಲಿಯೇ ವಿದ್ಯಾಭ್ಯಾಸ ಮಾಡಿ ಕನ್ನಡದ ಹೆಸರಾಂತ ಗದ್ಯ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಕನ್ನಡಕ್ಕೆ ಸೂಕ್ತ ಸ್ಥಾನಮಾನವನ್ನು ದೊರಕಿಸಿ ಕೊಡುವ ಪ್ರಯತ್ನದಲ್ಲಿ ಇವರ ಪಾತ್ರ ತುಂಬಾ ಅಪಾರವಾದದು. ಕಾವ್ಯ ಪರಂಪರೆಯಿಂದ

ಕನ್ನಡಿಗರು ಚೈತನ್ಯ ತುಂಬಿಕೊಂಡು ರಾಷ್ಟ್ರದಲ್ಲಿ ತಲೆಯೆತ್ತಿ ಮೆರೆಯುವಂತಾಗಬೇಕು ಎಂದು ಶ್ರಮಿಸಿದವರು. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ೫೦ಕ್ಕೂ ಅಧಿಕ ಕೃತಿಗಳನ್ನು ರಚನೆ ಮಾಡಿದ್ದಾರೆ.

**ಪಠ್ಯಪುಸ್ತಕದ ಬಗ್ಗೆ ದೇಜಗೌ ಅವರ ಚಿಂತನೆಗಳು**

ಪಠ್ಯಕ್ರಮ ಹಾಗೂ ಪಠ್ಯಪುಸ್ತಕದ ಬಗ್ಗೆ ದೇಜಗೌ ಅವರು ಅದೊಂದು ಸುಲಭದ ಕೆಲಸವಲ್ಲವೆಂದಿದ್ದಾರೆ. ಏಕೆಂದರೆ ಶಿಕ್ಷಣದ ತರಬೇತಿ ಕಾಲೇಜಿನಲ್ಲಿ ಎಂದೋ ಉರುಹಚ್ಚಿದ ಸೂತ್ರಗಳ ನೆರವು ಈ ಕಾರ್ಯಕ್ಕೆ ಸಾಲುವಂತಿಲ್ಲ. ನಾಲ್ಕಾರು ಕಡೆಗಳಿಂದ ತರಿಸಿಕೊಂಡ ಪಠ್ಯಕ್ರಮಗಳಿಂದ ಅಲ್ಲಿಷ್ಟು ಇಲ್ಲಿಷ್ಟು ಆಯ್ದುಕೊಂಡು ತಯಾರಿಸಿದ ತೇಪೆಯ ಪಠ್ಯಕ್ರಮ ನಿರೀಕ್ಷಿತ ಫಲವನ್ನು ಸಾಧಿಸುವುದಿಲ್ಲ. ಪಠ್ಯಕ್ರಮ ವಿನ್ಯಾಸಕಾರರು ಸ್ವತಂತ್ರ ಆಲೋಚಕರಾಗಿ, ಸುತ್ತಮುತ್ತ ಪರಿಸರವನ್ನು ಜಗತ್ತಿನ ಮುನ್ನಡೆಯನ್ನು, ಜ್ಞಾನ-ವಿಜ್ಞಾನಗಳ ಪ್ರಗತಿಯನ್ನು ಅರಿತವರಾಗಿ, ಭಿನ್ನ-ಭಿನ್ನ ರುಚಿಯ ಸಂಸ್ಕೃತಿಯ, ದರ್ಜೆಯ ವಿದ್ಯಾರ್ಥಿಗಳ ಮನೋಧರ್ಮವನ್ನು ಗ್ರಹಿಸಿದವರಾಗಿ ನಾಡಿನ ಆಶೋತ್ತರ, ಧ್ಯೇಯಗಳನ್ನು ಲಕ್ಷಿಸಿದವರಾಗಿ ಅವುಗಳ ಸಾಧನೆಗೆ ಅನುಗುಣವಾಗುವಂಥ ಪಠ್ಯಕ್ರಮವನ್ನು ರೂಪಿಸುವಂಥ ಕೌಶಲ್ಯ ಪಡೆದಿರಬೇಕು ಎಂದಿದ್ದಾರೆ. "ದೇ. ಜವರೇಗೌಡ ಅವರು ಪಠ್ಯಪುಸ್ತಕಗಳಲ್ಲಿ ಸಾಮಾನ್ಯವಾಗಿ ನಿರೀಕ್ಷಿಸಬಹುದಾದ ಗುಣಗಳೆಂದರೆ ಭಾಷಾಶುದ್ಧಿ, ವಿಷಯ ಗಾಂಭೀರ್ಯ, ನಿರೂಪಣ ಕೌಶಲ್ಯ ಮತ್ತು ಶಾಶ್ವತ ಮೌಲ್ಯ ಸಂಪನ್ನತೆ ಇರಬೇಕು ಎಂದಿದ್ದಾರೆ."[೩೪] ಶಿಕ್ಷಣದ ಸಮಗ್ರ ಸಾಧನೆಗೆ ಅವಶ್ಯಕವಾದ ಪಠ್ಯಪುಸ್ತಕದಲ್ಲಿ ಈ ನಾಲ್ಕು ಮುಖಗಳು ಸಹಾಯಕವಾಗುತ್ತವೆ ಎಂದಿದ್ದಾರೆ. ವಿಷಯದ ಆಯ್ಕೆಯು ವಿದ್ಯಾರ್ಥಿಯ ಜ್ಞಾನ ದಿಗಂತಗಳ ವಿಸ್ತರಣೆಗೆ ಸುಪ್ತ ಪ್ರತಿಭೆಯ ಜಾಗೃತಿಗೆ, ಶೀಲಸಂವರ್ಧನೆಗೆ, ವೈಚಾರಿಕ ಸಾಮರ್ಥ್ಯದ ವಿಕಾಸಕ್ಕೆ ಅನುಗುಣವಾಗಿರಬೇಕು. ಚಿಂತನ ಮೌಲ್ಯಗಳಲ್ಲಿ ದೇಶಕ್ಷೇಮದಲ್ಲಿ ಲೋಕಹಿತದಲ್ಲಿ ಅನುರಕ್ತ ಹುಟ್ಟಿಸುವಂತಿರಬೇಕು ಎಂದು ಸಲಹೆ ನೀಡಿದ್ದಾರೆ.

ದೇ. ಜವರೇಗೌಡ ಅವರು ಪಠ್ಯಪುಸ್ತಕಗಳಲ್ಲಿ ಸವಿಸ್ತಾರ ಮತ್ತು ಅವಿಸ್ತಾರಗಳೆಂಬ ಎರಡು ಬಗೆಗಳಿವೆ ಎಂದಿದ್ದಾರೆ. ಸವಿಸ್ತಾರ ಪಠ್ಯಪುಸ್ತಕವೆಂದರೆ ಸಾಮಾನ್ಯವಾಗಿ ಇಲಾಖೆಯ ಉಪಸಮಿತಿಗಳು ತಯಾರಿಸುವಂತಹ ಪಠ್ಯಪುಸ್ತಕಗಳು. ಈ ಪಠ್ಯಪುಸ್ತಕಗಳ ಹಿರಿಮೆಕಿರಿಮೆಗಳು, ಗುಣದೋಷಗಳು ಆ ಸಮಿತಿಗಳ ಸದಸ್ಯರ ಶಕ್ತಿ ಸಾಮರ್ಥ್ಯ, ಮನೋಧರ್ಮ ವಿದ್ವತ್ತುಗಳನ್ನವಲಂಬಿಸಿರುತ್ತದೆ. ಆದರೆ ಅವಿಸ್ತಾರ ಪಠ್ಯಪುಸ್ತಕಗಳು ಆಯ್ದುಕೊಳ್ಳುವಾಗ ಅವು ಯುವಜನರ ದೋಷ ದೌರ್ಬಲ್ಯಗಳು ಬಹುಮಟ್ಟಿಗೆ ಇರುತ್ತವೆ "ಏಕೆಂದರೆ ಮಂತ್ರಿ ಶಿಫಾರಸ್ಸು ಹಾಗೂ ಅಧಿಕಾರಿಗಳ ಲಂಚಗುಳಿತನ ಪಠ್ಯಪುಸ್ತಕಗಳ ಆಯ್ಕೆಯಲ್ಲಿ ವಿಶೇಷ ಪ್ರಭಾವ ಬೀರುತ್ತವೆ"[೩೫] ಎಂದಿದ್ದಾರೆ. ಈ ರೀತಿಯಾದ ಅವಿಸ್ತಾರ ಪಠ್ಯಪುಸ್ತಕ ಪ್ರಾಥಮಿಕ ಹಂತದಿಂದ ಪದವಿ ಹಂತದವರೆಗೂ ವಿಸ್ತರಿಸಿವೆ ಎಂಬುದು ಅವರ ಅಭಿಪ್ರಾಯವಾಗಿದೆ. ಹಾಗಾಗಿ ಇಂತಹ ಪುಸ್ತಕಗಳನ್ನು ಆಯ್ಕೆ ಮಾಡಿಕೊಳ್ಳುವಾಗ ತುಂಬಾ ಎಚ್ಚರವಹಿಸುವುದು ಅಗತ್ಯವಾಗಿದೆ.

"ಚರಿತ್ರೆ ಎಂಬುದರ ಬಗ್ಗೆ ದೇಜಗೌರವರು ಅದು ರಾಷ್ಟ್ರಗಳ ಮತ್ತು ಮನುಕುಲದ ಕಥೆಯ ಇತಿಹಾಸ ಎಂದಿದ್ದಾರೆ. ಏಕೈಕ ರಾಷ್ಟ್ರದ ಜೀವನವನ್ನು ಮಾತುಗಳಲ್ಲಿ ಬಂಧಿಸಿ ನೇರವಾಗಿ ವರ್ಣಿಸುವುದು ಅಸಾಧ್ಯ."[೩೬] ಅವರು ಮುಂದುವರಿದು ಅಮೂರ್ತ ಸ್ವರೂಪದ, ಸಾಮಾನ್ಯವಾಗಿ

ಬುಧ್ಧಿಗೆಟುಕದ ನುಣುಚಿಕೊಳ್ಳುವ ಜನಾಂಗವೊಂದರ ಜೀವನವನ್ನು ಗ್ರಹಿಸಿ ವರ್ಣಿಸುವ ಸಲುವಾಗಿ ಪೂರ್ವದ ಇತಿಹಾಸಕಾರರು ಏಕೈಕ ವಿಧಾನವನ್ನು ಬಳಸುತ್ತಿದ್ದರು. ಜನರನ್ನಾಳುತ್ತಿದ್ದ ವ್ಯಕ್ತಿಗಳ ಕಾರುಬಾರುಗಳನ್ನು ವರ್ಣಿಸುತ್ತಿದ್ದರು. ಆ ಕಾರುಬಾರುಗಳು ಇಡೀ ರಾಷ್ಟ್ರದ ಕಾರುಬಾರುಗಳನ್ನು ಪ್ರತಿನಿಧಿಸುವಂತೆ ಕಾಣಿಸುತ್ತಿದ್ದವು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಂದರೆ ಅವರು ಕೇವಲ ರಾಜಮಾರ್ಗದ ಚರಿತ್ರೆಯನ್ನು ಮಾತ್ರ ಬರೆದಿದ್ದಾರೆ. ಚರಿತ್ರೆಕಾರರು ಕೇವಲ ಯಾವುದೋ ಒಂದು ವಿಧಾನವನ್ನು ಅನುಸರಿಸುವುದು ಸೂಕ್ತವಲ್ಲ ಎಂಬುದು ಮತ್ತು ನೈಜ ಮಾಹಿತಿ ಇಲ್ಲದೆ, ವಾಸ್ತವತೆ ಇಲ್ಲದ ಅಂಶಗಳನ್ನು ಬರೆಯುವುದು ಸೂಕ್ತವಲ್ಲ ಎಂಬುದು ಇದರಿಂದ ತಿಳಿಯುತ್ತದೆ. ಇದಷ್ಟೆ ಅಲ್ಲದೇ ಕೇವಲ ರಾಜ ಮಹಾರಾಜರ ಚರಿತ್ರೆಯಿಂದ ಇಡೀ ಒಂದು ರಾಷ್ಟ್ರದ ಎಲ್ಲಾ ಜನಸಮೂಹದ ಚಿತ್ರವನ್ನು ನೀಡಲು ಯತ್ನಿಸುವುದು ಸೂಕ್ತವಲ್ಲ. ಆಳುವವರ್ಗ ಮತ್ತು ಆಳಿಸಿಕೊಳ್ಳುವ ವರ್ಗದ ಜನಜೀವನದಲ್ಲಿ ತುಂಬಾ ವ್ಯತ್ಯಾಸಗಳಿರುತ್ತವೆ. ಹಾಗಾಗಿ ಅವರಿಬ್ಬರ ಚರಿತ್ರೆ ಬರೆಯುವುದು ಅವಶ್ಯಕತೆ ಇದೆ ಎಂಬುದು ಇವರ ಅಭಿಪ್ರಾಯ.

**೪.೩.೩. ಡಾ. ಜಿ.ಎಸ್. ಶಿವರುದ್ರಪ್ಪ**

ಡಾ. ಜಿ.ಎಸ್. ಶಿವರುದ್ರಪ್ಪನವರು ಶಿವಮೊಗ್ಗ ಜಿಲ್ಲೆಯ ಈಸೂರಿನಲ್ಲಿ ೦೭, ಫೆಬ್ರವರಿ ೧೯೨೬ರಲ್ಲಿ ಜನಿಸಿದರು. ಕನ್ನಡ ಅಧ್ಯಾಪಕರಾಗಿ ಜೀವನ ಪಥವನ್ನಾರಂಭಿಸಿದ ಶ್ರೀಯುತರು ಕನ್ನಡ ಸಾಹಿತ್ಯ ಕ್ಷೇತ್ರದ ವಿವಿಧ ಪ್ರಕಾರಗಳಲ್ಲಿ ತಮ್ಮ ಬರವಣಿಗೆಯನ್ನು ಮಾಡಿದ್ದಾರೆ. ಕವಿಯಾಗಿ ಅವರು ಸುಮಾರು ೧೧ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಹಲವಾರು ಕೃತಿಗಳ ರಚನೆ ಮಾಡಿದ್ದಾರೆ. ಅಷ್ಟೇ ಅಲ್ಲ ರಾಷ್ಟ್ರಕವಿ ಎಂಬ ಬಿರುದನ್ನು ಕರ್ನಾಟಕ ಸರ್ಕಾರದಿಂದ ೨೦೦೬ರಲ್ಲಿ ಸ್ವೀಕರಿಸಿದ್ದಾರೆ.

ಡಾ. ಜಿ.ಎಸ್. ಶಿವರುದ್ರಪ್ಪನವರನ್ನು ದಿನಾಂಕ ೨೨-೧೧-೨೦೧೨ರಂದು ಸಂದರ್ಶನ ನಡೆಸಿದಾಗ ಅವರು ಶಿಕ್ಷಣ ಮತ್ತು ಚರಿತ್ರೆಯ ಬಗ್ಗೆ ಹೇಳಿರುವ ಮಾತುಗಳೆಂದರೆ, ಮಕ್ಕಳ ಮನಸ್ಸನ್ನು ಅರಿತು ಅವರ ಜ್ಞಾನ ದಿಗಂತವನ್ನು ತಲುಪಲು ಅಗತ್ಯವಾದಂತಹ ಜ್ಞಾನವನ್ನು ಒದಗಿಸುವುದೇ ಶಿಕ್ಷಣವೆಂದರು. ಇಂದಿನ ದಿನಗಳಲ್ಲಿ ಅಂತಹ ಶಿಕ್ಷಣವನ್ನು ಶಾಲಾ-ಕಾಲೇಜುಗಳಲ್ಲಿ ಪಡೆಯಲು ಮಕ್ಕಳು ಹರಸಾಹಸ ಮಾಡುತ್ತಿದ್ದಾರೆ. ಏಕೆಂದರೆ ಇಂದಿನ ಶಿಕ್ಷಣವೆಂದರೆ ಪರೀಕ್ಷಾ ದೃಷ್ಟಿಯಿಂದ ಅವಶ್ಯಕವಾದಂತಹ ಪಠ್ಯಕ್ರಮವನ್ನು ಅಭ್ಯಸಿಸಿ ಪೂರ್ಣಗೊಳಿಸುವುದಾಗಿದೆ. ಆದರೆ ಇದು ಪರಿಪೂರ್ಣ ಶಿಕ್ಷಣವೆಂದು ಕರೆಸಿಕೊಳ್ಳುವುದಿಲ್ಲ.

ಚರಿತ್ರೆಯ ಬಗ್ಗೆ ಅವರು ತಮ್ಮ ಕವನದಲ್ಲಿ ಹೆಚ್ಚಾಗಿ ಹೇಳಿಲ್ಲವೆಂದರು. ಆದರೆ ಕಾರ್ಗಿಲ್ ಯುದ್ಧ ಸಮಯದಲ್ಲಿ ತಮ್ಮ ಕವನದಲ್ಲಿ ಚರಿತ್ರೆ ಎಂದರೆ ಅದು ರಕ್ತಸಿಕ್ತ ಎಂಬುದಾಗಿ ಬರೆಯಲಾಗಿದೆ. "ಏಕೆಂದರೆ ಅಂದಿನ ಸಂದರ್ಭದಲ್ಲಿ ಅದು ಬರಿ ಹೋರಾಟ ಅನೇಕ ಜನರ ಪ್ರಾಣ ಬಲಿದಾನ, ಸಾವು, ನೋವು, ರಕ್ತಮಯವಾದಂತಹ ರೀತಿಯಲ್ಲಿತ್ತು. ಅನೇಕ ಯೋಧರು ದೇಶಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು. ಹೀಗಾಗಿ ಅಂದು ಅದೇ ರೀತಿ ಬರೆಯಲಾಗಿದೆ. ಆದರೆ ಪ್ರಾಥಮಿಕ ಹಾಗು ಮಾಧ್ಯಮಿಕ ಶಾಲಾ ತರಗತಿಯ ಮಕ್ಕಳಿಗೆ ಚರಿತ್ರೆ ಪಠ್ಯಪುಸ್ತಕಗಳು ಕೇವಲ ರಾಜಮಹಾರಾಜರ ಚರಿತ್ರೆಯನ್ನು ಹೇಳಿದರೆ ಸಾಲದು. ಕೇವಲ ಚರಿತ್ರೆ ಎಂದರೆ

ರಾಜಕಿಯ ಆಡಳಿತವನ್ನು ಅದು ಒಳಗೊಂಡಿಲ್ಲ. ಅದು ಒಂದು ಕಾಲಘಟ್ಟದ ರಾಜನ ಪರಿವಾರ, ಸೇವಕರು, ಸೈನಿಕರು ಹಾಗೂ ತನ್ನ ಸಾಮ್ರಾಜ್ಯದ ಜನರೆಲ್ಲರ ಚರಿತ್ರೆಯನ್ನು ಅದು ಬಿಂಬಿಸುವಂತಿರಬೇಕು."[೩೭] ಅಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿ, ಸಂಗೀತ , ವಾಸ್ತುಶಿಲ್ಪ ಇತ್ಯಾದಿಗಳಿಗೆ ರಾಜನ ಹಾಗೂ ಜನರ ಕೊಡುಗೆ ಏನು ಎಂಬುದು ಚರಿತ್ರೆ ಪಠ್ಯಪುಸ್ತಕಗಳಲ್ಲಿ ದಾಖಲಿಸಬೇಕು. ಚರಿತ್ರೆ ಎಂದರೆ ಮಕ್ಕಳ ಕಲ್ಪನೆಯಲ್ಲಿ ಕೇವಲ ಯುದ್ಧ, ಹೋರಾಟ, ಸಾವು, ನೋವು ಎಂಬ ಕಲ್ಪನೆಯನ್ನು ಅವರಿಂದ ದೂರ ಮಾಡಬೇಕು. ಆಗ ಮಾತ್ರ ನಿಜವಾದ ಚರಿತ್ರೆ ಏನು ಎಂಬುದು ತಿಳಿಯಲು ಸಾಧ್ಯ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆ ಪಾಠಗಳಲ್ಲಿ ಎಲ್ಲವನ್ನು ಹೇಳಲಿಕ್ಕೆ ಸಾಧ್ಯವಾಗದೇ ಇದ್ದರೂ ಅವರ ಮನಸ್ಸಿನ ಮಟ್ಟಕ್ಕೆ ಅನುಗುಣವಾಗಿ ವಿಷಯಗಳನ್ನು ಸೇರ್ಪಡೆಗೊಳಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಾರೆಯಾಗಿ ಜಿ.ಎಸ್. ಶಿವರುದ್ರಪ್ಪನವರು ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ರಾಜಕೀಯೇತರವಾದ ಒಂದು ಕಾಲಘಟ್ಟದಲ್ಲಿ ಇರುವಂತಹ ಸಮಗ್ರ ಚಿತ್ರಣವನ್ನು ಚರಿತ್ರೆ ಪಾಠಗಳ ಮೂಲಕ ಮಕ್ಕಳಲ್ಲಿ ಮೂಡಿಸುವಂತಹ ಕೆಲಸವಾಗಬೇಕು ಎಂದಿದ್ದಾರೆ.

**೪.೩.೪. ಚಂದ್ರಶೇಖರ ಪಾಟೀಲ**

ಚಂದ್ರಶೇಖರ ಪಾಟೀಲರು ಒಬ್ಬ ಕವಿ, ನಾಟಕಕಾರ, ನಟ, ಪ್ರಕಾಶಕ ಮುಂತಾದ ಹಲವು ಬಗೆಯ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲವಾಗಿರುವ ಬಹುಮುಖ ಪ್ರತಿಭೆಯುಳ್ಳವರು. 'ಕರ್ನಾಟಕ ಬರಹಗಾರರು ಮತ್ತು ಕಲಾವಿದರ ಒಕ್ಕೂಟ, ಜೆ.ಪಿ. ಚಳುವಳಿ, ಬಂಡಾಯ ಚಳುವಳಿ, ಗೋಕಾಕ ಚಳುವಳಿ, ಮುಂತಾದ ಪ್ರಗತಿಪರ ಚಳುವಳಿಗಳಲ್ಲಿ ಸಕ್ರಿಯವಾಗಿ ತಮ್ಮನ್ನ ತಾವು ತೊಡಗಿಸಿಕೊಂಡವರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದರೂ ಹಾಗೆಯೇ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಅನೇಕ ಕೃತಿಗಳನ್ನು ರಚನೆ ಮಾಡಿರುವ ಇವರು ಕಳೆದ ೩೦ ವರ್ಷಗಳಿಂದ ಸಂಕ್ರಮಣ ಪತ್ರಿಕೆಯ ಸಂಪಾದಕರಾಗಿ ಪ್ರಕಟಿಸುತ್ತಿದ್ದಾರೆ. ಈ ಪತ್ರಿಕೆಯಲ್ಲಿ ಕರ್ನಾಟಕದ ಎಡಪಂಥೀಯ ವಿಚಾರಧಾರೆಗಳಿಗೆ ಉತ್ತಮ ವೇದಿಕೆಯಾಗಿಸಿಕೊಂಡು ಕೆಲಸ ಮಾಡುತ್ತಿದ್ದಾರೆ. ದಲಿತ-ಬಂಡಾಯ ಸಾಹಿತ್ಯದ ಚಟುವಟಿಕೆಗಳಲ್ಲಿ, ಸಾಹಿತ್ಯ ವಿಮರ್ಶೆಯನ್ನು ಬೆಳೆಸಿದ ಕೀರ್ತಿ ಈ ಪತ್ರಿಕೆಯದಾಗಿದೆ. ಇದಲ್ಲದೆ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ದುರಾಡಳಿತವನ್ನು ಪ್ರಶ್ನಿಸಿ ಜೈಲು ಸೇರಿದ ಏಕೈಕ ಕನ್ನಡದ ಸಾಹಿತಿಯಾಗಿದ್ದಾರೆ. ಒಟ್ಟಾರೆಯಾಗಿ ಅವರ ಭಾಷಣಗಳಲ್ಲಿ, ಸಾಹಿತ್ಯ ಕೃತಿಗಳಲ್ಲಿ ವೈಚಾರಿಕತೆಯನ್ನು ಕಾಣಬಹುದಾಗಿದೆ. ಇಂದಿನ ಶಿಕ್ಷಣ ಮನುಷ್ಯರನ್ನು ಅತಂತ್ರಗೊಳಿಸುವ ವ್ಯವಸ್ಥೆಯಾಗಿದೆ. ಶಿಕ್ಷಣವು ಮನುಷ್ಯನನ್ನು ಸ್ವಂತ ಅಲೋಚನೆಗೆ ಹಚ್ಚುವ ಮಾಧ್ಯಮವಾಗಬೇಕು. ಪ್ರತಿ ಪ್ರಾಥಮಿಕ ಶಿಕ್ಷಣ ಮಾತೃ ಭಾಷೆಯಿಂದ ಆರಂಭವಾಗಬೇಕು. ನಮ್ಮಲ್ಲಿ ಕನ್ನಡ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮವಾಗಬೇಕು[೩೮] ಎನ್ನುತ್ತಾರೆ. ಅದೇ ರೀತಿ ಇಂದು ರಾಜಕೀಯ ಪಕ್ಷಗಳ ಸಿದ್ಧಾಂತಗಳಿಗೆ ಅನುಗುಣವಾಗಿ ಚರಿತ್ರೆ ಪಠ್ಯಗಳು ರೂಪುಗೊಳ್ಳುತ್ತವೆ. ಚರಿತ್ರೆ ಕೆಲವೇ ವ್ಯಕ್ತಿಗಳನ್ನು ಪ್ರತಿನಿಧಿಸುತ್ತದೆ. ಇದರಿಂದ ಸಮಾಜದಲ್ಲಿ ನಿರೀಕ್ಷಿತ ಬದಲಾವಣೆ ಅಸಾಧ್ಯ ಎನ್ನುತ್ತಾರೆ

### ೪.೩.೫. ಡಾ. ಎಂ. ಚಿದಾನಂದಮೂರ್ತಿ

ಡಾ. ಎಂ. ಚಿದಾನಂದಮೂರ್ತಿಯವರು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಹಿರೆಕೋಗಲೂರು ಗ್ರಾಮದಲ್ಲಿ ೧೦-೦೫-೧೯೩೧ರಲ್ಲಿ ಜನಿಸಿದರು. ಪ್ರಾಧ್ಯಾಪಕರಾಗಿ ವೃತ್ತಿಯನ್ನು ಆರಂಭಿಸಿದ ಇವರು ಕನ್ನಡ ಸಾಹಿತ್ಯದಲ್ಲಿ ವಿಮರ್ಶಕರಾಗಿ, ಸಂಶೋಧನೆ, ಭಾಷಾಶಾಸ್ತ್ರಜ್ಞರಾಗಿ ತಮ್ಮ ಸೇವೆಯನ್ನು ಮಾಡಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಸಂಶೋಧನ ತರಂಗ, ಬಸವಣ್ಣನವರು ಇವರ ಕೃತಿಗಳು, ವಿಜ್ಞಾನದ ಮೂಲತತ್ವಗಳು, ಭಾಷಾ ವಿಜ್ಞಾನಗ್ರಂಥ, ವೀರಗಲ್ಲುಗಳ ಮತ್ತು ಮಾಸ್ತಿ ಕಲ್ಲುಗಳು ಇವರ ಶಾಸನಶಾಸ್ತ್ರ ಗ್ರಂಥಗಳಾಗಿವೆ. ಇವರ ಹೊಸತು ಹೊಸತು ಕೃತಿಗೆ ಕೇಂದ್ರ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಈ ಕೃತಿಯನ್ನು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ.

ಡಾ. ಎಂ. ಚಿದಾನಂದಮೂರ್ತಿಯವರು ಚರಿತ್ರೆ ಎಂಬುದರ ಬಗ್ಗೆ ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ, "ಇವರ ದೃಷ್ಟಿಕೋನದಲ್ಲಿ ಚರಿತ್ರೆ ಎಂದರೆ ಅದು ಕೇವಲ ಗತಕಾಲದ ಘಟನೆಗಳಿಂದ ನಾಗರಿಕತೆಗಳು, ಮಾನವನ ವಿಕಾಸ, ಅವನ ಜೀವನ ವಿಧಾನ, ಪದ್ಧತಿ, ರೂಢಿ, ಸಂಪ್ರದಾಯಗಳು ಹಾಗು ರಾಜಮಹಾರಾಜರ ಕಾಲದ ಜೀವನ ಘಟನೆಗಳನ್ನು ಮಕ್ಕಳಿಗೆ ತಿಳಿಸುವುದು ಕೇವಲ ಚರಿತ್ರೆ ಎಂದು ಕರೆಸಿಕೊಳ್ಳುವುದಿಲ್ಲ. ಚರಿತ್ರೆ ಎಂಬುದು ಪ್ರಾಚಿನ ಕಾಲದಿಂದ ಇಂದಿನ ದಿನಮಾನದವರೆಗೆ ನಡೆಯಬಹುದಾದ ಮನುಷ್ಯನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ, ಕಲೆ, ವಾಸ್ತುಶಿಲ್ಪಗಳ ಇತ್ಯಾದಿಗಳೆನ್ನಲ್ಲ ಮಕ್ಕಳಿಗೆ ತಿಳಿಸುವುದು ನಿಜವಾದ ಚರಿತ್ರೆ ಎಂದು ಕರೆಸಿಕೊಳ್ಳುತ್ತದೆ."[೫೯] ಮಕ್ಕಳಿಗೆ ಪ್ರಾಥಮಿಕ ಹಂತದಲ್ಲಿ ಚರಿತ್ರೆ ಎಂದರೆ ಅದು ಹಿಂದೆ ನಡೆದ ಘಟನೆಗಳ ಕಥೆ ಎಂದು ತಿಳಿಸಿದ್ದಾರೆ. ಇದು ಬದಲಾಗಬೇಕು. ಮಕ್ಕಳ ಮನಸ್ಸಿನಲ್ಲಿ ನಿಜವಾದ ಚರಿತ್ರೆಯ ಕಲ್ಪನೆಯ ಆಯಾಮಗಳನ್ನು ಮೂಡಿಸಲು ಅಗತ್ಯವಾದಂತಹ ಚರಿತ್ರೆ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಬೇಕು ಎಂದಿದ್ದಾರೆ. ಇದರಿಂದಾಗಿ ನಮ್ಮ ಭವ್ಯ ಇತಿಹಾಸ ಉಳಿಯಲು ಮತ್ತು ಬೆಳೆಯಲು ಸಾಧ್ಯ. ಇಂತಹ ಇತಿಹಾಸ ಸತ್ಯ ಘಟನೆಗಳನ್ನಾಧರಿಸಿ, ವಾಸ್ತವಾಂಶಗಳಿಂದ ಕೂಡಿದ ನೈಜ ಮಾಹಿತಿಯೊಂದಿಗೆ ಸಿದ್ಧಪಡಿಸಿದ ಪಠ್ಯಪುಸ್ತಕಗಳನ್ನು ರೂಪಿಸಿಬೇಕು. ಚರಿತ್ರೆ ಎಂದರೆ ಅದು ಕಥೆ, ಪುರಾಣ, ಊಹೆ ಎಂಬ ಕಲ್ಪನೆಯನ್ನು ಮೊದಲು ದೂರಮಾಡಿ ಹಿಂದೆ ನಡೆದ ಪ್ರತಿಯೊಂದು ಘಟನೆಯ ಕಾರ್ಯಕಾರಣ ಸಂಬಂಧ ಹೊಂದಿವೆ. ಅಂತಹ ಕಾರ್ಯಕಾರಣಗಳನ್ನು ಇಂದು ಪತ್ತೆ ಹಚ್ಚಲಾಗುತ್ತಿದೆ. ಅಂತಹ ಅಂಶಗಳು ಇದು ಚರಿತ್ರೆ ಪಠ್ಯಪುಸ್ತಕಗಳಲ್ಲಿ ಸೇರ್ಪಡೆಗೊಳ್ಳಬೇಕು ಎಂದಿದ್ದಾರೆ

### ೪.೩.೬. ಡಾ. ಸಿದ್ಧಲಿಂಗಯ್ಯ

ನವ್ಯ ಕಾವ್ಯದ ಅವಸಾನ ಕಾಲದಲ್ಲಿ ಸಾಹಿತ್ಯಿಕ ಹಾಗೂ ಸಾಮಾಜಿಕ ವಲಯಕ್ಕೆ ಹೊಸ ಆಲೋಚನೆ ಹಾಗೂ ಅಭಿವ್ಯಕ್ತಿಯನ್ನು ನೀಡಿದ ಪ್ರಮುಖರಲ್ಲಿ ಸಿದ್ಧಲಿಂಗಯ್ಯ ಒಬ್ಬರು. 'ದಲಿತ ಕವಿ' ಎಂದೇ ಪ್ರಖ್ಯಾತರಾದ ಇವರು ದಲಿತ ಹೋರಾಟ ಹಾಗೂ ಸಾಮಾಜಿಕ ಸಮಾನತೆಗಾಗಿ ಎತ್ತರದ ದನಿಯಲ್ಲಿ ಕಾವ್ಯವನ್ನು ಹಾಡನ್ನಾಗಿ ಮಾರ್ಪಡಿಸಿದರು. ಸಿದ್ಧಲಿಂಗಯ್ಯನವರ ಸಾಹಿತ್ಯವು ಒಂದು ಪ್ರಮುಖ ಸಾಂಸ್ಕೃತಿಕ ದಾಖಲೆಯಾಗಿದೆ. ಒಂದು ಅಲಕ್ಷಿತ ಸಮುದಾಯದ ಅನುಭವಗಳನ್ನು

ಯಾವ ಮುಲಾಜು ಇಲ್ಲದೆ ಒಂದು ದಶಕದಲ್ಲಿ ಕಾವ್ಯವಾಗಿಸಿದ ಸಿದ್ಧಲಿಂಗಯ್ಯನವರು ಹಲವು ಕ್ಷೇತ್ರಗಳಲ್ಲಿ ಪರಿಣಿತರಾಗಿದ್ದಾರೆ. ಇವರ ಪ್ರಥಮ ಪ್ರಕಟಿತ ಕೃತಿ 'ಹೊಲೆಮಾದಿಗರ ಹಾಡು' ಸಾಂಸ್ಕೃತಿಕ ಜಗತ್ತಿನ ಬಹುದೊಡ್ಡ ದಾಖಲೆಯಾಗಿದೆ. ಆವರೆಗೂ ಇದ್ದ ಒಂದು ಶ್ರೇಣಿಕೃತ ಸಾಹಿತ್ಯ ಪಾಳೆಯಗಾರಿಕೆಯನ್ನು ಮುರಿದ ಈ ಸಂಕಲನದಿಂದ ಪ್ರಥಮ ಬಾರಿಗೆ 'ಹೊಲೆ-ಮಾದಿಗರಿಗೆ' ಸಾಹಿತ್ಯದಲ್ಲೂ ಸ್ಥಾನ ದೊರೆಯುವಂತಾಯಿತು. ನಂತರದಲ್ಲಿ ಸಂಘಟನೆ ಚಳುವಳಿಗಳ ಚಾಲನೆಯಿಂದ ಈ ದಲಿತ ಸಾಹಿತ್ಯ ಎಡಪಂಥಿಯ ಧೋರಣೆಯ ಪರಂಪರೆಯನ್ನು ಪ್ರತಿನಿಧಿಸುತ್ತಿದೆ. ಇವರ ಪಂಚಮ, ನೆಲಸಮ, ಏಕಲವ್ಯ, ನಾಟಕಗಳಲ್ಲಿ ಎಡಪಂಥಿಯ ಧೋರಣೆಯನ್ನು ಕಾಣಬಹುದಾಗಿದೆ. ಇವುಗಳಲ್ಲಿ ಹಿಂದಿನ ಪರಂಪರೆಯನ್ನು ಪ್ರಶ್ನಿಸುವ ತಪ್ಪುಗಳನ್ನು ಅವಮಾನಗಳನ್ನು ಎತ್ತಿ ಹೇಳಲಾಗಿದೆ.

ಡಾ. ಸಿದ್ಧಲಿಂಗಯ್ಯನವರು ಕನ್ನಡ ಪುಸ್ತಕ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದವರು ಶಿಕ್ಷಣದ ಬಗ್ಗೆಯೂ ಸಾಕಷ್ಟು ಕಳಕಳಿಯನ್ನು ಹೊಂದಿರುವಂತಹವರು. ಶಿಕ್ಷಣ ವ್ಯವಸ್ಥೆಯ ಬಗ್ಗೆ, ಕನ್ನಡ ಶಿಕ್ಷಣದ ಮಾಧ್ಯಮವಾಗುವುದರ ಬಗ್ಗೆ, ಪಠ್ಯಪುಸ್ತಕಗಳ ಬಗ್ಗೆ ಹೀಗೆ ಸಾಕಷ್ಟು ವಿಷಯಗಳಲ್ಲಿ ಅವರು ಚಿಂತನೆಯನ್ನು ನಡೆಸುತ್ತಿದ್ದಾರೆ. ಅದರಲ್ಲಿಯೂ ಇವರ ಚಿಂತನೆಗಳು ಎಡಪಂಥೀಯವಾಗಿವೆ. ಏಕೆಂದರೆ ಅಲಕ್ಷಿತ ಸಮುದಾಯದ ಜನಜೀವನ, ಅವರ ಸ್ಥಿತಿಗತಿ, ನೋವು, ನಲಿವು, ಸ್ಥಾನಮಾನ, ಶೈಕ್ಷಣಿಕ ಸ್ಥಿತಿ, ರಾಜಕೀಯ ಸ್ಥಿತಿ, ಆರ್ಥಿಕ ಸ್ಥಿತಿ, ಸಾಮಾಜಿಕ ಸ್ಥಿತಿ ಇತ್ಯಾದಿಗಳ ಬಗ್ಗೆ ಅವರು ಬಹತೇಕವಾಗಿ ತಮ್ಮ ಕವನಗಳಲ್ಲಿ ಧ್ವನಿಯನ್ನು ಎತ್ತಿದ್ದಾರೆ. ಪ್ರಾಚೀನ ಕಾಲದಿಂದಲೂ ತಳಸಮುದಾಯಗಳು ಶಿಕ್ಷಣದಿಂದ ವಂಚಿತವಾಗುತ್ತಾ ಬಂದಿವೆ. ಇಂತಹ ಸಮುದಾಯದ ಜನರು ಶಿಕ್ಷಣವನ್ನು ಪಡೆದುಕೊಳ್ಳುವುದರ ಮೂಲಕ ಸಮಾಜದಲ್ಲಿ ಸಮಾನವಾದಂತಹ ಸ್ಥಾನಮಾನವನ್ನು ಪಡೆಯುವಂತರಾಗಬೇಕು. ಆಗ ಮಾತ್ರ ಸಾಮಾಜಿಕ ಸಮಾನತೆ ಕಾಣಲು ಸಾಧ್ಯವೆಂದಿದ್ದಾರೆ.

ಡಾ. ಸಿದ್ಧಲಿಂಗಯ್ಯನವರು ಚರಿತ್ರೆ ಎಂಬುದು ಅದು ಕೇವಲ ನಡೆದುಹೋದ ಘಟನೆಗಳಿಗೆ ಮಾತ್ರ ಸೀಮಿತವಾಗಿರುವುದಿಲ್ಲ. ಅವು ಒಂದು ಕಾಲಘಟ್ಟದಲ್ಲಿ ಜೀವಂತವಾಗಿ ಇದ್ದ ಘಟನೆಗಳು ಎಂಬುದನ್ನು ಯಾರು ಮರೆಯಬಾರದು. ಏಕೆಂದರೆ ಪ್ರಾಚೀನದಿಂದ ಇಂದಿನವರೆಗೂ ಅನೇಕ ಕಾಲಘಟ್ಟದಲ್ಲಿ ಮನುಷ್ಯ ಬಾಳಿ ಬದುಕಿ, ಮರಣ ಹೊಂದಿದ್ದಾನೆ. ಆದರೆ ಅವನು ನೀಡಿರುವಂತಹ ಕೊಡುಗೆಗಳು ಎಲ್ಲಾ ಕಾಲಕ್ಕೂ ಜೀವಂತವಾಗಿರುವವು ಎಂಬುದನ್ನು ನಾವು ಅರಿಯಬೇಕಾಗಿದೆ. "ಚರಿತ್ರೆ ಎಂದರೆ ರಾಜಮಹಾರಾಜರಿಗೆ ಮಾತ್ರ ಸಂಬಂಧಿಸಿದ ಚರಿತ್ರೆಯಲ್ಲ. ಅದು ಅವನ ಮತ್ತು ಅವನ ಪರಿವಾರ ವರ್ಗಕ್ಕೆ ಸೀಮಿತಗೊಳಿಸಿ ಚರಿತ್ರೆಯನ್ನು ಹೇಳಲಾಗುತ್ತದೆ. ಆದರೆ ನಿಜವಾದ ಚರಿತ್ರೆ ಎಂದರೆ ಒಂದು ಸಮಾಜದ ಸಮಗ್ರ ಚಿತ್ರಣವನ್ನು ನೀಡುವುದೇ ಆಗಿದೆ ಎಂದಿದ್ದಾರೆ."[೬೦] ಇದರಲ್ಲಿ ಆಳುವ ರಾಜನಿಂದ ಹಿಡಿದು ಜನಸಾಮಾನ್ಯನವರೆಗೂ ಎಲ್ಲವೂ ಒಳಗೊಂಡ ಅಂಶಗಳು ಬಿಂಬಿತವಾಗಿರಬೇಕು, ಏಕೆಂದರೆ ಒಂದು ಯುದ್ಧದಲ್ಲಿ ಜಯಿಸುವಾಗ, ಒಂದು ದೇವಾಲಯ ನಿರ್ಮಿಸುವಾಗ, ಒಂದು ಶಿಲ್ಪ ಕೆತ್ತುವಾಗ, ಒಂದು ರಾಜ್ಯ ಸುವರ್ಣ

ಸಾಮ್ರಾಜ್ಯವಾಗುವಾಗ ಅದರಲ್ಲಿ ಒಬ್ಬ ಸಾಮಾನ್ಯ ಮನುಷ್ಯನ ಶ್ರಮ ಏನು ಎಂಬುದು ರೂಪಿಸಬೇಕು. ಅದು ಇಂದು ಚರಿತ್ರೆಯಲ್ಲಿ ಅಲಕ್ಷಿತವಾಗಿದೆ. ಪ್ರತಿಯೊಂದು ವರ್ಗದ ಜನರು ಒಂದು ಕೊಡುಗೆಯನ್ನು ನೀಡುವ ಶಕ್ತಿ ಹೊಂದಿದ್ದಾರೆ. ಅಂತಹ ಶಕ್ತಿಯನ್ನು. ಎತ್ತಿ ತೋರಿಸುವ ಕೆಲಸ ಇಂದು ಆಗಬೇಕಾಗಿದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಇನ್ನು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳು ಮಕ್ಕಳ ವಯೋ ಸಾಮರ್ಥ್ಯಕ್ಕೆ ಅನುಗುಣವಾಗಿ ರೂಪಿಸಬೇಕು. ಚರಿತ್ರೆಯ ಬಗ್ಗೆ ಹೆಚ್ಚು ತಿಳಿಸುವುದು ಸೂಕ್ತ. ಪಠ್ಯಪಸ್ತಕಗಳ ಬಗ್ಗೆ ಸಾಕಷ್ಟು ಚಿಂತನೆಯನ್ನು ನಡೆಸಲಾಗಿದೆ. ಅದರಲ್ಲಿ ಇವರು ವಿಧಾನಪರಿಷತ್ತಿನ ಸದಸ್ಯರಾಗಿದ್ದಾಗ ಪಠ್ಯಪುಸ್ತಕಗಳಲ್ಲಿ ಇದ್ದ ಲೋಪದೋಷಗಳ ಬಗ್ಗೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಅಂತಹ ವಿಷಯಗಳನ್ನು ಪಠ್ಯಪುಸ್ತಕದಿಂದ ಕೈಬಿಡುವ ಬಗ್ಗೆ ವಾದ ಮಂಡಿಸಲಾಗಿತ್ತು ಎಂದಿದ್ದಾರೆ. ಅದರಲ್ಲಿ ಅಂದು ೭೦–೮೦ರ ದಶಕದಲ್ಲಿ ಪ್ರಮುಖವಾಗಿ ಪಠ್ಯಪುಸ್ತಕಗಳಲ್ಲಿ ಮೇಲ್ವರ್ಗ–ಕೆಳವರ್ಗ ಎಂಬ ವಿಚಾರಗಳು ಸೂಕ್ಷ್ಮವಾಗಿ ಸೇರಿ ಹೋಗುತ್ತಿದ್ದವು. ಇಂತಹವುಗಳ ಬಗ್ಗೆ ಯಾರು ಹೋರಾಟದ ಮನೋಭಾವನೆಯನ್ನು ತಾಳಲಿಲ್ಲ. ಆದರೆ ಅದನ್ನು ತಾವು ಖಂಡಿಸಿದಾಗಿ, ಅಂತಹ ವಿಷಯವನ್ನು ಪಠ್ಯಪುಸ್ತಕದಿಂದ ವಿಮುಕ್ತಿಗೊಳಿಸುವಂತೆ ಮಾಡಲಾಯಿತು ಎಂದಿದ್ದಾರೆ.

### ೪.೩.೭. ಡಾ. ಓ. ಅನಂತರಾಮಯ್ಯ

ಡಾ. ಓ. ಅನಂತರಾಮಯ್ಯ ಅವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳ ಇತಿಹಾಸ ವಿಭಾಗಗಳ ಪ್ರಾಧ್ಯಾಪಕರಾಗಿ ಹಾಗೂ ತುಮಕೂರು ವಿಶ್ವವಿದ್ಯಾಲಯದ ಸಂಸ್ಥಾಪಕ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದರು. ಇವರ ಪ್ರಕಾರ ಚರಿತ್ರೆ ಪಠ್ಯಗಳಲ್ಲಿ ಬೇರೆ ಬೇರೆ ಕಾರಣಕ್ಕಾಗಿ ಹಲವಾರು ವೈಭವೀಕರಣ ಮತ್ತು ತಿರುಚುವಿಕೆ ಹಿಂದಿನಿಂದಲೂ ನಡೆಯುತ್ತ ಬಂದಿದೆ. ಇಲ್ಲಿ ಶ್ರೀಸಾಮಾನ್ಯರು ನಡೆಸಿದ ಹೋರಾಟಗಳಿಗೆ ಬೆಲೆ ಇಲ್ಲದಂತೆ ಆಗಿದೆ.[೯೧] ಆದ್ದರಿಂದ ಈ ದೇಶದ ಎಲ್ಲಾ ಜನರನ್ನು ಪ್ರತಿನಿಧಿಸುವ ಇತಿಹಾಸ ರಚನೆಯಾಗಬೇಕು. ಅದನ್ನು ಕಡ್ಡಾಯವಾಗಿ ಪ್ರಾಥಮಿಕ ಹಂತದಲ್ಲಿ ಕಲಿಯಲು ಅವಕಾಶ ಕಲ್ಪಿಸಬೇಕು. ಇದರಿಂದ ಚರಿತ್ರೆಯ ಕುರಿತು ಜನರಲ್ಲಿ ಮನೆಮಾಡಿಕೊಂಡಿರುವ ತಪ್ಪುಗ್ರಹಿಕೆಗಳು ದೂರವಾಗಿ ಮಕ್ಕಳು ವಾಸ್ತವಿಕ ಇತಿಹಾಸ ಅರಿಯಲು ಸಹಾಯಕವಾಗುತ್ತದೆ. ಎಂದಿದ್ದಾರೆ.

### ೪.೩.೮. ಡಾ. ಎಸ್.ಎ. ಬಾರಿ

ಡಾ. ಎಸ್.ಎ. ಬಾರಿಯವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಬಳ್ಳಾರಿ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯದ ವಿಶೇಷ ಅಧಿಕಾರಿಗಳಾಗಿ ಮತ್ತು ಮೊದಲ ಕುಲಪತಿಗಳಾಗಿದ್ದರು. ಮಂಗಳೂರು, ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾಲಯಗಳ ಇತಿಹಾಸ ವಿಭಾಗಗಳ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಹಾಗೂ ಕುವೆಂಪು ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಈಗ ಗುಜರಾತಿನ ಅಹಮದಾಬಾದ್‌ನಲ್ಲಿರುವ ಕೇಂದ್ರೀಯ

ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾರೆ. ಇವರ ಪ್ರಕಾರ ಚರಿತ್ರೆಯಲ್ಲಿ ವೈಭವೀಕರಣ ಮತ್ತು ಕೋಮುವಾದಿ ಅಂಶಗಳ ಬರವಣಿಗೆ ಅಧಿಕಗೊಂಡಿದೆ. ಭಾರತೀಯ ಇತಿಹಾಸಕಾರರು ಮುಸ್ಲಿಮರನ್ನು ದಾಳಿಕೋರರು, ಮತಾಂಧರು, ಕ್ರೂರಿಗಳು ಎನ್ನುವ ಹಾಗೇ ತಪ್ಪಾಗಿ ಗ್ರಹಿಸಿ ಅವರ ಉತ್ತಮ ಸಾಧನೆಗಳನ್ನು ಕೈಬಿಟ್ಟು ಅವರ ದೌರ್ಬಲ್ಯಗಳನ್ನೇ ಪ್ರಧಾನವಾಗಿಟ್ಟುಕೊಂಡು ಇತಿಹಾಸ ರಚನೆ ಮಾಡಲಾಗಿದೆ. ಹಾಗಾದರೆ ಭಾರತದಲ್ಲಿ ನಡೆದ ಉಳಿದ ದಾಳಿಗಳು/ಯುದ್ಧಗಳು ಯಾವ ಉದ್ದೇಶಕ್ಕಾಗಿ ನಡೆದಿವೆ ಎಂದು ಪ್ರಶ್ನಿಸುತ್ತಾರೆ. ಇಂತಹ ಆಧಾರರಹಿತ ಘಟನೆಗಳನ್ನೇ ದುರುದ್ದೇಶದಿಂದ ಅದನ್ನೇ ಸತ್ಯ ಎಂದು ಪ್ರತಿಬಿಂಬಿಸಿ ಚರಿತ್ರೆಯನ್ನು ಮಕ್ಕಳಿಗೆ ಪ್ರಾಥಮಿಕ ಹಂತದಿಂದ ಪಠ್ಯಗಳ ಮೂಲಕ ಹೇಳಿಕೊಟ್ಟು ನಾವು ದೊಡ್ಡ ತಪ್ಪುಗಳನ್ನು ಮಾಡುತ್ತಿದ್ದೇವೆ. ಆದ್ದರಿಂದ ವಾಸ್ತವಿಕ ಅಂಶಗಳನ್ನು ಆಧರಿಸಿ ರಚಿತವಾದ ಇತಿಹಾಸದ ಅವಶ್ಯಕತೆ ನಮಗೆ ಇಂದು ಅತಿ ಅತ್ಯಗತ್ಯ. ಯಾವುದೋ ಒಂದು ಧರ್ಮದ ಅಥವಾ ಜನರ ಆಶಯಗಳನ್ನು ಪ್ರತಿಬಿಂಬಿಸುವ ಇತಿಹಾಸದ ಬದಲಾಗಿ ಧರ್ಮಾತೀತವಾಗಿ, ಜಾತ್ಯಾತೀತವಾಗಿ ನಮ್ಮ ಹಿಂದಿನವರ ಸಾಧನೆ, ಅವರ ಉತ್ತಮ ಮಾನವೀಯ ಮೌಲ್ಯಗಳನ್ನು ಮಕ್ಕಳಿಗೆ ಕಲಿಸುವ ವ್ಯವಸ್ಥೆ ಆಗಬೇಕು. ಅಹಿಂಸೆಯ ಕಾರಣಕ್ಕೆ ಅಶೋಕ ಯುದ್ಧ ಮಾಡುವುದನ್ನು ಕೈಬಿಟ್ಟ ಎಂದಷ್ಟೇ ಹೇಳಿ ಕೈತೊಳೆದುಕೊಂಡರೆ ಚರಿತ್ರಕಾರನ ಕೆಲಸ ಮುಗಿಯುವುದಿಲ್ಲ. ಅದಕ್ಕೆ ಬದಲಾಗಿ ಯುದ್ಧ ಕೆಟ್ಟದ್ದು, ಅದು ಯಾಕೆ ಮುಖ್ಯ, ಅದು ಹೇಗೆ ಸಾವಿರಾರು ಜನರ ಮಾನ ಪ್ರಾಣಗಳಿಗೆ ಘಾತುಕ ಉಂಟುಮಾಡಬಹುದು. ಶಾಂತಿಯ ದೃಷ್ಟಿಯಿಂದ ಮನುಷ್ಯ ಹೇಗೆ ಕಲಹಪ್ರಿಯನಾಗದೇ ಬದುಕಬೇಕೆಂಬುದನ್ನು ಮಕ್ಕಳಿಗೆ ಕಲಿಸುವ ಅವಶ್ಯಕತೆ ಇದೆ. ಈ ರೀತಿ ಆದಾಗ ಮಾತ್ರ ಚರಿತ್ರೆ ಕಲಿಯುವುದು ಸಾರ್ಥಕ ಎನ್ನುವ ಭಾವನೆ ನಮ್ಮಲ್ಲಿ ಬರುವ ಸಾಧ್ಯತೆ ಇದೆ. ಇಲ್ಲ ಅಂದರೆ ಎಲ್ಲರೂ ಹೇಳುವ ಹಾಗೇ ಅದೊಂದು ನಿಷ್ಪ್ರಯೋಜಕ ಜ್ಞಾನವಾಗಿಯೇ ಉಳಿದುಬಿಡುವ ಅಪಾಯವಿದೆ.

### ೪.೩.೯. ಡಾ. ಎಸ್. ಚಂದ್ರಶೇಖರ್

ಡಾ. ಎಸ್. ಚಂದ್ರಶೇಖರ್‌ರವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಗುಲ್ಬರ್ಗ ಕೇಂದ್ರೀಯ ವಿಶ್ವವಿದ್ಯಾಲಯ ವಿಶೇಷ ಅಧಿಕಾರಿಗಳಾಗಿ ಮತ್ತು ಬೆಂಗಳೂರು ವಿಶ್ವವಿದ್ಯಾಲಯ ಇತಿಹಾಸ ವಿಭಾಗದ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ. ಅವರ ಪ್ರಕಾರ ಇಲ್ಲಿಯವರೆಗೆ ರಚಿತವಾದ ಚರಿತ್ರೆ ಪಠ್ಯಪುಸ್ತಕಗಳು ಕೆಲವರ ಹಿಡಿತಕ್ಕೆ ಒಳಗಾಗಿ ರಚನೆಯಾಗಿವೆ. ಅವು ಸಾಮಾನ್ಯವಾಗಿ ನಮ್ಮನ್ನಾಳುವ ಸರ್ಕಾರಗಳ ಮನಸ್ಥಿತಿಯನ್ನು ಅವಲಂಬಿಸಿರುತ್ತವೆ. ಅವುಗಳ ಅಜೆಂಡಾದ ಮೇಲೆ ರಚನೆಯಾಗಿರುವುದರಿಂದ ಇಲ್ಲಿಯವರೆಗೆ ಹಿಂದುಳಿದ ವರ್ಗಗಳ ಹೋರಾಟವಾಗಲಿ, ಅವರ ಸ್ಥಾನಮಾನಗಳ ಬಗ್ಗೆಯಾಗಲಿ ಎಲ್ಲಿಯೂ ಸರಿಯಾದ ರೀತಿಯಲ್ಲಿ ಪ್ರಸ್ತಾಪವಾಗಿಲ್ಲ.[೬೨] ಅನೇಕ ದಲಿತ ಸಮುದಾಯಗಳು, ಹಿಂದುಳಿದ ಸಮುದಾಯಗಳ ಜೀವನದ ವಿವಿಧ ಆಯಾಮಗಳನ್ನು ಚರಿತ್ರೆ ಪಠ್ಯಪುಸ್ತಕದಲ್ಲಿ ದಾಖಲಿಸಬೇಕಾದ ಅಗತ್ಯವಿದೆ ಎನ್ನುವ ಸಂಗತಿ ಇವರಿಂದ ತಿಳಿಯುತ್ತದೆ.

**೪.೩.೧೦. ಗೊರೂರು ಚೆನ್ನಬಸಪ್ಪ (ಗೊರುಚ)**

ಗೊರೂರು ಚೆನ್ನಬಸಪ್ಪನವರು ಚರಿತ್ರೆಯು ದ್ವಂದ್ವದಲ್ಲಿ ರಚನೆಯಾಗಿದೆ. ಇದರಿಂದ ಮಕ್ಕಳು ಸತ್ಯವನ್ನು ಅರಿಯದೆ ಅದರಿಂದ ವಂಚಿತರಾಗುತ್ತಾರೆ. ಆದ್ದರಿಂದ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಚರಿತ್ರೆಯ ವಾಸ್ತವಿಕ ಸತ್ಯಗಳನ್ನು ಪಠ್ಯಪುಸ್ತಕಗಳ ಮೂಲಕ ತಿಳಿಸಿಕೊಡಬೇಕಾದ ಅಗತ್ಯವಿದೆ ಎಂದು ಹೇಳುತ್ತಾರೆ.

**೪.೩.೧೧. ಎಚ್.ಎಸ್. ದೊರೆಸ್ವಾಮಿ**

ಎಚ್.ಎಸ್. ದೊರೆಸ್ವಾಮಿ ಅವರು ಸ್ವಾತಂತ್ರ್ಯ ಹಾಗೂ ಏಕೀಕರಣದಲ್ಲಿ ಹೋರಾಡಿದ ಮಹಾನ್ ವ್ಯಕ್ತಿ. ಕನ್ನಡ ನಾಡಿನ ಅನೇಕ ಮಹಿಳೆಯರು, ಹೋರಾಟಗಾರರ ಕುರಿತು ಇನ್ನೂ ಚರಿತ್ರೆಯಲ್ಲಿ ಪಾಠಗಳು ರಚನೆಯಾಗಿಲ್ಲ. ಆ ಮಹಾನ್ ನಾಯಕರ ಸಾಹಸಮಯ ಹೋರಾಟ, ಅವರ ಆದರ್ಶಗಳನ್ನು ನಮ್ಮ ಯುವಪೀಳಿಗೆ ಅಳವಡಿಸಿಕೊಳ್ಳಬೇಕಾದರೆ ಅವೆಲ್ಲಾ ಅಂಶಗಳನ್ನು ನಮ್ಮ ಚರಿತ್ರೆ ಪಠ್ಯಪುಸ್ತಕದಲ್ಲಿ ಅಳವಡಿಸಿ ಅವುಗಳನ್ನು ನಮ್ಮ ಮಕ್ಕಳಿಗೆ ಕೆಳ ಹಂತದಿಂದಲೇ ಕಲಿಸಬೇಕಾದ ಅವಶ್ಯಕತೆ ಇದೆ ಎನ್ನುತ್ತಾರೆ.

**೪.೩.೧೨. ಡಾ. ಎಂ.ಎಂ. ಕಲ್ಬುರ್ಗಿ**

ಡಾ. ಎಂ.ಎಂ. ಕಲ್ಬುರ್ಗಿಯವರು ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಪ್ರಕಾರ ಚರಿತ್ರೆಯಲ್ಲಿ ಆಕರಗಳು ಅತಿ ಮುಖ್ಯವಾದ ಪಾತ್ರ ವಹಿಸುತ್ತವೆ. ಶಾಸನಗಳು ನಮಗೆ ಅತ್ಯಂತ ಅಮೂಲ್ಯ ಮಾಹಿತಿ ನೀಡುತ್ತವೆ. ಸಂಶೋಧಕನಾದವನು ಲಭ್ಯ ಆಕರಗಳನ್ನು ಬಹು ಎಚ್ಚರಿಕೆಯಿಂದ ಅಧ್ಯಯನ ಮಾಡಿ ವಿಮರ್ಶಿಸಿ ಅವುಗಳನ್ನು ಬಳಸಿಕೊಳ್ಳಬೇಕು. ದುರಾದೃಷ್ಟವಶಾತ್ ಇತಿಹಾಸದಲ್ಲಿ ಅದೆಷ್ಟೋ ನೈಜ ಆಕರಗಳನ್ನು ಕೈಬಿಡಲಾಗಿದೆ. ಇದರ ಪರಿಣಾಮ ನಮ್ಮಲ್ಲಿ ಕೇವಲ ಒಂದು ಬಗೆಯ ಇತಿಹಾಸ ಮಾತ್ರ ರಚನೆಗೊಂಡಿದೆ. ಇದರಿಂದ ಬೇರೆ ರೀತಿಯ ಇತಿಹಾಸ ನಮ್ಮಲ್ಲಿ ಉಳಿದುಬಂದಿದೆ. ಕೋಟೆ ಕಟ್ಟಿದ, ದೇವಾಲಯ ಕಟ್ಟಿದ ಅಸಂಖ್ಯಾತ ಕುಶಲಕರ್ಮಿಗಳು ನಮ್ಮ ಚರಿತ್ರೆಯ ಪಠ್ಯಗಳಿಂದ ಮಾಯವಾಗಿದ್ದಾರೆ. ಅವರ ಸ್ಥಾನದಲ್ಲಿ ಕೇವಲ ರಾಜ ಮಹಾರಾಜರು ಅಧಿಕಾರಿಗಳು ಮಿಂಚುತ್ತಿದ್ದಾರೆ. ಸಾಹಸದಿಂದ ತಮ್ಮ ಪ್ರಾಣ ತೆತ್ತು ಹೋರಾಟ ಮಾಡಿದ ಸೈನಿಕರ ಸುಳಿವೇ ನಮ್ಮ ಪುಸ್ತಕಗಳಲ್ಲಿ ಇಲ್ಲ. ಇಂತಹ ಇತಿಹಾಸದಿಂದ ನಮ್ಮ ಮಕ್ಕಳು ಕಲಿಯುವುದಾದರೂ ಏನು? ಎಂದು ಅವರು ಪ್ರಶ್ನಿಸುತ್ತಾರೆ. ಅಲ್ಲದೇ ಕಿತ್ತೂರು ಚೆನ್ನಮ್ಮ ಬ್ರಿಟಿಷರ ವಿರುದ್ಧ ಹೋರಾಡಿದಳು ಎಂದು ಹೇಳಿದರೆ ಸಾಲದು, ಬದಲಾಗಿ ಆಕೆಯ ಆಡಳಿತ ನೈಪುಣ್ಯತೆ, ನಿಷ್ಠೆ ಮೊದಲಾದ ಅಂಶಗಳು ಪಠ್ಯದಲ್ಲಿ ಬರಬೇಕಾದ ಅವಶ್ಯಕತೆ ಇದೆ ಎನ್ನುತ್ತಾರೆ. ಮುಂದುವರೆದು ಅವರು ಸರ್ಕಾರಗಳ ಹಸ್ತಕ್ಷೇಪವಿಲ್ಲದೆ ಪಠ್ಯರಚನೆ ಸಮಿತಿಯವರು ವಾಸ್ತವಿಕ ಇತಿಹಾಸವನ್ನು ಇಂದಿನ ಶಾಲಾ ಪಠ್ಯಗಳಲ್ಲಿ ಅಳವಡಿಸಬೇಕಾದ ಅಗತ್ಯವಿದೆ.

### ೪.೩.೧೩. ಡಾ. ಯು. ಸೂರ್ಯನಾಥ ಕಾಮತ್

ಇವರು ರಾಜ್ಯ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ, ಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸಿದ್ದಾರೆ. ಅಲ್ಲದೆ ಬೆಂಗಳೂರಿನ ಮಿಥಿಕ್ ಸೊಸೈಟಿ, ಇಂಡಾಲಾಜಿ ವಿಭಾಗಗಳಲ್ಲಿ ಮತ್ತು ಕರ್ನಾಟಕ ಇತಿಹಾಸ ಅಕಾಡೆಮಿಯ ಸಂಸ್ಥಾಪಕ ಅಧ್ಯಕ್ಷರಾಗಿ, ಗೌರವ ಅಧ್ಯಕ್ಷರಾಗಿ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಕರ್ನಾಟಕ ಇತಿಹಾಸದ ಕೆಲವು ಕೃತಿಗಳನ್ನು ರಚಿಸಿದ್ದಾರೆ. ಇವರು ಇತಿಹಾಸದ ಪಠ್ಯದಲ್ಲಿ ನಮ್ಮ ಉನ್ನತ ಸಂಸ್ಕೃತಿ, ನಮ್ಮ ವೀರ ಪರಂಪರೆ ಸರಿಯಾದ ರೀತಿಯಲ್ಲಿ ದಾಖಲಾಗಬೇಕಿದೆ ಎನ್ನುತ್ತಾರೆ.[೪೩] ಇವರ ಅಭಿಪ್ರಾಯದಲ್ಲಿ ಭಾರತೀಯ ಸಂಸ್ಕೃತಿಯನ್ನು ಚರಿತ್ರೆ ಪಠ್ಯಪುಸ್ತಕಗಳಲ್ಲಿ ದಾಖಲು ಮಾಡುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ.

### ೪.೩.೧೪. ಡಾ. ಷೇಕ್‌ಅಲಿ

ಡಾ. ಷೇಕ್‌ಅಲಿ ಅವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದರು. ಇವರು ಮಂಗಳೂರು ವಿಶ್ವವಿದ್ಯಾನಿಲಯ ಇತಿಹಾಸ ವಿಭಾಗದ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಹಾಗೂ ಕೇರಳ ಕೊಟ್ಟಾಯಂ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಕಮ್ಯೂನಿಸ್ಟ್ ಮತ್ತು ಮುಸ್ಲಿಂ ಇತಿಹಾಸಕಾರರೆಂದೇ ಭಾರತದ ಚರಿತ್ರೆ ಲೇಖನಶಾಸ್ತ್ರದಲ್ಲಿ ಪರಿಗಣಿತರಾಗಿದ್ದಾರೆ.

"ಶಾಲಾಪಠ್ಯಗಳಲ್ಲಿ ಜಾತಿವಾದಗಳು, ಹಿಂದುವಾದಗಳು ತಮಗರಿವಿಲ್ಲದೆ ಆಶ್ರಯ ಪಡೆದುಕೊಂಡು ವಿಜೃಂಭಸುತ್ತಿವೆ. ಇದರಿಂದ ಭಾರತದ ಇತಿಹಾಸ ಎಂದರೆ ಅದು ಕೆಲವರ ಚರಿತ್ರೆ ಮಾತ್ರ ಎಂಬಂತೆ ಭಾಸವಾಗಿದೆ. ಆ ರೀತಿ ಅದನ್ನು ಒತ್ತಾಯಪೂರ್ವಕವಾಗಿ ಬಲಾಢ್ಯರು ಅಲ್ಪಸಂಖ್ಯಾತರ ಮೇಲೆ ನಯವಾಗಿ ಹೇರಿದ್ದಾರೆ. ಈ ಚಾರಿತ್ರಿಕ ವಂಚನೆಯನ್ನು ಅರಿಯಲು ಅನುಕೂಲವಾಗುವಂತೆ ಮುಂದಿನ ಪಠ್ಯಪುಸ್ತಕಗಳನ್ನು ವಾಸ್ತವಿಕ ನೆಲಗಟ್ಟಿನ ಮೇಲೆ ರಚಿಸಬೇಕಾದ ಅಗತ್ಯವಿದೆ" ಎನ್ನುತ್ತಾರೆ. ಭಾರತದ ಮೇಲಿನ ಮುಸ್ಲಿಂ ದಾಳಿಗಳು ಹಲವು ಬದಲಾವಣೆಗೆ ಕಾರಣವಾಗಿವೆ ನಿಜ. ಆದರೆ ಕೆಲವು ಸುಲ್ತಾನರು ಕೈಗೊಂಡ ದಾಳಿಗಳು ಸಂಪತ್ತನ್ನು ಅಪಹರಿಸುವ ಉದ್ದೇಶ ಹೊಂದಿದ್ದವು. ಆ ವ್ಯಾಮೋಹಕ್ಕಾಗಿಯೇ ಅವರು ಭಾರತದ ಮೇಲೆ ಧಾಳಿ ಮಾಡಿದರೆ ಹೊರತು ಕೇವಲ ಜಿಹಾದ್‌ಗಾಗಿ ಅಲ್ಲ. ಈ ರೀತಿಯ ಸತ್ಯಗಳನ್ನು ಚರಿತ್ರೆಕಾರರು ಇಲ್ಲಿಯವರೆಗೆ ಬಿಚ್ಚಿಡದೆ ಮರೆಮಾಚಿದ್ದಾರೆ. ಆದ್ದರಿಂದ ವಿದ್ಯಾರ್ಥಿಗಳಿಗೆ ಕೆಳಹಂತದ ಶಾಲಾ ಶಿಕ್ಷಣದಲ್ಲೇ ಇಂತಹ ಸತ್ಯಗಳನ್ನು ಅರಿಯಲು ಅನುಕೂಲವಾಗುವ ಹಾಗೇ ಪಠ್ಯಗಳು ರೂಪಿತವಾಗಬೇಕಿದೆ ಎನ್ನುವ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ.

### ೪.೩.೧೫. ಡಾ. ಬಿ.ಸಿ. ಮಹಾಬಲೇಶ್ವರಪ್ಪ

ಇವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದವರು. ಗುಲ್ಬರ್ಗ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಅದೇ ವಿಶ್ವವಿದ್ಯಾಲಯದ ಕುಲಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಯು.ಜಿ.ಸಿಯ ಸದಸ್ಯರಾಗಿ ಮತ್ತು ವಿವಿಧ ವಿಶ್ವವಿದ್ಯಾಲಯಗಳು

ಅಕಾಡೆಮಿಕ್ ಕೌನ್ಸಿಲ್‌ಗಳ ಸದಸ್ಯರಾಗಿದ್ದರು. ಇವರ ಪ್ರಕಾರ "ಕೇವಲ ನಮ್ಮನ್ನು ಆಳಿದವರ ಚರಿತ್ರೆಯನ್ನು ಓದುವುದಕ್ಕಿಂತ ಇಲ್ಲಿ ಆಳಿಸಿಕೊಂಡವರ ನೋವು ನಲಿವು, ಅವರ ಕಥನಗಳನ್ನು ಚರಿತ್ರೆ ಮೂಲಕ ಕಟ್ಟಿಕೊಟ್ಟರೆ ಮತ್ತು ಆ ವಿವರಗಳನ್ನು ನಮ್ಮ ಶಾಲಾ ಪಠ್ಯಗಳಲ್ಲಿ ಅಳವಡಿಸಿದರೆ ಸಾಕಷ್ಟು ಉಪಯೋಗವಾಗುತ್ತದೆ" ಎಂದು ಹೇಳುತ್ತಾರೆ.

**೪.೩.೧೬. ಡಾ. ರು.ಮ. ಷಡಕ್ಷರಯ್ಯ**

ಇವರು ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿದ್ದವರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಹಾಗೂ ವಿವಿಧ ಅಕಾಡೆಮಿಕ್ ಕೌನ್ಸಲ್ ಮತ್ತು ಯು.ಜಿ.ಸಿಯ ಸದಸ್ಯರಾಗಿ ಇವರು ಸೇವೆ ಸಲ್ಲಿಸಿದ್ದಾರೆ. ಇತಿಹಾಸದ ಪಠ್ಯಪುಸ್ತಕವು ಕೇವಲ ಕಥೆ ಪುಸ್ತಕದಂತೆ ಇರಬಾರದು, ಅದರಲ್ಲಿ ಕೇವಲ ಮನರಂಜನೆಯ ಅಂಶಗಳಿರಬಾರದು. ಬದಲಾಗಿ ಅದು ಮಕ್ಕಳ ಜ್ಞಾನ ವಿಕಾಸಕ್ಕೆ ಪೂರಕವಾಗುವಂತೆ ರಚನೆ ಆಗಬೇಕು, ಅದರಲ್ಲಿ ಸಮಗ್ರ ವಿವರಗಳಿರಬೇಕು, ಅದನ್ನು ಮಕ್ಕಳು ಕುತೂಹಲದಿಂದ ಅಭ್ಯಾಸ ಮಾಡುವಂತಿರಬೇಕು. ಒಟ್ಟಿನಲ್ಲಿ ಮಕ್ಕಳ ತಿಳುವಳಿಕೆಗೆ ಯೋಗ್ಯವಾಗುವಂತಹ ಪುಸ್ತಕ ಅದಾಗಿರಬೇಕು ಎನ್ನುತ್ತಾರೆ. ಕನ್ನಡದ ನೂರಾರು ಸಾಹಿತಿ, ಸಂಶೋಧಕರು, ಚರಿತ್ರೆಕಾರರು ಪಠ್ಯಪುಸ್ತಕಗಳ ಸ್ವರೂಪ ಕುರಿತು ಚಿಂತಿಸಿದ್ದಾರೆ. ಡಾ. ಕಮಲಾ ಹಂಪನಾ, ಡಾ. ಚಂದ್ರಶೇಖರ ಕಂಬಾರ, ಪ್ರೊ. ಬರಗೂರು ರಾಮಚಂದ್ರಪ್ಪ, ಕೋ. ಚನ್ನಬಸಪ್ಪ ಮೊದಲಾದವರನ್ನು ಸ್ಮರಿಸುವುದು ಅಗತ್ಯ.

**ಟಿಪ್ಪಣಿಗಳು**

೧. ಎಂ.ಎಸ್. ಬಾದಾಮಿ, ಶ್ರೇಷ್ಠ ಶಿಕ್ಷಣತಜ್ಞರು, ವಿದ್ಯಾನಿಧಿ ಪ್ರಕಾಶನ, ೨೦೦೪, ಪು. ೨.

೨. ಶಂಕರಲಿಂಗ ಜಿ. ಹೆಂಬಾಡಿ, ಶ್ರೇಷ್ಠ ಶಿಕ್ಷಣ ತಜ್ಞರು, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ೨೦೦೮, ಪು. ೧೬೪

೩. ಪಿ.ಆರ್. ಮುಜುಂದಾರ್, ಆರ್.ಕೆ. ಭಾರದ್ವಾಜ್, ಆರ್. ಸಿ. ಚೌಧುರಿ, ಇತಿಹಾಸ ಸಂಶೋಧನಾ ಮಾರ್ಗ ಚೇತನ ಬುಕ್ ಹೌಸ್, ಮೈಸೂರು, ೨೦೦೩, ಪು. ೨.

೪. ಜೆ.ಜಿ. ರೊಡ್ಡಣ್ಣವರ, ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ವಿವೇಚಕರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೭, ಪು. ೧೦೫.

೫. ಎನ್.ಎಂ. ಗುಡ್ಡಳ್ಳಿ, ಶಿಕ್ಷಣದ ಆಧಾರಗಳು, ಭಾರತ ಪ್ರಕಾಶನ, ಧಾರವಾಡ, ೨೦೦೪, ಪು. ೧೩೪.

೬ ಎಂ.ಎಸ್. ಬದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೨೯.

೭ ಎಂ.ಎಸ್. ಬದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೪೮.

೮. ಅದೇ, ಪು. ೫೬.

೯. ಅದೇ, ಪು. ೧೦೬.

೧೦. ಪಿ.ಆರ್. ಮುಜುಂದಾರ್, ಆರ್.ಕೆ. ಭಾರದ್ವಾಜ್, ಆರ್. ಸಿ. ಚೌಧುರಿ, ಇತಿಹಾಸ ಸಂಶೋಧನಾ ಮಾರ್ಗ, ಚೇತನ ಬುಕ್ ಹೌಸ್, ಮೈಸೂರು, ಪು. ೨೬೧.

೧೧. ಕೆ. ಸದಾಶಿವಯ್ಯ, ಪತ್ರರಚನಾ ವಿನ್ಯಾಸ, ಪು. ೨೦೪.

೧೨. ಅದೇ, ಪು. ೨೦೬.

೧೩. ಎಂ. ಎಸ್. ಬಾದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೧೧೭.

೧೪. ಬಿ. ಗೋಪಾಲ್, ಸಮಾಜ ಪರಿವರ್ತನಕಾರ ಮಹಾತ್ಮ ಜ್ಯೋತಿಬಾ ಫುಲೆ, ಸರ್ವಜನ ಪ್ರಕಾಶನ, ಬೆಂಗಳೂರು, ೨೦೧೦, ಪು. ೨.

೧೫. ಅದೇ, ಪು. ೨೦.

೧೬. ಎಮ್. ಎಲ್. ರಾಯಮನೆ, ಭಾರತರತ್ನ ಡಾ. ಬಾಬಾಸಾಹೇಬ್ ಅಂಬೇಡ್ಕರ್, ದಿವ್ಯ ಪ್ರಕಾಶನ, ಬೆಂಗಳೂರು, ೨೦೧೦, ಪು. ೨೭೧.

೧೭. ಅದೇ, ಪು. ೨೭೧.

೧೮. ಅದೇ, ಪು. ೨೭೫.

೧೯. ಬಸಪ್ಪ ಎ., ಭಾರತೀಯ ಸಮಗ್ರ ಶಿಕ್ಷಣ, ಮದಕರಿ ಪ್ರಕಾಶನ, ಚಿತ್ರದುರ್ಗ, ೨೦೦೮, ಪು. ೧೩೧.

೨೦. ಶಂಕರಲಿಂಗ ಜಿ. ಹೆಂಬಾಡಿ, ಶ್ರೇಷ್ಠ ಶಿಕ್ಷಣ ತಜ್ಞರು, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗ, ೨೦೦೮, ಪು. ೪.

೨೧. ಎಂ. ಎಸ್. ಬದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೧೫೭.

೨೨. ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಭಾಷಾಂತರ), ಆತ್ಮಕಥೆ ಅಥವಾ ಸತ್ಯಾನ್ವೇಷಣ್, ನವಜೀವನ ಪ್ರಕಾಶನ ಅಹಮದಾಬಾದ್, ೧೯೯೫, ಪು. ೩೫೦.

೨೩. ಕೆ.ಸಿ. ಓಂಕಾರಪ್ಪ, ಮಹರ್ಷಿ ಅರವಿಂದರು, ಬಾಲಾಜಿ ಪ್ರಕಾಶನ, ಹೊಳೆ ನರಸೀಪುರ, ೨೦೦೧, ಪು. ೫೧.

೨೪. ವೇಮಣ್ಣ, ಪೆರಿಯಾರರ ಜೀವನ ಚರಿತ್ರೆ, ವಿ.ಆರ್.ವಿ. ಪ್ರಕಾಶನ, ಬೆಂಗಳೂರು, ೨೦೦೭, ಪು. ೧೧.

೨೫. ಅದೇ, ಪು. ೧೨೭

೨೬. ಅದೇ, ಪು. ೨೭೬.

೨೭. ಎಂ.ಎಸ್. ಬದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೧೩೯.

೨೮. ಎನ್.ಆರ್. ಶಿವರಾ, ಡಾ. ಅಂಬೇಡ್ಕರ್ ದರ್ಶನ, ಜೈಭೀಮ್ ಪ್ರಕಾಶನ, ನಗರನ ಹಳ್ಳಿ, ೨೦೧೦, ಪು. ೧೬೭.

೨೯. ಅದೇ, ಪು. ೧೬೮.

೩೦. ಎಂ.ಎಸ್. ಬದಾಮಿ, ಶ್ರೇಷ್ಠ ಶಿಕ್ಷಣ ತಜ್ಞರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪-೦೫, ಪು. ೧೮೩,

೩೧. ಡಾ. ಜಿ.ಎಸ್. ಅಶೋಕ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ನವನೀತ ಪ್ರಕಾಶನ, ದಾವಣಗೆರೆ, ೨೦೦೯, ಪು. ೨೯೯.

೩೨. ನಟರಾಜ್ ಹುಳಿಯಾರ್ (ಸಂ), ರಾಮ ಮನೋಹರ ಲೋಹಿಯಾ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೧, ಪು. ೧೯೫.

೩೩. ಎಮ್.ಕೆ. ಮಹದೇವಯ್ಯ, ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಒಕ್ಕಲಿಗ ಸಂಘಗಳು, ಸಮಗ್ರ ಅಧ್ಯಯನ

೩೪. ಡಾ. ಎಂ. ವೆಂಕಟೇಶ, ಸಮಗ್ರ ಚಿಂತನಕಾರ ದೇಜಗೌ, ವಿನೂತನ ಪ್ರಕಾಶನ, ಶಿವಮೊಗ್ಗ, ೨೦೧೦, ಪು. ೧೧೮ .

೩೫. ಅದೇ, ಪು. ೧೧೯.

೩೬. ದೇಜಗೌ, ಯುದ್ಧ ಮತ್ತು ಶಾಂತಿ, ತೃತೀಯ ಸಂಪುಟ, ಸಪ್ನಬುಕ್ ಹೌಸ್, ಬೆಂಗಳೂರು-೨೦೦೭, ಪು. ೪೩೧.

೩೭. ಜಿ.ಎಸ್. ಶಿವರುದ್ರಪ್ಪ, ಸಂದರ್ಶನ-೨೨-೧೧-೨೦೧೨.

೩೮. ಚಂದ್ರಶೇಖರ ಪಾಟೀಲ, ಸಂದರ್ಶನ-ದಿನಾಂಕ ೨೧-೧೨-೨೦೧೨.

೩೯. ಡಾ. ಎಂ. ಚಿದಾನಂದಮೂರ್ತಿ, ಸಂದರ್ಶನ-ದಿನಾಂಕ ೨೮-೧೨-೨೦೧೨.

೪೦. ಡಾ. ಸಿದ್ಧಲಿಂಗಯ್ಯ, ಸಂದರ್ಶನ-ದಿನಾಂಕ ೨೯-೧೨-೨೦೧೨.

೪೧. ಡಾ. ಅನಂತರಾಮಯ್ಯ, ಸಂದರ್ಶನ - ದಿನಾಂಕ ೧೩-೨-೨೦೧೩.

೪೨. ಡಾ. ಚಂದ್ರಶೇಖರ್, ಸಂದರ್ಶನ - ದಿನಾಂಕ ೨೩-೩-೨೦೧೩.

೪೩. ಡಾ. ಯು. ಸೂರ್ಯನಾಥ ಕಾಮತ್, ಸಂದರ್ಶನ - ದಿನಾಂಕ ೨೫-೧೧-೨೦೧೧.

೪೪. ಡಾ. ರು.ಮ. ಷಡಕ್ಷರಯ್ಯ, ಸಂದರ್ಶನ - ದಿನಾಂಕ ೨-೯-೨೦೧೦.

□□

ಅಧ್ಯಾಯ : ಐದು

# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಚರಿತ್ರೆ ಪುಠ್ಯಪುಸ್ತಕಗಳ ರಚನೆಯ ಸ್ವರೂಪ

---

೫.೧. ಸ್ವಾತಂತ್ರ್ಯಪೂರ್ವದ ಶೈಕ್ಷಣಿಕ ಬೆಳವಣಿಗೆಯ ಹಿನ್ನೋಟ

- ೫.೧.೧. ಮೈಸೂರು ಪ್ರದೇಶ
- ೫.೧.೨. ಬಾಂಬೆ ಕರ್ನಾಟಕ ಪ್ರಾಂತ್ಯ
- ೫.೧.೩. ಮದ್ರಾಸ್ ಕರ್ನಾಟಕ ಪ್ರದೇಶ
- ೫.೧.೪. ಹೈದರಾಬಾದ್ ಕರ್ನಾಟಕ ನಿಜಾಮನ ಆಡಳಿತ ಪ್ರದೇಶ

೫.೨. ಪಠ್ಯಪುಸ್ತಕಗಳ ರಚನಾ ಸ್ವರೂಪ

೫.೩. ಸ್ವಾತಂತ್ರ್ಯಪೂರ್ವದ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯ ಪುಸ್ತಕಗಳ ಸ್ವರೂಪ

೫.೪. ಸ್ವಾತಂತ್ರ್ಯೋತ್ತರ ಕರ್ನಾಟಕದ ಪ್ರಾಥಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ

- ೫.೪.೧. ಮೂರನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ
- ೫.೪.೨. ನಾಲ್ಕನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ

೫.೫. ಸ್ವಾತಂತ್ರ್ಯೋತ್ತರ ಕರ್ನಾಟಕದ ಮಾಧ್ಯಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ

- ೫.೫.೧. ೫ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
- ೫.೫.೨. ೬ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
- ೫.೫.೩. ೭ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು
- ೫.೫.೪. ೧೯೮೬ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಪಠ್ಯಕ್ರಮ

ಅಧ್ಯಾಯ : ಐದು

# ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪ

---

## ೫.೧. ಸ್ವಾತಂತ್ರ್ಯಪೂರ್ವದ ಶೈಕ್ಷಣಿಕ ಬೆಳವಣಿಗೆಯ ಹಿನ್ನೋಟ

ಸ್ವಾತಂತ್ರ್ಯಪೂರ್ವದ ಕರ್ನಾಟಕವು ಬ್ರಿಟಿಷರ ಆಳ್ವಿಕೆಯ ಪೂರ್ವದಲ್ಲಿ ಈ ನಾಡಿನ ಮೊದಲ ರಾಜವಂಶ ಕದಂಬರಿಂದ ಹಿಡಿದು ಮೈಸೂರು ರಾಜ ಒಡೆಯರವರೆಗೂ ಚಿಕ್ಕ ಚಿಕ್ಕ ರಾಜರುಗಳ, ಪಾಳೆಯಗಾರರ ಆಡಳಿತಕ್ಕೆ ಒಳಪಟ್ಟಿತ್ತು. ಹೀಗಾಗಿ ಸಮಗ್ರ ಕರ್ನಾಟಕ ಎನ್ನುವ ಚಿತ್ರಣ ಸಿಗದಂತಾಗಿತ್ತು. ಬ್ರಿಟಿಷರು ವ್ಯಾಪಾರಕ್ಕೆಂದು ಭಾರತಕ್ಕೆ ಬಂದು ಭಾರತದ ಒಂದೊಂದೇ ಭಾಗವನ್ನು ವಸಾಹತುಗಳನ್ನಾಗಿ ಸ್ಥಾಪಿಸುವ ಮೂಲಕ ತಮ್ಮ ವಶಕ್ಕೆ ತೆಗೆದುಕೊಳ್ಳತೊಡಗಿದರು. ಇದಕ್ಕೆ ಕರ್ನಾಟಕವೂ ಹೊರತಾಗಿರಲಿಲ್ಲ. ಮೈಸೂರಿನ ಹೈದರಾಲಿಯೊಂದಿಗೆ ೧೭೬೯ ಹಾಗೂ ೧೭೮೨ರಲ್ಲಿ ಎರಡು ಆಂಗ್ಲೋ ಮೈಸೂರು ಯುದ್ಧಗಳು ನಡೆದವು. ಆದರೆ ಬ್ರಿಟಿಷರು ಈ ಯುದ್ಧಗಳಲ್ಲಿ ಯಶಸ್ಸನ್ನು ಪಡೆಯದೆ ಹಿಂದೆ ಸರಿಯಬೇಕಾಯಿತು. ಹೈದರನ ತರುವಾಯ ಟಿಪ್ಪುವಿನೊಂದಿಗೆ ಮರಳಿ ಶ್ರೀರಂಗಪಟ್ಟಣದಲ್ಲಿ ಬ್ರಿಟಿಷರು ೧೭೯೯ರಲ್ಲಿ ಯುದ್ಧ ಮಾಡಿದರು. ಈ ಯುದ್ಧದಲ್ಲಿ ಟಿಪ್ಪು ಹತನಾಗಿ ಮೈಸೂರು ಸಂಸ್ಥಾನ ಬ್ರಿಟಿಷರ ವಶವಾಯಿತು. ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಸಮಗ್ರ ಮೈಸೂರು ರಾಜ್ಯವನ್ನು ವಿಭಾಗಗಳಾಗಿ ವಿಂಗಡಿಸಿದರು. ಸಮಗ್ರ ಕರ್ನಾಟಕವೆಂದು ನಾವಿಂದು ಗುರುತಿಸುವ ಪ್ರದೇಶಗಳಲ್ಲಿ ಒಂದು ಭಾಗ ಮೈಸೂರು ಸಂಸ್ಥಾನವು ಒಡೆಯರ ಆಡಳಿತಕ್ಕೆ ಒಳಪಟ್ಟಿದ್ದರೆ ಮತ್ತೊಂದು ಭಾಗವು ಹೈದರಾಬಾದಿನ ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತು. ಹಾಗೆಯೇ ಇನ್ನೊಂದು ಭಾಗವು ಮರಾಠರ ಆಡಳಿತಕ್ಕೆ ಒಳಪಟ್ಟಿತ್ತು. ಈ ಮೂರು ಭಾಗಗಳಲ್ಲದೆ ಬ್ರಿಟಿಷರೇ ನೇರವಾಗಿ ಆಡಳಿತ ನಡೆಸುವ ಪ್ರದೇಶವೊಂದು ಹುಟ್ಟಿತು. ಹೀಗೆ ಕರ್ನಾಟಕವು ಹಲವು ಭಾಗಗಳಾಗಿ ಹಂಚಿಹೋಗಿತ್ತು.

### ೫.೧.೧. ಮೈಸೂರು ಪ್ರದೇಶ

ಮೈಸೂರು ಅರಸರು ಶಿಕ್ಷಣಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದರು. ಸಂಸ್ಕೃತ ಪಾಠ ಶಾಲೆ, ಕನ್ನಡ ಶಾಲೆಗಳನ್ನು ತಮ್ಮ ಆಡಳಿತ ಪ್ರದೇಶದಲ್ಲಿ ಪ್ರಾರಂಭಿಸಿದರು. ಮೈಸೂರು ಅರಸರ ಕಾಲಕ್ಕೆ ಪ್ರಾರಂಭಗೊಂಡ ಶಾಲೆಗಳು ಇಂದಿಗೂ ಕಾರ್ಯನಿರ್ವಹಿಸುತ್ತಿವೆ. '೧೮೩೩ರಲ್ಲಿ

ಮೈಸೂರು ನಗರದಲ್ಲಿ ಇಂಗ್ಲೀಷ್ ಮಾಧ್ಯಮದ ಶಾಲೆಯನ್ನು ಆರಂಭಿಸಿದರು'. ಈ ಶಾಲೆಯನ್ನು ಸಾರ್ವಜನಿಕ ಮಕ್ಕಳಿಗಾಗಿ ನಿರ್ಮಿಸಿದ್ದು ಉಚಿತ ಶಿಕ್ಷಣವನ್ನು ನೀಡುವ ವ್ಯವಸ್ಥೆಯನ್ನು ಈ ಶಾಲೆಯು ಹೊಂದಿತ್ತು.[೧] 'ಸರ್ ಚಾರ್ಲ್ಸ್‌ವುಡ್‌ನ ವರದಿಯ ಫಲವಾಗಿ ಭಾರತದ ಇತರೆ ಭಾಗಗಳಂತೆ ಮೈಸೂರು ಪ್ರದೇಶದಲ್ಲಿಯೂ ಸಹ ಆಧುನಿಕ ಶಿಕ್ಷಣವು ವ್ಯವಸ್ಥಿತವಾಗಿ ೧೮೫೪ರಲ್ಲಿ ಪ್ರಾರಂಭಗೊಂಡಿತು.[೨] ವುಡ್ಸ್‌ನ ವರದಿಯ ಆಧಾರದ ಮೇಲೆ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರು ಆಧುನಿಕ ಶಿಕ್ಷಣ ಸ್ವರೂಪವನ್ನು ರೂಪಿಸಿದರು. ಮೈಸೂರು ಹಾಗೂ ಕೊಡಗು ಎರಡೂ ಪ್ರದೇಶಕ್ಕೂ ದೆವೆರೊ ಎಂಬುವವರು ಸಾಮಾನ್ಯ ಶಿಕ್ಷಣ ಯೋಜನೆಯನ್ನು ಸಿದ್ಧಗೊಳಿಸಿದರು. ಈ ಯೋಜನೆಯಂತೆ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಪ್ರತ್ಯೇಕ ನಿರ್ದೇಶಕರಿರಬೇಕು. ಅವರ ಸಹಾಯಕ್ಕೆ ಸಿಬ್ಬಂದಿ ವರ್ಗವನ್ನು ಕೊಡಬೇಕೆಂದು ತಿಳಿಸಿದ್ದರು. ಆ ಪ್ರಕಾರವಾಗಿ ಶಿಕ್ಷಣ ಇಲಾಖೆ ರೂಪುಗೊಂಡಿತು. ಈ ಯೋಜನೆಯ ಮುಖ್ಯ ಉದ್ದೇಶವೇ ಹೋಬಳಿ ಮಟ್ಟದಲ್ಲಿ ಶಿಕ್ಷಣವು ಸ್ಥಳೀಯ ಮಕ್ಕಳಿಗೆ ದೊರೆಯುವಂತೆ ಮಾಡಿದ್ದು. ಮೈಸೂರು ಪ್ರಾಂತ್ಯದಲ್ಲಿ ಸುಮಾರು ೬೪೫ ಹೋಬಳಿಗಳಿದ್ದವೆಂದು ತಿಳಿಸಲಾಗಿದೆ.

ಮೈಸೂರು ಸಂಸ್ಥಾನದಲ್ಲಿ ಕ್ರಿ.ಶ. ೧೯೧೧ರಿಂದ ೧೯೧೬ರ ಅವಧಿಯಲ್ಲಿ ಹಲವಾರು ನೂತನ ವಿಚಾರಗಳು ಶಿಕ್ಷಣದಲ್ಲಿ ಪ್ರವೇಶ ಪಡೆಯುವಂತಾಯಿತು. ಈ ಮೈಸೂರು ಸಂಸ್ಥಾನದಲ್ಲಿದ್ದ ಜಿಲ್ಲೆ, ನಗರ, ತಾಲೂಕುಗಳು ಅವಧಿಯಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೊಳಿಸಲಾಯಿತು. ಸಂಸ್ಥಾನದೊಳಗೆ ಸೆಕೆಂಡರಿ ಸ್ಕೂಲ್ ಲಿವಿಂಗ್ ಸರ್ಟಿಫಿಕೇಟ್ ಯೋಜನೆ ಜಾರಿಗೆ ಬಂದಿತು. ಮೈಸೂರು ಪ್ರಾಥಮಿಕ ಶಿಕ್ಷಣ ನಿಯಮಕ್ಕೆ ಅನುಗುಣವಾಗಿ ೧೯೩೧ರಲ್ಲಿ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳನ್ನು ನಡೆಸುವ ಹಕ್ಕನ್ನು ಜಿಲ್ಲಾ ಬೋರ್ಡ್ ಹಾಗೂ ನಗರಸಭೆಗಳಿಗೆ ವಹಿಸಿಕೊಡಲಾಯಿತು. ಈ ಬದಲಾವಣೆಗಳ ಪ್ರಕ್ರಿಯೆಯ ತರುವಾಯ ಶಾಲೆಗಳ ಸಂಖ್ಯೆ ವೃದ್ಧಿಸಲು ಸಾಧ್ಯವಾಗಲಿಲ್ಲ. ಹಾಗೆಯೇ ಶಿಕ್ಷಣದ ಗುಣಮಟ್ಟವು ಅಭಿವೃದ್ಧಿ ಹೊಂದಲಿಲ್ಲ. ಆದ್ದರಿಂದ ೧೯೪೧ರಲ್ಲಿ ಸ್ಥಳೀಯ ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ತನ್ನ ಅಧೀನಕ್ಕೆ ತೆಗೆದುಕೊಂಡಿತು.[೩] ಈ ಕೆಳಗೆ ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿದ್ದ (೧೮೬೭-೬೮ರಿಂದ ೧೯೫೫-೬೬)ಶಾಲೆಗಳ ಸಂಖ್ಯೆ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯನ್ನು ಈ ಕೆಳಗೆ ನೀಡಲಾಗಿದೆ

**ಕೋಷ್ಟಕ ೫.೧.೧ ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿದ್ದ (೧೮೬೭-೬೮ರಿಂದ ೧೯೫೫-೬೬)ಶಾಲೆಗಳ ಸಂಖ್ಯೆ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯ ವಿವರ**

| ಕ್ರಸಂ. | ವರ್ಷ | ಪ್ರಾಥಮಿಕ ಶಾಲೆ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|
| | | | ಶಾಲೆ | ಬಾಲಕಿ | ಒಟ್ಟು |
| ೧. | ೧೮೬೭-೬೮ | ೮೧ | - | - | ೪೪೭೧ |
| ೨. | ೧೮೭೦-೭೧ | ೫೦೨ | - | - | ೧೭೩೭೯ |
| ೩. | ೧೮೮೦-೮೧ | ೯೦೭ | ೩೫೨೧೯ | ೩೦೭೭ | ೩೮೨೯೬ |
| ೪. | ೧೮೯೦-೯೧ | ೧೩೦೬ | ೪೦೨೬೧ | ೬೮೩೨ | ೪೭೦೯೩ |

| | | | | | |
|---|---|---|---|---|---|
| ೫. | ೧೯೦೦-೦೧ | ೧೯೪೬ | ೫೨೧೧೮ | ೧೩೩೭೫ | ೬೫೪೯೩ |
| ೬. | ೧೯೧೦-೧೧ | ೨೦೭೭ | ೬೦೧೬೮ | ೧೪೬೩೬ | ೭೪೮೦೪ |
| ೭. | ೧೯೨೦-೨೧ | ೮೮೦೦ | ೧,೮೩,೧೦೮ | ೩೮,೮೬೬ | ೨,೨೧,೯೭೪ |
| ೮. | ೧೯೩೦-೩೧ | ೬೩೯೫ | ೨,೨೨,೮೧೬ | ೩೧,೪೪೩ | ೨,೫೪,೨೫೯ |
| ೯. | ೧೯೪೦-೪೧ | ೬೫೦೫ | ೨,೩೯,೧೬೩ | ೩೫,೨೯೧ | ೨,೭೪,೪೫೪ |
| ೧೦. | ೧೯೫೦-೫೧ | ೧೦,೧೮೪ | ೪,೨೧,೫೫೮ | ೨,೧೩,೬೪೮ | ೬,೩೫,೨೦೬ |
| ೧೧. | ೧೯೫೫-೫೬ | ೧೨೫೫೩ | ೫,೬೬,೭೦೫ | ೨,೯೩,೩೬೦ | ೮,೬೦,೦೬೫ |

**ಆಧಾರ: ಡಾ. ಯು. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-೩, ೧೯೮೬, ಪು. ೫.**

### ೫.೧.೨. ಬಾಂಬೆ ಕರ್ನಾಟಕ ಪ್ರಾಂತ್ಯ

ಬಾಂಬೆ ಪ್ರಾಂತ್ಯದಲ್ಲಿ ಮುಖ್ಯವಾಗಿ ಬೆಳಗಾವಿ ಪ್ರದೇಶದಲ್ಲಿ ಆಧುನಿಕ ಶಿಕ್ಷಣ ಪದ್ಧತಿಯು ೧೮೨೬ರಲ್ಲಿ ಪ್ರಾರಂಭಗೊಂಡಿತು. ಆಗ ಬಾಂಬೆಯಲ್ಲಿದ್ದ ಬಾಂಬೆ ನೇಟಿವ್ ಸ್ಕೂಲ್ ಅಂಡ್ ಸ್ಕೂಲ್ ಬುಕ್ ಸೊಸೈಟಿ ಎಂಬ ಸಂಸ್ಥೆಯು ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ೨ ಮರಾಠಿ ವರ್ನಾಕ್ಯುಲರ್ ಶಾಲೆಗಳನ್ನು ಆರಂಭಿಸಿತು.[೪] ೧೮೨೬ಕ್ಕೆ ಹಿಂದೆ ದೇಶೀಯ ಪದ್ಧತಿಯ ಶಾಲೆಗಳು ಈ ಪ್ರದೇಶದಲ್ಲಿದ್ದವು. ೧೮೩೬ರಲ್ಲಿ ಬೆಳಗಾವಿ ಹಾಗೂ ಧಾರವಾಡ ಕಲೆಕ್ಟರ್‌ಗಳಲ್ಲಿ ಕನ್ನಡವನ್ನು ಅಧಿಕೃತ ಭಾಷೆಯಾಗಿ ಬಳಸಲಾಗುತ್ತಿತ್ತು. ಅಲ್ಲಿಂದೀಚೆಗೆ ಕನ್ನಡ ಶಾಲೆಗಳು ಮಾತ್ರ ಪ್ರಾರಂಭಗೊಂಡವು. ೧೮೪೦ರಲ್ಲಿ ಸರ್ಕಾರವು ಶಿಕ್ಷಣ ಮಂಡಳಿಯೊಂದನ್ನು ರಚಿಸಿತು. ಇದು ೧೮೫೫ರವರೆಗೆ ಕಾರ್ಯನಿರ್ವಹಿಸಿತು. ನಂತರ ಇದರ ಕಾರ್ಯವನ್ನು ಶಿಕ್ಷಣ ಇಲಾಖೆ ವಹಿಸಿಕೊಂಡಿತು. ಈ ಮಂಡಳಿ ಅಸ್ತಿತ್ವದ ಸಂದರ್ಭದಲ್ಲಿ ಧಾರವಾಡದಲ್ಲಿ ಒಂದು ಇಂಗ್ಲೀಷ್ ಶಾಲೆ, ಬೆಳಗಾವಿ ಕಲೆಕ್ಟರ್ ಪ್ರದೇಶದಲ್ಲಿ ಮತ್ತು ಸೊಲ್ಲಾಪುರದ ಕನ್ನಡ ಭಾಷಿಕ ಭಾಗಗಳಲ್ಲಿ ಎರ್ನಾಕ್ಯೂಲರ್ ಎಂಬ ೩೪ ಕನ್ನಡ ಶಾಲೆಗಳು ಸ್ಥಾಪನೆಗೊಂಡವು. ಈ ಶಾಲೆಗಳಿಗಾಗಿಯೇ ಕನ್ನಡ ಪಠ್ಯಗಳನ್ನು ಸಿದ್ಧಗೊಳಿಸಲಾಗುತ್ತಿತ್ತು. ರಾಷ್ಟ್ರೀಯ ಚಳುವಳಿ ಚುರುಕಾಗಿದ್ದ ಆ ಕಾಲದಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ದೊರೆಯಿತು. ೧೯೨೩ರ ಮುಂಬೈ ಪ್ರಾಥಮಿಕ ಶಿಕ್ಷಣ ಶಾಸನದಂತೆ ಸ್ಥಳೀಯ ಸಂಸ್ಥೆಗಳಿಗೆ ಪ್ರಾಥಮಿಕ ಶಿಕ್ಷಣವನ್ನು ವಹಿಸಲಾಯಿತು. ಈ ಸ್ಥಳೀಯ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಸೌಲಭ್ಯ ಒದಗಿಸಲು ಎಲ್ಲಾ ಪ್ರಯತ್ನಗಳನ್ನು ಮಾಡಿದವು. ೭೦೦ಕ್ಕೂ ಹೆಚ್ಚಿನ ಜನಸಂಖ್ಯೆಯಿರುವ ಹಳ್ಳಿಗಳಲ್ಲಿ ಬೋರ್ಡ್ ಶಾಲೆಗಳನ್ನು ಅದಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಗಳಲ್ಲಿ ಖಾಸಗಿ(ಗಾಂವಟಿ) ಶಾಲೆಗಳನ್ನು ಸ್ಥಾಪಿಸಲು ಯೋಜನೆಯೊಂದನ್ನು ಜಾರಿಗೆ ತಂದಿತು.

೧೯೩೦ರ ಶಾಸನವು ಪ್ರಾಥಮಿಕ ಶಿಕ್ಷಣದ ಸರ್ವಾಂಗೀಣ ಅಭಿವೃದ್ಧಿ ಹಾಗೂ ಆಡಳಿತಕ್ಕೆ ಅವಕಾಶ ಕಲ್ಪಿಸಿತು. ಆದರೆ ೧೯೪೭ರಲ್ಲಿ ಬಂದ ಮುಂಬೈ ಪ್ರಾಥಮಿಕ ಶಿಕ್ಷಣ ಶಾಸನವು ಜಿಲ್ಲಾ ಶಿಕ್ಷಣ ಮಂಡಳಿಗಳ ಅಧಿಕಾರವನ್ನು ಮೊಟಕುಗೊಳಿಸಿತು. ಇದರಿಂದಾಗಿ ಮಂಡಳಿಗಳು

ಕೇವಲ ಸಲಹಾ ಸಮಿತಿಗಳಾಗಿ ಮಾರ್ಪಾಡುಗೊಂಡವು. ತರುವಾಯ ಸಾರ್ವಜನಿಕ ಶಿಕ್ಷಣವು ಸರ್ಕಾರದ ಹತೋಟಿಗೊಳಪಟ್ಟಿತು.

೧೯೪೭-೪೮ರಿಂದ ಸರ್ಕಾರವು ೧೦೦೦ಕ್ಕೆ ಮೇಲ್ಪಟ್ಟ ಜನಸಂಖ್ಯೆ ಇರುವ ಪ್ರತಿ ಗ್ರಾಮದಲ್ಲಿಯೂ ಕಡ್ಡಾಯ ಶಿಕ್ಷಣವನ್ನು ಹಂತ ಹಂತವಾಗಿ ಜಾರಿಗೊಳಿಸಿತು

೧೮೯೧-೯೨ರಿಂದ ೧೯೫೫-೫೬ರವರೆಗಿನ ಪ್ರಾಥಮಿಕ ಶಿಕ್ಷಣದ ವರದಿ ಈ ಕೆಳಗಿನಂತಿದೆ.

**ಕೋಷ್ಟಕ ೫.೧.೨. ೧೮೯೧-೯೨ರಿಂದ ೧೯೫೫-೫೬ರವರೆಗಿನ ಬಾಂಬೆ ಪ್ರಾಂತದ ಪ್ರಾಥಮಿಕ ಶಿಕ್ಷಣದ ವರದಿ**

| ಕ್ರಸಂ. | ವರ್ಷ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|
| ೧. | ೧೮೯೧-೯೨ | ೧೩೦೯ | ೭೬,೦೯೪ |
| ೨. | ೧೯೦೨-೦೩ | ೧೩೭೨ | ೫೫,೨೯೮ |
| ೩. | ೧೯೨೧-೨೨ | ೨೨೪೦ | ೧,೪೫,೨೯೭ |
| ೪. | ೧೯೪೬-೪೭ | ೪೧೧೧ | ೩,೦೪,೩೪೬ |
| ೫. | ೧೯೫೫-೫೬ | ೬೦೮೬ | ೬,೩೨,೦೦೦ |

**ಆಧಾರ: ಡಾ. ಯು. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-೩, ೧೯೮೬, ಪು. ೬.**

### ೫.೧.೩. ಮದ್ರಾಸ್ ಕರ್ನಾಟಕ ಪ್ರದೇಶ

ಮದ್ರಾಸ್ ಕರ್ನಾಟಕ ಪ್ರದೇಶದಲ್ಲಿ ಆಧುನಿಕ ಶಿಕ್ಷಣ ಆರಂಭಗೊಳ್ಳುವುದಕ್ಕೆ ಪೂರ್ವದಲ್ಲಿ ಬಳ್ಳಾರಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ದೇಶಿ ಶಾಲೆಗಳಿದ್ದವು. ಇವುಗಳನ್ನು ಐಗಳ ಮಠ ಅಥವಾ ಪಯ್ಯಾಲ್ ಎಂದು ಕರೆಯುತ್ತಿದ್ದರು. ಹಾಗೆಯೇ ವೇದಾಧ್ಯಯನ ಸಂಸ್ಕೃತ ಶಾಲೆ, ಚರ್ಚ್‌ಗಳ ಕ್ಯಾಥೋಲಿಕ್ ಪಾಠಶಾಲೆಗಳೂ ಸಹ ಇದ್ದವು. ಸರ್ ಥಾಮಸ್ ಮನ್ರೊ ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಆಗಿದ್ದಾಗ ಕನ್ನಡ ಶಾಲೆಗಳನ್ನು ತೆರೆದು ಕನ್ನಡದಲ್ಲಿ ಶಿಕ್ಷಣ ನೀಡಲು ಮುಂದಾಗಿದ್ದ. ವುಡ್ಸ್ ವರದಿಯ ತರುವಾಯ ಈ ಜಿಲ್ಲೆಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ನೂತನ ಸಂಚಲನ ಮೂಡಿತು. ೧೮೩೮ರ ವೇಳೆಗೆ ಕ್ರಿಶ್ಚಿಯನ್ ಮಿಶನರಿ ಸೊಸೈಟಿಗಳು ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದವು. ದಕ್ಷಿಣಕನ್ನಡ, ಬಳ್ಳಾರಿ ಪ್ರದೇಶಗಳಲ್ಲಿ ಶಾಲೆಗಳನ್ನು ಸ್ಥಾಪಿಸಿದವು. ೧೮೬೩ರ ಮದ್ರಾಸ್ ಪ್ರಾಥಮಿಕ ಶಿಕ್ಷಣ ಶಾಸನ, ೧೮೭೧ರ ನಗರಾಭಿವೃದ್ಧಿ ಶಿಕ್ಷಣ ಕರಡು ೩, ೧೮೭೧ರ ಮದ್ರಾಸ್ ನಿಧಿಯ ಶಾಸನ ೫, ಇವುಗಳು ಪ್ರಾಥಮಿಕ ಶಿಕ್ಷಣಕ್ಕೆ ಆರ್ಥಿಕ ನೆರವನ್ನು ನೀಡಲು ಸಹಾಯಕವಾದವು. ಇದರಿಂದಾಗಿ ಪ್ರಾಥಮಿಕ ಶಿಕ್ಷಣಕ್ಕೆ ಭದ್ರ ತಳಹದಿ ದೊರೆಯಿತು. ೧೮೭೦-೭೧, ೧೮೮೦-೮೧ರ ಕಾಲಾವಧಿಯಲ್ಲಿ ದಕ್ಷಿಣಕನ್ನಡ ಪ್ರದೇಶದಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ ೭೩ರಿಂದ ೧೪೮ಕ್ಕೆ ಏರಿತು. ಇದೇ ಅವಧಿಯಲ್ಲಿ ಬಳ್ಳಾರಿ

ಪ್ರದೇಶದಲ್ಲಿ ಶಾಲೆಗಳ ಸಂಖ್ಯೆ ೧೩೨ರಿಂದ ೭೨೬ಕ್ಕೆ ಏರಿತು. ಪ್ರಾಥಮಿಕ ಶಿಕ್ಷಣವು ಎಲ್ಲಾ ದಿಕ್ಕುಗಳಲ್ಲಿಯೂ ಪ್ರಗತಿಗೊಳ್ಳಲು ಮೊದಲನೇ ಮಹಾಯುದ್ಧವು ಅಡ್ಡಿಯಾಯಿತು. ಆದರೆ ಕೇಂದ್ರ ಸರ್ಕಾರವು ವಿಶೇಷ ರೀತಿಯ ಆರ್ಥಿಕ ಸಹಾಯ ನೀಡಿದ್ದರಿಂದ ಪ್ರಾಥಮಿಕ ಶಿಕ್ಷಣವು ಹೆಚ್ಚು ವಿಸ್ತಾರಗೊಂಡಿತು. ೧೯೨೦ರ ಮದ್ರಾಸ್ ಪ್ರಾಥಮಿಕ ಶಿಕ್ಷಣ ಶಾಸನದ ಪ್ರಕಾರ ಜಿಲ್ಲಾ ಶಿಕ್ಷಣ ಮಂಡಳಿಗಳು ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಲು ಬೇಕಾದ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಪಡೆದುಕೊಂಡವು. ೧೯೨೦ರ ಮದ್ರಾಸ್ ನಗರ ಸಭೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಶಾಸನದ ಪ್ರಕಾರ ಪ್ರಾಥಮಿಕ ಶಿಕ್ಷಣವು ತಾಲೂಕು ಬೋರ್ಡ್, ಪಂಚಾಯ್ತಿ ಬೋರ್ಡ್‌ಗಳ ಅಧೀನಕ್ಕೆ ಬಂದವು.

೧೯೩೪ರಲ್ಲಿ ತಾಲೂಕು ಬೋರ್ಡುಗಳು ರದ್ದಾದ್ದರಿಂದ ಶಾಲೆಗಳು ಜಿಲ್ಲಾ ಬೋರ್ಡುಗಳ ಅಧೀನಕ್ಕೆ ಬಂದವು. ೧೯೩೯ರಲ್ಲಿ ಜಿಲ್ಲಾ ಶಿಕ್ಷಣ ಮಂಡಳಿಗಳು ರದ್ದಾದ್ದರಿಂದ ಶಾಲೆಗಳಿಗೆ ಮಾನ್ಯತೆ ಹಾಗೂ ಅನುದಾನ ಮಂಜೂರು ಮಾಡುವ ಅಧಿಕಾರವು ಸರ್ಕಾರದ ಇಲಾಖೆಯ ಅಧಿಕಾರಕ್ಕೆ ಬಂದಿತು.

**ಕೋಷ್ಟಕ ೫.೧.೩ ೧೮೮೧ರಿಂದ ೧೯೫೫-೫೬ರ ಕಾಲಾವಧಿಯಲ್ಲಿ ಬಳ್ಳಾರಿ ಹಾಗೂ ದಕ್ಷಿಣಕನ್ನಡ ಪ್ರದೇಶಗಳ ಪ್ರಾಥಮಿಕ ಶಿಕ್ಷಣದ ಪ್ರಗತಿ ವರದಿ**

| ಕ್ರಸಂ. | ವರ್ಷ | ಬಳ್ಳಾರಿ ಜಿಲ್ಲೆಯ ಶಾಲೆಗಳು, ವಿದ್ಯಾರ್ಥಿಗಳು | | ದಕ್ಷಿಣಕನ್ನಡ ಜಿಲ್ಲೆಯ ಶಾಲೆಗಳು, ವಿದ್ಯಾರ್ಥಿಗಳು | |
|---|---|---|---|---|---|
| | | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
| ೧. | ೧೮೮೧-೮೨ | ೫೫೭ | ೯೯೫೬ | ೧೮೮ | ೬೯೮೬ |
| ೨. | ೧೮೯೧-೯೨ | ೮೭೩ | ೧೯೧೧೬ | ೫೪೮ | ೧೨,೪೮೭ |
| ೩. | ೧೯೨೧-೨೨ | – | – | ೭೭೫ | ೬೦,೨೬೬ |
| ೪. | ೧೯೩೧-೩೨ | ೧೨೧೧ | ೪೪೩೨೩ | ೧೩೫೨ | ೯೭,೦೩೩ |
| ೫. | ೧೯೪೬-೪೭ | ೭೮೪ | ೫೩೯೭೦ | ೧೨೪೯ | ೧,೬೯,೯೪೬ |
| ೬. | ೧೯೫೫-೫೬ | – | – | ೧೨೯೮ | ೧,೭೪,೦೦೦ |

**ಆಧಾರ: ಡಾ. ಯು. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-೩, ೧೯೮೬, ಪು. ೭.**

ಮೇಲಿನ ಕೋಷ್ಟಕವನ್ನು ನೋಡಲಾಗಿ ಇದರೊಳಗಿನ ಅಂಕಿ ಅಂಶಗಳನ್ನು ಗಮನಿಸಿದಾಗ ೧೯೩೧-೩೨ರಲ್ಲಿದ್ದ ಶಾಲೆಗಳ ಸಂಖ್ಯೆ ೧೯೪೬-೪೭ರ ಅವಧಿಗೆ ಬರುವುದರೊಳಗೆ ಕುಂಠಿತಗೊಂಡಿರುವುದು ಕಂಡುಬರುತ್ತದೆ. ಈ ರೀತಿ ಶಾಲೆಗಳು ಹಾಗೂ ವಿದ್ಯಾರ್ಥಿಗಳ ಪ್ರಮಾಣ ಕಡಿಮೆಗೊಳ್ಳಲು ೧೯೩೯ರಲ್ಲಿ ಜಿಲ್ಲಾ ಶಿಕ್ಷಣ ಮಂಡಳಿಗಳು ರದ್ದಾದುದೇ ಪ್ರಮುಖ ಕಾರಣವೆನಿಸುತ್ತದೆ. ಶಿಕ್ಷಣ ಇಲಾಖೆಯ ಆಡಳಿತ ವ್ಯವಸ್ಥೆಯ ನಿರ್ಲಕ್ಷ್ಯವೇ ಕಾರಣವಾಗಿದೆ.

ಶಾಲೆಗಳಿಗೆ ಮಾನ್ಯತೆ ನೀಡುವ ಅಧಿಕಾರವನ್ನು ಹೊಂದಿದ್ದ ಈ ಇಲಾಖೆಯು ಈಗಾಗಲೇ ಕಾರ್ಯಾರಂಭ ಮಾಡಿದ್ದ ಶಾಲೆಗಳ ಮಾನ್ಯತೆ ರದ್ದು ಮಾಡಿತು. ಈ ಕಾರಣಕ್ಕಾಗಿ ೧೯೩೧–೩೨ರಲ್ಲಿದ್ದ ಬಳ್ಳಾರಿ ಪ್ರದೇಶದಲ್ಲಿದ್ದ ೧೨೧೧ ಶಾಲೆಗಳು ೧೯೪೬–೪೭ರ ಅವಧಿಯೊಳಗೆ ೭೮೪ರಷ್ಟಾದವು. ದಕ್ಷಿಣ ಕನ್ನಡದಲ್ಲಿ ಇದೇ ಕಾಲಾವಧಿಯಲ್ಲಿ ೧೩೫೨ರಷ್ಟಿದ್ದ ಶಾಲೆಗಳು ೧೨೪೯ರಷ್ಟಾದವು.

### ೫.೧.೪. ಹೈದರಾಬಾದ್ ಕರ್ನಾಟಕ ನಿಜಾಮನ ಆಡಳಿತ ಪ್ರದೇಶ

ಹೈದರಾಬಾದ್ ಕರ್ನಾಟಕ ನಿಜಾಮನ ಆಡಳಿತ ಪ್ರದೇಶದಲ್ಲಿ ಅಬ್ದುಲ್ ಖಾದರ್ ಸರ್ವಾರಿಯು ೧೯ನೇ ಶತಮಾನದ ಆದಿಭಾಗದಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿದ್ದ ದೇಶಿಯ ಶಿಕ್ಷಣ ಪದ್ಧತಿಯ ಕುರಿತು ಸ್ಪಷ್ಟ ಚಿತ್ರಣ ನೀಡಿದ್ದಾನೆ. ೧೮೫೪ರ ಪೂರ್ವದಲ್ಲಿ ಧಾರ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡುವುದೇ ಶಿಕ್ಷಣವೆನಿಸಿತ್ತು. ದೇವಾಲಯ ಹಾಗೂ ಮಸೀದಿಗಳಲ್ಲಿ ಶಾಲೆಗಳನ್ನು ನಡೆಸಲಾಗುತ್ತಿತ್ತು. ಸ್ಥಳೀಯ ಪೂಜಾರಿ, ಮೌಲ್ವಿಗಳು ಶಿಕ್ಷಣ ನೀಡುವವರಾಗಿದ್ದರು. ಇವರ ಸೇವೆಗಾಗಿ ಇನಾಂಗಳನ್ನು ನೀಡಲಾಗುತ್ತಿತ್ತು. ೧೮೫೩ರಲ್ಲಿ ಸಾಲರ್‌ಜಂಗ್ ಸ್ಥಾಪಿಸಿದ ದಾರೂಲ್ ಉಲೂಮ್‌ನಲ್ಲಿ ಆಧುನಿಕ ಶಿಕ್ಷಣ ಪದ್ಧತಿ ಜಾರಿಗೊಂಡ ಕುರುಹುಗಳು ಕಂಡುಬರುತ್ತಿದ್ದವು. ವುಡ್ಸ್‌ನ ವರದಿ ಪ್ರಕಾರ ಶಿಕ್ಷಣ ಜಾರಿಗೊಂಡಿತು. ಮೀರ್ ಉಸ್ಮಾನ್ ಆಲಿ ಖಾನ್ ಬಹದೂರ್ ಆಸಫ್ ಝಾರ ಕಾಲದಲ್ಲಿ ಶೈಕ್ಷಣಿಕ ಚಟುವಟಿಕೆ ತೀವ್ರವಾಯಿತು.[೫] ೧೮೫೯ರ ಸರ್ಕಾರಿ ಆದೇಶದಲ್ಲಿ ಪ್ರತಿ ತಾಲ್ಲೂಕು ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಪಾರ್ಸಿ ಶಾಲೆಗಳು ಹಾಗೂ ಸ್ಥಳೀಯ ಭಾಷಾ ಶಾಲೆಗಳನ್ನು ಆರಂಭಿಸುವ ಪ್ರಕಟಣೆ ಹೊರಡಿಸಿತು. ೧೮೬೯ರವರೆಗೆ ಈ ಶಾಲೆಗಳು ರೆವೆನ್ಯೂ ಇಲಾಖೆಯ ಅಧೀನದಲ್ಲಿ ನಡೆದವು.[೬] ೧೮೮೭–೮೮ರವರೆಗೆ ಹೈದರಾಬಾದ್ ಸಂಸ್ಥಾನದ ಶಾಲೆಗಳಲ್ಲಿ ಹೆಸರಿಗೆ ಮಾತ್ರ ಕನ್ನಡ ಶಾಲೆಗಳಾಗಿದ್ದು ಮರಾಠಿಯೇ ಶಿಕ್ಷಣ ಮಾಧ್ಯಮವಾಗಿತ್ತು. ತರುವಾಯ ಅವು ನಿಜವಾದ ಕನ್ನಡ ಶಾಲೆಗಳಾಗಿ ಪರಿವರ್ತಿತವಾದವು. ೧೯೧೧–೧೨ರ ಅವಧಿಯಲ್ಲಿ ೧೦೦೦ಜನ ಮೀರಿದ ಗ್ರಾಮದಲ್ಲಿಯೂ ಒಂದು ಶಾಲೆ ಕಡ್ಡಾಯವಾಗಿ ಇರುವಂತೆ ನೋಡಿಕೊಳ್ಳಲಾಯಿತು. ಹಾಗೇ ಈ ಅವಧಿಯಲ್ಲಿ ಶಿಕ್ಷಣವು ಉಚಿತವಾಗಿರಬೇಕೆಂದು ರಾಜಾಜ್ಞೆ ಹೊರಡಿಸಲಾಯಿತು. ೧೯೩೭ರಲ್ಲಿ ಶಾಲೆಗಳು ಪುನರ್‌ವ್ಯವಸ್ಥೆಗೊಂಡವು. ಇದರಿಂದಾಗಿ ಗ್ರಾಮೀಣ ನಗರ ಪ್ರದೇಶದ ಶಾಲೆಗಳು ಬೇರೆ ಬೇರೆಯಾದವು.

**ಕೋಷ್ಟಕ ೫.೧.೪ ಹೈದರಾಬಾದ್ ಪ್ರಾಂತ್ಯದ ಕನ್ನಡ ಪ್ರದೇಶದಲ್ಲಿರುವ ಶಾಲೆ ಹಾಗೂ ವಿದ್ಯಾರ್ಥಿಗಳ ಸಂಖ್ಯೆ ವಿವರ**

| ಕ್ರ.ಸಂ. | ವರ್ಷ | ವಿವರ | |
|---|---|---|---|
| | | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
| ೧. | ೧೯೨೧ | ೫೯೧ | ೩೧,೧೩೮ |
| ೨. | ೧೯೩೧ | ೭೯೭ | ೫೨,೨೨೧ |
| ೩. | ೧೯೩೫ | ೯೨೪ | ೬೨,೧೭೨ |
| ೪. | ೧೯೫೬ | ೨೦೯೨ | ೧,೩೦,೦೦೦ |

ಆಧಾರ: ಡಾ. ಯು. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–೩, ೧೯೮೬, ಪು. ೮.

೧೯೨೧ರಲ್ಲಿ ೫೯೧ ಶಾಲೆಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ೧೯೩೧ರಷ್ಟೊತ್ತಿಗೆ ಶಾಲೆಗಳ ಪ್ರಮಾಣದಲ್ಲಿ ೨೦೬ರಷ್ಟು ಹೆಚ್ಚಳಗೊಂಡಿದೆ. ಹಾಗೆಯೇ ೧೯೨೧ರಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ೩೧,೧೩೮ ಇದೆ. ಒಂದು ದಶಕದಲ್ಲಿ ಇವರ ಸಂಖ್ಯೆ ೨೧೦೮೩ರಷ್ಟು ಹೆಚ್ಚಳಗೊಂಡಿದೆ. ೧೯೩೧ರ ತರುವಾಯ ೧೯೩೫ರಷ್ಟೊತ್ತಿಗೆ ೧೨೭ರಷ್ಟು ಶಾಲೆಗಳು ಹೆಚ್ಚಳಗೊಂಡಿವೆ. ಹತ್ತು ಸಾವಿರದಷ್ಟು ವಿದ್ಯಾರ್ಥಿಗಳ ಪ್ರಮಾಣ ಏರಿಕೆಯಾಗಿದೆ. ಅದರ ತರುವಾಯ ಎರಡು ದಶಕಗಳ ನಂತರ ೧೯೫೬ರಲ್ಲಿ ೨೦೯೨ರಷ್ಟು ಶಾಲೆಗಳು ಅಭಿವೃದ್ಧಿಗೊಂಡಿವೆ. ಅಂದರೆ ೧೧೬೮ರಷ್ಟು ಹೊಸ ಶಾಲೆಗಳು ನಿರ್ಮಾಣಗೊಂಡಿವೆ ಹಾಗೂ ವಿದ್ಯಾರ್ಥಿಗಳ ಸಂಖ್ಯೆಯಲ್ಲಿಯೂ ಗಣನೀಯ ಬೆಳವಣಿಗೆಯಾಗಿರುವುದನ್ನು ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

### ೫.೨. ಪಠ್ಯಪುಸ್ತಕಗಳ ರಚನಾ ಸ್ವರೂಪ

ಸ್ವಾತಂತ್ರ್ಯ ಪೂರ್ವದ ಭಾರತೀಯ ಶಿಕ್ಷಣ ಪದ್ಧತಿಗೂ ಸ್ವಾತಂತ್ರ್ಯೋತ್ತರ ಭಾರತೀಯ ಶಿಕ್ಷಣ ಪದ್ಧತಿಗೂ ಅಜಗಜಾಂತರ ವ್ಯತ್ಯಾಸವಿದೆ. ಭಾರತದಲ್ಲಿ ಬ್ರಿಟಿಷರ ಆಗಮನಕ್ಕೂ ಪೂರ್ವದಲ್ಲಿ ಕೇವಲ ಮೇಲ್ಜಾತಿಗಳಿಗೆ ಮಾತ್ರ ಶಿಕ್ಷಣ ದೊರೆಯುತ್ತಿತ್ತು. ಕನ್ನಡದ ಹೆಸರಾಂತ ಲೇಖಕರಲ್ಲೊಬ್ಬರಾದ ರಾಷ್ಟ್ರಕವಿ ಕೆ.ವಿ. ಪುಟ್ಟಪ್ಪನವರು ತಮ್ಮ 'ನೆನಪಿನ ದೋಣಿಯಲ್ಲಿ' ಎನ್ನುವ ಆತ್ಮಕಥನದಲ್ಲಿ ಮೇಲ್ಜಾತಿಗಳೊಂದಿಗೆ ಶಾಲೆಯಲ್ಲಿ ಓದುವ ಅವಕಾಶ ತಮ್ಮಂತಹ ಶೂದ್ರ ಸಮುದಾಯಗಳಿಗೆ ಇದ್ದರೂ ತಾವು ಮೇಲ್ಜಾತಿ ಮಕ್ಕಳೊಂದಿಗೆ ಸಮಾನವಾಗಿ ಕೂಡದೆ ಪ್ರತ್ಯೇಕವಾಗಿ ಶಾಲೆಯ ಮೂಲೆಯಲ್ಲಿ ಕೂಡಬೇಕಾದ ದೀನಾವಸ್ಥೆ ಇದ್ದಿತು ಎಂದು ತಮ್ಮ ಅನುಭವವನ್ನು ಹೇಳಿಕೊಂಡಿದ್ದಾರೆ. ಬ್ರಿಟಿಷರ ಆಗಮನದ ತರುವಾಯವೂ ಭಾರತೀಯ ಶಿಕ್ಷಣ ವ್ಯವಸ್ಥೆ ತನ್ನ ಪೂರ್ವಗ್ರಹ ವ್ಯವಸ್ಥೆಯನ್ನು ಸಂಪೂರ್ಣವಾಗಿ ಮರೆತಿರಲಿಲ್ಲವೆಂಬುದು ಇದರಿಂದ ತಿಳಿದುಬರುತ್ತದೆ. ಸ್ವಾತಂತ್ರ್ಯಪೂರ್ವದ ಶಿಕ್ಷಣವೆಂದರೆ ಕೇವಲ ಕಾವ್ಯಗಳನ್ನು ಓದುವ, ಕಾವ್ಯ ಲಕ್ಷಣವನ್ನು ತಿಳಿಯುವ ಉದ್ದೇಶವನ್ನೇ ಪ್ರಮುಖವಾಗಿ ಹೊಂದಿತ್ತು. ಜಾಗತಿಕ ಮಟ್ಟದಲ್ಲಾದ ವಿದ್ಯಮಾನಗಳ ಅರಿವೇ ಆ ಕಾಲದ ಜನಕ್ಕಿರಲಿಲ್ಲ. ಸ್ವಾತಂತ್ರ್ಯನಂತರದ ದಿನಗಳಲ್ಲಿ ಬ್ರಿಟಿಷರೊಂದಿಗೆ ಅನಿವಾರ್ಯವಾಗಿ ಇಂಗ್ಲಿಷ್ ಸಾಹಿತ್ಯ, ಚರಿತ್ರೆ, ಭೂಗೋಳ ಇತ್ಯಾದಿ ಹೊಸ ದೃಷ್ಟಿಕೋನದ ಶಿಕ್ಷಣ ಪದ್ಧತಿಯ ಪರಿಚಯ ಭಾರತೀಯರಿಗಾಯಿತು. ಈ ನಿಟ್ಟಿನಲ್ಲಿ ವಿದೇಶಿಯರ ಆಗಮನ ಭಾರತೀಯರಿಗೆ ಒಂದರ್ಥದಲ್ಲಿ ಕೊಡುಗೆಯಾಗಿ ಪರಿಣಮಿಸಿತು ಎಂದರೆ ತಪ್ಪಾಗಲಾರದು. ಅನಿವಾರ್ಯವಾಗಿ ಕಲಿಯಬೇಕಾದ ಇಂಗ್ಲಿಷ್‌ನೊಂದಿಗೆ ಹೊರಪ್ರಪಂಚದ ಜ್ಞಾನ ಸಂಪತ್ತು ಭಾರತೀಯರಿಗಾಯಿತು. ೧೯೪೭ಕ್ಕೆ ಭಾರತ ಸ್ವಾತಂತ್ರ್ಯವನ್ನು ಪಡೆಯಿತು. ಸ್ವಾತಂತ್ರ್ಯ ಬಂದ ತರುವಾಯವೂ ಸಹ ಭಾರತೀಯರು ತಮ್ಮದೇ ದೃಷ್ಟಿಕೋನದ ಪಠ್ಯಕ್ರಮ, ಶಿಕ್ಷಣ ಪದ್ಧತಿಯನ್ನು ಅನುಸರಿಸದೇ ಬ್ರಿಟಿಷರು ಹಾಕಿಕೊಟ್ಟ ಜಾಡಿನಲ್ಲಿಯೇ ಮುಂದುವರೆದರು. ಇಂದಿಗೂ ಪ್ರಾಥಮಿಕ ಹಂತದ ಶಿಕ್ಷಣವನ್ನು ಮಕ್ಕಳಿಗೆ ಹೇಗೆ ಕೊಡಬೇಕು, ಎಂತಹ ಪಠ್ಯಗಳನ್ನು ಇಟ್ಟರೆ ಸೂಕ್ತ ಎನ್ನುವಲ್ಲಿ ಹೆಚ್ಚು ಗೊಂದಲಗಳಿರುವುದನ್ನು ಕಾಣುತ್ತೇವೆ. ಪ್ರಾಥಮಿಕ ಹಂತದಲ್ಲಿ ಯಾವ ಭಾಷೆಯಲ್ಲಿ

ಮಕ್ಕಳಿಗೆ ಬೋಧಿಸಬೇಕು ಎನ್ನುವುದೂ ಸಹ ಗೊಂದಲದ ವಿಚಾರವಾಗಿದೆ. ಕರ್ನಾಟಕವನ್ನೇ ಉದಾಹರಣೆಯಾಗಿ ನೋಡೋಣ. ಕರ್ನಾಟಕದಲ್ಲಿರುವ ಶಾಲೆಗಳ ಸ್ವರೂಪವನ್ನು ಐದು ಬಗೆಯಲ್ಲಿ ನೋಡಬಹುದು.

೧. ಕರ್ನಾಟಕ ಸರ್ಕಾರದ ಆಧೀನದಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಗಳು.

೨. ಕೇಂದ್ರ ಸರ್ಕಾರದಿಂದ ನಡೆಸಲಾಗುತ್ತಿರುವ ನವೋದಯ ವಸತಿ ಶಾಲೆಗಳು.

೩. ಕರ್ನಾಟಕ ಸರ್ಕಾರದ ಮುರಾರ್ಜಿ, ವಾಲ್ಮೀಕಿ, ಕಿತ್ತೂರು ಚೆನ್ನಮ್ಮ ಮುಂತಾದ ಹೆಸರಿನ ವಸತಿ ಶಾಲೆಗಳು.

೪. ಕರ್ನಾಟಕ ಸರ್ಕಾರದಿಂದ ಮಾನ್ಯತೆ ಹೊಂದಿದ್ದರೂ ಸರ್ಕಾರದ ಹಿಡಿತಕ್ಕೆ ಸಿಗದೆ ಶಿಕ್ಷಣವನ್ನು ವ್ಯಾಪಾರೀಕರಣ ಮಾಡಿಕೊಂಡಿರುವ ಖಾಸಗಿ ಶಾಲೆಗಳು.

೫. ಕೇಂದ್ರ ಸರ್ಕಾರದ ಪರವಾನಗಿ ಪಡೆದು ನಡೆಸಲಾಗುತ್ತಿರುವ ಕೇಂದ್ರೀಯ ಪಠ್ಯವನ್ನು ಅಳವಡಿಸಿಕೊಂಡಿರುವ ಕೇಂದ್ರೀಯ ಶಾಲೆಗಳು.

ಸರ್ಕಾರಿ ಶಾಲೆಯ ಪಠ್ಯ ವ್ಯವಸ್ಥೆ ಒಂದು ರೀತಿಯಲ್ಲಿದ್ದರೆ ಶಿಕ್ಷಣವನ್ನು ವ್ಯಾಪಾರೀಕರಣಗೊಳಿಸಿಕೊಂಡಿರುವ ಖಾಸಗಿ ಶಾಲೆಗಳ ಪಠ್ಯಕ್ರಮ ಮತ್ತೊಂದು ರೀತಿಯಲ್ಲಿದೆ. ನವೋದಯ ಶಾಲೆಗಳ ಪಠ್ಯಕ್ರಮ ಹೆಚ್ಚು ಕಡಿಮೆ ಕೇಂದ್ರೀಯ ಪಠ್ಯಕ್ರಮನ್ನೇ ಅನುಸರಿಸುತ್ತಿವೆ. ಇನ್ನು ಮುರಾರ್ಜಿ ದೇಸಾಯಿ ವಸತಿ ಶಾಲೆಗಳು ಯಾವ ಮಾಧ್ಯಮದಲ್ಲಿ ತರಗತಿಗಳನ್ನು ನಡೆಸಬೇಕು, ಯಾವ ರೀತಿಯ ಪಠ್ಯಕ್ರಮ ಅನುಸರಿಸಬೇಕು ಎನ್ನುವ ಗೊಂದಲದಲ್ಲಿಯೇ ಕಾಲ ಕಳೆಯುತ್ತಿವೆ. ಖಾಸಗಿ ಶಾಲೆಗಳಂತೂ ಸರ್ಕಾರಕ್ಕೆ ತೋರಿಸುವ ಪಠ್ಯಕ್ರಮವೇ ಬೇರೆ ಕಲಿಸುವ ಪಠ್ಯಕ್ರಮವೇ ಬೇರೆ. ಒಂದು ರಾಜ್ಯದಲ್ಲಿಯೇ ಈ ರೀತಿಯ ಭಿನ್ನ ಭಿನ್ನ ಪಠ್ಯಗಳು ಮಕ್ಕಳ ಕೋಮಲ ಮನಸ್ಸಿನ ಮೇಲೆ ಹೇರಲ್ಪಡುತ್ತಿವೆಯೆಂದಾದರೆ ನಾವಿನ್ನೂ ಶಿಕ್ಷಣದ ಕುರಿತು ಮುಖ್ಯವಾಗಿ ಮಕ್ಕಳ ಮುಂದಿನ ಭವಿಷ್ಯಕ್ಕೆ ದಾರಿಯಾಗುವ ಪ್ರಾಥಮಿಕ ಶಾಲಾ ಹಂತದಲ್ಲಿಯೇ ಎಷ್ಟೆಲ್ಲ ಗೊಂದಲಗಳಿಗೆ ಈ ಶಿಕ್ಷಣ ವ್ಯವಸ್ಥೆ ದಾರಿ ಮಾಡಿಕೊಟ್ಟಿದೆ ಎಂಬುದನ್ನು ಗಮನಿಸಬಹುದು.

ಪ್ರಾಥಮಿಕ ಹಂತದಲ್ಲಿ ನಮ್ಮ ಮಕ್ಕಳಿಗೆ ವಿಶೇಷವಾಗಿ ಚರಿತ್ರೆಯಂತಹ ಪಠ್ಯಗಳನ್ನು ಇರಿಸುವಾಗ ಪ್ರಾದೇಶಿಕ ಚರಿತ್ರೆಯನ್ನೊಳಗೊಂಡ ಪಠ್ಯವನ್ನು ರಚಿಸಬೇಕೇ ಅಥವಾ ಸಮಗ್ರ ಕರ್ನಾಟಕದ ಚರಿತ್ರೆಯನ್ನು ಮಕ್ಕಳಿಗೆ ಮನನ ಮಾಡಿಕೊಡುವಂತಹ ಪಠ್ಯವನ್ನಿರಿಸಬೇಕೆ? ಇಲ್ಲವೆ ಸಮಗ್ರ ಭಾರತದ ಅಥವಾ ಇಂದು ನಾವೆಲ್ಲ ಮಾತನಾಡುವ ಜಾಗತಿಕ ಮಟ್ಟದ ಚರಿತ್ರೆಗಳನ್ನು ಪಠ್ಯಗಳನ್ನಿರಿಸಬೇಕೆ ಎಂಬ ಗೊಂದಲಗಳೂ ಇವೆ.

ಒಟ್ಟಾರೆಯಾಗಿ ಮಕ್ಕಳ ಮನೋಸಾಮರ್ಥ್ಯಕ್ಕೆ ಸರಿಹೊಂದುವಷ್ಟು ಮಾತ್ರ ಪಠ್ಯವನ್ನು ಇರಿಸಬೇಕು, ಮಾತೃ ಭಾಷೆಯಲ್ಲಿ ಶಿಕ್ಷಣ ನೀಡುವುದರಿಂದ ಮಕ್ಕಳ ಕಲಿಕಾ ಸಾಮರ್ಥ್ಯ ಹಾಗೂ ಆಲೋಚನಾ ಶಕ್ತಿ ಹೆಚ್ಚುತ್ತದೆ ಎನ್ನುವ ಅಭಿಪ್ರಾಯವನ್ನು ಬಹುತೇಕ ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಆದರೆ ಶಿಕ್ಷಣವನ್ನು ವಾಣಿಜ್ಯೀಕರಣಗೊಳಿಸಿದ ಖಾಸಗಿ ಶಾಲೆಗಳು ಯಾವೊಬ್ಬ

ಶಿಕ್ಷಣ ತಜ್ಞರ ಅಭಿಪ್ರಾಯವನ್ನು ಮನ್ನಿಸುವ ಸ್ಥಿತಿಯಲ್ಲಿಲ್ಲ. ಹೀಗಾಗಿಯೇ ಭಾಷಾ ಮಾಧ್ಯಮದ ಕುರಿತು ಇತ್ತೀಚೆಗೆ ಖಾಸಗಿ ಶಾಲೆಗಳು ಸುಪ್ರೀಮ್ ಕೋರ್ಟಿನ ಮೆಟ್ಟಿಲನ್ನು ಹತ್ತಿ ತಮ್ಮ ಪರವಾದ ಜಡ್ಜ್‌ಮೆಂಟನ್ನು ಪಡೆದಿವೆ. ಅಂದರೆ ಖಾಸಗಿ ಶಾಲೆಗಳು ಮತ್ತು ಸರ್ಕಾರದ ನಡುವೆ ಒಂದು ರೀತಿಯ ತಿಕ್ಕಾಟವಿದೆಯೆಂದೆನಿಸಿದರೂ ಸರ್ಕಾರವು ಖಾಸಗಿ ಶಾಲೆಯವರೊಂದಿಗೆ ಕೈಜೋಡಿಸಿ ಮೊಸಳೆ ಕಣ್ಣೀರನ್ನು ಸುರಿಸುತ್ತಿದೆ ಎನ್ನುವ ಭಾವನೆಯೂ ಬಂದು ಹೋಗುತ್ತದೆ. ಇಲ್ಲವೇ ಖಾಸಗಿ ಶಾಲೆಗಳನ್ನು ನಿಯಂತ್ರಿಸಲಾರದಷ್ಟು ಅಸಹಾಯಕ ಸ್ಥಿತಿಯಲ್ಲಿ ಸರ್ಕಾರವಿದೆಯೆಂದೇ ಭಾವಿಸಬೇಕಾಗುತ್ತದೆ. ಪ್ರಸ್ತುತ ಇಲ್ಲಿ ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳ ರಚನೆಯ ಸ್ವರೂಪದ ಕುರಿತು ಈ ಅಧ್ಯಯದಲ್ಲಿ ಅವಲೋಕಿಸಲಾಗಿದೆ. ಈ ನಿಟ್ಟಿನಲ್ಲಿ ಸ್ವಾತಂತ್ರ್ಯಪೂರ್ವದ ಪಠ್ಯಗಳ ರಚನೆಯಲ್ಲಿಯೂ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಪಠ್ಯಪುಸ್ತಕಗಳ ರಚನಾ ಕ್ರಮಕ್ಕೂ ಇರುವ ಅಂತರಗಳನ್ನು ಅವಲೋಕಿಸಲಾಗಿದೆ. ಕರ್ನಾಟಕದ ಸ್ವಾತಂತ್ರ್ಯಪೂರ್ವದ ಬಹುತೇಕ ಭಾಗಗಳು ಬ್ರಿಟಿಷರ ಆಳ್ವಿಕೆಗೆ ಒಳಗಾಗಿದ್ದರಿಂದ ಪಠ್ಯಪುಸ್ತಕಗಳ ಸ್ವರೂಪದಲ್ಲಿ ಅಂತಹ ಗಣನೀಯ ಬದಲಾವಣೆಗಳು ಕಂಡುಬರುವುದಿಲ್ಲ.

### ೫.೩. ಸ್ವಾತಂತ್ರ್ಯಪೂರ್ವದ ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ

ಭಾರತದಲ್ಲಿ ಬಹುಭಾಷೆ ಬಹು ಸಂಸ್ಕೃತಿಗಳನ್ನು ಹಿಂದಿನಿಂದಲೂ ಕಾಣಬಹುದು. ಅದಕ್ಕೆ ಕರ್ನಾಟಕವು ಹೊರತಲ್ಲ. ಇಲ್ಲಿ ವಿವಿಧ ಮತೀಯರೂ ಧರ್ಮೀಯರೂ ನೆಲೆಸಿದ್ದಾರೆ. ಆದರೆ ೧೯೦೭ರಲ್ಲಿ ಕನ್ನಡದಲ್ಲಿ ಪ್ರಕಟಿತಗೊಂಡ ಚರಿತ್ರೆ ಪಠ್ಯ ಪುಸ್ತಕಕ್ಕೆ 'ಹಿಂದೂ ಚರಿತ್ರೆಯ ಸುಲಭ ಪಾಠಗಳು'[೭] ಎಂದು ಪ್ರಕಟಿತಗೊಂಡಿದೆ. ಮುಖ್ಯವಾಗಿ ಇಲ್ಲಿ ಹಿಂದೂ ಎನ್ನುವ ಪದವನ್ನು ಏಕೆ ಬಳಸಲಾಗಿದೆ ಎನ್ನುವ ಪ್ರಶ್ನೆ ಕಾಡುತ್ತದೆ. ಆ ಕಾಲದಲ್ಲಿ ಇಂಡಿಯಾವನ್ನು ಹಿಂದೂ ನಾಡೆಂದೇ ಬ್ರಿಟಿಷರು ಪರಿಗಣಿಸಿದ್ದರು. ಹಿಂದೂವಿನಿಂದಾಗಿಯೇ ಇಂಡಿಯಾ ಎನ್ನುವ ಪದ ಬಳಕೆಗೆ ತಂದರು. ಈ ಪಠ್ಯವನ್ನು ಮೂಲ ಶಾಲೆಗಳಿಗಾಗಿಯೇ ರಚಿಸಿರುವುದಾಗಿ ಮುದ್ರಿಸಲಾಗಿದೆ. ಈ ಪಠ್ಯವನ್ನು ಮಾರ್ಸ್ಡೆನ್.ಇ ಹಾಗೂ ಎಸ್.ಜಿ. ನರಸಿಂಹಾಚಾರ್ಯ ಮೈಸೂರು ಸರ್ಕಾರದ ವಿದ್ಯಾ ಇಲಾಖೆಯ ಕನ್ನಡ ಭಾಷಾಂತರಕಾರರು ಇವರು ರಚಿಸಿದ್ದಾರೆ. ಈ ಪಠ್ಯದಲ್ಲಿ ಹಿಂದೂ ಚರಿತ್ರೆ, ರಾಮನ ಕಥೆ, ಬುದ್ಧನ ಚರಿತೆ, ಅರಬ್ಬಿ ದೇಶದ ಮತೋಪದೇಶಕನಾದ ಮಹಮ್ಮದನು, ಕ್ರೂರ ಘಾತಕ ರಾಜರು, ಧೀರನಾದ ಬಾಬರನು, ಹುಮಾಯೂನ್, ಅಕ್ಬರ್, ನೂರ್ ಜಹಾನ್, ಮೊಘಲ್ ಸಂಸ್ಥಾನದ ಪರಿಸಮಾಪ್ತಿ, ಶಿವಾಜಿ, ಬ್ರಿಟಿಷರು ಹಿಂದೂ ದೇಶಕ್ಕೆ ಫ್ರೆಂಚರೊಂದಿಗೆ ಹೋರಾಡಿದುದು, ಹಿಂದೂ ದೇಶದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪನೆ, ಕಪ್ಪುಕೋಣೆ ದುರಂತ, ಹೈದರಾಲಿ, ಟಿಪ್ಪುಸುಲ್ತಾನ್, ಬ್ರಿಟಿಷರ ಆಳ್ವಿಕೆಗೆ ಹಿಂದೆ ಇದ್ದ ಸ್ಥಿತಿ, ಸಿಪಾಯಿ ದಂಗೆ, ಇಂಗ್ಲೆಂಡಿನ ರಾಣಿಯು ಹಿಂದೂ ದೇಶದ ಚಕ್ರವರ್ತಿಯಾದದ್ದು ಮುಂತಾದ ಪಾಠಗಳು ಈ ಪಠ್ಯದಲ್ಲಿವೆ. ಮೂಲತಃ ಬ್ರಿಟಿಷ್ ಅಧಿಕಾರಿಗಳ ನಿರ್ದೇಶನದ ಮೇರೆಗೆ ಈ ಪಠ್ಯಗಳನ್ನು ಇರಿಸಿರುವುದನ್ನು ಗಮನಿಸಬಹುದಾಗಿದೆ. ಇಲ್ಲಿ ಭಾರತದ ಧಾರ್ಮಿಕ ಪಂಥಗಳು ಹಾಗೂ ರಾಜ ವ್ಯವಸ್ಥೆಯ ಕುರಿತು ತಿಳಿಸುವ ನೆವದಲ್ಲಿ ಬ್ರಿಟಿಷ್ ಆಡಳಿತವನ್ನು ವಿಜೃಂಭಿಸುವ ಹುನ್ನಾರವು

ಕಂಡುಬರುತ್ತದೆ. ಉದಾಹರಣೆಗೆ ಬ್ರಿಟಿಷರು 'ಹಿಂದೂ ದೇಶಕ್ಕೆ ಫ್ರೆಂಚರೊಂದಿಗೆ ಹೋರಾಡಿದುದು, ಹಿಂದೂ ದೇಶದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪನೆ, ಕಪ್ಪುಕೋಣೆ ದುರಂತ, ಇಂಗ್ಲೆಂಡಿನ ರಾಣಿಯು ಹಿಂದೂ ದೇಶದ ಚಕ್ರವರ್ತಿಯಾದದ್ದು ಮುಂತಾದ ಪಾಠಗಳು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಓಲೈಸುವ ಕಾರಣಕ್ಕೆ ಸೃಷ್ಟಿಗೊಂಡಿವೆ. ಕೇವಲ ಬ್ರಿಟಿಷರಿಗೆ ಸಂಬಂಧಿಸಿದ ಪಾಠಗಳು ಇಟ್ಟರೆ ಸಾರ್ವತ್ರಿಕವಾದ ಪ್ರತಿರೋಧ ಬರುವ ಸಾಧ್ಯತೆ ಇದೆಯೆಂದೇ ಭಾರತೀಯ ರಾಜ ರಾಣಿಯರ, ಧಾರ್ಮಿಕ, ಪುರಾಣ ಪುರುಷರ ಪಾಠಗಳನ್ನೂ ಸೇರಿಸಿದ್ದಾರೆ. ಭಾರತೀಯರು ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಪರಿಗಣಿಸುವುದನ್ನು ಬ್ರಿಟಿಷ್ ಆಡಳಿತಶಾಹಿ ಸಿಪಾಯಿ ದಂಗೆ ಎಂದೇ ಪ್ರತಿಬಿಂಬಿಸಿರುವುದು ಕಂಡುಬರುತ್ತದೆ. ಈ ಪಠ್ಯದ ಪ್ರಾರಂಭದಲ್ಲಿ ಪಠ್ಯ ಬೋಧನೆಯನ್ನು ನಿರ್ದಿಷ್ಟಾವಧಿಗೆ ಸೀಮಿತಗೊಳಿಸದೇ ಶಿಕ್ಷಕರು ತಮ್ಮ ಅನುಕೂಲಕ್ಕೆ ತಕ್ಕಂತೆ ಪಾಠವನ್ನು ಬೋಧಿಸಬಹುದೆಂದು ಗ್ರಂಥಕರ್ತರು ತಿಳಿಸಿದ್ದಾರೆ.

೧೯೧೦ರಲ್ಲಿ ಪ್ರಕಟಗೊಂಡ 'ಮೂಲ ಶಾಲೆಗಳ ಶಿಕ್ಷಣ ಕ್ರಮ ಪದ್ಧತಿ'[೮] ಎನ್ನುವ ಪಠ್ಯವನ್ನು ಕೆ ರಾಮರಾವ್ ಎನ್ನುವವರು ರಚಿಸಿದ್ದಾರೆ. ಈ ಪಠ್ಯದ ಪ್ರಾರಂಭದಲ್ಲಿ ಕೃತಿಕಾರನು ಮಕ್ಕಳಿಗೆ ಶಿಕ್ಷಕನು ಏನನ್ನು ಬೋಧಿಸಬೇಕು ಹಾಗೂ ಹೇಗೆ ಬೋಧಿಸಬೇಕು ಎನ್ನುವ ಕುರಿತು ತಿಳಿಸಿದ್ದಾನೆ. ಕೃತಿಕಾರನ ಮಾತುಗಳು ಈ ಕೆಳಗಿನಂತಿದೆ.

'ಬಾಲಕರನ್ನು ಸದಾಚಾರಿಗಳನ್ನಾಗಿ ಮಾಡುವುದೇ ವಿದ್ಯಾಭ್ಯಾಸದ ಮುಖ್ಯ ಉದ್ದೇಶವಾಗಿರುತ್ತದೆ. ಈ ಕೆಲಸವನ್ನು ಮೂಲಶಾಲೆಗಳ ಉಪಾಧ್ಯಾಯರು ಹೇಗೆ ನೆರವೇರಿಸಬಹುದು ಎಂಬುದನ್ನು ಸ್ವಲ್ಪಮಟ್ಟಿಗೆ ತಿಳಿಯಬಹುದು. ಮೂಲ ಶಾಲೆಗಳ ಕೆಳಗಿನ ತರಗತಿಗಳಲ್ಲಿ ಬೈಬಲಿನಿಂದ ಮೋಶೆಯದ ಆಜ್ಞೆಗಳನ್ನು ಕಂಠಪಾಠ ಮಾಡಿಸುವುದರಿಂದಲೂ ಸನಾತನ ಧರ್ಮ, ವಿಧುರ ನೀತಿ, ಭೀಷ್ಮ ನೀತಿ, ಖುರಾನಿನಲ್ಲಿರುವ ಧರ್ಮ ವಿಚಾರ ಇವೇ ಮೊದಲಾದ ನೀತಿ ಚರ್ಯಾ ದರ್ಶನ ಪಾಠಗಳಿಂದಲೂ ವಿದ್ಯಾರ್ಥಿಗಳಿಗೆ ಯಾವ ಪ್ರಯೋಜನವೂ ಸಿಗುವುದಿಲ್ಲ. ಏಕೆಂದರೆ ಭಾವ ರೂಪ ಕೃತಿಯಲ್ಲಿರುವ ನೀತಿ ಮಾರ್ಗಗಳು ಬಾಲಕರ ಅವಗಾಹನೆಗೆ ಮೀರಿದವು. ಆದ್ದರಿಂದ ಮಕ್ಕಳ ಸ್ವಭಾವಕ್ಕೂ ಪ್ರಾಯಕ್ಕೂ ಸಮಂಜಸವಾದ ನೀತಿ ಬೋಧಕ ಕಥೆಗಳನ್ನು ಹೇಳುವುದು ಔಚಿತ್ಯ. ಅಂತಹ ಕಥೆಗಳು ಬೈಬಲಿನಲ್ಲಿ, ರಾಮಾಯಣ, ಮಹಾಭಾರತ ಮುಂತಾದ ಪುರಾಣಗಳಲ್ಲಿಯೂ ಹಾಗೂ ಪುರುಷರ ಜೀವನ ಚರಿತ್ರೆಯಲ್ಲಿಯೂ ಯಥೇಚ್ಛವಾಗಿ ದೊರೆಯುತ್ತವೆ' ಎಂದು ತಿಳಿಸುತ್ತಾರೆ. ಕೃತಿಕಾರನ ಮುಖ್ಯ ಉದ್ದೇಶ ನೀತಿ ಪಾಠಗಳಿಗಿಂತ ಪುರಾಣ ಮೂಲ ಕಥೆಗಳನ್ನು ಮಕ್ಕಳಿಗೆ ಬೋಧಿಸಬೇಕೆಂದು ಹೇಳುವುದೇ ಆಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೈಬಲಿನ ಕುರಿತು ಉಲ್ಲೇಖಿಸಿದ ಲೇಖಕ ಖುರಾನಿನ ಕುರಿತು ಮೌನವಹಿಸಿದ್ದಾನೆ. ಹಿಂದೂ ಪರ ಆಲೋಚನಾ ಕ್ರಮದ ಪುರೋಹಿತಶಾಹಿ ಮನೋಭಾವದ ಕೃತಿಕಾರ ಬ್ರಿಟಿಷ್ ಆಡಳಿತದಲ್ಲಿದ್ದುದರಿಂದ ಅನಿವಾರ್ಯವಾಗಿ ಬೈಬಲಿನ ಕುರಿತು ಉಲ್ಲೇಖಿಸಿದ್ದಾನೆ ಎನಿಸುತ್ತದೆ.

೧೯೨೩ರಲ್ಲಿ ಪ್ರಕಟವಾದ 'ಹಿಂದೂ ದೇಶದ ಚರಿತ್ರ ಸಂಗ್ರಹ' ಎನ್ನುವ ಪಠ್ಯವನ್ನು ಎಂ ಬಿ ಶ್ರೀನಿವಾಸ ಅಯ್ಯಂಗಾರ್ ಎನ್ನುವವರು ರಚಿಸಿದ್ದಾರೆ. ಈ ಪಠ್ಯಪುಸ್ತಕವು ಲೋಯರ್ ಮತ್ತು ಅಪ್ಪರ್ ಸೆಕೆಂಡರಿಗೆ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ ಎನ್ನುತ್ತಾರೆ.

ಈ ಪಠ್ಯವು ಮುಖ್ಯವಾಗಿ ಬೌದ್ಧ, ಹಿಂದೂ ಹಾಗೂ ಮಹಮ್ಮದೀಯ ಚರಿತ್ರೆಯೊಂದಿಗೆ ಬ್ರಿಟಿಷ್ ಆಳ್ವಿಕೆ ಕಾಲದ ಕಮಿಷನರ್‌ಗಳ ಕುರಿತ ಒಟ್ಟು ೬೬ ಅಧ್ಯಾಯಗಳ ಪಾಠಗಳಿರುವುದು ಕಂಡುಬರುತ್ತದೆ. ಇದರಲ್ಲಿ ೨೦ಕ್ಕೂ ಮೇಲ್ಪಟ್ಟ ಅಧ್ಯಾಯಗಳು ಕೇವಲ ಬ್ರಿಟಿಷ್ ಅಧಿಕಾರಿ ವರ್ಗದ ಕುರಿತೇ ಇರುವುದನ್ನು ಗಮನಿಸಬಹುದಾಗಿದೆ. ಇನ್ನುಳಿದ ೪೦ರಷ್ಟು ಅಧ್ಯಾಯಗಳು ಬೌದ್ಧ ಧರ್ಮ, ಗುಪ್ತ, ಮೌರ್ಯ, ಮಹಮ್ಮದೀಯ ಧರ್ಮ ಇತ್ಯಾದಿಗಳ ಕುರಿತಿವೆ. ಇಲ್ಲಿ ಮುಖ್ಯವಾಗಿ ಬ್ರಿಟಿಷ್ ಅಧಿಕಾರಿ ವರ್ಗ ಹಾಗೂ ಅವರ ಸಾಧನೆಗಳ ಕುರಿತಾದುದನ್ನೇ ತಿಳಿಸಿ ಅವರ ಕುರಿತು ಗೌರವ ಭಾವನೆ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಮೂಡುವಂತೆ ಮಾಡಲಾಗಿದೆ.

೧೯೨೬ರಲ್ಲಿ ೬ನೇ ದರ್ಜೆಗಾಗಿ 'ಸಚಿತ್ರ ಚರಿತ್ರೆ ಮತ್ತು ಕಥೆಗಳು'[೧೦] ಎನ್ನುವ ಪಠ್ಯವನ್ನು ಎಂ. ಬಾಬು ಎನ್ನುವವರು ರಚಿಸಿದ್ದಾರೆ. ಡಿಸ್ಟ್ರಿಕ್ಟ್ ಎಜುಕೇಷನ್ ಕೌನ್ಸಿಲಿನಿಂದ ಮಂಜೂರಾದ ಹೊಸ ಶಾಲಾ ಪಾಠ ಪಠ್ಯಗಳಿಗೆ ಅನುಗುಣವಾಗಿ ತಯಾರಿಸಲಾಗಿದೆ. ಈ ಪಠ್ಯದಲ್ಲಿ ಒಟ್ಟು ೨೩ ಅಧ್ಯಾಯಗಳಿವೆ. ಈ ಪಠ್ಯದಲ್ಲಿ ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದ ರಾಜಮನೆತನಗಳು ಮತ್ತು ರಾಜರ ವಿಷಯವನ್ನು ಒಳಗೊಂಡಿದೆ. ಅಲೆಕ್ಸಾಂಡರ್, ಚಂದ್ರಗುಪ್ತ, ಅಶೋಕ, ವಿಕ್ರಮಾದಿತ್ಯ, ಶಾಲಿವಾಹನ, ರಾಣಿ ಸಂಯುಕ್ತೆ, ತೈಮೂರು, ಶಿವಾಜಿ, ಪೇಶ್ವೆಗಳು, ವಿಜಯನಗರ ಸಾಮ್ರಾಜ್ಯ, ಬಹಮನಿ ಸಂಸ್ಥಾನ, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು ಹೊಯ್ಸಳ, ಕೆಳದಿ ನಾಯಕರು, ಹೈದರಾಲಿ, ಟಿಪ್ಪು ಸುಲ್ತಾನ್, ಜಹಾಂಗೀರ್, ನೂರ್ ಜಹಾನ್, ಶಹಜಾನ್, ತಾಜ್‌ಮಹಲ್, ಪೋರ್ಟ್ ಸೈಂಟ್ ಜಾರ್ಜ್ ಕೋಟೆಯ ಚರಿತ್ರೆ, ಪ್ಲಾಸಿ ಕದನ ಮುಂತಾದ ಪಾಠಗಳಿವೆ. ಇಲ್ಲಿ ಮುಖ್ಯವಾಗಿ ಎರಡು ಅಧ್ಯಾಯಗಳ ಹೊರತಾಗಿ ಭಾರತೀಯ ಚರಿತ್ರೆಯ ಕುರಿತ ಅಧ್ಯಾಯಗಳೇ ಹೆಚ್ಚಾಗಿವೆ. ಅಂದರೆ ೧೯೨೬ರ ಹೊತ್ತಿಗಾಗಲೇ ಚರಿತ್ರೆಯ ಪಠ್ಯಗಳು ನಿಧಾನವಾಗಿ ಬದಲಾವಣೆಗೆ ಒಳಗಾಗತೊಡಗಿದ್ದವು ಎಂಬುದನ್ನು ಅರಿಯಬಹುದಾಗಿದೆ.

೧೯೩೯ರಲ್ಲಿ ಕರ್ನಾಟಕ ಇತಿಹಾಸ ಬೋಧಿನಿ ಎನ್ನುವ ಪಠ್ಯವನ್ನು ೪ನೇ ತರಗತಿಯ ಮಕ್ಕಳಿಗಾಗಿ ರಚಿಸಲಾಗಿದೆ.[೧೧] ಈ ಪಠ್ಯವನ್ನು ಶ್ರೀ ನಾರಾಯಣ ಶರ್ಮ ಎನ್ನುವವರು ರಚಿಸಿದ್ದಾರೆ. ಈ ಪುಸ್ತಕವು ಮುಂಬೈ ವಿದ್ಯಾ ಖಾತೆಯಿಂದ ಇದನ್ನು ಹಿಂದುಸ್ತಾನ ಸರ್ಕಾರದ ೧೮೬೭ನೇ ಇಸ್ವಿಯ ೨೫ನೇ ಆಕ್ಟಿನಂತೆ ರಿಜಿಸ್ಟರ್ ಮಾಡಲ್ಪಟ್ಟಿದೆ ಎಂದು ತಿಳಿಸಲಾಗಿದೆ. ಈ ಪುಸ್ತಕವು ಒಟ್ಟು ೧೭ ಅಧ್ಯಾಯಗಳನ್ನು ಒಳಗೊಂಡಿದೆ. ಪ್ರಾಚೀನ ಕಾಲ, ಚಿಕ್ಕ ರಾಜ್ಯಗಳ ಕಾಲ, ಕದಂಬ ಅರಸ ಟೆಕ್ಸ್ಟ್ ಬುಕ್ ಎಂದು ಮಂಜೂರು ಮಾಡಲಾಗಿದೆ. ಚಾಲುಕ್ಯ ಅರಸರು, ಕಲಚೂರ್ಯ ಅರಸು ಮನೆತನ, ಹೊಯ್ಸಳ, ಯಾದವ ಅರಸು ಮನೆತನ, ದೇವಗಿರಿಯ ಯಾದವ ಅರಸು ಮನೆತನ, ವಿಜಯನಗರ ರಾಯರ ಅರಸು ಮನೆತನ, ಕೆಳದಿ ಬಿಳಗಿಯ ಅರಸರು, ಬಿಜಾಪುರದ ಆದಿಲ್‌ಶಾಹಿ ಮನೆತನ, ಮರಾಠರ ಆಳ್ವಿಕೆ, ಪೇಶ್ವೆಗಳ ಆಳ್ವಿಕೆ, ಮೈಸೂರಿನ ಒಡೆಯರ್ ಅರಸು ಮನೆತನ, ಕೊಡಗಿನ ಅರಸು ಮನೆತನ, ಇಂಗ್ಲೀಷರ ಆಳ್ವಿಕೆ ಎನ್ನುವ ಅಧ್ಯಾಯಗಳಿವೆ.

೧೯೪೨ರಲ್ಲಿ 'ಹಿಂದೂಸ್ತಾನ ಇತಿಹಾಸ ಬೋಧಿನಿ'[೧೨] ಎಂಬ ಪಠ್ಯಪುಸ್ತಕವನ್ನು ಪ್ರಾಥಮಿಕ ಶಾಲೆಗಳ ೬ನೆಯ ಮತ್ತು ಮಾಧ್ಯಮಿಕ ಶಾಲೆಗಳ ಕೆಳಗಿನ ಇಯತ್ತೆಗಾಗಿ ಮುಂಬೈ ವಿದ್ಯಾ ಖಾತೆಯಿಂದ ಟೆಕ್ಸ್ಟ್ ಬುಕ್ ಎಂದು ಮಂಜೂರು ಮಾಡಲಾಗಿದೆ. ಈ ಪಠ್ಯವನ್ನು ಕೈ ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ (ಗೌರೀಶಂ) ಇವರು ರಚಿಸಿದ್ದಾರೆ. ಈ ಚರಿತ್ರೆ ಪಠ್ಯವು ಒಟ್ಟು ೪೬ ಅಧ್ಯಾಯಗಳನ್ನು ಒಳಗೊಂಡಿದೆ. ಇದು ಮರಾಠರು ಮತ್ತು ಬ್ರಿಟಿಷರ ಆಡಳಿತಕ್ಕೆ ಸಂಬಂಧಪಟ್ಟ ಅಧ್ಯಾಯಗಳಾಗಿವೆ. ಮೊದಲ ೧೨ ಅಧ್ಯಾಯಗಳು ಮರಾಠರಿಗೆ ಸಂಬಂಧಿಸಿದ್ದರೆ ಉಳಿದ ಎಲ್ಲಾ ಅಧ್ಯಾಯಗಳು ಬ್ರಿಟಿಷ್ ಆಡಳಿತಕ್ಕೆ ಸಂಬಂಧಿಸಿವೆ. ಇದು ಮುಖ್ಯವಾಗಿ ಬ್ರಿಟಿಷ್ ಆಡಳಿತಶಾಹಿಯ ಕುರಿತೇ ಮಕ್ಕಳಿಗೆ ತಿಳಿಸುವ ಉದ್ದೇಶವಿರುವುದು ಮೇಲ್ನೋಟಕ್ಕೇ ತಿಳಿದುಬರುತ್ತದೆ.

೧೯೪೬ರಲ್ಲಿ ಹಿಂದುಸ್ತಾನ ಇತಿಹಾಸ ಬೋಧಿನಿ ಪಠ್ಯವನ್ನಿರಿಸಲಾಗಿದೆ.[೧೩] ಪ್ರಾಥಮಿಕ ಶಾಲೆಗಳ ೫,೬,೭ನೇ ಇಯತ್ತೆಗಾಗಿ ಹಾಗೂ ಮಾದ್ಯಮಿಕ ಶಾಲೆಗಳ ಕೆಳಗಿನ ಇಯತ್ತೆಗಳಿಗಾಗಿ ಮುಂಬೈ ವಿದ್ಯಾ ಖಾತೆಯಿಂದ ಟೆಕ್ಸ್ಟ್‌ಬುಕ್ ಎಂದು ಮಂಜೂರು ಮಾಡಲಾಗಿದೆ. ಈ ಪಠ್ಯವನ್ನು ಕೈ ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ (ಗೌರೀಶಂ) ಇವರು ರಚಿಸಿದ್ದಾರೆ. ಇದರಲ್ಲಿ ಒಟ್ಟು ಮೂರು ಭಾಗಗಳಿವೆ. ೧ನೇ ಭಾಗದಲ್ಲಿ ಹಿಂದುಸ್ತಾನದ ಪ್ರಾಕೃತಿಕ ಸ್ವರೂಪ ಎಂಬ ಅಧ್ಯಾಯದಿಂದ ಆರಂಭಗೊಂಡು ದಕ್ಷಿಣದಲ್ಲಿಯ ರಾಜ್ಯಗಳು ಎನ್ನುವ ೧೯ ಅಧ್ಯಾಯಗಳಿವೆ. ೨ನೇ ಭಾಗದಲ್ಲಿ ಇಸ್ಲಾಂ ಮತದ ಸ್ಥಾಪನೆಯಿಂದ ಮೊಘಲ್ ಸಾಮ್ರಾಜ್ಯದ ಕತ್ತಲೆಯ ಕಾಲ ಎನ್ನುವಲ್ಲಿಯವರೆಗೆ ೨೨ ಅಧ್ಯಾಯಗಳಿವೆ. ಇದರಲ್ಲಿ ಸಂಪೂರ್ಣವಾಗಿ ಇಸ್ಲಾಂ ಆಡಳಿತಗಾರರ ಕುರಿತು ಪಾಠಗಳಿವೆ. ೩ನೇ ಭಾಗದಲ್ಲಿ ಮರಾಠರ ಉದಯ ಎನ್ನುವಲ್ಲಿಯಿಂದ ಪ್ರಾರಂಭಗೊಂಡು ೨ನೆಯ ಬಾಜೀರಾಯ ಪೇಶ್ವೆವರೆಗೆ ಒಟ್ಟು ಮರಾಠ ಆಡಳಿತಗಾರರ ಕುರಿತೇ ಪಾಠಗಳಿವೆ. ಇದರಲ್ಲಿರುವ ಒಟ್ಟು ಅಧ್ಯಾಯಗಳು ಮಧ್ಯಕಾಲೀನ ಭಾರತದ ಸಮಗ್ರ ಚಾರಿತ್ರಿಕ ಹಿನ್ನೆಲೆಯನ್ನು ಬಿಂಬಿಸಲಾಗಿದೆಯಾದರೂ ಒಟ್ಟು ಪಠ್ಯವು ಮಧ್ಯಕಾಲೀನ ಭಾರತದ ಚರಿತ್ರೆಯೊಂದಿಗೆ ಪರೋಕ್ಷವಾಗಿ ಬ್ರಿಟಿಷ್ ಆಡಳಿತಶಾಹಿ ವ್ಯವಸ್ಥೆ ಹಾಗೂ ಭಾರತದ ಅರಸರ ಮಧ್ಯದ ಒಪ್ಪಂದಗಳು, ಘರ್ಷಣೆಗಳು ಮುಂತಾದವುಗಳನ್ನೇ ಹೆಚ್ಚಾಗಿ ಬಿಂಬಿಸಿವೆ.

ಒಟ್ಟಾರೆಯಾಗಿ ಸ್ವಾತಂತ್ರ್ಯಪೂರ್ವದ ಚರಿತ್ರೆ ಪಠ್ಯಗಳನ್ನೆಲ್ಲಾ ಗಮನಿಸಿದರೆ ಕಂಡುಬಂದ ಅಂಶಗಳು ಹೀಗಿವೆ. ಮೊದಲ ಹಂತದಲ್ಲಿ ಕರ್ನಾಟಕದ ಮಕ್ಕಳಿಗೆ ಅವಶ್ಯವಾದ ಪಠ್ಯಗಳನ್ನು ಬಾಸೆಲ್ ಮಿಷನ್‌ನಂತಹ ವಿದೇಶಿ ಮಿಷನರಿಗಳು ಮುದ್ರಣ ಮಾಡಿವೆ. ಆ ಕಾಲಕ್ಕೆ ಕರ್ನಾಟಕದ ಮುದ್ರಣಾಲಯಗಳು ಮಂಗಳೂರು ಹಾಗೂ ಬಳ್ಳಾರಿಗಳಲ್ಲಿ ಮಾತ್ರ ಇದ್ದವು. ಕಲ್ಲಚ್ಚು ಯಂತ್ರಗಳನ್ನೊಳಗೊಂಡ ಈ ಮುದ್ರಣಾಲಯಗಳು ಅದರಲ್ಲೂ ಬಾಸೆಲ್ ಮಿಷನ್‌ನವರು ಸ್ಥಳೀಯ ಭಾಷೆಯಲ್ಲಿ ಶಿಕ್ಷಣ ನೀಡುವ ಶಾಲೆಗಳನ್ನು ಪ್ರಾರಂಭಿಸಿದರು ಹಾಗೂ ಮಕ್ಕಳಿಗೆ ಬೇಕಾದ ಪಠ್ಯಗಳನ್ನು ಅವರೇ ನೇರವಾಗಿ ಮುದ್ರಣ ಮಾಡುತ್ತಿದ್ದರು. ಈ ಪಠ್ಯಗಳನ್ನು ರಚಿಸಲು ಬ್ರಿಟಿಷ್ ಆಡಳಿತಶಾಹಿಗೆ ಪರವಾಗಿರುವ ವ್ಯಕ್ತಿಗಳನ್ನೇ ಪಠ್ಯ ರಚಿಸಲು ಸೂಚಿಸಲಾಗುತ್ತಿತ್ತು. ಅಂತಹ

ಪಂಡಿತರು ರಚಿಸಿದ ಪಠ್ಯಗಳು ಸಹಜವಾಗಿಯೇ ವಸಾಹತುಶಾಹಿ ವ್ಯವಸ್ಥೆಯ ಪರವಾಗಿದ್ದುದನ್ನು ಕಾಣಬಹುದು. ಆ ಕಾಲದಲ್ಲಿ ಸ್ಥಳೀಯ ಭಾಷೆ ಹಾಗೂ ಆಂಗ್ಲ ಭಾಷೆ ಎರಡರಲ್ಲಿಯೂ ಪ್ರಾವಿಣ್ಯತೆ ಪಡೆದ ಸ್ಥಳೀಯ ವಿದ್ವಾಂಸರೆಂದರೆ ಪುರೋಹಿತಶಾಹಿ ವರ್ಗ ಮಾತ್ರವಾಗಿತ್ತು. ಇವರು ರಚಿಸಿದ ಪಠ್ಯಗಳು ಸಾಮಾನ್ಯವಾಗಿ ಬ್ರಿಟಿಷರ ವಸಾಹತುಶಾಹಿ ಪರವಾಗಿದ್ದರೂ ತಮಗೆ ಬೇಕಾದ ಪೌರಾಣಿಕ ಕಥೆಗಳನ್ನು ನೀತಿಪಾಠದ ಹೆಸರಿನಲ್ಲಿ ಸೇರಿಸುತ್ತಿದ್ದರು. ಆದರೆ ಕೆಲವೊಂದು ಕಡೆ ಮಾತ್ರ ಅನಿವಾರ್ಯವೆಂಬಂತೆ ಬೌದ್ಧ ಧರ್ಮ, ಜೈನ ಧರ್ಮ, ಇಸ್ಲಾಂ ಆಡಳಿತಗಾರರ ಕುರಿತು ತಿಳಿಸಿದ ಉದಾಹರಣೆಗಳೂ ಉಂಟು. ಆದರೆ ಈ ಪಠ್ಯಗಳು ಪುರೋಹಿತಶಾಹಿ ಹಾಗೂ ವಸಾಹತುಶಾಹಿಯ ವಾಸನೆಯಿಂದ ಕೂಡಿರುವುದನ್ನು ಮರೆಯುವಂತಿಲ್ಲ. ಬಹುತೇಕವಾಗಿ ಇಂತಹ ಪಠ್ಯಪುಸ್ತಕಗಳ ಕುರಿತು ಯಾವೊಂದು ವಿರೋಧ ವ್ಯಕ್ತವಾಗದೇ ಇರುವುದನ್ನು ಕಾಣುತ್ತೇವೆ. ಆ ಕಾಲದಲ್ಲಿ ಪ್ರತಿರೋಧಿ ಹೋರಾಟಗಳು ನಡೆಯದಿರಲು ಎರಡು ಕಾರಣಗಳು ಗೋಚರಿಸುತ್ತವೆ. ಮೊದಲನೆಯದು ಆ ಕಾಲದ ಪುರೋಹಿತಶಾಹಿಗೆ ಹೊರತಾದ ತಳ ಸಮುದಾಯಗಳು ಸಾಕ್ಷರತೆಯಿಂದ ದೂರವಿದ್ದವು. ಸಾಕ್ಷರರಲ್ಲದವರಿಗೆ ಆ ಪಠ್ಯಗಳಾದರೂ ಅರ್ಥವಾಗಲು ಸಾಧ್ಯವಿರದ ಮಾತು. ಎರಡನೆಯದು ಪುರೋಹಿತಶಾಹಿ ಹಾಗೂ ಬ್ರಿಟಿಷ್ ಆಡಳಿತಶಾಹಿಗಳನ್ನು ಎದುರುಹಾಕಿಕೊಳ್ಳದ ಅಸಹಾಯಕತೆ ಆ ಕಾಲದ ಹಿಂದುಳಿದ ತಳಸಮುದಾಯಗಳಲ್ಲಿತ್ತು ಎನಿಸುತ್ತದೆ.

### ೫.೪. ಸ್ವಾತಂತ್ರ್ಯೋತ್ತರ ಕರ್ನಾಟಕದ ಪ್ರಾಥಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ

೧೯೪೭ರಲ್ಲಿ ಭಾರತ ಸ್ವತಂತ್ರಗೊಂಡ ತರುವಾಯ ಸ್ಥಳೀಯ ಭಾಷೆಗಳ ಆಧಾರದ ಮೇಲೆ ಭಾಷಾವಾರು ರಾಜ್ಯಗಳನ್ನು ವಿಂಗಡಿಸಲಾಯಿತು. ರಾಜ್ಯಗಳ ಪುನರ್ವಿಂಗಡನೆಯ ಸಂದರ್ಭದಲ್ಲಿ ವಿವಿಧ ರೀತಿಯ ಶಾಲಾ ಶಿಕ್ಷಣ ಕ್ರಮಗಳಿದ್ದವು. ಬೇರೆ ಬೇರೆ ವಲಯಗಳಲ್ಲಿ ಬೇರೆ ಬೇರೆ ನಿಯಮಗಳು ಆಚರಣೆಗಳೂ ಇದ್ದವು. ಆದುದರಿಂದ ಇಡೀ ರಾಜ್ಯಕ್ಕೆ ಶಿಕ್ಷಣದಲ್ಲಿ ಏಕತೆಯನ್ನು ರೂಪಿಸುವುದು ತಕ್ಷಣವೇ ಮಾಡಬೇಕಾದ ಕೆಲಸವಾಗಿತ್ತು. ಇಂತಹ ಕಾರ್ಯವನ್ನು 'ಡಿಸೆಂಬರ್ ೧೯೫೭ರಲ್ಲಿ ಸರ್ಕಾರದಿಂದ ರಚಿತವಾದ ಶಿಕ್ಷಣ ಏಕೀಕರಣ ಸಲಹಾ ಸಮಿತಿಯು ಹಂತ ಹಂತವಾಗಿ ಕಾರ್ಯವನ್ನು ಕೈಗೆತ್ತಿಕೊಂಡಿತು'.[೧೯] ಪ್ರಾಥಮಿಕ ಶಿಕ್ಷಣ ಎಂಬ ಪದವು ೧೯೫೫-೫೬ರಲ್ಲಿ ಹಳೆಯ ಮೈಸೂರು ಭಾಗದಲ್ಲಿ ಒಂದು ಹೊಸ ಅರ್ಥವನ್ನು ಪಡೆದುಕೊಂಡಿತು. ಪ್ರಾಥಮಿಕ ಶಾಲೆಗಳಲ್ಲಿದ್ದ ೪ ತರಗತಿಗಳನ್ನು ಮಿಡ್ಲ್ ಸ್ಕೂಲಿನ ೪ ತರಗತಿಗಳನ್ನು ಸಂಯೋಜಿಸಲಾಯಿತು. ಅದು ೮ ವರ್ಷಗಳ ಸಮಗ್ರ ಪ್ರಾಥಮಿಕ ಶಿಕ್ಷಣವಾಗಿ ರೂಪುಗೊಂಡಿತು. ೧ರಿಂದ ೪ನೆಯ ಪ್ರಾಥಮಿಕ ತರಗತಿಗಳಿದ್ದ ಶಾಲೆಗಳು ಕಿರಿಯ ಪ್ರಾಥಮಿಕ ಶಾಲೆಗಳಾದವು. ಇನ್ನುಳಿದ ೫ರಿಂದ ೮ನೇ ತರಗತಿವರೆಗೆ ಹಿರಿಯ ಪ್ರಾಥಮಿಕ ಶಾಲೆಯೆಂದು ಪರಿಗಣಿಸಲಾಯಿತು.

ಬೆಳಗಾವಿ ಪ್ರದೇಶದಲ್ಲಿ ಮಾತ್ರ ಪ್ರಾಥಮಿಕ ಶಿಕ್ಷಣ ೭ ವರ್ಷಗಳದ್ದಾಗಿತ್ತು. ಮೊದಲ ೪ ತರಗತಿಗಳನ್ನು ಹೊಂದಿದ ಶಾಲೆಗಳನ್ನು ಕಿರಿಯ ಪ್ರಾಥಮಿಕ ಶಾಲೆಯಂದೂ ಉಳಿದ ೩ ತರಗತಿಗಳನ್ನು ಉನ್ನತ ಪ್ರಾಥಮಿಕ ಶಾಲೆ ಎಂದು ಪರಿಗಣಿಸಲಾಗಿತ್ತು.

ಹೈದರಾಬಾದ್ ಪ್ರದೇಶದಲ್ಲಿಯೂ ಪ್ರಾಥಮಿಕ ಶಿಕ್ಷಣ ೭ ವರ್ಷಗಳದ್ದಾಗಿತ್ತು. ಹಳೆಯ ಮದ್ರಾಸ್, ಕೊಡಗು ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣ ೮ ವರ್ಷಗಳದ್ದಾಗಿತ್ತು. ಈ ಹಂತದ ಶಿಕ್ಷಣಕ್ಕೆ ಎಲಿಮೆಂಟರಿ ಎಜ್ಯುಕೇಷನ್ ಎಂದು ಕರೆಯಲಾಗುತ್ತಿತ್ತು. ಆರಂಭದ ೫ ತರಗತಿಗಳನ್ನು ಲೋಯರ್ ಎಲಿಮೆಂಟರಿ ಎಜ್ಯುಕೇಷನ್ ಎಂದು, ತರುವಾಯದ ೩ ವರ್ಷದ ಉನ್ನತ ಪ್ರಾಥಮಿಕ ಶಿಕ್ಷಣವನ್ನು ಹೈಯರ್ ಎಲಿಮೆಂಟರಿ ಎಜ್ಯುಕೇಷನ್ ಎಂದೂ ಕರೆಯಲಾಗುತ್ತಿತ್ತು.

'ಶಿಕ್ಷಣ ಏಕೀಕರಣ ಸಮಿತಿಯು ಪ್ರಾಥಮಿಕ ಶಿಕ್ಷಣವು ೭ ವರ್ಷಗಳ ಕಾಲ ಅಖಂಡವಾಗಿರಬೇಕೆಂದು ಶಿಫಾರಸ್ಸು ಮಾಡಿತು.'[೧೫]

ಈ ಪದ್ಧತಿಯಲ್ಲಿ

೧ ಮಾತೃಭಾಷೆ,

೨ ಕನ್ನಡ ಮಾತೃಭಾಷೆಯವರಲ್ಲದವರಿಗೆ ೩ನೇ ತರಗತಿಯಿಂದ ಕನ್ನಡ ಬೋಧನೆ,

೩, ೫ನೇ ತರಗತಿಯಿಂದ ಇಂಗ್ಲಿಷ್ ಬೋಧನೆ,

೪, ೪ನೇ ತರಗತಿಯಿಂದ ಹಿಂದಿ ಶಿಕ್ಷಣ,

೫, ಸಾಮಾನ್ಯ ವಿಜ್ಞಾನ,

೬ ಸಾಮಾಜಿಕ ಪಾಠಗಳು,

೭ ಸಾಮಾನ್ಯ ಗಣಿತ,

೮ ಕಲೆ, ಕಸುಬು ಮತ್ತು ಇತರ ಚಟುವಟಿಕೆಗಳು,

೯ ದೈಹಿಕ ಶಿಕ್ಷಣ ಈ ರೀತಿಯ ಪಠ್ಯಕ್ರಮ ಇದ್ದುದಾಗಿ ತಿಳಿದುಬರುತ್ತದೆ.

ಮೂಲ ಶಿಕ್ಷಣ ಸ್ವರೂಪವನ್ನು ಹೊಂದಿದ್ದ ಈ ಯೋಜನೆಯು ಮೂಲ ಶಿಕ್ಷಣ ಶಾಲೆಗಳು ಮತ್ತು ಬೇರೆ ಸಾಧಾರಣ ಶಾಲೆಗಳಿಗೂ ಒಂದೇ ಸ್ವರೂಪದ ಪಠ್ಯಗಳನ್ನು ಇರಿಸಲಾಗಿತ್ತು. ಎಲ್ಲಾ ಶಾಲೆಗಳಿಗೂ ಅನ್ವಯವಾಗುವ ಈ ಪಠ್ಯಕ್ರಮವು ೧೯೫೯–೬೦ರಲ್ಲಿ ಪ್ರಾರಂಭಗೊಂಡು ಕ್ರಮೇಣವಾಗಿ ಹಂತಹಂತವಾಗಿ ಆಚರಣೆಗೊಳಪಟ್ಟವು. ೧೯೬೨–೬೩ರ ವೇಳೆಗೆ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯ ಪಠ್ಯಕ್ರಮ ದೊರೆಯುವಂತಾಯಿತು.

ಪ್ರಾಥಮಿಕ ಶಾಲೆಯು ಪ್ರಾರಂಭಗೊಳ್ಳುವುದೇ ಒಂದನೇ ತರಗತಿಯಿಂದ. ಮಗು ೬ ವರ್ಷದವನಾದಾಗ ಒಂದನೇ ತರಗತಿಗೆ ಪ್ರವೇಶ ಪಡೆಯುತ್ತಿತ್ತು. ೬ನೇ ವಯಸ್ಸಿಗೆ ಶಾಲೆಯನ್ನು ಪ್ರವೇಶಿಸಿದ ಮಗು ಪ್ರಾರಂಭಿಕ ಹಂತದಲ್ಲಿ ಅಕ್ಷರಗಳ ಕಲಿಕೆ, ಮಗ್ಗಿ ಇತ್ಯಾದಿ ಮೂಲ ಪಾಠಗಳನ್ನು ಮಾತ್ರ ಕಲಿಯುತ್ತಿತ್ತು. ಎರಡನೆಯ ತರಗತಿ ಪ್ರವೇಶಿಸಿದ ಮಗು ಒಂದನೇ ತರಗತಿಯಲ್ಲಿ ಕಲಿತ ಪಾಠಗಳ ಮುಂದುವರೆದ ಪಠ್ಯಗಳಾಗಿ ಕಾಗುಣಿತಾಕ್ಷರಗಳು, ಸರಳ ಗಣಿತ ಮುಂತಾದವುಗಳನ್ನು ಮಾತ್ರ ಕಲಿಯಬೇಕಾಗಿತ್ತು. ಸಮಾಜಶಾಸ್ತ್ರ ಅಥವಾ ಚರಿತ್ರೆ ಪಠ್ಯಗಳನ್ನು

೧-೨ನೇ ತರಗತಿಯ ಮಕ್ಕಳ ಸಾಮರ್ಥ್ಯಕ್ಕೆ ಹೊರತಾದ ವಿಷಯಗಳೆಂದು ಪರಿಗಣಿಸಲಾಗಿತ್ತು. ಹಾಗಾಗಿ ಆ ರೀತಿಯ ಪಠ್ಯಕ್ರಮ ಪ್ರಾರಂಭಗೊಳ್ಳುತ್ತಿದ್ದುದೇ ೩ನೇ ತರಗತಿಯಿಂದ. ಹೀಗಾಗಿ ಇಲ್ಲಿ ೩ ಮತ್ತು ೪ನೇ ತರಗತಿಯ ಚರಿತ್ರೆ ಪಠ್ಯಗಳನ್ನಷ್ಟೇ ಗಮನಿಸಲಾಗಿದೆ.

**೫.೪.೧. ಮೂರನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ**

ಈ ಹಿಂದೆ ತಿಳಿಸಿದಂತೆ ೧೯೬೨-೬೩ರ ವೇಳೆಗೆ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯ ಪಠ್ಯಕ್ರಮ ಪದ್ಧತಿ ಜಾರಿಗೊಂಡಿತು. ಹೀಗಾಗಿ ಈ ಕಾಲಾವಧಿಯ ಪಠ್ಯಗಳನ್ನು ಇಲ್ಲಿ ಗಮನಿಸಲಾಗಿದೆ. ೧೯೪೭ರಲ್ಲಿ ಭಾರತಕ್ಕೆ ಸ್ವತಂತ್ರ ದೊರೆಯಿತಾದರೂ ಆಡಳಿತ ವ್ಯವಸ್ಥೆ ಪೂರ್ಣವಾಗಿ ಭಾರತದ ಹಿಡಿತಕ್ಕೆ ಬಂದಿರಲಿಲ್ಲ. ಭಾರತದ ಹಿಡಿತಕ್ಕೆ ಪೂರ್ಣ ಪ್ರಮಾಣದ ಆಡಳಿತ ವ್ಯವಸ್ಥೆ ದೊರೆಯಲು ದಶಕಗಳೇ ಬೇಕಾದವು. ಈ ರೀತಿಯ ಪೂರ್ಣ ಪ್ರಮಾಣದ ಆಡಳಿತ ವ್ಯವಸ್ಥೆ ಭಾರತೀಯ ಆಡಳಿತಗಾರರಿಗೆ ದೊರೆತ ತರುವಾಯ ಅವರು ತಮ್ಮ ರಾಷ್ಟ್ರ, ನಾಡು ನುಡಿಗಳ ಕುರಿತು, ಮುಖ್ಯವಾಗಿ ಮಕ್ಕಳಲ್ಲಿ ರಾಷ್ಟ್ರೀಯ ಮನೋಭಾವನೆ ಬೆಳೆಯುವ ರೀತಿಯ ಚಾರಿತ್ರಿಕ ಪಠ್ಯಗಳನ್ನು ಇರಿಸಿರುವುದನ್ನು ಗಮನಿಸಬಹುದಾಗಿದೆ.

೧. ಮಕ್ಕಳ ಸಮಾಜಶಾಸ್ತ್ರ ಎನ್ನುವ ಹೆಸರಿನ ಪಠ್ಯವನ್ನು ೧೯೬೪ರಲ್ಲಿ ಇರಿಸಲಾಗಿದೆ. ೧೯೬೪ರಷ್ಟೊತ್ತಿಗೆ ಈ ಪಠ್ಯವು ೪ ಮುದ್ರಣಗಳನ್ನು ಕಂಡಿದೆ. ಪ್ರಾಯಶಃ ೧೯೬೨ರಲ್ಲಿಯೇ ಈ ಪಠ್ಯ ೩ನೇ ತರಗತಿಯ ಪಠ್ಯವಾಗಿ ರಚನೆಗೊಂಡಿದೆಯೆನಿಸುತ್ತದೆ. ಪಂಡಿತ ಕೆ ಪಟ್ಟಾಭಿರಾಮಯ್ಯ ಎನ್ನುವವರು ಈ ಪಠ್ಯವನ್ನು ರಚಿಸಿದ್ದಾರೆ.[೧೬] ಸುದರ್ಶನಮ್ ಅಂಡ್ ಕಂ, ಬೆಂಗಳೂರು ಇವರು ಈ ಪಠ್ಯವನ್ನು ಮುದ್ರಿಸಿದ್ದಾರೆ. ಈ ಪಠ್ಯವನ್ನು ವಿದ್ಯಾ ಇಲಾಖೆಯ ಪ್ರಣಾಳಿಕೆಯ ಪ್ರಕಾರ ರಚಿಸಿರುವುದಾಗಿ ಲೇಖಕರು ಗ್ರಂಥಕರ್ತನ ನುಡಿಯಲ್ಲಿ ಹೇಳಿದ್ದಾರೆ. ಇದು ಮಕ್ಕಳ ವಯಸ್ಸಿಗೆ ಅನುಗುಣವಾಗಿ, ಶಿಕ್ಷಣ ಉದ್ದೇಶಗಳಿಗೆ ಅನುಗುಣವಾಗಿ ಕಥಾರೂಪದಲ್ಲಿ ರಚನೆಗೊಳಿಸಲಾಗಿದೆ. ಪುಟ ೬೦ರಿಂದ ೧೦೪ರವರೆಗೆ ಇಂಡಿಯಾ ದೇಶದ ಇತಿಹಾಸ ಎನ್ನುವ ಉಪಶೀರ್ಷಿಕೆಯಡಿ ಚರಿತ್ರೆ ಅಧ್ಯಾಯಗಳಿವೆ. ೨ರಿಂದ ೫೯ ಪುಟಗಳು ಇಂಡಿಯಾದ ಭೌಗೋಳಿಕ ಲಕ್ಷಣಗಳನ್ನು ತಿಳಿಸುವ ಪಠ್ಯಗಳು ಇವೆ. ಸ್ವಾತಂತ್ರ್ಯ ದೊರೆತ ತರುವಾಯ ಸಮಗ್ರ ಭಾರತದ ಪರಿಕಲ್ಪನೆ ಮೂಡಿತ್ತು. ಬಹುತೇಕ ಭಾರತ ಎನ್ನುವ ಪದ ಆಗಲೇ ಬಳಕೆಗೊಳ್ಳುತ್ತಿತ್ತು. ಆದರೂ ಲೇಖಕರು ಭಾರತ ಎನ್ನುವ ಪದವನ್ನು ಬಳಸದೇ ಇಂಡಿಯಾ ಎನ್ನುವ ಪದವನ್ನು ಬಳಸಿರುವುದು ಕಂಡುಬರುತ್ತದೆ. ಪ್ರಾಯಶಃ ವಸಾಹತುಶಾಹಿಯ ಪ್ರಭಾವದಿಂದ ಲೇಖಕರು ಇನ್ನೂ ಹೊರಬರದೇ ಇದ್ದುದರಿಂದಾಗಿಯೇ ಇಂಡಿಯಾ ಪದವನ್ನು ಬಳಸಿರುವ ಸಾಧ್ಯತೆ ಇದೆ. ಅಜ್ಜನು ರಾಮು ಎನ್ನುವ ಮೊಮ್ಮಗನಿಗೆ ಕಥಾರೂಪದಲ್ಲಿ ಭಾರತದ ಚರಿತ್ರೆಯನ್ನು ತಿಳಿಸಿಕೊಟ್ಟಂತೆ ಪಾಠಗಳನ್ನು ರೂಪಿಸಲಾಗಿದೆ. ಮೂಲ ನಿವಾಸಿಗಳು, ಸಿಂಧೂ ನಾಗರಿಕತೆ, ಆರ್ಯರು, ಮಹಾವೀರ, ಗೌತಮ ಬುದ್ಧ, ವಿದೇಶಿಯರ ದಂಡಯಾತ್ರೆ, ಚಂದ್ರಗುಪ್ತ ಮೌರ್ಯ, ಅಶೋಕ ಚಕ್ರವರ್ತಿ, ಕಾನಿಷ್ಕ, ೨ನೇ ಚಂದ್ರಗುಪ್ತ, ಶ್ರೀಹರ್ಷ, ೨ನೇ ಪುಲಕೇಶಿ, ಪಲ್ಲವರು, ರಾಷ್ಟ್ರಕೂಟರು, ಚೋಳರ ಕುರಿತಾದ ಪಾಠಗಳಿವೆ.

ಮೂಲ ನಿವಾಸಿ ಎನ್ನುವ ಪಾಠದಲ್ಲಿ ನೀಲಗಿರಿಯ ತೋಡರು, ವಿಂಧ್ಯಾ ಪ್ರದೇಶದ ಭಿಲ್ಲರು, ಮಧ್ಯ ಪ್ರದೇಶದ ಗೊಂಡರು, ಒರಿಸ್ಸಾದ ಜುವಾಂಗರು, ಬಂಗಾಳದ ಕೋಲರು,

ಸಂತಾಲ ಮುಂತಾದ ಬುಡಕಟ್ಟುಗಳ ಕುರಿತು ಪರಿಚಯಾತ್ಮಕ ವಿವರಗಳಿವೆ. ಈ ಪಾಠದಲ್ಲಿ ವಿಶೇಷವಾಗಿ ದ್ರಾವಿಡರನ್ನು ಮೂಲ ನಿವಾಸಿಗಳೆಂದು ಲೇಖಕರು ಉಲ್ಲೇಖಿಸಿದ್ದಾರೆ. ಉಳಿದಂತೆ ಈ ಪಠ್ಯದ ಇತರ ಪಾಠಗಳಲ್ಲಿ ರಾಜರ ಸಾಧನೆಗಳು, ದಂಡಯಾತ್ರೆಗಳ ಕುರಿತು ವಿವರಗಳಿವೆ. ಮೂರನೇ ತರಗತಿಯ ಮಕ್ಕಳ ಬೌದ್ಧಿಕ ಮಟ್ಟಕ್ಕೆ ಹೊಂದುವಂತೆ ತುಂಬಾ ಸರಳವಾದ ರೀತಿಯಲ್ಲಿ ಪಾಠಗಳನ್ನು ರಚಿಸಲಾಗಿದೆ. ಈ ಪಠ್ಯದ ವಿಶೇಷವೆಂದರೆ ಭಾರತೀಯ ಬುಡಕಟ್ಟುಗಳನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಇಡೀ ಪಠ್ಯವು ರಾಷ್ಟ್ರೀಯ ಮನೋಭಾವನೆ ಮಕ್ಕಳಲ್ಲಿ ಬೆಳೆಯುವ ರೀತಿಯಲ್ಲಿ ಪಠ್ಯಗಳನ್ನು ರಚಿಸಲಾಗಿದೆ. ಆದರೆ ಮಕ್ಕಳ ಬೌದ್ಧಿಕ ಮಟ್ಟಕ್ಕೆ ಸರಿಹೊಂದುವಂತಹ ಸ್ಥಳೀಯ ಚರಿತ್ರೆಯನ್ನು ಇಡಬಹುದಾಗಿತ್ತು. ಈ ವಿಚಾರದಲ್ಲಿ ಲೇಖಕರು ಅಸಹಾಯಕರು. ಅವರೇ ತಿಳಿಸಿದಂತೆ ವಿದ್ಯಾ ಇಲಾಖೆಯ ಪಠ್ಯಕ್ರಮಕ್ಕನುಗುಣವಾಗಿ ಈ ಪಠ್ಯವನ್ನು ರಚಿಸಿದ್ದಾರೆ. ಹೀಗಾಗಿ ಲೇಖಕರನ್ನು ನೇರವಾಗಿ ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆನಿಸುತ್ತದೆ.

೨. ೧೯೭೦ರಲ್ಲಿ ಸಮಾಜ ಪರಿಚಯ ಪಾಠಗಳು[೪೭] ಹೆಸರಿನ ೩ನೇ ತರಗತಿ ಪಠ್ಯ ಇರಿಸಲಾಗಿದೆ. ಈ ಪಠ್ಯವನ್ನು ಒಬ್ಬ ಲೇಖಕರು ರಚಿಸದೇ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಿಂದ ರಚನೆಗೊಂಡಿದೆ. ಈ ಸಮಿತಿಗೆ ಟಿ.ಬಿ. ತಿಮ್ಮೇಗೌಡರು ಅಧ್ಯಕ್ಷರಾಗಿದ್ದರು. ಎಂ.ಜಿ. ಹಂದ್ರಾಳ, ಎಚ್. ಹೊನ್ನಯ್ಯ, ಎಸ್. ವೆಂಕಟೇಶಯ್ಯ, ಎಚ್.ಎಸ್. ಇನಾಮತಿ ಪಠ್ಯಪುಸ್ತಕ ಸಮಿತಿ ಸದಸ್ಯರಾಗಿದ್ದರು. ಇಲ್ಲಿ ಗಮನಿಸಬೇಕಾದ ವಿಶೇಷ ಅಂಶವೆಂದರೆ ಮೈಸೂರು ರಾಜ್ಯದಲ್ಲಿ ರಚನೆಗೊಂಡ ಪ್ರತಿ ಜಿಲ್ಲೆಗೂ ಸ್ಥಳೀಯ ಚರಿತ್ರೆಯನ್ನು ತಿಳಿಸಿಕೊಡುವ ಪ್ರಾದೇಶಿಕ ಮಿತಿಗೊಳಪಟ್ಟ ಪಠ್ಯವನ್ನು ರಚಿಸಿರುವುದನ್ನು ಕಾಣುತ್ತೇವೆ. ಈ ಪಠ್ಯಕ್ಕೆ ಸಮಾಜ ಪರಿಚಯ ಪಾಠಗಳು ಎನ್ನುವ ಹೆಸರನ್ನು ಇರಿಸಿದ ಉದ್ದೇಶವನ್ನು ತಿಳಿಸಲಾಗಿದೆ. ಹಿಂದೆ ಚರಿತ್ರೆ, ಭೂ ವಿವರಣೆ, ಪೌರನೀತಿ ಎಂಬ ವಿಷಯಗಳನ್ನು ಮಕ್ಕಳು ಪ್ರತ್ಯೇಕವಾಗಿ ಕಲಿಯುತ್ತಿದ್ದರು. ಆ ರೀತಿಯ ಪ್ರತ್ಯೇಕತೆಯ ಅವಶ್ಯಕತೆ ಇಲ್ಲ ಎನ್ನುವ ಕಾರಣಕ್ಕೆ ಸಮಾಜ ಪರಿಚಯ ಪಾಠಗಳು ಎನ್ನುವ ಶೀರ್ಷಿಕೆ ಇರಿಸಿ ಅದರೊಳಗೆ ಭೂಗೋಳ, ಪೌರನೀತಿ, ಚರಿತ್ರೆ ಎಲ್ಲಾ ವಿಷಯಗಳನ್ನು ಮಕ್ಕಳ ಬೌದ್ಧಿಕ ಮಟ್ಟಕ್ಕೆ ಸರಿಹೊಂದುವಂತೆ ಸರಳವಾಗಿ ಮತ್ತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಆದರೆ ಪಠ್ಯ ಸಮಿತಿಯಲ್ಲಿ ತಿಳಿಸಿದಂತೆ ೧ರಿಂದ ೯ ಅಧ್ಯಾಯಗಳು ಭೂಗೋಳದ ಕುರಿತು ವಿವರಗಳಿದ್ದರೆ ೧೦-೧೨ರವರೆಗೆ ಪೌರನೀತಿ ಪಾಠಗಳಿವೆ. ಅಂದರೆ ಸ್ಥಳೀಯ ಚರಿತ್ರೆ ಪಠ್ಯಗಳನ್ನೇ ನಿರ್ಲಕ್ಷಿಸಲಾಗಿದೆ. ಚರಿತ್ರೆ, ಭೂಗೋಳ, ಪೌರನೀತಿಗಳನ್ನು ಸಮನ್ವಯಗೊಳಿಸುವಲ್ಲಿ ಪಠ್ಯ ಸಮಿತಿ ಸೋತಿದೆ ಎಂದೇ ಹೇಳಬಹುದು. ಇದು ಎಲ್ಲಾ ಜಿಲ್ಲೆಗಳ ಪಠ್ಯದಲ್ಲಿಯೂ ಕಾಣುತ್ತೇವೆ.

೩. ಮೈಸೂರು ರಾಜ್ಯವನ್ನು ಕರ್ನಾಟಕ ರಾಜ್ಯವೆಂದು ೧೯೭೩ರಲ್ಲಿ ಹೆಸರನ್ನು ಬದಲಿಸಲಾಯಿತು. ಆ ತರುವಾಯ ಕರ್ನಾಟಕ ಸರ್ಕಾರದ ಹೆಸರಿನಲ್ಲಿಯೇ ಪ್ರಾಥಮಿಕ ಪಠ್ಯಗಳು ಪ್ರಕಟಗೊಳ್ಳುತ್ತಿದ್ದವು. ಈ ಹಂತದಲ್ಲಿಯೂ ಕೂಡ ಪ್ರಾದೇಶಿಕತೆಯ ಕಡೆಗೆ ಹೆಚ್ಚಿನ ಒತ್ತನ್ನು ನೀಡಿ ಪಠ್ಯವನ್ನು ರಚಿಸಲಾಗಿದೆ. ೧೯೭೫ರಲ್ಲಿ ಸಮಾಜ ಪಾಠಗಳು ಭಾಗ-೧ ಹಾಗೂ

ಭಾಗ-೨ೞ ಎನ್ನುವ ಪಠ್ಯವನ್ನು ೩ನೇ ತರಗತಿಗೆ ಇರಿಸಲಾಗಿದೆ. ಭಾಗ-೧ರಲ್ಲಿ ಸಮಗ್ರ ರಾಜ್ಯದ ಕುರಿತ ಮಾಹಿತಿ ಇದ್ದರೆ ಭಾಗ-೨ರಲ್ಲಿ ಪ್ರತಿ ಜಿಲ್ಲೆಯ ಮಾಹಿತಿಯನ್ನು ತಿಳಿಸುವ ಪಠ್ಯ ಇರಿಸಿರುವುದನ್ನು ಕಾಣುತ್ತೇವೆ. ಭಾಗ-೨ ಪ್ರತಿ ಜಿಲ್ಲೆಗೂ ಆಯಾ ಜಿಲ್ಲೆಯ ಮಾಹಿತಿ ಒದಗಿಸುವ ಉದ್ದೇಶವನ್ನು ಹೊಂದಿದೆ.

ಭಾಗ ೧-೨ ಪಠ್ಯಪುಸ್ತಕ ನಿರ್ಮಾಣ ಸಮಿತಿಯ ಅಧ್ಯಕ್ಷರಾಗಿ ಎಸ್ ಮಂಚಯ್ಯ ಇದ್ದಾರೆ. ಎಚ್.ಎಸ್. ಅನಂತರಾಮ್, ಬಿ.ಎಸ್. ಶಂಕರನಾರಾಯಣ, ಸಿಸು ಸಂಗಮೇಶ, ಎಸ್. ನರಸಿಂಹಯ್ಯನವರು ಸದಸ್ಯರಾಗಿದ್ದಾರೆ.

ಭಾಗ-೧ರಲ್ಲಿ ನಮ್ಮ ರಾಜ್ಯ, ನಮ್ಮ ರಾಜ್ಯದ ಭಾಗಗಳು, ರಾಜ್ಯದ ವಾಯುಗುಣ, ರಾಜ್ಯದ ನದಿಗಳು, ಸ್ವಾಭಾವಿಕ ಸಸ್ಯಗಳು ಮತ್ತು ಕಾಡುಪ್ರಾಣಿಗಳು, ರಾಜ್ಯದ ಬೆಳೆಗಳು, ರಾಜ್ಯದ ಖನಿಜ ಸಂಪತ್ತು ಮತ್ತು ಉದ್ದಿಮೆಗಳು, ಉದ್ಯೋಗಗಳು, ಸಾರಿಗೆ ಸಂಪರ್ಕ, ನಮ್ಮ ಪರಂಪರೆ, ಹಳ್ಳಿಗಳ ಆಡಳಿತ, ತಾಲ್ಲೂಕಿನ ಆಡಳಿತ, ಜಿಲ್ಲೆಯ ಆಡಳಿತ, ರಾಜ್ಯ ಸರ್ಕಾರದ ಆಡಳಿತದ ಕುರಿತಾದ ಪಾಠಗಳಿವೆ. ಈ ಪಠ್ಯದಲ್ಲಿರುವ ನಮ್ಮ ಪರಂಪರೆ ಎಂಬ ಪಾಠವು ಚರಿತ್ರೆ ವಿಷಯಗಳಿಂದ ಕೂಡಿದೆ. ಇದರಲ್ಲಿ ಪ್ರಮುಖವಾಗಿ ಕರ್ನಾಟಕದ ರಾಜರಾದ ಚಾಲುಕ್ಯರ ೨ನೇ ಪುಲಕೇಶಿ, ಹೊಯ್ಸಳ, ವಿಜಯನಗರ ಸಾಮ್ರಾಜ್ಯದ ಶ್ರೀಕೃಷ್ಣದೇವರಾಯ, ಟಿಪ್ಪುಸುಲ್ತಾನ್, ನಾಲ್ವಡಿ ಕೃಷ್ಣರಾಜ ಒಡೆಯರು, ಬಸವೇಶ್ವರ, ಕನಕ, ಪುರಂದರ ಮತ್ತು ವಿಶ್ವೇಶ್ವರಯ್ಯನವರ ಕುರಿತು ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ. ಹಿಂದಿನ ಪಠ್ಯಗಳಿಗೆ ಹೋಲಿಸಿದರೆ ಈ ಪಠ್ಯ ಸುಧಾರಿತ ಪಠ್ಯಕ್ರಮವನ್ನು ಒಳಗೊಂಡಿರುವುದನ್ನು ಕಾಣಬಹುದು.

ಭಾಗ-೨ರಲ್ಲಿ ಸಾಮಾನ್ಯ ವಿವರಣೆ, ಸನ್ನಿವೇಶ, ಮೇಲ್ಮೈ ಲಕ್ಷಣಗಳ ಪರಿಚಯ, ಮುಖ್ಯ ನದಿಗಳು, ಜಿಲ್ಲೆಯ ವಾಯುಗುಣದ ಮುಖ್ಯಾಂಶಗಳು ಮತ್ತು ಸ್ವಾಭಾವಿಕ ಸಸ್ಯವರ್ಗ, ವ್ಯವಸಾಯ, ಜಿಲ್ಲೆಯ ಉದ್ದಿಮೆಗಳು, ಜಿಲ್ಲೆಯ ಹೆಸರಾದ ವ್ಯಕ್ತಿಗಳು, ಜಿಲ್ಲೆಯ ಸಾಂಸ್ಕೃತಿಕ ಮತ್ತು ಐತಿಹಾಸಿಕ ಸ್ಥಳಗಳ ಪರಿಚಯ, ನಾಡಿಗೆ ಜಿಲ್ಲೆಯ ಕೊಡುಗೆ ಎನ್ನುವ ೯ ಅಧ್ಯಾಯಗಳಿವೆ. ಜಿಲ್ಲೆಯ ಹೆಸರಾಂತ ವ್ಯಕ್ತಿಗಳು ಎನ್ನುವ ಅಧ್ಯಾಯದಲ್ಲಿ ಆಯಾ ಜಿಲ್ಲೆಯೊಳಗೆ ಪ್ರಸಿದ್ಧರಾದ ವ್ಯಕ್ತಿಗಳ ಸಂಕ್ಷಿಪ್ತ ಪರಿಚಯ ಇದೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ನೋಡುವುದಾದರೆ ಒನಕೆ ಓಬವ್ವ, ಹುಲ್ಲೂರು ಶ್ರೀನಿವಾಸ ಜೋಯಿಸರು, ಸಿದ್ದವನಹಳ್ಳಿ ನಿಜಲಿಂಗಪ್ಪ, ತಳುಕಿನ ವೆಂಕಣ್ಣಯ್ಯ, ಸಿದ್ದವನಹಳ್ಳಿ ಕೃಷ್ಣಮೂರ್ತಿ, ತ.ರಾ. ಸುಬ್ಬರಾಯರು, ಎಂ.ಎಸ್. ಪುಟ್ಟಣ್ಣ, ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು, ಶ್ರೀ ರಾಘವೇಂದ್ರ ಸ್ವಾಮಿಗಳು ಕುರಿತು ತಿಳಿಸಲಾಗಿದೆ. ಚಿತ್ರದುರ್ಗ ಜಿಲ್ಲೆಗೆ ವಿಶೇಷ ಕೊಡುಗೆ ಸಂದಿರುವುದು ಚಿತ್ರದುರ್ಗದ ಪಾಳೆಯಗಾರರಿಂದ. ಪಾಳೆಯಗಾರ ವಂಶದ ಮದಕರಿನಾಯಕ ಮುಂತಾದವರ ಕುರಿತು ತಿಳಿಸದೇ ಕೇವಲ ಒನಕೆ ಓಬವ್ವನ ಕುರಿತಾಗಿ ತಿಳಿಸಿರುವುದರ ಔಚಿತ್ಯವೇನು ಎಂದು ಅರ್ಥವಾಗುವುದಿಲ್ಲ. ಒನಕೆ ಓಬವ್ವನ ಹೊರತಾಗಿ ಇನ್ನುಳಿದವರೆಲ್ಲ ೧೯-೨೦ನೇ ಶತಮಾನಕ್ಕೆ ಸೇರಿದ ವ್ಯಕ್ತಿಗಳು. ಅದರಲ್ಲೂ ರಾಜಕಾರಣಿಗಳು, ಮಠದ ಸ್ವಾಮಿಗಳ ಕುರಿತಾದ ಪರಿಚಯ

ನೀಡಲಾಗಿದೆ. ಹಾಗೆಯೇ ಸಂಶೋಧಕರೂ ಸಾಹಿತಿಗಳ ಕುರಿತಾದ ಪರಿಚಯ ಇಲ್ಲಿದೆ. ಚಿತ್ರದುರ್ಗಕ್ಕೆ ಐತಿಹಾಸಿಕ ಮಹತ್ವ ದೊರೆತಿರುವುದೇ ಮದಕರಿ ವಂಶದವರಿಂದ. ಆದರೆ ಆ ವಂಶದ ಯಾವೊಬ್ಬ ವ್ಯಕ್ತಿಯ ಕುರಿತಾಗಿ ಸಣ್ಣ ಉಲ್ಲೇಖವೂ ಪಠ್ಯದಲ್ಲಿ ದೊರೆಯುವುದಿಲ್ಲ. ಆದರೆ ಒನಕೆ ಓಬವ್ವನ ಕುರಿತಾಗಿ ತಿಳಿಸಲಾಗಿದೆ. ಒಟ್ಟಾರೆ ಅಧ್ಯಾಯದಲ್ಲಿ ಓಬವ್ವನ ಹೊರತಾಗಿ ಪರಿಚಯ ಮಾಡಿಕೊಟ್ಟಿರುವುದು ಪುರುಷರ ಕುರಿತಾಗಿದೆ. ಪುರುಷರ ಮಧ್ಯದಲ್ಲಿ ಮಹಿಳೆಯೊಬ್ಬಳಿರಲಿ ಎನ್ನುವ ಏಕೈಕ ಕಾರಣಕ್ಕೆ ಓಬವ್ವನನ್ನು ಪಠ್ಯದಲ್ಲಿ ಸೇರಿಸಿದಂತಿದೆ. ಹಾಗೆಯೇ ಮಠದ ಸ್ವಾಮಿಗಳ ಪರಿಚಯದ ಹಿಂದಿರುವ ಉದ್ದೇಶವೇನೆಂಬುದು ಅರ್ಥವಾಗುವುದಿಲ್ಲ. ಆ ಪ್ರದೇಶದ ಪ್ರಬಲ ಕೋಮಿನ ಪ್ರತಿನಿಧಿಗಳಾಗಿರುವ ಸ್ವಾಮಿಗಳನ್ನು ನಿರ್ಲಕ್ಷಿಸಿದರೆ ಆ ಕೋಮಿನವರ ವಿರೋಧ ಕಟ್ಟಿಕೊಳ್ಳಬೇಕಾಗುತ್ತದೆಂಬ ಭಯದಿಂದಾಗಿ ರಾಜಕೀಯ ಹಿತಾಸಕ್ತಿಗಾಗಿಯೇ ಪಠ್ಯದಲ್ಲಿ ಸ್ವಾಮಿಗಳ ಪರಿಚಯ ಇರಿಸಿದ್ದಾರೇನೋ ಎನಿಸುತ್ತದೆ.[೧೯]

೪. ಅದೇ ರೀತಿಯಾಗಿ ಮೈಸೂರು ಜಿಲ್ಲೆಯ ಮಹಾನ್ ಪುರುಷರು ಎಂಬ ಅಧ್ಯಾಯದಲ್ಲಿ ರಾಚಮಲ್ಲ, ರಾಜ ಒಡೆಯರು, ಕಂಠೀರವ ನರಸರಾಜ ಒಡೆಯರು, ಚಿಕ್ಕದೇವರಾಯರು, ನಾಲ್ವಡಿ ಕೃಷ್ಣರಾಜ ಒಡೆಯರು, ದಿವಾನ್ ಪೂರ್ಣಯ್ಯ, ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಇವರ ಕುರಿತು ಸಂಕ್ಷಿಪ್ತ ಪರಿಚಯ ಇದೆ. ಆದರೆ ಹೈದರ್ ಹಾಗೂ ಟಿಪ್ಪುಸುಲ್ತಾನನ ಕುರಿತಾಗಿ ಎಲ್ಲಿಯೂ ಉಲ್ಲೇಖವೇ ಇಲ್ಲ. ಹೈದರ್ ಹಾಗೂ ಟಿಪ್ಪುವಿನ ಕುರಿತಾಗಿ ಏಕೆ ಇಲ್ಲಿ ಪ್ರಸ್ತಾಪಿಸಿಲ್ಲ ಎನ್ನುವ ಪ್ರಶ್ನೆ ಕಾಡುತ್ತದೆ. ಪಠ್ಯ ರಚನಾಕಾರರ ಕೋಮು ಮನೋಭಾವನೆಯಿಂದಾಗಿಯೇ ಮುಸ್ಲಿಂ ಆಡಳಿತಗಾರರಾದ ಹೈದರ್, ಟಿಪ್ಪುವನ್ನು ಮಕ್ಕಳಿಗೆ ಪರಿಚಯಿಸದೆ ಹೋಗಿರುವ ಹಿಂದಿನ ಉದ್ದೇಶವಾಗಿರಬಹುದೇ ಎನ್ನುವ ಪ್ರಶ್ನೆ ಕಾಡುತ್ತದೆ.

ಒಟ್ಟಾರೆಯಾಗಿ ಚರಿತ್ರೆ ಪಠ್ಯದಲ್ಲಿ ಸ್ಥಳೀಯ ಚರಿತ್ರೆ ಕುರಿತಾಗಿ ಮುಖ್ಯವಾಗಿ ಸ್ಥಳೀಯ ಸಾಹಿತಿಗಳು, ಸಂಶೋಧಕರು, ಹೆಸರಾಂತ ವ್ಯಕ್ತಿಗಳ ಪರಿಚಯ ಲೇಖನಗಳು ಇರಿಸಿರುವುದು ಹೆಚ್ಚು ಸೂಕ್ತವಾಗಿದೆ. ಆದರೆ ಬಹುತೇಕ ಆಯಾ ಜಿಲ್ಲೆಯಲ್ಲಿ ಹೆಸರಿಸಲೇಬೇಕಾದ ವ್ಯಕ್ತಿಗಳನ್ನು ನಿರ್ಲಕ್ಷಿಸಿರುವುದೂ ಪಠ್ಯದ ಮೂಲಕ ದೊರೆಯುತ್ತದೆ.[೨೦] ಈ ರೀತಿಯ ಅಂಶಗಳು ಇತರ ಕೋಮಿನ ಮಕ್ಕಳು ಹಾಗೂ ಶಿಕ್ಷಕರ ಮನಸ್ಸಿನಲ್ಲಿ ಋಣಾತ್ಮಕ ಆಲೋಚನೆ ಮೂಡಿಸಿ ಕೋಮು ಸೌಹಾರ್ದತೆಯನ್ನು ಕೆಡಿಸುವ ಕಾರ್ಯಕ್ಕೆ ದಾರಿ ಮಾಡಿಕೊಡುವ ಸಾಧ್ಯತೆಗಳೂ ಹೆಚ್ಚಾಗಿವೆ. ಅದೇ ರೀತಿ ಸ್ಥಳೀಯವಾದ ಪ್ರತಿ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಮಾಹಿತಿಯನ್ನೂ ನೀಡಲಾಗಿದೆ. ಈ ನಿಟ್ಟಿನಲ್ಲಿ ಪಠ್ಯವು ಹೆಚ್ಚು ಉಪಯುಕ್ತವಾಗಿದೆಯೆಂದೇ ಹೇಳಬಹುದು. ಸ್ಥಳೀಯ ಚರಿತ್ರೆಯಿಂದ ತಮ್ಮ ಪ್ರದೇಶದ ಮಾಹಿತಿಯು ಮಕ್ಕಳಿಗೆ ದೊರೆಯುವುದು ಸುಲಭವಾಗುತ್ತದೆ.

೩ನೇ ತರಗತಿಗಾಗಿ ಚರಿತ್ರೆ ಪಠ್ಯವನ್ನು ಸಮಾಜ ಪಾಠಗಳು ಭಾಗ ೧-೨ ಎಂದು ಪ್ರಕಟಿಸಲಾಗಿದೆ. ಈ ಪಠ್ಯವನ್ನೂ ಸಹ ಕರ್ನಾಟಕ ಸರ್ಕಾರವೇ ಪ್ರಕಟಿಸಿದೆ. ಈ ಪಠ್ಯಪುಸ್ತಕವು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಬದಲಾವಣೆಗೊಂಡು ಮುದ್ರಿತವಾಗಿದೆ. ಈ ಪಠ್ಯ

ರಚನಾ ಸಮಿತಿಯಲ್ಲಿ ೨೫ ಜನ ಸದಸ್ಯರಿದ್ದಾರೆ. ಸಮಿತಿಯ ಅಧ್ಯಕ್ಷರು ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದಾರೆ. ಹೆಚ್.ವಿ. ಶ್ರೀನಿವಾಸಮೂರ್ತಿ, ಮಾಲಿಮುದ್ದಣ್ಣ, ಎ. ಶ್ರೀನಿವಾಸ್, ಹೆಚ್.ಟಿ. ರಾಮಕೃಷ್ಣ, ಎಮ್.ಕೆ. ಸಣ್ಣಸ್ವಾಮಿ, ಆರ್. ಪ್ರಮೀಳ, ಮೀನಾಕ್ಷಿ, ಎ.ಆರ್. ಹನುಮಂತಾಚಾರ್, ಕೆ.ಟಿ. ರಂಗಸ್ವಾಮಿ, ಎಮ್.ಜಿ. ಕೃಷ್ಣ, ವಿ.ಸಿ. ದರೂರ್, ಕಮಲಾಜಮ್ಮಣ್ಣಿ, ಈಶ್ವರಪ್ಪ, ವೈ.ಸಿ. ಉಮಾ, ಪ್ರಮೀಳ ಪೈ, ಕಮಲಾಜನಿ, ಕೆ.ಟಿ. ಶ್ರೀದೇವಿ, ಅಪ್ಪಣ್ಣರೆಡ್ಡಿ, ಎಸ್. ಚನ್ನಪ್ಪ, ಆರ್.ಎನ್. ನಾಗರಾಜರಾವ್, ಪರಿಮಳ ತಿಯೋಫಿಲಾಸ್, ಶಾಂತಿ ಫ್ರಾನ್ಸಿಸ್, ಕುಮಾರ್, ಎಮ್ ಆರ್ ವಿಜಯಲಕ್ಷ್ಮಿ, ಕೃಷ್ಣಮೂರ್ತಿ ದೇಸಾಯಿ ಇವರು ಪಠ್ಯಪುಸ್ತಕ ಸಮಿತಿ ಸದಸ್ಯರಾಗಿದ್ದರು.

ಈ ಪಠ್ಯವು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಪರಿಷ್ಕರಣೆಗೆ ಒಳಪಡಿಸಿ ಪಠ್ಯವು ಬದಲಾವಣೆಗೊಂಡಿದೆ ಎಂದು ತಿಳಿಸಲಾಗಿದೆಯಾದರೂ ಹಿಂದಿನ ಪಠ್ಯಕ್ರಮ ಹಾಗೂ ಪಾಠಗಳನ್ನೇ ಬದಲಿಸದೆ ಇರಿಸಿರುವುದು ಕಂಡುಬರುತ್ತದೆ. ಹಿಂದಿನ ಪಠ್ಯದ ಮುಖಪುಟದಲ್ಲಿ ಬೇಲೂರಿನ ಶಿಲಾಬಾಲಕಿ ಹಾಗೂ ಜೋಗ ಜಲಪಾತದ ಚಿತ್ರಗಳ ಬದಲಿಗೆ ಕರ್ನಾಟಕದ ನಕ್ಷೆಯ ಚಿತ್ರ ಹಾಕಿರುವುದಷ್ಟೇ ಬದಲಾವಣೆಯಾಗಿದೆ.

೫. ೧೯೯೫ರಲ್ಲಿ ಸಮಾಜ ವಿಜ್ಞಾನ ಎನ್ನುವ ಶೀರ್ಷಿಕೆ ಬದಲಿಗೆ ಪರಿಸರ ಅಧ್ಯಯನ ಎಂಬ ಶೀರ್ಷಿಕೆಯಲ್ಲಿ ಪಠ್ಯಗಳು ಮುದ್ರಣಗೊಂಡಿವೆ. ಕಾರಣವೇನೆಂದರೆ ಪರಿಸರದ ಎಲ್ಲಾ ಅಂಶಗಳ ಜ್ಞಾನವನ್ನು ಮಗುವಿಗೆ ಒದಗಿಸುವುದು ಇದರ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ೨೦೦೩ರಲ್ಲಿ ಸುಪ್ರಿಂಕೋರ್ಟಿನ ತೀರ್ಪಿನ ಅನ್ವಯ ಪರಿಸರ ಜಾಗೃತಿ ಉಂಟುಮಾಡುವುದೇ ಪಠ್ಯಪುಸ್ತಕದ ಉದ್ದೇಶವಾಗಿದೆ. ಪರಿಸರ ಅಧ್ಯಯನದ ಹೆಸರಿನಲ್ಲಿ ೩ನೇ ತರಗತಿಗಾಗಿ ಮುದ್ರಣಗೊಂಡ ಪಠ್ಯಪುಸ್ತಕದಲ್ಲಿ ಚರಿತ್ರೆಯ ಪಠ್ಯಗಳು ಬಹುತೇಕ ಕಣ್ಮರೆಯಾಗಿವೆಯೆನಿಸುತ್ತದೆ.

೨೦೦೫ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಅನ್ವಯ ಪಠ್ಯಪುಸ್ತಕಗಳು ಮರಳಿ ಬದಲಾವಣೆಗೊಳಗಾಗಿವೆ. ಆದರೆ ಕರ್ನಾಟಕದಲ್ಲಿ ೩ನೇ ತರಗತಿಗೆ ನಲಿ-ಕಲಿ ಬೋಧನಾ ಪದ್ಧತಿಯನ್ನು ಅಳವಡಿಸಿಕೊಂಡಿರುವುದರಿಂದ ಸಾಮರ್ಥ್ಯ ಹಾಗೂ ಚಟುವಟಿಕೆ ಆಧಾರಿತ ಪಠ್ಯಪುಸ್ತಕಗಳು ರಚನೆಗೊಂಡಿವೆ.

ಸ್ವಾತಂತ್ರ್ಯಪೂರ್ವದಿಂದಲೂ ೧೯೯೫ರವರೆಗೆ ೩ನೇ ತರಗತಿಗೆ ವಿವಿಧ ಶೀರ್ಷಿಕೆಯಡಿಯಲ್ಲಿ ಚರಿತ್ರೆ ಪಠ್ಯದ ವಿಷಯಗಳನ್ನು ಮಕ್ಕಳು ಅಭ್ಯಾಸ ಮಾಡಿಕೊಂಡು ಬಂದಿದ್ದಾರೆ. ೧೯೯೫ರ ತರುವಾಯ ಪರಿಸರ ಅಧ್ಯಯನ ಪಠ್ಯಪುಸ್ತಕದಲ್ಲಿ ಚರಿತ್ರೆಗೆ ಸಂಬಂಧಿಸಿದ ವಿಷಯಗಳನ್ನು ನಿರ್ಲಕ್ಷಿಸಿರುವುದು ಶೋಚನೀಯ ಸಂಗತಿಯಾಗಿದೆ.

### ೫.೪.೨. ನಾಲ್ಕನೇ ತರಗತಿಯ ಚರಿತ್ರೆ ಪಠ್ಯಗಳ ರಚನಾ ಸ್ವರೂಪ

ಈ ಹಿಂದೆ ೩ನೇ ತರಗತಿಯ ಪಠ್ಯಗಳ ಕುರಿತಾಗಿ ವಿಶ್ಲೇಷಿಸುವಾಗ ತಿಳಿಸಿದಂತೆ ೧೯೬೨-೬೩ರ ವೇಳೆಗೆ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯ ಪಠ್ಯಕ್ರಮ ಪದ್ಧತಿ ಜಾರಿಯಲ್ಲಿತ್ತು. ಇದು ನಾಲ್ಕನೇ ತರಗತಿಯ ಪಠ್ಯಕ್ಕೂ ಅನ್ವಯಿಸುತ್ತದೆ.

೧. ೪ನೇ ತರಗತಿಗಾಗಿ ೧೯೬೪ರಲ್ಲಿ ಮೈಸೂರು ವಿದ್ಯಾ ಇಲಾಖೆಯು 'ಸಮಾಜ ಪರಿಚಯ'[೨೯] ಹೆಸರಿನ ಚರಿತ್ರೆ ಪಠ್ಯವನ್ನು ಇರಿಸಿದೆ.

ಈ ಪಠ್ಯಪುಸ್ತಕ ಸಮಿತಿಗೆ ಟಿ. ವಾಸುದೇವನ್‌ರವರು ಅಧ್ಯಕ್ಷರಾಗಿದ್ದರು. ಇನ್ನುಳಿದಂತೆ ಎಸ್.ಪಿ. ಪಾಟೀಲ, ಎಂ. ವಾಸುದೇವರಾವ್, ಕೆ.ಎನ್. ಅನ್ವೇಕರ್, ಡಾ. ಡಿ.ಎನ್. ಸೀತಾರಾಮಯ್ಯ, ವಿ.ಎಸ್. ಸಾಲೀಮಠ, ಸಿ. ಎನ್. ಪಾಟೀಲರು ಸದಸ್ಯರಾಗಿದ್ದರು.

ಈ ಪಠ್ಯಪುಸ್ತಕವು ಇಡೀ ಮೈಸೂರು ರಾಜ್ಯಕ್ಕೆ ಅನ್ವಯಿಸುವಂತೆ ೪ನೇ ತರಗತಿಯ ಎಲ್ಲಾ ಶಾಲೆಗಳಿಗೆ ಅನ್ವಯವಾಗಿತ್ತು. ಈ ಪಠ್ಯಪುಸ್ತಕದಲ್ಲಿ ಚರಿತ್ರೆಗೆ ಸಂಬಂಧಿಸಿದಂತೆ ಮುಖ್ಯ ೫ ಅಧ್ಯಾಯಗಳಿದ್ದು ಅವುಗಳಲ್ಲಿ ಉಪ ಅಧ್ಯಾಯಗಳನ್ನು ಅಳವಡಿಸಲಾಗಿದೆ.

೧ ಜೀವನ ಚರಿತ್ರೆ ಎನ್ನುವ ಅಧ್ಯಾಯದಲ್ಲಿ ಮಹಾವೀರ, ಗೌತಮ ಬುದ್ಧ, ಏಸುಕ್ರಿಸ್ತ, ಮಹಮ್ಮದ್ ಪೈಗಂಬರ್, ರಾಮಾನುಜಾಚಾರ್ಯ, ಶಂಕರಾಚಾರ್ಯ, ಮಧ್ವಾಚಾರ್ಯ, ಬಸವೇಶ್ವರ, ಗುರುನಾನಕ್, ರಾಮಕೃಷ್ಣ ಪರಮಹಂಸರ ಜೀವನ ಹಾಗೂ ಉಪದೇಶಗಳ ಕುರಿತು ಪಾಠಗಳಿವೆ.

೨ ಪ್ರಸಿದ್ಧ ರಾಜರು ಎನ್ನುವ ಅಧ್ಯಾಯದಲ್ಲಿ ಅಶೋಕ, ಹರ್ಷ, ೨ನೇ ಪುಲಕೇಶಿ, ರಾಜೇಂದ್ರ ಚೋಳ, ವಿಷ್ಣುವರ್ಧನ, ಕೃಷ್ಣದೇವರಾಯ, ಅಕ್ಬರ್, ರಾಣಾ ಪ್ರತಾಪಸಿಂಹ, ಶಿವಾಜಿ, ಟಿಪ್ಪುಸುಲ್ತಾನ್, ನಾಲ್ವಡಿ ಕೃಷ್ಣರಾಜ ಒಡೆಯರರವರ ಆಡಳಿತ ಹಾಗೂ ಸಾಧನೆಗಳ ಕುರಿತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

೩ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವ್ಯಕ್ತಿಗಳು ಎಂಬ ಅಧ್ಯಾಯದಲ್ಲಿ ಕಿತ್ತೂರು ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮಿಬಾಯಿ, ತಾತ್ಯಟೋಪಿ, ದಾದಬಾಯಿ ನವರೋಜಿ, ಬಾಲಗಂಗಾಧರ ತಿಲಕ್, ಮಹಾತ್ಮಾಗಾಂಧಿ, ಸರೋಜಿನಿ ನಾಯ್ಡು, ವಲ್ಲಭಭಾಯಿ ಪಟೇಲ್, ಸುಭಾಷಚಂದ್ರ ಭೋಸ್, ಮೌಲಾನ ಅಬ್ದುಲ್ ಕಲಮ್ ಅಜಾದ್, ಜವಹರಲಾಲ್ ನೆಹರೂರವರ ಜೀವನ ಹಾಗೂ ಅವರ ಸ್ವಾತಂತ್ರ್ಯ ಹೋರಾಟದ ಬಗೆಯನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

೪ ನಮ್ಮ ನಾಡಿನ ಇತರ ಹೆಸರಾಂತ ವ್ಯಕ್ತಿಗಳು ಎಂಬ ಅಧ್ಯಾಯದಲ್ಲಿ ಅಕ್ಕಮಹಾದೇವಿ, ಪುರಂದರದಾಸ, ವಿಶ್ವೇಶ್ವರಯ್ಯರ ಬಗ್ಗೆ ತಿಳಿಸಲಾಗಿದೆ

೫ ಸಹಕಾರಿ ಚಳುವಳಿಯ ಧುರೀಣರು ಎಂಬ ಅಧ್ಯಾಯದಲ್ಲಿ ವಿ.ಎಚ್. ನಾಯಕ, ಕೆ.ಎಚ್. ರಾಮಯ್ಯರ ಕುರಿತ ವಿವರಗಳನ್ನು ತಿಳಿಸಲಾಗಿದೆ.

ಮೇಲ್ನೋಟಕ್ಕೆ ಈ ಪಠ್ಯವು ಭಾರತದ ಸಮಗ್ರ ಚಾರಿತ್ರಿಕ ಹಿನ್ನೆಲೆಯನ್ನು ಮಕ್ಕಳಿಗೆ ತಿಳಿಸಿಕೊಡುತ್ತದೆಂದೆನ್ನಿಸಿದರೂ ಇದು ೪ನೇ ತರಗತಿಯ ಮಕ್ಕಳ ಸಾಮರ್ಥ್ಯಕ್ಕೆ ಹೊರೆಯೆನ್ನಿಸುವಷ್ಟು ಪಠ್ಯದಲ್ಲಿ ಅಳವಡಿಸಿದೆ ಎನ್ನಿಸುತ್ತದೆ. ಈ ಪಠ್ಯವು ರಾಷ್ಟ್ರೀಯ ಐಕ್ಯತೆಯ ದೃಷ್ಟಿಕೋನದಲ್ಲಿ ರಚಿಸಲಾಗಿದೆ. ಮುಖ್ಯವಾಗಿ ಈ ಪಠ್ಯದ ವಿಶೇಷತೆಯೆಂದರೆ ಸಹಕಾರಿ ಚಳುವಳಿಯ ಕುರಿತಾದ

ಮಹತ್ವದ ಬಗ್ಗೆ ಮಕ್ಕಳಿಗೆ ಪಾಠ ರೂಪದಲ್ಲಿ ತಿಳಿಸಲಾಗಿದೆ. ಕೊನೆಯದಾಗಿ ನಮ್ಮ ಪರಂಪರೆ ಎನ್ನುವ ಪಾಠದಲ್ಲಿ ಅಶೋಕ ಚಕ್ರವರ್ತಿಯ ಕುರಿತ ವಿಷಯವಿದೆ.

೬ನೇ ತರಗತಿಯ ಈ ಚರಿತ್ರೆ ಪಠ್ಯವನ್ನು ಗಮನಿಸಿದಾಗ ಕಂಡುಬಂದ ಅಂಶಗಳು ಈ ರೀತಿಯಾಗಿವೆ

ಪ್ರಾಥಮಿಕ ಹಂತದ ತರಗತಿಯ ಮಕ್ಕಳಿಗೆ ರಾಷ್ಟ್ರೀಯ ಕಲ್ಪನೆಯನ್ನು ಮೂಡಿಸುವ ಉದ್ದೇಶ ಇಲ್ಲಿದೆ. ಇದು ಔಚಿತ್ಯಪೂರ್ಣವಾಗಿದೆ. ಅಲ್ಲದೆ ಕರ್ನಾಟಕ ಪ್ರಾದೇಶಿಕ ಚರಿತ್ರೆಯ ಅಧ್ಯಾಯಗಳಾಗಲಿ ಹಾಗೂ ಭಾರತದ ರಾಜ ಮನೆತನಗಳ ಚರಿತ್ರೆಯ ಕೆಲವು ಅಧ್ಯಾಯಗಳಾಗಲಿ ಈ ಪಠ್ಯದಲ್ಲಿ ಅಳವಡಿಸಿದ್ದರೆ ಇನ್ನೂ ಹೆಚ್ಚಿನ ಮಟ್ಟದ ಮೌಲ್ಯ ಈ ಪಠ್ಯಕ್ಕೆ ಬರುತ್ತಿತ್ತು. ಮುಖ್ಯವಾಗಿ ಇಲ್ಲಿ ಇರಿಸಿದ ಯಾವ ಪಾಠಗಳು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ದಕ್ಕುವಂತಿವೆ. ಈ ಪಠ್ಯಪುಸ್ತಕವು ರಾಷ್ಟ್ರೀಯವಾದೀ ಹಿನ್ನೆಲೆಯಲ್ಲಿ ರಚಿಸಲಾಗಿದೆ ಎಂದೆನ್ನಬಹುದು.

೩. ಮೇಲೆ ತಿಳಿಸಿದ ಪಠ್ಯದ ತರುವಾಯ ೧೯೮೬-೮೭ರಲ್ಲಿ ಸಮಾಜ ಪಾಠಗಳು ಹೆಸರಿನ ಚರಿತ್ರೆ ಪಠ್ಯವು ಪರಿಷ್ಕೃತಗೊಂಡು ಮುದ್ರಣಗೊಂಡಿದೆ. ಮೇಲೆ ತಿಳಿಸಿದ ಪಠ್ಯಪುಸ್ತಕ ರಚನಾ ಸಮಿತಿಯೇ ಈ ಪಠ್ಯಪುಸ್ತಕದ ರಚನಾ ಸಮಿತಿಯಾಗಿದೆ. ಆದರೆ ಪಠ್ಯ ಪರಿಷ್ಕೃತ ಸಮಿತಿ ಬದಲಾಗಿದೆ. ಇದರಲ್ಲಿ ಸಮಿತಿಯಲ್ಲಿ ಹೆಚ್.ವಿ. ಶ್ರೀನಿವಾಸಮೂರ್ತಿ, ಮಾಲಿಮುದ್ದಣ್ಣ, ಎ. ಶ್ರೀನಿವಾಸ್, ಹೆಚ್.ಟಿ. ರಾಮಕೃಷ್ಣ, ಎಮ್.ಕೆ. ಸಣ್ಣಸ್ವಾಮಿ, ಆರ್. ಪ್ರಮೀಳ, ಮೀನಾಕ್ಷಿ, ಎ.ಆರ್. ಹನುಮಂತಾಚಾರ್, ಕೆ.ಟಿ. ರಂಗಸ್ವಾಮಿ, ಎಮ್.ಜಿ. ಕೃಷ್ಣ, ವಿ.ಸಿ. ದರೂರ್, ಕಮಲಾಜಮ್ಮಣ್ಣಿ, ಈಶ್ವರಪ್ಪ, ವೈ.ಸಿ. ಉಮಾ, ಪ್ರಮೀಳ ಪೈ, ಕಮಲಾಜನಿ, ಕೆ.ಟಿ. ಶ್ರೀದೇವಿ, ಅಪ್ಪಣ್ಣರೆಡ್ಡಿ, ಎಸ್ ಚನ್ನಪ್ಪ, ಆರ್ ಎನ್ ನಾಗರಾಜರಾವ್, ಪರಿಮಳ ತಿಯೋಫಿಲಾಸ್, ಶಾಂತಿ ಪ್ರಾನ್ಸಿಸ್, ಕುಮಾರ್, ಎಮ್ ಆರ್ ವಿಜಯಲಕ್ಷ್ಮಿ, ಕೃಷ್ಣಮೂರ್ತಿ ದೇಸಾಯಿ ಇವರು ಪಠ್ಯಪುಸ್ತಕ ಸಮಿತಿ ಸದಸ್ಯರಾಗಿದ್ದರು.

ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಮೊದಲ ಪಠ್ಯದಲ್ಲಾದ ಚಿಕ್ಕ ಪುಟ್ಟ ತಪ್ಪುಗಳನ್ನು ಈ ಪಠ್ಯದಲ್ಲಿ ಸರಿಪಡಿಸಲಾಗಿದೆ. ಹಿಂದಿನ ಪಠ್ಯದಲ್ಲಿದ್ದ ಪಾಠಗಳೇ ಇಲ್ಲಿವೆಯಾದರೂ ಅವುಗಳು ಹಿಂದೆ ಮುಂದಾಗಿ ಮುದ್ರಿತಗೊಂಡಿವೆ. ಈ ಪಠ್ಯದಲ್ಲಿ ಹಿಂದಿನ ಪಠ್ಯಪುಸ್ತಕದ ನಮ್ಮ ಸ್ವಾತಂತ್ರ್ಯ ಸಮರದ ಕತೆ, ನಮ್ಮ ಪರಂಪರೆ, ನಮ್ಮ ರಾಷ್ಟ್ರೀಯ ಹಬ್ಬಗಳು, ನಮ್ಮ ರಾಷ್ಟ್ರ ಚಿಹ್ನೆಗಳು ಎನ್ನುವ ಪಾಠಗಳಿವೆಯಾದರೂ ಕಾಲಾನುಕ್ರಮವಾಗಿ ಅವು ನಿರೂಪಿತಗೊಂಡಿಲ್ಲ. ಹಿಂದಿನ ಪಠ್ಯದಲ್ಲಿ ೧೮೫೭ರ ಚಳುವಳಿಯನ್ನು ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದು ಕರೆಯಲಾಗಿದೆ. ಆದರೆ ಇಲ್ಲಿ ಸಿಪಾಯಿ ದಂಗೆ ಎಂದು ಕರೆಯಲಾಗಿದೆ. ಪರಿಷ್ಕೃತ ಪಠ್ಯದಲ್ಲಿ ಬ್ರಿಟಿಷರ ರೀತಿಯಲ್ಲಿಯೇ ೧೮೫೭ರ ಚಳುವಳಿಯನ್ನು ಸಿಪಾಯಿ ದಂಗೆ ಎಂದು ಕರೆದುದರ ಹಿಂದಿನ ಉದ್ದೇಶವೇನೆಂದು ಗಮನಿಸಿದಾಗ ಸ್ಪಷ್ಟವಾಗಿ ಬ್ರಿಟಿಷರ ವಸಾಹತುಶಾಹಿ ಮನೋಭಾವನೆಯಿಂದ ಪರಿಷ್ಕೃತ ಸಮಿತಿಯವರು ಇನ್ನೂ ದೂರವಾಗಿರಲಿಲ್ಲವೇನೋ ಎನ್ನುವ ಅನುಮಾನ ಕಾಡತೊಡಗುತ್ತದೆ. ಹಿಂದಿನ ಪಠ್ಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರನ್ನು ಸ್ವಾತಂತ್ರ್ಯ ಸಮರದ

ಅಧ್ಯಾಯದಲ್ಲಿಯೇ ತಿಳಿಸಲಾಗಿತ್ತು ಆದರೆ ಈ ಪರಿಷ್ಕೃತ ಪಠ್ಯದಲ್ಲಿ ನಮ್ಮ ಪರಂಪರೆ ಎನ್ನುವ ಅಧ್ಯಾಯದಲ್ಲಿ ಸೇರ್ಪಡೆ ಮಾಡಿಕೊಳ್ಳಲಾಗಿದೆ.[೨೨] ನಮ್ಮ ಪರಂಪರೆ ಎನ್ನುವ ಅಧ್ಯಾಯದಲ್ಲಿ ಅಶೋಕ, ಅಕ್ಬರ್, ಶಿವಾಜಿ, ರಾಜರಾಮ ಮೋಹನರಾಯ್, ಜೆ.ಎನ್. ಟಾಟಾ, ರವೀಂದ್ರನಾಥ ಠಾಕೂರ್ ಹಾಗೂ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ತಿಳಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ನಮ್ಮ ಪರಂಪರೆಯೆಂಬ ಅಧ್ಯಾಯದಲ್ಲಿ ಇವರ ಕುರಿತು ತಿಳಿಸುವುದಕ್ಕಿಂತ ನಮ್ಮ ಮಹತ್ವದ ನಾಯಕರು ಎನ್ನುವ ಶಿರೋನಾಮೆಯಲ್ಲಿ ಈ ಮಹತ್ವದ ನೇತಾರರ ಕುರಿತು ತಿಳಿಸಿದ್ದರೆ ಒಳಿತಿತ್ತು.

ಈ ಪಠ್ಯದಲ್ಲಿ ಶಿವಾಜಿಯ ಜನನ ಹಾಗೂ ಕಾಲ ವಿಚಾರವನ್ನು ತಿಳಿಸುವಾಗ ಗೊಂದಲಗೊಂಡಂತೆ ಕಂಡುಬರುತ್ತದೆ.

೪. ೧೯೯೪ರಲ್ಲಿ ನಾಲ್ಕನೇ ತರಗತಿಗಾಗಿ ಸಮಾಜ ವಿಜ್ಞಾನ ಎನ್ನುವ ಪಠ್ಯವನ್ನು ಕರ್ನಾಟಕ ಸರ್ಕಾರ ಸಪ್ನ ಬುಕ್ ಹೌಸ್‌ನವರ ಮೂಲಕ ಪ್ರಕಟಿಸಿದ್ದಾರೆ

ಈ ಪಠ್ಯಪುಸ್ತಕದ ರಚನಾ ಸಮಿತಿ ಅಧ್ಯಕ್ಷರಾಗಿ ಡಾ. ಆರ್. ರಾಮಕೃಷ್ಣನ್ ಅವರನ್ನು ನೇಮಿಸಲಾಗಿತ್ತು.

ಹೆಚ್. ತುಕರಾಂರಾವ್, ಗೋಪಾಲಕೃಷ್ಣರಾವ್, ಕೆ. ಸತ್ಯನಾರಾಯಣ, ಎಚ್. ಗೋಪಾಲ, ಕೆ.ವಿ. ನಾಗರಾಜ್, ಪಿ. ಭಾಗ್ಯಮ್ಮ ಸದಸ್ಯರಾಗಿದ್ದರು.

ಈ ಪಠ್ಯವನ್ನು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಹಿನ್ನೆಲೆಯ ಪಠ್ಯವಸ್ತುವಿನ ಆಧಾರದ ಮೇಲೆ ರಚಿಸಲಾಗಿದೆ. ಈ ಪಠ್ಯವನ್ನು ರಾಷ್ಟ್ರೀಯ ಶಿಕ್ಷಣ ನೀತಿಗೆ ಅನುಗುಣವಾಗಿ ಕೋರ್ ಎಲಿಮೆಂಟ್ ಮತ್ತು ಮಾನವೀಯ ಮೌಲ್ಯಗಳಿಗೆ ಒತ್ತು ನೀಡಲಾಗಿದೆ ಎಂದು ಪಠ್ಯಪುಸ್ತಕ ಇಲಾಖೆಯ ನಿರ್ದೇಶಕರಾದ ಯ.ರಾ. ಅಚ್ಯುತರಾವ್ ಪಠ್ಯಪುಸ್ತಕದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಈ ಪಠ್ಯದಲ್ಲಿ ಒಟ್ಟು ೧೬ ಅಧ್ಯಾಯಗಳಿದ್ದು ಅವುಗಳಲ್ಲಿ ಅಧ್ಯಾಯ ೭, ೯, ೧೧ರಿಂದ ೧೬ರವರೆಗಿನ ಪಾಠಗಳು ಚರಿತ್ರೆಗೆ ಸಂಬಂಧಿಸಿದ ಪಾಠಗಳಾಗಿವೆ. ಅವುಗಳು ಕ್ರಮವಾಗಿ ಭಾರತದ ಮತ ಸುಧಾರಕರು ಮತ್ತು ಸಂತರು, ಸಮಾಜ ಸುಧಾರಕರು, ಭಾರತದ ಪ್ರೇಕ್ಷಣೀಯ ಸ್ಥಳಗಳು, ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪನೆ, ೧೮೫೭ರ ಬಂಡಾಯ ಮತ್ತು ರಾಷ್ಟ್ರೀಯತೆಯ ಉದಯ, ಸ್ವಾತಂತ್ರ್ಯ ಹೋರಾಟ, ಅನೇಕತೆಯಲ್ಲಿ ಏಕತೆ, ನಮ್ಮ ರಾಷ್ಟ್ರಧ್ವಜ ಮತ್ತು ಉತ್ಸವಗಳು ಎನ್ನುವ ಪಾಠಗಳಿವೆ.

ಮಕ್ಕಳ ಬೌದ್ಧಿಕ ಮಟ್ಟಕ್ಕೆ ಈ ಪಠ್ಯಗಳು ಅಷ್ಟಾಗಿ ಹೊರೆಯಾಗುವುದಿಲ್ಲವೆನಿಸುತ್ತದೆ. ಪಾಠಗಳು ತುಂಬಾ ಸರಳವಾಗಿವೆ ಮತ್ತು ಸಂಕ್ಷಿಪ್ತವಾಗಿವೆ. ಆದರೆ ಸಮಗ್ರವಾದ ಚಾರಿತ್ರಿಕ ಅರಿವನ್ನು ಈ ಪಠ್ಯವು ಮಕ್ಕಳಿಗೆ ಮೂಡಿಸಬಲ್ಲುದಾಗಿತ್ತು. ಇವುಗಳಲ್ಲಿ ಪ್ರಮುಖವಾಗಿ ಭಾರತದ ಮತ ಸುಧಾರಕರು, ಸಂತರು, ಕವಿಗಳು, ಸಮಾಜ ಸುಧಾರಕರು, ವಿಜ್ಞಾನಿಗಳು, ಭಾರತದ ಪ್ರೇಕ್ಷಣೀಯ ಸ್ಥಳಗಳು, ರಾಷ್ಟ್ರಧ್ವಜ, ರಾಷ್ಟ್ರ ಲಾಂಛನ, ಉತ್ಸವಗಳು ಇವುಗಳನ್ನೆಲ್ಲಾ ಗಮನಿಸಿದಾಗ ಮಕ್ಕಳಿಗೆ ರಾಷ್ಟ್ರೀಯ

ಮನೋಭಾವದ ಕಲ್ಪನೆ ಹಾಗೂ ದೇಶಾಭಿಮಾನ ಮೂಡಿಸುವ ಉದ್ದೇಶವನ್ನು ಪಠ್ಯವು ಹೊಂದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಪಠ್ಯದಲ್ಲಿ ೧೮೫೭ರ ಬಂಡಾಯವನ್ನು ಮೊದಲ ಸ್ವಾತಂತ್ರ್ಯ ಸಮರವೆಂದು ಗುರುತಿಸಲಾಗಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೋರಾಡಿದ ಮಹಾನ್ ನಾಯಕರ ಬಗ್ಗೆ ಹೆಚ್ಚು ಬಿಂಬಿತವಾಗಿಲ್ಲ. ಇದರ ಹಿಂದಿನ ಸ್ಪಷ್ಟ ಉದ್ದೇಶವೇನು ಎಂಬುದು ತಿಳಿದುಬರುವುದಿಲ್ಲ.

ಈ ಪಠ್ಯಪುಸ್ತಕವು ಕೇವಲ ರಾಷ್ಟ್ರೀಯ ಮನೋಭಾವನೆಗೆ ಒತ್ತು ನೀಡಿದಂತೆ ಕಂಡುಬರುತ್ತದೆ. ಭಾರತದ ಯಾವ ರಾಜಮನೆತನಗಳ ಬಗ್ಗೆಯೂ ಇಲ್ಲಿ ಪಾಠವಿರಿಸಿಲ್ಲ. ಒಟ್ಟಾರೆಯಾಗಿ ಹೇಳುವುದಾದರೆ ಇದು ಮಕ್ಕಳ ಮನೋಭೂಮಿಕೆಯ ಮೇಲೆ ರಾಷ್ಟ್ರದ ಕುರಿತು ಗೌರವವನ್ನು ಮೂಡಿಸುವ ಉದ್ದೇಶವನ್ನು ಹೊಂದಿತ್ತು. ಉತ್ತಮ ಗುಣಮಟ್ಟದ ಮುದ್ರಣ ಈ ಪಠ್ಯದ ಹೆಗ್ಗಳಿಕೆಯೆಂದು ಹೇಳಬಹುದು. ಈ ಪಠ್ಯದಲ್ಲಿ ಕರ್ನಾಟಕದ ಪ್ರಮುಖ ಲೇಖಕರನ್ನು ಪರಿಚಯಿಸಲಾಗಿದೆ. ಮುಖ್ಯವಾಗಿ ಕೆ.ವಿ. ಪುಟ್ಟಪ್ಪ, ದ.ರಾ. ಬೇಂದ್ರೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶಿವರಾಮ ಕಾರಂತ, ವಿ.ಕೃ. ಗೋಕಾಕ್, ಚಂದ್ರಶೇಖರ ಕಂಬಾರ, ಗಿರೀಶ್ ಕಾರ್ನಾಡ, ಯು.ಆರ್. ಅನಂತಮೂರ್ತಿ ಮುಂತಾದವರ ವ್ಯಕ್ತಿಚಿತ್ರಣ ನೀಡಿ ಪ್ರಾದೇಶಿಕ ವ್ಯಕ್ತಿಗಳನ್ನೂ ಮಕ್ಕಳಿಗೆ ಪರಿಚಯಿಸಲಾಗಿದೆ.

೫. ೪ನೇ ತರಗತಿಯ ಪರಿಸರ ಅಧ್ಯಯನ ಪಠ್ಯವನ್ನು ೨೦೦೯ರಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಮುದ್ರಿಸಿದೆ. (ಪರಿಸರ ಅಧ್ಯಯನ, ೪ನೇ ತರಗತಿ ಪಠ್ಯಪುಸ್ತಕ, ಕರ್ನಾಟಕ ಸರ್ಕಾರ, ಬೆಂಗಳೂರು) ಈ ಪಠ್ಯಪುಸ್ತಕವು ಹಿಂದೆ ಕರ್ನಾಟಕದಲ್ಲಿ ೨೦೦೨ರಲ್ಲಿ ಮುದ್ರಿತಗೊಂಡು ತರುವಾಯ ಬದಲಾದ ತ್ರೈಮಾಸಿಕ, ದ್ವೈಮಾಸಿಕ (ಸೆಮಿಸ್ಟರ್) ಪದ್ಧತಿಗೆ ಅನುಗುಣವಾಗಿ ೨೦೦೯ರವರೆಗೆ ಬದಲಾವಣೆಗೆ ಒಳಗಾಗುತ್ತಲೇ ಸಾಗಿತು. ಆದರೆ ಪಠ್ಯ ವಿಷಯ ಕ್ರಮದಲ್ಲಿ ಬದಲಾವಣೆ ಮಾಡದೆ ತ್ರೈಮಾಸಿಕ ಸೆಮಿಸ್ಟರ್ ಪದ್ಧತಿಗೆ ಅನುಗುಣವಾಗಿ ಪಠ್ಯಕ್ರಮ ವಿಭಜಿಸುವುದನ್ನು ಮಾತ್ರ ಮಾಡಲಾಯಿತು. ಒಟ್ಟು ೨೫ ಅಧ್ಯಾಯಗಳನ್ನು ಒಳಗೊಂಡ ಈ ಪಠ್ಯದಲ್ಲಿ ಅಧ್ಯಾಯ ೧೬-೨೧ರವರೆಗೆ ಚರಿತ್ರೆಗೆ ಸಂಬಂಧಿಸಿದ ಪಠ್ಯಗಳಿವೆ. ಅವುಗಳು ಕ್ರಮವಾಗಿ ನಮ್ಮ ರಾಜ್ಯ ಕರ್ನಾಟಕ, ಪ್ರೇಕ್ಷಣೀಯ ಸ್ಥಳಗಳು, ಸಮಾಜ ಸುಧಾರಕರು, ಸ್ವಾತಂತ್ರ್ಯ ದರ್ಶನ, ನಮ್ಮ ದೇಶ ಭಾರತ, ರಾಷ್ಟ್ರೀಯ ಹಬ್ಬಗಳು ಚರಿತ್ರೆ ಪಾಠಗಳಾಗಿವೆ. ಈ ಪಠ್ಯದಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯ ಹೆಸರುಗಳು ಮುದ್ರಿತಗೊಂಡಿಲ್ಲ. ಇದಕ್ಕೆ ಕಾರಣ ಏನಿರಬಹುದೆಂಬುದು ತಿಳಿದುಬರುವುದಿಲ್ಲ.

ನಮ್ಮ ರಾಜ್ಯ ಕರ್ನಾಟಕದಲ್ಲಿ ರಾಜ್ಯದ ಭೌಗೋಳಿಕತೆಯನ್ನು ವಿವರಿಸಲಾಗಿದೆ. ಪ್ರೇಕ್ಷಣೀಯ ಸ್ಥಳಗಳು ಎಂಬುದರಲ್ಲಿ ರಾಜ್ಯದ ಪುಣ್ಯಕ್ಷೇತ್ರಗಳು, ಪಕ್ಷಿಧಾಮಗಳು, ನಿಸರ್ಗಧಾಮಗಳ ಪರಿಚಯ ಮಾಡಿಕೊಡಲಾಗಿದೆ. ಇದು ಮಕ್ಕಳಿಗೆ ಅವಶ್ಯವಾಗಿ ತಿಳಿಸಿಕೊಡಬೇಕಾದ ವಿಷಯಗಳಿಂದ ಕೂಡಿದೆ. ಇದರಿಂದ ಮಕ್ಕಳಿಗೆ ಕರ್ನಾಟಕದ ಪ್ರಾದೇಶಿಕ ಸ್ಥಳಗಳನ್ನು ಪರಿಚಯಿಸಿದಂತಾಗುತ್ತದೆ. ಸಮಾಜ ಸುಧಾರಕರು ಎಂಬ ಪಾಠದಲ್ಲಿ ಆಚಾರ್ಯತ್ರಯರು, ಬಸವಣ್ಣ, ಅಕ್ಕಮಹಾದೇವಿ, ಪುರಂದರದಾಸ, ಕನಕದಾಸರ ಕುರಿತು ತಿಳಿಸಲಾಗಿದೆ. ಆದರೆ ಈ ಸಮಾಜ ಸುಧಾರಕರ ಜನನವನ್ನು ಶತಮಾನಗಳಿಗೆ

ಅನುಗುಣವಾಗಿ ಮಕ್ಕಳಿಗೆ ತಿಳಿಸಲಾಗಿದೆ. ಈ ಹಂತದಲ್ಲಿ ಮಕ್ಕಳಿಗೆ ಅವರ ನಿರ್ದಿಷ್ಟ ಕಾಲವನ್ನು ತಿಳಿಸುವುದರಿಂದ ಸ್ಪಷ್ಟವಾದ ಕಾಲಪ್ರಜ್ಞೆಯನ್ನು ಮೂಡಿಸಬಹುದು. ಸ್ವಾತಂತ್ರ್ಯ ದರ್ಶನ ಎಂಬ ಪಾಠವು ಪ್ರಶ್ನಾರ್ಥಕ ರೂಪದಲ್ಲಿ ಪ್ರಾರಂಭವಾಗಿ ಅದಕ್ಕೆ ಪ್ರತಿಯಾಗಿ ಉತ್ತರವನ್ನು ನೀಡುವ ರೂಪದಲ್ಲಿ ಪಾಠವನ್ನು ರಚಿಸಲಾಗಿದೆ. ಇದರಲ್ಲಿ ಗಾಂಧಿ, ನೆಹರು, ಲಾಲಾ ಲಜಪತರಾಯ್, ಬಾಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್, ಸರ್ದಾರ್ ವಲ್ಲಭಭಾಯಿ ಪಟೇಲ್, ರಾಣಿ ಅಬ್ಬಕ್ಕ ದೇವಿ, ಹೈದರಾಲಿ, ಕಿತ್ತೂರುರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಮೈಲಾರ ಮಹಾದೇವಪ್ಪ, ಕಮಲಾದೇವಿ ಚಟ್ಟೋಪಾಧ್ಯಾಯ ಇವರುಗಳ ಬಗ್ಗೆ ಪಾಠದಲ್ಲಿ ತಿಳಿಸಲಾಗಿದೆ. ಆದರೆ ಈ ಹಿಂದಿನ ಪಠ್ಯಗಳಲ್ಲಿ ಸಂಗೊಳ್ಳಿ ರಾಯಣ್ಣ, ಮೈಲಾರ ಮಹಾದೇವಪ್ಪ, ರಾಣಿ ಅಬ್ಬಕ್ಕ ದೇವಿ, ಕಮಲಾದೇವಿ ಚಟ್ಟೋಪಾಧ್ಯಾಯ ಇವರುಗಳ ಪ್ರಸ್ತಾಪ ಈ ತರಗತಿಯ ಹಿಂದಿನ ಪಠ್ಯಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಒಟ್ಟಾರೆಯಾಗಿ ನೋಡಿದರೆ ಹಿಂದಿನ ಪಠ್ಯಕ್ಕಿಂತ ಭಿನ್ನವಾದ ಹೊಸತನದ ಪಠ್ಯಪುಸ್ತಕ ಇದಾಗಿದೆಯೆಂದು ಹೇಳಿದರೆ ತಪ್ಪಾಗಲಾರದು.

ರಾಷ್ಟ್ರೀಯ ಹಬ್ಬಗಳು ಎನ್ನುವ ಪಾಠಗಳಲ್ಲಿ ಹಿಂದೆ ಕೇವಲ ಸ್ವಾತಂತ್ರ್ಯ ದಿನಾಚರಣೆ, ಗಾಂಧಿ ಜಯಂತಿ, ಗಣರಾಜ್ಯೋತ್ಸವನ್ನು ಮಾತ್ರ ರಾಷ್ಟ್ರೀಯ ಹಬ್ಬವೆಂದು ಪರಿಗಣಿಸಲಾಗಿತ್ತು. ಆದರೆ ಈ ಪಠ್ಯದಲ್ಲಿ ಶಿಕ್ಷಕರ ದಿನಾಚರಣೆ, ಮಕ್ಕಳ ದಿನಾಚರಣೆಗಳನ್ನೂ ಕೂಡ ರಾಷ್ಟ್ರೀಯ ಹಬ್ಬಗಳ ಸಾಲಿನಲ್ಲಿ ಸೇರ್ಪಡೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಈ ಎರಡೂ ಆಚರಣೆಗಳನ್ನು ಆಚರಿಸುವುದರಿಂದ ಶಿಕ್ಷಕರ ಕುರಿತು ಮಕ್ಕಳಿಗೂ, ಮಕ್ಕಳ ಕುರಿತು ಶಿಕ್ಷಕರಿಗೂ ಗೌರವ ಭಾವನೆ ಮೂಡಿಸುವಲ್ಲಿ ಮಹತ್ವದ ಪಾತ್ರವಿದೆ. ಹಾಗೆಯೇ ರಾಷ್ಟ್ರಕ್ಕಾಗಿ ನೆಹರೂ ಮತ್ತು ರಾಧಾಕೃಷ್ಣನ್ ಅವರು ಸೇವೆ ಸಲ್ಲಿಸಿದ್ದಾರೆ. ಈ ನಿಟ್ಟಿನಲ್ಲಿ ಪಾಠಗಳಲ್ಲಿ ಇವುಗಳ ಸೇರ್ಪಡೆ ಮಹತ್ವದ್ದಾಗಿದೆಯೆಂದೇ ತಿಳಿಯಬಹುದಾಗಿದೆ. ಈ ಪಠ್ಯದಲ್ಲಿ ಭಾರತ ಅಥವಾ ಕರ್ನಾಟಕದ ರಾಜಮನೆತನಗಳ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ಕಲೆ ಹಾಗೂ ವಾಸ್ತುಶಿಲ್ಪದ ಕುರಿತ ಯಾವ ವಿಚಾರಗಳೂ ವ್ಯಕ್ತಗೊಂಡಿಲ್ಲ. ಪ್ರಾಥಮಿಕ ಹಂತದ ೪ನೇ ತರಗತಿಯ ಚರಿತ್ರೆ ಪಾಠಗಳಲ್ಲಿ ಸ್ಥಳೀಯ ರಾಜಮನೆತನಗಳು ಹಾಗೂ ಅವುಗಳು ನಾಡಿಗೆ ನೀಡಿದ ಕೊಡುಗೆಗಳ ಕುರಿತು ಸಂಕ್ಷಿಪ್ತವಾಗಿ ಪಠ್ಯದಲ್ಲಿ ಸೇರಿಸಿದ್ದರೆ ಒಳಿತಿತ್ತೇನೋ ಎನಿಸುತ್ತದೆ. ಪಠ್ಯಪುಸ್ತಕವು ವರ್ಣಮಯ ಚಿತ್ರಗಳಿಂದ ಕೂಡಿದ್ದು ಆಕರ್ಷಕವಾಗಿದೆ. ಅದೇ ರೀತಿ ಅಕ್ಷರ ಹಾಗೂ ವಾಕ್ಯ ರಚನೆಯ ದೋಷಗಳು ಈ ಪಠ್ಯದಲ್ಲಿ ಕಂಡುಬರುವುದಿಲ್ಲ.

## ೫.೫. ಸ್ವಾತಂತ್ರ್ಯೋತ್ತರ ಕರ್ನಾಟಕದ ಮಾಧ್ಯಮಿಕ ಶಾಲೆಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ

ಭಾರತ ಸ್ವಾತಂತ್ರ್ಯ ಪೂರ್ವದ ಶೈಕ್ಷಣಿಕ ಕ್ರಮವೇ ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಮುಂದುವರೆಯಿತು. ಅಂದರೆ ಸ್ವಾತಂತ್ರ್ಯ ಪೂರ್ವದ ಪಠ್ಯಕ್ರಮವೇ ಮುಂದುವರೆಯಿತೆಂದಲ್ಲ. ಅದರಾಚೆಗೆ ಆಡಳಿತಾತ್ಮಕವಾದ ಬದಲಾವಣೆಗಳನ್ನು ಮಾಡಿಕೊಳ್ಳದೆ ಬ್ರಿಟಿಷರ ಆಡಳಿತ ಪದ್ಧತಿಯನ್ನೇ ಸ್ವಾತಂತ್ರ್ಯೋತ್ತರ ಭಾರತದ ಶೈಕ್ಷಣಿಕ ವ್ಯವಸ್ಥೆ ಮುಂದುವರೆಸಿತು. ಅದರಂತೆ ೧ರಿಂದ ೪ನೇ

ತರಗತಿಯವರೆಗೆ ಪ್ರಾಥಮಿಕ ಹಂತವೆಂದು ಪರಿಗಣಿಸಲಾಯಿತು. ೪ನೇ ತರಗತಿಯನ್ನು ದಾಟಿದ ತರುವಾಯ ೫ರಿಂದ ೭ನೇ ತರಗತಿ ಅಥವಾ ೫ರಿಂದ ೮ನೇ ತರಗತಿಯವರೆಗೆ ಮಾಧ್ಯಮಿಕ ಹಂತವೆಂದು ಪರಿಗಣಿಸಲಾಗುತ್ತಿತ್ತು. ಈ ರೀತಿಯಾದ ಪ್ರಾಥಮಿಕ ಶಿಕ್ಷಣವನ್ನು ಎರಡು ಹಂತಗಳಲ್ಲಿ ವಿಂಗಡಿಸಿರುವುದನ್ನು ಕಾಣುತ್ತೇವೆ. ಇಂದು ೧ರಿಂದ ೫ನೇ ತರಗತಿವರೆಗೆ ಪ್ರಾಥಮಿಕ ಹಂತವೆಂದೂ ೬ರಿಂದ ೮ನೇ ತರಗತಿಯವರೆಗೆ ಮಾಧ್ಯಮಿಕ ಹಂತವೆಂದು ಪರಿಗಣಿಸಲಾಗುತ್ತಿದೆ. ಈ ಮೇಲೆ ಪ್ರಾಥಮಿಕ ಹಂತದ ೧ರಿಂದ ೪ನೇ ತರಗತಿಯವರೆಗೆ ೧೯೬೨ರಿಂದ ೨೦೦೯ರವರೆಗೆ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ ಹೇಗಿತ್ತು ಹಾಗೂ ಅವು ಕಾಲಕಾಲಕ್ಕೆ ಹೇಗೆ ಬದಲಾವಣೆಗೊಂಡವು, ಬದಲಾವಣೆಗೊಳ್ಳಲು ಇದ್ದ ಕಾರಣಗಳು ಹಾಗೂ ಧೋರಣೆ ಪ್ರೇರಣೆಗಳು ಏನಿರಬಹುದೆಂದು ಅವಲೋಕಿಸಿದ್ದೇವೆ. ಅದೇ ರೀತಿಯಾಗಿ ಮೇಲೆ ತಿಳಿಸಿದ ಕಾಲಾವಧಿಯಲ್ಲಿ ಮಾಧ್ಯಮಿಕ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ ಕುರಿತು ಇಲ್ಲಿ ಚರ್ಚಿಸಲಾಗಿದೆ. ಪ್ರಸ್ತುತ ೫ರಿಂದ ೮ನೇ ತರಗತಿಯನ್ನು ಮಾಧ್ಯಮಿಕ ತರಗತಿಯಂದು ಪರಿಗಣಿಸಿದರೂ ಈ ಅಧ್ಯಯನದ ಕಾಲಮಿತಿಯು ೧೯೬೨ರಿಂದ ೨೦೦೯ರವರೆಗೆ ಮಾತ್ರವಿರುವುದರಿಂದ ಆ ಕಾಲಾವಧಿಯಲ್ಲಿ ಮಾಧ್ಯಮಿಕ ತರಗತಿಗಳೆಂದರೆ ೫–೭ ಎಂದು ಪರಿಗಣಿಸಲಾಗುತ್ತಿತ್ತು. ಹೀಗಾಗಿ ಇಲ್ಲಿ ೫ರಿಂದ ೭ನೇ ತರಗತಿಯ ಚರಿತ್ರೆ ಪಠ್ಯಗಳನ್ನು ಮಾತ್ರ ಅಧ್ಯಯನದಲ್ಲಿ ತೆಗೆದುಕೊಳ್ಳಲಾಗಿದೆ.

**೫.೫.೧. ೫ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು**

೧. ೧೯೭೧ರ ಸಮಾಜ ಪರಿಚಯ ಎನ್ನುವ ಶಿರೋನಾಮೆಯ ಚರಿತ್ರೆ ಪಠ್ಯವನ್ನು ೫ನೇ ತರಗತಿಗೆ ಇರಿಸಲಾಗಿದೆ. ಇದನ್ನು ಮೈಸೂರು ವಿದ್ಯಾ ಇಲಾಖೆಯಿಂದ ಮುದ್ರಿಸಲಾಗಿದೆ. ಮೈಸೂರು ರಾಜ್ಯದ ಎಲ್ಲಾ ಶಾಲೆಗಳಿಗೂ ಪಠ್ಯವಾಗಿ ಅಳವಡಿಸಲಾಗಿತ್ತು. ಈ ಪಠ್ಯಪುಸ್ತಕ ರಚನಾ ಸಮಿತಿಗೆ ಎಸ್ ವೆಂಕಟೇಶಯ್ಯ ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಿಕೊಳ್ಳಲಾಗಿತ್ತು.[೨೩]

ಎಮ್. ವಾಸುದೇವರಾವ್, ಎನ್ ಡಿ ಕುಲಕರ್ಣಿ, ಎಂ ಸೀತಾರಾಂ ಅಯ್ಯಂಗಾರ್, ಕೆ ಮುರಳೀಧರರವರು ಈ ಸಮಿತಿಯ ಸದಸ್ಯರಾಗಿ ನೇಮಿಸಲಾಗಿತ್ತು. ಈ ಪಠ್ಯಪುಸ್ತಕವು ಪ್ರಮುಖವಾಗಿ ಮೂರು ಭಾಗಗಳನ್ನು ಒಳಗೊಂಡಿತ್ತು.

ಮೊದಲ ಭಾಗದಲ್ಲಿ ಭೂವಿವರಣೆ

ಎರಡನೇ ಭಾಗವು ಭಾರತೀಯರ ಕಥೆ

ಮೂರನೇ ಭಾಗವು ಮೈಸೂರು ರಾಜ್ಯದ ಆಡಳಿತ ಎಂದಿತ್ತು. ಮೊದಲ ಭಾಗ ಚರಿತ್ರೆಯ ಪಠ್ಯದ ಪರಿಧಿಗೆ ಬಾರದಿರುವುದರಿಂದ ಅದರ ಕುರಿತು ಇಲ್ಲಿ ವಿಶ್ಲೇಷಣೆ ಮಾಡಿಲ್ಲ. ಮೂರನೇ ವಿಭಾಗದಲ್ಲಿ ಮೈಸೂರು ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ಮಾಹಿತಿ ಇದೆ. ಎರಡನೇ ವಿಭಾಗ ಮಾತ್ರ ಭಾರತೀಯರ ಕತೆ ಎನ್ನುವ ಶಿರೋನಾಮೆಯಿಂದ ಚರಿತ್ರೆ ಪಠ್ಯಗಳನ್ನು ಗುರುತಿಸಲಾಗಿದೆ. ಈ ಭಾಗದಲ್ಲಿ ಭಾರತದ ಮೂಲ ನಿವಾಸಿಗಳು, ಸಿಂಧೂನದಿಯ ನಾಗರೀಕತೆಗಳ, ಆರ್ಯರ ಆಗಮನ, ಮಹಾವೀರ, ಗೌತಮಬುದ್ಧ, ವಿದೇಶಿಯರ ದಾಳಿಗಳು, ಮೌರ್ಯರು, ಕಾನಿಷ್ಕ, ಗುಪ್ತರು, ಹರ್ಷ, ಎರಡನೇ ಪುಲಕೇಶಿ, ವಿದೇಶಿ ಯಾತ್ರಿಕರು, ಪಲ್ಲವರು, ರಾಷ್ಟ್ರಕೂಟರು ಮತ್ತು ಚೋಳರು ಎಂಬ ಪಾಠಗಳನ್ನು ಇರಿಸಲಾಗಿತ್ತು.

ಭಾರತೀಯರ ಕಥೆ ಎನ್ನುವ ಎರಡನೇ ಭಾಗವು ಚರಿತ್ರೆಗೆ ಸಂಬಂಧಿಸಿದ ಪಾಠಗಳನ್ನು ಹೊಂದಿದೆ. ಈ ಪಾಠಗಳಲ್ಲಿ ಭಾರತೀಯರ ಪ್ರಾಚೀನ ಚರಿತ್ರೆಯನ್ನು ತಿಳಿಸಿಕೊಡುವ ಉದ್ದೇಶವನ್ನು ಒಳಗೊಂಡಿವೆ. ಸಿಂಧೂ ಬಯಲಿನ ನಾಗರಿಕತೆ ಎಂಬ ಪಾಠದಲ್ಲಿ ಇತ್ತೀಚೆಗೆ ಎರಡು ಹೊಸ ಪಟ್ಟಣಗಳನ್ನು ಪತ್ತೆಹಚ್ಚಲಾಯಿತೆಂದು ತಿಳಿಸಲಾಗಿದೆ. ಆದರೆ ಆ ಪಟ್ಟಣಗಳು ಯಾವುವು ಎಂಬುದನ್ನು ಸ್ಪಷ್ಟಗೊಳಿಸಿದ್ದರೆ ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಅನುಕೂಲವಾಗುತ್ತಿತ್ತು. ಸಿಂಧೂ ನಾಗರಿಕತೆಗೆ ಸಂಬಂಧಿಸಿದಂತೆ ನಗರ ಯೋಜನೆ, ಆರ್ಥಿಕ ಜೀವನವನ್ನು ಪಠ್ಯದಲ್ಲಿ ಪರಿಚಯಿಸಲಾಗಿದೆ.

ಮಹಾವೀರ, ಗೌತಮ ಬುದ್ಧ ಪಾಠಗಳಲ್ಲಿ ಅವರ ಜನನ ಮರಣಗಳ ಕುರಿತು ಸ್ಪಷ್ಟ ಕಾಲವನ್ನು ಸೂಚಿಸುವ ಅಗತ್ಯತೆ ಇತ್ತು ಎನಿಸುತ್ತದೆ. ಉಳಿದಂತೆ ಮೌರ್ಯ, ಅಶೋಕ, ಕಾನಿಷ್ಕ, ಸಮುದ್ರಗುಪ್ತ, ೨ನೇ ಚಂದ್ರಗುಪ್ತ ವಿಕ್ರಮಾದಿತ್ಯ, ಹರ್ಷವರ್ಧನ ಇವರ ರಾಜಕೀಯ ಸಾಧನೆಗಳನ್ನು ಮಕ್ಕಳಿಗೆ ತಿಳಿಸಿದ್ದರು. ೫ನೇ ತರಗತಿಯ ಮಕ್ಕಳಾಗಿರುವುದರಿಂದ ರಾಜಕೀಯ ಅರಸರ ಹಾಗೂ ಮನೆತನದ ಇತರ ಅಂಶಗಳಾದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಕಲೆಯ ವಿಚಾರಗಳನ್ನು ನಮ್ಮ ವಿದ್ಯಾರ್ಥಿಗಳಿಗೆ ಸೂಚಿಸಿದ್ದರೆ ಇನ್ನೂ ಹೆಚ್ಚಿನ ಅಂಶಗಳು ಓದುಗನಿಗೆ ದಕ್ಕುತ್ತಿದ್ದವು. ಈ ಪಠ್ಯವು ಮಕ್ಕಳ ಬೌದ್ಧಿಕಮಟ್ಟ ಹೆಚ್ಚಲು ಹೆಚ್ಚು ಕಾರಣವಾಗುವ ಸಾಧ್ಯತೆಯಿದೆ.

ಸ್ವತಂತ್ರಗೊಂಡ ಕೆಲವೇ ವರ್ಷಗಳಾಗಿದ್ದರಿಂದ ಇನ್ನೂ ರಾಷ್ಟ್ರೀಯ ಚೌಕಟ್ಟಿನ ಅಡಿಯಲ್ಲಿ ಇನ್ನೂ ಹೆಚ್ಚಿನಮಟ್ಟಿಗೆ ಪಠ್ಯ ಸಾಧ್ಯತೆ ಇತ್ತು. ಮಕ್ಕಳ ಕೋಮು ಸೌಹಾರ್ದತೆಯ ಕುರಿತು ಇರುವ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಬಹುದಿತ್ತು. ಬರವಣಿಗೆ ತುಂಬಾ ಸಾಮಾನ್ಯವಾಗಿದ್ದು ಮಕ್ಕಳಿಗೆ ಸುಲಭವಾಗಿ ಅರ್ಥೈಸಲು ಸುಲಭವಾಗಿತ್ತು.

೨. ಸಮಾಜ ಪರಿಚಯ ಪಾಠಗಳು ಎಂಬ ಪಠ್ಯವು ೧೯೭೪ರಲ್ಲಿ ಎಲ್ಲಾ ಜಿಲ್ಲೆಗಳ ೫ನೇ ತರಗತಿಯ ಮಕ್ಕಳಿಗೆ ಪಠ್ಯವು ಸಿದ್ಧಪಡಿಸಲಾಗಿತ್ತು.[೨೪] ಈ ಪಠ್ಯಪುಸ್ತಕವನ್ನು ರಚಿಸಲು ಕೆ.ಪಿ. ಸುರೇಂದ್ರನಾಥ ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ವಿ.ಬಿ. ಗಾಂವಕರ್, ಎಂ.ಆರ್. ರಾಮಸ್ವಾಮಿ, ಉವಿ ಹುಲ್ಲಪ್ಪ, ಕೆ.ಕೆ ವಸಂತ ಇವರನ್ನು ಸದಸ್ಯರನ್ನಾಗಿ ಈ ಸಮಿತಿ ಒಳಗೊಂಡಿತ್ತು. ಈ ಪಠ್ಯದಲ್ಲಿ ಪಾಠಗಳು ಅಲ್ಪಸ್ವಲ್ಪ ಬದಲಾವಣೆಗೊಂಡಿವೆ ಹಾಗೂ ಅಧ್ಯಾಯಗಳನ್ನು ಹಿಂದುಮುಂದು ಕೊಡಲಾಗಿದೆ. ಭಾಗ ೨ರಲ್ಲಿದ್ದ ಚರಿತ್ರೆಯಲ್ಲಿದ್ದ ಅಧ್ಯಾಯಗಳನ್ನು ಭಾಗ ೧ರಲ್ಲಿ ಸೇರಿಸಲಾಗಿದೆ.

ಅಧ್ಯಾಯ ೧ ಭಾರತದ ಮೂಲನಿವಾಸಿಗಳ ಕಥೆ ಎಂಬ ಪಾಠದಲ್ಲಿ ಹಿಂದಿಗಿಂತ ಹೆಚ್ಚು ಸುಧಾರಣೆಯಾಗಿದೆ. ಉದಾಹರಣೆಗೆ ಕರ್ನಾಟಕದಲ್ಲಿರುವ ಹಳೆಶಿಲಾಯುಗದ ಮಾನವನ ನೆಲೆಗಳ ಬಗ್ಗೆ ಉಲ್ಲೇಖಗಳಿರಲಿಲ್ಲ.[೨೫] ಆದರೆ ಈ ಪಠ್ಯದಲ್ಲಿ ಅವುಗಳ ಉಲ್ಲೇಖ ಮಾಡಿರುವುದು ಸಮಂಜಸವೆನಿಸುತ್ತದೆ. ಅಲ್ಲದೆ ಆಗಿನ ಮಾನವನು ಬಳಸುತ್ತಿದ್ದ ಆಯುಧಗಳ ಚಿತ್ರಗಳನ್ನು ನೀಡಲಾಗಿದೆ. ಸಿಂಧೂ ಬಯಲಿನ ನಾಗರಿಕತೆ ಪಾಠದಲ್ಲಿಯೂ ಕೂಡ ಅವರ ಕಲೆ, ಬರವಣಿಗೆ,

ಧಾರ್ಮಿಕ ಭಾವನೆ, ಶವಸಂಸ್ಕಾರ ಇತ್ಯಾದಿಗಳ ಕುರಿತು ಪರಿಚಯ ಮಾಡಿಕೊಟ್ಟಿರುವುದನ್ನು ನೋಡಬಹುದು.

ವೇದಗಳ ಕಾಲದ ಸಂಸ್ಕೃತಿ ಪಾಠವು ಹೊಸದಾಗಿ ಸೇರ್ಪಡೆಗೊಂಡಿದೆ. ಇಲ್ಲಿಯೂ ಸಾಕಷ್ಟು ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಮಹಾಕಾವ್ಯಗಳ ಕಾಲದ ಸಂಸ್ಕೃತಿ ಎಂಬ ಪಾಠವೂ ಸಹ ಹೊಸದಾಗಿ ಸೇರ್ಪಡೆಗೊಂಡಿದ್ದು ಅದರ ಬಗ್ಗೆ ಹೆಚ್ಚು ವಿಷಯಗಳನ್ನು ನೀಡಿಲ್ಲ.

ವರ್ಧಮಾನ ಮಹಾವೀರ, ಗೌತಮಬುದ್ಧನ ಜೀವನವನ್ನು ಈ ಹಂತದಲ್ಲಿ ಮಕ್ಕಳಿಗೆ ತಿಳಿಸುವುದು ಹೆಚ್ಚು ಸೂಕ್ತವಾಗಿತ್ತು. ಇನ್ನುಳಿದ ಅಧ್ಯಾಯಗಳಲ್ಲಿ ಸ್ವಲ್ಪಮಟ್ಟಿನ ಹೆಚ್ಚಿನ ವಿಷಯ ಸೇರ್ಪಡೆಗೊಂಡಿರುವುದು ಕಂಡುಬರುತ್ತದೆ.

ಈ ಪಠ್ಯಪುಸ್ತಕದಲ್ಲಿ ವಾಕ್ಯರಚನೆ, ಪದಗಳ ಬಳಕೆ, ಅಕ್ಷರದೋಷ ಇತ್ಯಾದಿಗಳಲ್ಲಿ ನ್ಯೂನತೆ ಇರುವುದು ಕಂಡುಬರುತ್ತದೆ. ಉದಾಹರಣೆಗೆ ಬುದ್ಧನ ಪಾಠದಲ್ಲಿ ನೆಮ್ಮದಿ ದೊರಕಿತು, ಎಲ್ಲರಿಗೂ ನೆಮ್ಮದಿ ಹಂಚಿಕೆ, ಅಲೆಕ್ಸಾಂಡರನ ಪಾಠದಲ್ಲಿ ಅಲೆಕ್ಸಾಂಡರ್ ಪ್ರಥಮ ಚಕ್ರವರ್ತಿ ಎಂಬ ವಿಷಯಗಳು ಮಕ್ಕಳಿಗೆ ಗೊಂದಲಗಳನ್ನು ಮೂಡಿಸುವಂತವುಗಳಾಗಿವೆ. ಇದು ಅಗತ್ಯವಿದ್ದಷ್ಟು ಅಭ್ಯಾಸಗಳನ್ನು ನೀಡಿಲ್ಲ. ಹೀಗೆ ಹಲವು ದೋಷಗಳು ಕಣ್ಣಿಗೆ ರಾಚುವಷ್ಟು ನಿಚ್ಚಳವಾಗಿ ಕಂಡುಬರುತ್ತವೆ.

ಪಠ್ಯದ ಬದಲಾವಣೆಯ ಸಂದರ್ಭದಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯವರು ಮಕ್ಕಳ ಮಾನಸಿಕ ಸಾಮರ್ಥ್ಯವನ್ನು ಗಮನದಲ್ಲಿರಿಸಿಕೊಂಡು ಪಠ್ಯ ರಚಿಸಿದ್ದರೆ ಸೂಕ್ತವೆನಿಸುತ್ತಿತ್ತು. ಈ ರೀತಿಯ ಲೋಪದೋಷಗಳಿಂದ ಮಕ್ಕಳ ಮನಸ್ಸಿನ ಮೇಲೆ ಗಾಢವಾದ ಪರಿಣಾಮಗಳು ಉಂಟಾಗುವ ಸಾಧ್ಯತೆ ಹೆಚ್ಚು. ಈ ಪಠ್ಯಪುಸ್ತಕವೂ ಕೂಡ ಪ್ರಾಚೀನ ಭಾರತದ ಚರಿತ್ರೆಯನ್ನು ಮಕ್ಕಳಿಗೆ ತಿಳಿಸಿಕೊಡುವ ಉದ್ದೇಶದಿಂದ ಕೂಡಿದೆ. ಇದು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸೂಕ್ತವಾಗಿದ್ದು ಮಕ್ಕಳು ಈ ಪಠ್ಯದಿಂದ ರಾಷ್ಟ್ರೀಯ ಕಲ್ಪನೆ, ಹಿಂದೂ ದೇಶದ ಸಂಸ್ಕೃತಿ, ಧರ್ಮ, ರಾಜರ ಬಗ್ಗೆ ಕಲ್ಪನೆ ಬೆಳೆಸಿಕೊಳ್ಳಲು ಅವಕಾಶ ಮಾಡಿಕೊಟ್ಟಿದೆ.

ಹೆಚ್ಚು ವಿಷಯಗಳನ್ನು ಒಳಗೊಂಡಿರುವ ಈ ಪಠ್ಯವು ಉತ್ತಮವಾಗಿದ್ದರೂ ಕೂಡ ಬರವಣಿಗೆಯ ದೋಷಗಳಿಂದಾಗಿ ಮಕ್ಕಳ ಮನಸ್ಸಿನ ಮೇಲೆ ಅಡ್ಡಪರಿಣಾಮ ಉಂಟುಮಾಡಬಲ್ಲದಾಗಿತ್ತು.

೩. ಸಾಮಾಜಿಕ ವಿಜ್ಞಾನ ಹೆಸರಿನ ಪಠ್ಯವು ೧೯೯೩ರಲ್ಲಿ ಕರ್ನಾಟಕ ರಾಜ್ಯದ ೫ನೇ ತರಗತಿಯ ಮಕ್ಕಳಿಗಾಗಿ ನಿಗದಿಪಡಿಸಲಾಗಿತ್ತು. ಈ ಪಠ್ಯಪುಸ್ತಕವು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಹಿನ್ನೆಲೆಯಲ್ಲಿ ಸಿದ್ಧಗೊಂಡಿದೆ. ಇದು ಪರಿಸ್ಕೃತ ಪಠ್ಯವಾಗಿದ್ದು ಪರಿಷ್ಕರಣಾ ಕಾರ್ಯವನ್ನು ಎಸ್. ಶಂಕರನಾರಾಯಣ ಹಾಗೂ ಕೆ. ಬಸವರಾಜಯ್ಯನವರು ಸಿದ್ಧಪಡಿಸಿಕೊಟ್ಟಿದ್ದಾರೆ.[೩೦] ಈ ಪಠ್ಯವೂ ಕೂಡ ೩ ಭಾಗಗಳಿಂದ ಕೂಡಿದ್ದು ಮೊದಲ ಭಾಗದಲ್ಲಿ ಚರಿತ್ರೆ ಅಧ್ಯಾಯಗಳಿವೆ. ಇದಕ್ಕೆ ಹಿಂದಿನ ಸಮಾಜ ಪಾಠವೆನ್ನುವ ಶೀರ್ಷಿಕೆಯ ಬದಲು ಸಾಮಾಜಿಕ ವಿಜ್ಞಾನ ಎನ್ನುವ ಶೀರ್ಷಿಕೆ ಇರಿಸಲಾಗಿದೆ.

ಸಮಾಜ ಪರಿಚಯ ಹಾಗೂ ಸಾಮಾಜಿಕ ವಿಜ್ಞಾನಗಳಿಗಿರುವ ಸಂಬಂಧ ಅಥವಾ ಅಂತರಗಳು ಏನಿವೆ ಎಂಬುದನ್ನು ಇಲ್ಲಿ ಅರಿಯಬೇಕಾದ ಅವಶ್ಯಕತೆ ಇದೆ. ಸಮಾಜ ಪರಿಚಯ ಎಂಬುದು ಒಂದು ಸಮಾಜದ ಕುರಿತಾದ ಪರಿಚಯಾತ್ಮಕ ಪಾಠಗಳಿಂದ ಕೂಡಿದೆ ಎನ್ನುವ ಅರ್ಥವನ್ನು ನೀಡುತ್ತದೆ. ಆದರೆ ಸಾಮಾಜಿಕ ವಿಜ್ಞಾನವೆಂಬುದು ಅದಕ್ಕಿಂತ ಸಂಕೀರ್ಣವಾದ ಅರ್ಥದಿಂದ ಕೂಡಿದ ಪದವಾಗಿದೆ. ಸಾಮಾಜಿಕವೆಂಬ ಪದವನ್ನು ಸೋಷಿಯಾಲಾಜಿಕಲ್ ಎನ್ನುವ ಇಂಗ್ಲಿಷ್ ಪದಕ್ಕೆ ಸಮಾನ ಪದವಾಗಿ ಬಳಸಲಾಗುತ್ತದೆ. ವಿಜ್ಞಾನವೆಂಬುದು ಒಂದು ಅಧ್ಯಯನ ಶಿಸ್ತು ಎಂಬುದನ್ನು ಬಿಂಬಿಸುತ್ತದೆ. ಸಾಮಾಜಿಕವಾದ ಅಧ್ಯಯನ ಶಿಸ್ತು ಎಂದು ಬೇಕಾದರೆ ಹೇಳಬಹುದು. ಇದು ಸಮಾಜ ಪರಿಚಯಕ್ಕಿಂತ ಭಿನ್ನವಾದ ಅರ್ಥವನ್ನು ನೀಡುತ್ತದೆ. ಇಲ್ಲಿ ಮಕ್ಕಳಿಗೆ ಕೇವಲ ಸಮಾಜ ಪರಿಚಯವನ್ನು ಮಾಡಿಸದೇ ಆ ಸಮಾಜದ ಅಧ್ಯಯನ ಶಿಸ್ತನ್ನು ಕಲಿಸಲಾಗುತ್ತದೆ ಎಂಬ ಅರ್ಥವನ್ನು ತಿಳಿಸುವುದಕ್ಕಾಗಿಯೇ ಸಾಮಾಜಿಕ ವಿಜ್ಞಾನ ಎಂಬ ಶೀರ್ಷಿಕೆಯನ್ನಿರಿಸಿರುವ ಸಾಧ್ಯತೆಗಳಿವೆ.

ಚರಿತ್ರೆಯ ಅಧ್ಯಾಯಗಳಲ್ಲಿ ಪ್ರಮುಖವಾಗಿ ೬ ಮುಖ್ಯ ಅಧ್ಯಾಯಗಳು ಹಾಗೂ ಉಪ ಅಧ್ಯಾಯಗಳನ್ನು ಒಳಗೊಂಡಿದೆ. ೧ ಭಾರತದ ಇತಿಹಾಸದ ಪೂರ್ವಕಾಲ, ೨ ಸಿಂಧೂ ಕಂದರದ ನಾಗರಿಕತೆ, ೩ ವೇದಗಳ ಕಾಲ, ೪ ಕ್ರಿಪೂ. ೬ನೇ ಶತಮಾನದಿಂದ ೩ನೇ ಶತಮಾನವರೆಗಿನ ಭಾರತ, ೫ ಮೌರ್ಯರ ನಂತರದ ಭಾರತದ ಪರಿಸ್ಥಿತಿ, ೬ ಪುಲಿಕೇಶಿ ಹರ್ಷವರ್ಧನನ ಕಾಲದ ಭಾರತ ಎನ್ನುವ ಪಾಠಗಳಿವೆ. ಈ ಪಠ್ಯದಲ್ಲಿ ಹಿಂದಿನ ಪಠ್ಯಕ್ಕಿಂತ ಬದಲಾವಣೆಗಳಾಗಿರುವುದನ್ನು ಗುರುತಿಸಬಹುದು. ಹಿಂದೆ ಇದ್ದ ವಾಕ್ಯದೋಷ, ಅಕ್ಷರದೋಷ, ಶೀರ್ಷಿಕೆ ಇತ್ಯಾದಿಗಳಲ್ಲಿ ಬದಲಾವಣೆಯಾಗಿದೆ. ಅಲ್ಲದೆ ಹಿಂದಿನ ಪಾಠಗಳಲ್ಲಿದ್ದ ವಿಷಯಕ್ಕಿಂತ ಹೆಚ್ಚು ಸರಳಗೊಳಿಸುವ ಕಾರ್ಯ ನಡೆದಿದೆ. ಗೌತಮ ಬುದ್ಧ ಮಹಾವೀರ ಇವರ ಜನನ, ಮರಣದ ಕಾಲದ ಬಗ್ಗೆ ನಿರ್ದಿಷ್ಟತೆ ಇದೆ. ಅಶೋಕನ ಪಟ್ಟಾಭಿಷೇಕ, ಶಾತವಾಹನರ ಆಡಳಿತದ ಅವಧಿ ಇವುಗಳ ಕಾಲಗಳೂ ಕೂಡ ನಿರ್ದಿಷ್ಟವಾಗಿ ಹೇಳಲ್ಪಟ್ಟಿದೆ. ಇದರಿಂದ ಕಾಲಗಳ ಕುರಿತು ನಿರ್ದಿಷ್ಟವಾದ ಪ್ರಜ್ಞೆ ಮೂಡಿಸಲು ಸಾಧ್ಯವಾಗಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಕುಶಾನರ ಸಾಹಿತ್ಯ, ಕಲೆ, ವ್ಯಾಪಾರ, ಗುಪ್ತರ ಕಾಲದ ಕಲೆ, ಸಾಹಿತ್ಯಗಳ ಕುರಿತು ಸಂಕ್ಷಿಪ್ತವಾದ ಪರಿಚಯ ನೀಡಲಾಗಿದೆ. ಇದರಿಂದ ಮಕ್ಕಳಿಗೆ ಕೇವಲ ರಾಜಕೀಯ ಚರಿತ್ರೆ ಮಾತ್ರ ತಿಳಿಸದೇ ಕಲೆ, ಸಾಹಿತ್ಯ, ಸಂಸ್ಕೃತಿ ತಿಳಿಸುವ ಪ್ರಯತ್ನ ಮಾಡಿದೆ.

ಇದು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಹತ್ತಿರವಾಗಿದ್ದು ಯಾವುದೇ ಮತೀಯ ಭಾವನೆಯನ್ನು ಕೆರಳಿಸುವ ವಿಚಾರಗಳು ಈ ಪಠ್ಯದಲ್ಲಿಲ್ಲ. ಭಾರತದ ಚರಿತ್ರೆಯನ್ನು ತಿಳಿಸುವ ಪಠ್ಯ ಇದಾಗಿದ್ದರೂ ಕರ್ನಾಟಕ ಹಾಗೂ ವಿಧಾನಸೌಧದ ಚಿತ್ರಗಳನ್ನು ಮುಖಪುಟದಲ್ಲಿ ಮುದ್ರಿಸಿರುವುದು ಎಷ್ಟು ಸೂಕ್ತ ಎನ್ನುವ ಪ್ರಶ್ನೆ ಕಾಡುತ್ತದೆ.

೨೦೦೦ ನಂತರ ಬದಲಾದ ಪಠ್ಯಕ್ರಮವು ೨೦೧೨ರ ಶೈಕ್ಷಣಿಕ ವರ್ಷದವರೆಗೆ ಚರಿತ್ರೆಯ ಪಾಠಗಳು ಬದಲಾವಣೆಗೊಂಡಿಲ್ಲ. ಈ ಅವಧಿಯಲ್ಲಿ ಬದಲಾದ ತ್ರೈಮಾಸಿಕ ಹಾಗೂ ಸೆಮಿಸ್ಟರ್

ಹಂತಗಳಿಗೆ ಆ ಪಾಠಗಳನ್ನೇ ಕಾಲಾನುಕ್ರಮವಾಗಿ ಮೂರು ಭಾಗಗಳಲ್ಲಿ ಹಂಚಲಾಗಿದ್ದರೆ ಸೆಮಿಸ್ಟರ್‌ನಲ್ಲಿ ಅವುಗಳನ್ನೇ ಎರಡು ಭಾಗಗಳಾಗಿ ಹಂಚಲಾಗಿತ್ತು. ಇದು ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳಿಗೆ ಅನ್ವಯಿಸುತ್ತಿತ್ತು.

೪. ೨೦೦೮ರಲ್ಲಿ ಮೊದಲ ಸೆಮಿಸ್ಟರಿನ ಪಠ್ಯದಲ್ಲಿ ಕೋರ್ ವಿಷಯಗಳನ್ನೆಲ್ಲಾ ಸೇರಿಸಿ ಒಂದೇ ಪಠ್ಯವನ್ನು ಇರಿಸಿರುವುದು ವಿಶೇಷ. ಈ ಪಠ್ಯದಲ್ಲಿ ಸಮಾಜ ವಿಜ್ಞಾನ, ವಿಜ್ಞಾನ, ಪರಿಸರ ಅಧ್ಯಯನ, ಗಣಿತ ವಿಷಯಗಳನ್ನು ಇರಿಸಲಾಗಿದೆ. ೫ನೇ ತರಗತಿಯ ಪಠ್ಯದ ಭಾಗ ೧ರಲ್ಲಿ ಚರಿತ್ರೆಗೆ ಸಂಬಂಧಿಸಿದ ೫ ಪಾಠಗಳಿವೆ. ಅವುಗಳು ಕ್ರಮವಾಗಿ ೧. ಭಾರತ ದೇಶ ಹಾಗೂ ಜನಾಂಗ, ೨. ಪ್ರಾಕ್ತನ ಭಾರತ, ೩. ಸಿಂಧೂ ನಾಗರಿಕತೆ, ೪. ವೇದಗಳ ಕಾಲ, ೫ ಜೈನ ಮತ್ತು ಬೌದ್ಧ ಧರ್ಮಗಳು ಎಂದಿವೆ. ಪಠ್ಯಪುಸ್ತಕ ಸಮಿತಿಯ ಹೆಸರನ್ನು ಮುದ್ರಿಸದೇ ಇರುವುದು ಕಂಡುಬರುತ್ತದೆ.

ಭಾರತ ದೇಶ ಹಾಗೂ ಜನಾಂಗ ಈ ಪಾಠದಲ್ಲಿ ಇತಿಹಾಸದ ಅರ್ಥ, ಪ್ರಾಮುಖ್ಯತೆಯನ್ನು ತಿಳಿಸುವ ಪ್ರಯತ್ನ ನಡೆದಿದೆ. ಅಲ್ಲದೆ ಭಾರತದ ಭೌಗೋಳಿಕ ವೈವಿಧ್ಯತೆಯನ್ನು ತಿಳಿಸಲಾಗಿದೆ. ಪ್ರಾಕ್ತನ ಭಾರತ ಎಂಬ ಪಾಠದಲ್ಲಿ ವಿಶ್ವದ ಉಗಮ, ಜೀವ ವಿಕಾಸ, ಹಳೆ ಶಿಲಾಯುಗ, ಮಧ್ಯ ಶಿಲಾಯುಗ, ನವ ಶಿಲಾಯುಗದ ಬಗ್ಗೆ ತಿಳಿಸಲಾಗಿದೆ. ಈ ಅಧ್ಯಾಯದಲ್ಲಿ ಭೂಮಿಯ ಉಗಮ, ವಿಕಾಸದ ಬಗ್ಗೆ ತಿಳಿಸಿರುವುದು ಚರಿತ್ರೆಯು ಹೆಚ್ಚು ಬದಲಾವಣೆಗೆ ಒಳಗಾಗುತ್ತಿದೆ ಎಂಬ ಅಂಶವನ್ನು ಬೆಳಕಿಗೆ ತರುತ್ತದೆ. ಸಿಂಧೂ ನಾಗರಿಕತೆಯಲ್ಲಿ ನಗರ ಯೋಜನೆ, ಆರ್ಥಿಕ ಸ್ಥಿತಿ, ಆಭರಣ, ಕ್ರೀಡೆ, ಕಲೆ, ಧರ್ಮ ಬರವಣಿಗೆ ಅವನತಿಯ ಬಗ್ಗೆ ಸಂಕ್ಷಿಪ್ತವಾಗಿ ನೀಡಲಾಗಿದೆ. ವೇದಗಳ ಕಾಲದಲ್ಲಿ ಆರಂಭದ ವೇದಗಳ ಕಾಲ, ಉತ್ತರ ವೇದಗಳ ಕಾಲದ ಜನರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಸಲಾಗಿದೆ. ಜೈನ ಮತ್ತು ಬೌದ್ಧ ಧರ್ಮದಲ್ಲಿ ಮಹಾವೀರನ ಜೀವನ, ಜೈನ ಧರ್ಮದ ಪ್ರಸಾರ, ಗೌತಮನ ಜೀವನ, ಬೋಧನೆಗಳ ಕುರಿತು ತಿಳಿಸಲಾಗಿದೆ. ಇಲ್ಲಿ ಮಹಾವೀರ ಜೈನ ಧರ್ಮದ ಸ್ಥಾಪಕ ಎಂಬ ವಿಚಾರವನ್ನೇ ತಿಳಿಸಿಲ್ಲ. ಬುದ್ಧ ಹಾಗೂ ಮಹಾವೀರನ ಕಾಲವನ್ನು ತಿಳಿಸಿಲ್ಲ. ಇದರಿಂದ ಕಾಲಪ್ರಜ್ಞೆಯನ್ನು ಮೂಡಿಸುವಲ್ಲಿ ಪಠ್ಯವು ಸೋತಿದೆ ಎಂದೇ ಹೇಳಬಹುದು.

ಈ ಪಠ್ಯವು ವರ್ಣಮಯವಾದ ಹಾಗೂ ಸೂಕ್ತವಾದ ಚಿತ್ರ ನಕಾಶೆಗಳಿಂದ ಕೂಡಿದೆ. ಇವು ಸಂದರ್ಭಕ್ಕೆ ತಕ್ಕಂತೆ ಬಂದಿವೆ. ಇದು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸೂಕ್ತವಾಗಿದ್ದು ಮಕ್ಕಳಿಗೆ ಹೆಚ್ಚಿನ ಮಟ್ಟದ ವಿಷಯಗಳನ್ನು ತಿಳಿಸುವ ಅವಶ್ಯಕತೆ ಇತ್ತು. ಏಕೆಂದರೆ ಪ್ರಸ್ತುತ ಸಮಾಜವು ಸ್ಪರ್ಧಾ ಮನೋಭಾವನೆಯಿಂದ ಕೂಡಿರುವುದರಿಂದ ಈ ಪಠ್ಯವನ್ನು ಓದುವ ಮಕ್ಕಳಿಗೂ ಐಸಿಎಸ್‌ಸಿ ಹಾಗೂ ಸಿಬಿಎಸ್‌ಸಿ ಪಠ್ಯಗಳಿಗಿಂತ ಸಂಕ್ಷಿಪ್ತ ಮಾಹಿತಿಯನ್ನು ಒಳಗೊಂಡಿವೆ. ಹೀಗಾಗಿ ಈ ಮಕ್ಕಳು ಆ ಪಠ್ಯಕ್ರಮ ಅಭ್ಯಾಸ ಮಾಡುವ ಮಕ್ಕಳೊಂದಿಗೆ ಸ್ಪರ್ಧಿಸಲು ಸಾಧ್ಯವಾಗದೇ ಹೋಗಬಹುದು. ಕೆಲವು ವಿದ್ವಾಂಸರು ಶಿಕ್ಷಣ ತಜ್ಞರು, ಸಾಹಿತಿಗಳು ಈ ಪಠ್ಯವನ್ನೋದುವ ಮಕ್ಕಳ ಬೌದ್ಧಿಕ ಸಾಮರ್ಥ್ಯ ಕಡಿಮೆ ಇದೆ ಎಂದು ಪರಿಭಾವಿಸುತ್ತಾರೆ.

ಕನ್ನಡ ಮಾಧ್ಯಮದ ಸರ್ಕಾರಿ ಶಾಲೆಯ ಮಕ್ಕಳು ಅಂತಹ ಪಠ್ಯಗಳನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾರೆ.

೫. ೨೦೦೮ರಲ್ಲಿ ೫ನೇ ತರಗತಿಯ ೨ನೇ ಸೆಮಿಸ್ಟರಿಗೆ ಸಮಾಜ ವಿಜ್ಞಾನ ಎನ್ನುವ ಪಠ್ಯವನ್ನು ಇರಿಸಲಾಗಿದೆ. ಇದರಲ್ಲಿ ೩ ಭಾಗಗಳಿದ್ದು ಮೊದಲ ಭಾಗದಲ್ಲಿ ಇತಿಹಾಸ, ೨ನೇ ಭಾಗದಲ್ಲಿ ಪೌರನೀತಿ, ೩ನೇ ಭಾಗದಲ್ಲಿ ಭೂಗೋಳ ಎಂದಿವೆ. ಇದರಲ್ಲಿ ಚರಿತ್ರೆಗೆ ಸಂಬಂಧಿಸಿದಂತೆ ೬ ಅಧ್ಯಾಯಗಳಿದ್ದು ಪ್ರಾಚೀನ ಉತ್ತರ ಭಾರತ, ಮೌರ್ಯ ಚಕ್ರಾಧಿಪತ್ಯ, ಕುಶಾನರು, ಗುಪ್ತ ಸಾಮ್ರಾಜ್ಯ, ಗುಪ್ತರ ನಂತರದ ಭಾರತ, ಪ್ರಾಚೀನ ದಕ್ಷಿಣ ಭಾರತ ಎನ್ನುವ ಪಾಠಗಳಿವೆ.

ಈ ಪಠ್ಯಪುಸ್ತಕ ರಚನಾ ಸಮಿತಿಯ ಹೆಸರು ಪುಸ್ತಕದಲ್ಲಿ ಕಂಡುಬರುವುದಿಲ್ಲ. ಕಾರಣಗಳೇನಿರಬಹುದೆಂಬುದನ್ನು ಕೊನೆಯಲ್ಲಿ ಚರ್ಚಿಸಲಾಗಿದೆ. ಮೊದಲ ಅಧ್ಯಾಯದಲ್ಲಿ ಪ್ರಾಚೀನ ಜನಪದ, ಗಣತಂತ್ರಗಳ ಬಗ್ಗೆ ಹೆಸರಿಸಿ ಭಾರತದ ಮೇಲೆ ಪರ್ಷಿಯನ್ನರ ದಾಳಿಯ ಕುರಿತು ತಿಳಿಸಲಾಗಿದೆ. ಇದರಲ್ಲಿ ಗ್ರೀಕಿನ ಪ್ರಸಿದ್ಧ ಅರಸ ಅಲೆಕ್ಸಾಂಡರ್ ಭಾರತದ ಮೇಲೆ ದಾಳಿ ನಡೆಸಿದ ಕುರಿತು ತಿಳಿಸಲಾಗಿದೆ. ಆದರೆ ಯಾವ ಕಾಲದಲ್ಲಿ ದಾಳಿ ಮಾಡಿದನು ಎನ್ನುವುದನ್ನು ತಿಳಿಸಿದ್ದರೆ ಉಚಿತವೆನ್ನಿಸುತ್ತಿತ್ತು. ಅಲೆಕ್ಸಾಂಡರನು ದೀರ್ಘಕಾಲ ನಡೆದ ಯುದ್ಧದ ಕಾರಣಕ್ಕೆ ಬಳಲಿದ್ದ ಎಂಬುದು ನಿಜವಾದರೂ ಪ್ರಬಲವಾದ ಮಗಧ ಸಾಮ್ರಾಜ್ಯದೊಂದಿಗೆ ಯುದ್ಧ ಮಾಡಲು ಹಿಂಜರಿದನೆಂಬುದು ಸಮಂಜಸವೆನಿಸುವುದಿಲ್ಲ.[೩೧] ಮೌರ್ಯ ಚಕ್ರಾಧಿಪತ್ಯ ಎಂಬ ಅಧ್ಯಾಯದಲ್ಲಿ ಕೌಟಿಲ್ಯನಿಗೆ ಯುದ್ಧ ಚಾಣಕ್ಯನೆಂಬ ಹೆಸರು ಸೂಚಿಸಲಾಗಿದೆ. ಆದರೆ ಅವನಿಗೆ ಇದ್ದ ಮತ್ತೊಂದು ಹೆಸರಾದ ವಿಷ್ಣುಗುಪ್ತ ಎಂಬುದನ್ನು ಸೂಚಿಸಿದ್ದರೆ ಒಳಿತಿತ್ತು. ಅಶೋಕನ ಕಳಿಂಗ ಯುದ್ಧದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಈ ಯುದ್ಧ ನಡೆದ ಕಾಲವನ್ನು ನಮೂದಿಸಿಲ್ಲ.

ಮೌರ್ಯರ ಆಡಳಿತ, ವಾಸ್ತುಶಿಲ್ಪ, ಅವನತಿ ಕುರಿತು ತಿಳಿಸಲಾಗಿದೆ. ಕುಶಾನರು ಎಂಬ ಅಧ್ಯಾಯದಲ್ಲಿ ಶುಂಗರು, ಕಣ್ವರು, ಕುಶಾನರ ಚರಿತ್ರೆ ಜೊತೆಗೆ ಅವರ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕೊಡುಗೆಗಳ ಕುರಿತು ಸಾಮರ್ಥ್ಯದಲ್ಲಿ ತಿಳಿಸಲಾಗಿದೆಯಾದರೂ ಪಾಠದಲ್ಲಿ ಅವುಗಳ ಕುರಿತಾದ ಮಾಹಿತಿ ದೊರೆಯುವುದೇ ಇಲ್ಲ. ಗುಪ್ತರ ಸಾಮ್ರಾಜ್ಯ ಪಾಠದಲ್ಲಿ ಸಮುದ್ರಗುಪ್ತನ ಕಾಲಾವಧಿಯನ್ನು ಕ್ರಿ.ಶ. ೩೩೫ ರಿಂದ ೩೭೫ ಎಂದು ನಮೂದಿಸಲಾಗಿದೆ. 'ಆದರೆ ಅವನು ೩೮೦ರವರೆಗೆ ಆಡಳಿತ ನಡೆಸಿದ ಎಂದು ಚರಿತ್ರಕಾರರಾದ ಆರ್.ಎಸ್. ಶರ್ಮರವರು ತಿಳಿಸುತ್ತಾರೆ'.[೩೨] ಗುಪ್ತ ಅರಸರ ಸಾಂಸ್ಕೃತಿಕ ಕೊಡುಗೆ ಕಲೆ ಇತ್ಯಾದಿಗಳ ಕುರಿತು ತಿಳಿಸಲಾಗಿದೆ. ಅಂತಿಮವಾಗಿ ಗುಪ್ತ ಯುಗವು ಸುವರ್ಣ ಯುಗವಾಗಿತ್ತು ಎಂದು ತಿಳಿಸಿದ್ದರೆ ಸೂಕ್ತವೆನಿಸುತ್ತಿತ್ತು.

ಗುಪ್ತರ ನಂತರದ ಕಾಲದಲ್ಲಿ ಹರ್ಷವರ್ಧನನ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ತಿಳಿಸಲಾಗಿದೆ. ಬಾದಾಮಿ ಚಾಲುಕ್ಯರ ೨ನೇ ಪುಲಕೇಶಿಯ ರಾಜಕೀಯ, ಕಲೆ, ಸಾಹಿತ್ಯ, ಆಡಳಿತ ಇತ್ಯಾದಿಗಳ ಕುರಿತು ಬೆಳಕು ಚೆಲ್ಲಿದ್ದಾರೆ. ಕಂಚಿಯ ಪಲ್ಲವರ ಸಾಹಿತ್ಯದ

ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಕೊನೆಯಲ್ಲಿ ಪ್ರಾಚೀನ ದಕ್ಷಿಣ ಭಾರತ ಎಂಬ ಪಠ್ಯದಲ್ಲಿ ಸಂಗಮರ ಸಾಹಿತ್ಯದ ಬಗ್ಗೆ ಸಂಕ್ಷಿಪ್ತ ಪರಿಚಯ ಇದೆ. ಅದೇ ರೀತಿ ಶಾತವಾಹನರ ರಾಜಕೀಯ, ನಗರ ಜೀವನ, ಮಹಿಳೆಯರ ಸ್ಥಾನಮಾನ, ಕಲೆ, ಸಾಹಿತ್ಯದ ಪರಿಚಯ ಮಾಡಿಕೊಡಲಾಗಿದೆ. ಕದಂಬರು ಎಂಬ ಪಾಠದಲ್ಲಿ ಕದಂಬರು ಸಂಸ್ಕೃತ ಭಾಷೆ ಹಾಗೂ ದೇವನಾಗರಿ ಲಿಪಿಯನ್ನು ದಕ್ಷಿಣ ಭಾರತದಲ್ಲಿ ಜನಪ್ರಿಯಗೊಳಿಸಿದರು ಎಂದು ತಿಳಿಸಲಾಗಿದೆ. ಆದರೆ ಕದಂಬರು ಕೇವಲ ಕರ್ನಾಟಕವನ್ನು ಆಳಿದ ರಾಜವಂಶವಾಗಿದೆ. ಇಂತಹ ರಾಜವಂಶ ದಕ್ಷಿಣ ಭಾರತದಾದ್ಯಂತ ಸಂಸ್ಕೃತವನ್ನು ಜನಪ್ರಿಯಗೊಳಿಸಿತು ಎಂದು ಹೇಳುವುದು ಎಷ್ಟು ಸೂಕ್ತ ಎಂಬ ಪ್ರಶ್ನೆ ಕಾಡುತ್ತದೆ.

ಒಟ್ಟಾರೆಯಾಗಿ ಪ್ರಾಚೀನ ಭಾರತದ ಸಮಗ್ರ ಚಿತ್ರಣವನ್ನು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸರಿಹೊಂದುವಂತೆ ಪಠ್ಯದಲ್ಲಿ ಪಾಠಗಳನ್ನು ರಚಿಸಲಾಗಿದೆಯೆಂಬುದು ಸ್ಪಷ್ಟ. ಇದರಲ್ಲಿ ವರ್ಣಮಯ ಚಿತ್ರಗಳು, ನಕ್ಷೆಗಳು, ಚಟುವಟಿಕೆಗಳನ್ನು ಕೊಟ್ಟು ಮಕ್ಕಳು ಪಠ್ಯದ ಕಡೆ ಹೆಚ್ಚು ಆಕರ್ಷಣೆಗೊಳ್ಳುವಂತೆ ಮಾಡಲಾಗಿದೆ.

**೫.೫.೨. ೬ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು**

೧. ೧೯೬೯ರಲ್ಲಿ ೬ನೇ ತರಗತಿಯ ಮಕ್ಕಳಿಗೆ ಸಮಾಜ ಪರಿಚಯ ಪಾಠಗಳು ಎಂಬ ಶೀರ್ಷಿಕೆಯಡಿಯಲ್ಲಿ ಚರಿತ್ರೆ ಪಾಠಗಳನ್ನು ಅಳವಡಿಸಲಾಗಿದೆ.[೩೩] ಈ ಪಠ್ಯಪುಸ್ತಕ ರಚಿಸಲು ಎ. ಶೇಷಯ್ಯಂಗಾರ್ ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ಕೆ.ಆರ್. ಲಿಂಗಪ್ಪ, ಸಿಸ್ಟರ್ ಅಕ್ವಾಲೀನ, ಗವಿಯಪ್ಪ, ಕೆ. ಮುರಳೀಧರ ಇವರು ಸಮಿತಿ ಸದಸ್ಯರಾಗಿದ್ದರು.

ಈ ಪಠ್ಯದಲ್ಲಿ ೩ ಭಾಗಗಳಿದ್ದು ೧. ಭೂವಿವರಣೆಯ ಕೆಲವು ಅಂಶಗಳು, ೨. ನಮ್ಮ ನೆರೆಯ ದೇಶದಲ್ಲಿನ ಜನಜೀವನ, ೩. ನಮ್ಮ ದೇಶದ ಚರಿತ್ರೆ ಇವೆ.

ನಮ್ಮ ಚರಿತ್ರೆಯಲ್ಲಿ ೨೨ ಅಧ್ಯಾಯಗಳನ್ನು ಒಳಗೊಂಡಿದ್ದು ಪುಟ ೬೪-೧೪೨ರವರೆಗೆ ಇವೆ.

ರಜಪೂತರ ಉದಯ, ಭಾರತಕ್ಕೆ ಮುಸಲ್ಮಾನರ ಪ್ರವೇಶ, ಘಜನಿ ಮಹಮ್ಮದ್, ದೆಹಲಿ ಸುಲ್ತಾನರು, ದೆಹಲಿ ಸುಲ್ತಾನರ ಕಾಲದಲ್ಲಿ ಹಿಂದುಸ್ತಾನದ ಪರಿಸ್ಥಿತಿ, ದಕ್ಷಿಣ ಭಾರತದ ಕೆಲವು ರಾಜ್ಯಗಳು-ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಬಹಮನಿ ಸಾಮ್ರಾಜ್ಯ, ಮೊಘಲ್ ಸಾಮ್ರಾಜ್ಯ, ಬಾಬರ್, ಹುಮಾಯೂನ್, ಶೇರ್‌ಶಹ, ಅಕ್ಬರ್, ಜಹಾಂಗೀರ್, ಶಹಜಾನ್, ಔರಂಗಜೇಬ್-ಮರಾಠರು, ಪೇಶ್ವೆಗಳು, ಸಿಖ್ಖರು, ಭಕ್ತ ಮಾರ್ಗದ ಬೋಧಕರ ಬಗ್ಗೆ ಪಾಠಗಳಿವೆ.

ಪಾಠಗಳಿಗೆ ಸೂಕ್ತವಾದ ಆಕರ್ಷಕ ಚಿತ್ರ, ನಕ್ಷೆಗಳು ಹೆಚ್ಚಿನ ಪ್ರಮಾಣದಲ್ಲಿಲ್ಲ. ಸಮಗ್ರ ಮಧ್ಯಭಾರತದ ಚರಿತ್ರೆಯಿಂದ ಕೂಡಿದೆ. ಈ ಪಠ್ಯವು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಹೊರೆಯೆನಿಸುವಂತಿವೆ. ಈ ಪಠ್ಯಪುಸ್ತಕ ಸಮಿತಿಯಲ್ಲಿ ಇದ್ದ ಸದಸ್ಯರು ಕಾಲೇಜು ಹಾಗೂ ಹೈಸ್ಕೂಲು ಬೋಧಕರಾಗಿದ್ದಾರೆ. ಇವರಿಗೆ ೬ನೇ ತರಗತಿ ಪಠ್ಯವನ್ನು ರಚಿಸುವಾಗ ಆ ಮಕ್ಕಳ ಕಲಿಕಾ ಸಾಮರ್ಥ್ಯದ ಕುರಿತು ಪ್ರಾಥಮಿಕ ಹಂತದ ಮಕ್ಕಳಿಗೆ ಬೋಧಿಸದ ಅವರು ಮಕ್ಕಳ

ಬೌದ್ಧಿಕ ಹಾಗೂ ಕಲಿಕಾ ಸಾಮರ್ಥ್ಯ ಹೇಗೆ ಅರಿಯಲು ಸಾಧ್ಯ ಎಂಬುದು ಪ್ರಶ್ನೆಯಾಗಿದೆ. ಪಠ್ಯವು ಅಕ್ಷರದೋಷಗಳಿಂದ ಕೂಡಿದೆ. ಉದಾಹರಣೆಗೆ ತುಘಲಕ್ ಎಂಬುದು ತಘಲಕ್ (ಪುಟ ೮೬) ಸಿಖ್ಖರು ಎಂಬುದು ಶೀಕರು (೧೪೦) ಮರಾಠ-ಮರಾಟ (೧೩೨) ಹೀಗೆ ಪಠ್ಯದ ಪ್ರತಿ ಅಧ್ಯಾಯದಲ್ಲೂ ಅಕ್ಷರದೋಷ ಕಂಡುಬರುತ್ತವೆ. ಇದು ರಾಜಕೀಯ ವಿಚಾರಗಳಿಗೆ ಹೆಚ್ಚು ಒತ್ತನ್ನು ನೀಡಿದ್ದು ಮಧ್ಯಕಾಲೀನ ದೆಹಲಿ, ಮೊಘಲ್ ಮುಂತಾದ ರಾಜಮನೆತಗಳ ಆಳ್ವಿಕೆ, ಕಲೆ ವಾಸ್ತುಶಿಲ್ಪದ ಕುರಿತ ವಿವರಣೆಗಳಿಂದ ಕೂಡಿದೆ. ಈ ತರಗತಿಯ ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸರಿಹೊಂದುವಂತೆ ಪಾಠಗಳ ಸಂಖ್ಯೆಯನ್ನು ಕಡಿಮೆಗೊಳಿಸಿ ಆ ಮನೆತನಗಳ ಆಡಳಿತಾತ್ಮಕ ವಿಚಾರಗಳಿಗೆ ಒತ್ತನ್ನು ಕೊಟ್ಟಿದ್ದರೆ ಒಳಿತಿತ್ತು.

೨. ಸಮಾಜ ಪರಿಚಯ ಪಾಠಗಳು ಎಂಬ ಶೀರ್ಷಿಕೆಯಡಿಯ ಪಠ್ಯದಲ್ಲಿ ಚರಿತ್ರೆ ಪಾಠಗಳನ್ನು ಅಳವಡಿಸಲಾಗಿದೆ.[೩೪] ಈ ಪಠ್ಯಪುಸ್ತಕ ರಚಿಸಲು ಎಸ್. ಹಾಲಪ್ಪ ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ಸಿ. ಹನುಮೇಗೌಡ, ಎಚ್.ಪಿ. ಪಾರ್ಥಸಾರಥಿ, ಆರ್. ರಾಮಚಂದ್ರಯ್ಯ, ಐ.ಬಿ. ಕಂಠಪ್ಪಗೌಡರ್ ಇವರು ಸಮಿತಿ ಸದಸ್ಯರಾಗಿದ್ದರು. ಈ ಪಠ್ಯವು ಕೂಡ ೩ ಭಾಗಗಳನ್ನು ಒಳಗೊಂಡಿದ್ದು ಮೊದಲ ಭಾಗದಲ್ಲಿ ನಮ್ಮ ದೇಶದ ಚರಿತ್ರೆ, ೨ನೇ ಭಾಗದಲ್ಲಿ ಭೂಗೋಳ, ೩ನೇ ಭಾಗದಲ್ಲಿ ಪೌರನೀತಿ ಪಾಠಗಳನ್ನು ಒಳಗೊಂಡಿದೆ. ನಮ್ಮ ಚರಿತ್ರೆ ಭಾಗದಲ್ಲಿ ರಾಷ್ಟ್ರಕೂಟ, ಹೊಯ್ಸಳ, ಚೋಳರು, ರಜಪೂತರು, ಪ್ರವಾದಿ ಮಹಮ್ಮದ್, ಗುಲಾಮಿ ಸಂತತಿ, ಖಿಲ್ಜಿ ಸಂತತಿ, ತುಘಲಕ್ ಸಂತತಿ, ಧಾರ್ಮಿಕ ಚಳುವಳಿಗಳು, ವಿಜಯನಗರ ಸಾಮ್ರಾಜ್ಯ, ಬಹುಮನಿ ರಾಜ್ಯ, ಮೊಘಲ್ ಚಕ್ರಾಧಿಪತ್ಯ ಹಾಗೂ ಮರಾಠರು ಎಂಬ ೯ ಅಧ್ಯಾಯಗಳಿಂದ ಕೂಡಿದೆ.

ಈ ಪಠ್ಯವು ಹಿಂದಿನ ಪಠ್ಯಕ್ಕಿಂತ ಭಿನ್ನವಾಗಿ ಇದೆ. ವಿಜಯನಗರ ಸಾಮ್ರಾಜ್ಯವನ್ನು ವಿಜಯನಗರದ ಹಿಂದೂ ಸಾಮ್ರಾಜ್ಯ ಎಂದು ಶೀರ್ಷಿಕೆ ನೀಡಲಾಗಿದೆ. ಪ್ರಾಯಶಃ ಇದಕ್ಕೆ ಇರಬಹುದಾದ ಕಾರಣಗಳು ಮುಸ್ಲಿಮರ ದಾಳಿಗೆ ಸಿಕ್ಕು ಮುಸ್ಲೀಮೇತರ ರಾಜ್ಯಗಳು ಜರ್ಜಿತಗೊಂಡಿದ್ದರಿಂದ ಮುಸ್ಲೀಮರ ವಿರುದ್ಧ ತಲೆ ಎತ್ತಿ ನಿಂತು ಮುಸ್ಲಿಮೇತರ ಅರಸರಿಗೆ ಆತ್ಮಸ್ಥೈರ್ಯವನ್ನು ತುಂಬುವ ಕಾರ್ಯವನ್ನು ವಿಜಯನಗರದ ಅರಸರು ಮಾಡಿದರು. ಈ ಹಿನ್ನೆಲೆಯಿಂದ ವಿಜಯನಗರದ ಹಿಂದೂ ಸಾಮ್ರಾಜ್ಯ ಎಂದು ಕರೆದಿರುವ ಸಾಧ್ಯತೆ ಹೆಚ್ಚಿದೆ. ಹಿಂದೂ ಎಂಬ ಪದವನ್ನು ಸೇರಿಸಿರುವುದು ಅಷ್ಟು ಸೂಕ್ತವಲ್ಲವೆನಿಸುತ್ತದೆ. ಕಾರಣ ಇಸ್ಲಾಂ ಧರ್ಮೀಯ ಮಕ್ಕಳಿಗೆ ಈ ಪದವು ಹೆಚ್ಚು ಮುಜುಗರ ಉಂಟುಮಾಡಬಲ್ಲದು ಹಾಗೂ ಮತೀಯ ಭಾವನೆಗಳನ್ನು ಮಕ್ಕಳ ಮೇಲೆ ಹೇರಿದಂತಾಗುವುದು. ವಿಜಯನಗರದ ಪಾಠದಲ್ಲಿ ವಿಜಯನಗರವನ್ನು ವರ್ಣನೆ ಮಾಡಿರುವ ಕ್ರಮವು ಈ ಕೆಳಗಿನಂತಿದೆ

'ಕರ್ನಾಟಕ ಸಂಸ್ಥಾನದ ಬಳ್ಳಾರಿ ಜಿಲ್ಲೆಯಲ್ಲಿ ಕರ್ನಾಟಕ ಭೂಮಾತೆಯ ಮುಕುಟದಂತಿರುವ ಹೇಮಕೂಟದ ಪರ್ವತ ಶ್ರೇಣಿಗಳ ಪ್ರದೇಶ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ತುಂಗಭದ್ರೆಯು ಈ ಪರ್ವತಗಳ ಮಧ್ಯೆ ನುಸುಳಿ ಮಂಜುಳಗಾನ ಮಾಡುತ್ತಾ ಹರಿಯುತ್ತದೆ...'[೩೫] ಈ ಪಠ್ಯದಲ್ಲಿರುವ

ರಾಜಮನೆತನಗಳ ರಾಜಕೀಯ, ಸಾಮಾಜಿಕ, ಸಾಹಿತ್ಯ, ಕಲೆ, ವಾಸ್ತುಶಿಲ್ಪಗಳ ಕುರಿತು ಮಾಹಿತಿ ನೀಡಿರುವುದು ಸೂಕ್ತವಾಗಿದೆ. ಈ ಪಠ್ಯದಲ್ಲಿಯೂ ಅಲ್ಲಲ್ಲಿ ಅಕ್ಷರದೋಷಗಳು ಕಂಡುಬರುತ್ತವೆ. ಇದು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸೂಕ್ತವಾಗಿದ್ದು ಕೆಲವೇ ಕೆಲವು ಚಿತ್ರಗಳನ್ನು ಹೊಂದಿದೆ.

ದಕ್ಷಿಣ ಭಾರತದಲ್ಲಿದ್ದ ಧಾರ್ಮಿಕ ಸುಧಾರಕರಾದ ಶಂಕರ, ರಾಮಾನುಜರ ಬಗ್ಗೆ ತಿಳಿಸಲಾಗಿದೆಯಾದರೂ ಮಧ್ವಚಾರ್ಯರನ್ನು ಪಠ್ಯದೊಳಗೆ ಪ್ರಸ್ತಾಪಿಸಿಲ್ಲ. ಇದರಿಂದ ಆಚಾರ್ಯತ್ರಯರ ಕುರಿತ ಮಾಹಿತಿ ಮಕ್ಕಳಿಗೆ ಸಂಪೂರ್ಣವಾಗಿ ದೊರೆಯಲು ಸಾಧ್ಯವಾಗುವುದಿಲ್ಲ.

೩. ೧೯೯೪ರಲ್ಲಿ ೬ನೇ ತರಗತಿಗೆ ಸಮಾಜ ವಿಜ್ಞಾನ ಎಂಬ ಪಠ್ಯವನ್ನು ಇರಿಸಲಾಗಿದೆ.[೩೬] ಈ ಪಠ್ಯಪುಸ್ತಕವು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ತಯಾರಿಸಿದ ಪಠ್ಯವಾಗಿದೆ. ಈ ಪಠ್ಯವು ೧೭ ಅಧ್ಯಾಯಗಳನ್ನು ಹೊಂದಿದೆ. ೧-೮ರವರೆಗಿನ ಅಧ್ಯಾಯಗಳು ಚರಿತ್ರೆಗೆ ಸಂಬಂಧಿಸಿದ ಅಧ್ಯಾಯಗಳಾಗಿವೆ.

೧. ಭಾರತ ಮತ್ತು ಪ್ರಪಂಚ, ೨. ರಜಪೂತರ ಇತಿಹಾಸ ಮತ್ತು ಸಂಸ್ಕೃತಿ, ೩. ದಕ್ಷಿಣ ಭಾರತದ ರಾಜ್ಯಗಳು(ಕ್ರಿಶ ೮೦೦-೧೩೦೦), ೪. ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣಾ ಚಳುವಳಿಗಳು, ೫. ದೆಹಲಿ ಸುಲ್ತಾನರು, ೬. ಬಹುಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳು, ೭ ಭಕ್ತಿ ಮತ್ತು ಸೂಫಿ ಚಳುವಳಿಗಳು, ೮. ಮೊಘಲರು ಎಂಬ ಪಾಠಗಳಿವೆ

ಅಧ್ಯಾಯ ೧ರಲ್ಲಿ ಮಧ್ಯಕಾಲೀನ ಇತಿಹಾಸ ಅರಿಯಲು ಇರುವ ಆಧಾರಗಳ ಬಗ್ಗೆ ತಿಳಿಸಿರುವುದು ಸೂಕ್ತವೆನಿಸುತ್ತದೆ. ಮುಂದುವರೆದು ಏಷ್ಯಾದಲ್ಲಾದ ಬದಲಾವಣೆಗಳು, ಯುರೋಪಿನಲ್ಲಿಯ ಬೆಳವಣಿಗೆಗಳು, ಊಳಿಗಮಾನ್ಯ ಪದ್ಧತಿ, ಧಾರ್ಮಿಕ ಯುದ್ಧಗಳು, ಖಲೀಫರ ಪತನ, ವ್ಯಾಪಾರಿ ಮಾರ್ಗಗಳ ಪತನ ವಿಷಯಗಳ ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ೨ರಲ್ಲಿ ರಜಪೂತರ ಇತಿಹಾಸ ಮತ್ತು ಸಂಸ್ಕೃತಿ ಎಂಬ ಪಾಠದಲ್ಲಿ ರಜಪೂತರ ಪಂಗಡಗಳು ೪ ಇವೆಯಂದು ತಿಳಿಸಲಾಗಿದೆ. ಆದರೆ ವಾಸ್ತವವಾಗಿ ರಜಪೂತರ ಪಂಗಡಗಳು ೫ ಇವೆ.

ಈ ವಂಶದ ಅರಸರ ಕುರಿತ ಸಂಕ್ಷಿಪ್ತ ಪರಿಚಯ ನೀಡಿದ್ದರೆ ಸೂಕ್ತವಿತ್ತು. ಆದರೆ ಅವರ ಸಾಮಾಜಿಕ ಹಾಗೂ ಆರ್ಥಿಕ, ಸಾಹಿತ್ಯ, ವಾಸ್ತುಶಿಲ್ಪ ಇತ್ಯಾದಿಗಳ ಕುರಿತು ತಿಳಿಸಲಾಗಿದೆ.

ಅಧ್ಯಾಯ ೩ರಲ್ಲಿ ದಕ್ಷಿಣ ಭಾರತದ ರಾಜ್ಯಗಳಲ್ಲಿ ಚೋಳ ಮನೆತನದ ಆಡಳಿತ, ಕಲೆ ಇತ್ಯಾದಿಗಳ ಕುರಿತು ತಿಳಿಸಲಾಗಿದೆ. ಆದರೆ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರು, ಹೊಯ್ಸಳರ ಆಡಳಿತ, ಕಲೆ ವಾಸ್ತುಶಿಲ್ಪದ ಕುರಿತು ಹೆಚ್ಚಿನ ಮಹತ್ವ ಪಠ್ಯದಲ್ಲಿಲ್ಲ.

ಅಧ್ಯಾಯ ೪ರಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಕರಲ್ಲಿ ಶಂಕರ, ರಾಮಾನುಜ, ಮಧ್ವಚಾರ್ಯ ಮತ್ತು ಬಸವೇಶ್ವರರ ಜೀವನ ತತ್ವಗಳ ಬಗ್ಗೆ ಹೇಳಲಾಗಿದೆ. ಈ ಹಿಂದಿನ ಪಠ್ಯಪುಸ್ತಕದಲ್ಲಿ ಮಧ್ವಚಾರ್ಯ, ಬಸವಣ್ಣನವರನ್ನು ಕೈ ಬಿಡಲಾಗಿತ್ತು. ಹಿಂದೆ ಬಿಟ್ಟುಹೋದವರ ಕುರಿತು ಈ ಪಠ್ಯದಲ್ಲಿ ಸೇರ್ಪಡೆಗೊಳಿಸಿರುವುದು ಕಂಡುಬರುತ್ತದೆ. ಶಂಕರ, ರಾಮಾನುಜ,

ಮಧ್ವರ ಜನ್ಮಸ್ಥಳ ಹಾಗೂ ಕಾಲಮಾನವನ್ನು ತಿಳಿಸಿದೆಯಾದರೂ ಆ ರೀತಿಯ ಮಾಹಿತಿಗಳನ್ನು ಬಸವಣ್ಣನ ವಿಚಾರದಲ್ಲಿ ನೀಡದಿರುವುದು ಕಂಡುಬರುತ್ತದೆ. ವೀರಶೈವ ಧರ್ಮದ ಉಲ್ಲೇಖವೂ ಇಲ್ಲ.

ಅಧ್ಯಾಯ ೬ರಲ್ಲಿ ವಿಜಯನಗರ ಸಾಮ್ರಾಜ್ಯದ ಕುರಿತು ಹೇಳುವಾಗ ಕೃಷ್ಣದೇವರಾಯ ಹಾಗೂ ಸಾಮ್ರಾಜ್ಯದ ಅವನತಿ ಕುರಿತು ಮಾತ್ರ ತಿಳಿಸಲಾಗಿದೆ.

ಅಧ್ಯಾಯ ೭ರಲ್ಲಿ ಸೂಫಿ ಸಂತರ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಮೊಘಲರ ಪ್ರಮುಖ ಅರಸರ ರಾಜಕೀಯ ಸಾಧನೆಯ ಕುರಿತು ಹೇಳಲಾಗಿದೆ.

ಈ ಪಠ್ಯಪುಸ್ತಕ ರಚಿಸಲು ಡಾ. ಆರ್. ರಾಮಕೃಷ್ಣನ್ ಅಧ್ಯಕ್ಷರಾಗಿದ್ದು ಸದಸ್ಯರಾಗಿ ಸಂದೀಪಶಾಸ್ತ್ರಿ, ಸಿಸ್ಟರ್ ಎಂ. ಸೆಲ್ವಿಟ್, ಎಸ್.ಪಿ. ಭಾಗ್ಯಮ್ಮ, ವೈ. ಸಂಜೀವರಾವ್‌ರವರಿದ್ದರು. ಇವರೆಲ್ಲಾ ಉಪನ್ಯಾಸಕರಾದವರಾಗಿದ್ದರು. ಒಬ್ಬೇ ಒಬ್ಬ ಪ್ರಾಥಮಿಕ ಹಂತದ ಶಿಕ್ಷಕನನ್ನು ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ನೇಮಿಸಿಕೊಳ್ಳದಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ.

ಈ ಪಠ್ಯವು ಹಿಂದಿನ ಪಠ್ಯಕ್ಕಿಂತ ಸುಧಾರಣೆಗೊಂಡ ಪಠ್ಯವಾಗಿ ಕಂಡುಬರುತ್ತದೆ. ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಪೂರಕವಾಗಿದೆ. ಅಕ್ಷರದೋಷಗಳು ಇದರಲ್ಲಿ ಕಂಡುಬರುವುದಿಲ್ಲ. ಆದರೆ ನಕ್ಷೆ ಹಾಗೂ ಆಕರ್ಷಕ ಚಿತ್ರಗಳ ಕೊರತೆ ಕಂಡುಬರುತ್ತದೆ.

೪. ೨೦೦೮ರಲ್ಲಿ ೬ನೇ ತರಗತಿಗೆ ಸಮಾಜ ವಿಜ್ಞಾನ ಎನ್ನುವ ಪಠ್ಯವನ್ನು ಇರಿಸಲಾಗಿದೆ. ಇದರಲ್ಲಿ ೩ ಭಾಗಗಳಿದ್ದು ಮೊದಲ ಭಾಗದಲ್ಲಿ ಇತಿಹಾಸ, ೨ನೇ ಭಾಗದಲ್ಲಿ ಪೌರನೀತಿ, ೩ನೇ ಭಾಗದಲ್ಲಿ ಭೂಗೋಳ ಎಂದಿವೆ. ಈ ಪಠ್ಯಪುಸ್ತಕ ರಚನಾ ಸಮಿತಿಯ ಹೆಸರು ಪುಸ್ತಕದಲ್ಲಿ ಕಂಡುಬರುವುದಿಲ್ಲ. ಇತಿಹಾಸಕ್ಕೆ ಅಧ್ಯಾಯಗಳು ೧–೯ರವರೆಗಿವೆ.

೧ ಮಧ್ಯಯುಗೀನ ಭಾರತ, ದಕ್ಷಿಣ ಭಾರತದಲ್ಲಿ ಮಧ್ಯಕಾಲದ ಆರಂಭ, ಮತಧರ್ಮ ಮತ್ತು ಸಮಾಜ ಸುಧಾರಕರು, ದೆಹಲಿ ಸುಲ್ತಾನರು, ಮದ್ಯಕಾಲೀನ ಭಕ್ತಿಪಂಥಗಳು, ವಿಜಯನಗರ ಸಾಮ್ರಾಜ್ಯ, ಬಹಮನಿ ಸುಲ್ತಾನರು, ಮೊಘಲ ಸಾಮ್ರಾಟರು, ಛತ್ರಪತಿ ಶಿವಾಜಿ ಪಾಠಗಳಿವೆ.[೩೭] ಮಧ್ಯಯುಗದ ಭಾರತ ಎಂಬ ಅಧ್ಯಾಯದಲ್ಲಿ ಮಧ್ಯಕಾಲವೆಂದರೆ ಯಾವುದೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ರಜಪೂತರ ವಿವಿಧ ಪಂಗಡಗಳು, ಪ್ರಮುಖ ರಾಜರು, ಅವರ ಸಂಸ್ಕೃತಿ, ಸಮಾಜ, ಧರ್ಮ ಸಾಹಿತ್ಯದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಇದರಲ್ಲಿ ವಾಕ್ಯ, ಅಕ್ಷರ ದೋಷಗಳು ಕಂಡುಬರುವುದಿಲ್ಲ. ಇತಿಹಾಸದ ಪ್ರಮುಖ ಘಟನೆಗಳ ಕಾಲಗಳನ್ನು ತಿಳಿಸಿದ್ದು ಸೂಕ್ತವಾಗಿವೆ. ಕೋಮುಭಾವನೆಗೆ ದಕ್ಕೆ ತರುವಂತಹ ಅಂಶಗಳು ಇದರಲ್ಲಿಲ್ಲ. ಆಕರ್ಷಕವಾದ ಕಪ್ಪು ಬಿಳುಪು ಚಿತ್ರಗಳನ್ನು ನೀಡಲಾಗಿದೆ.

ಪಾಠ–೩ರ ಮತಧರ್ಮ ಮತ್ತು ಸಮಾಜ ಸುಧಾರಕರು ಎಂಬ ಶೀರ್ಷಿಕೆ ಸ್ಪಷ್ಟತೆಯಿಂದ ಕೂಡಿಲ್ಲವೆನಿಸುತ್ತದೆ.

೫. ಸಮಾಜ ವಿಜ್ಞಾನ ಎಂಬ ಶೀರ್ಷಿಕೆಯಡಿಯ ಸೆಮಿಸ್ಟರ್ ಪದ್ಧತಿಯ ಕೋರ್ ಸಬ್ಜೆಕ್ಟ್ ಪಠ್ಯದಲ್ಲಿ ಚರಿತ್ರೆ ಪಾಠಗಳನ್ನು ಅಳವಡಿಸಲಾಗಿದೆ.[೩೮] ಈ ಪಠ್ಯಪುಸ್ತಕ ಪರಿಷ್ಕರಣಾ ಸಮಿತಿಯಲ್ಲಿ ಕುಮಾರ್ ಪಿ.ಎ, ಸಿಸ್ಟರ್ ಎಂ. ಸಿಲ್ವೆಟ್, ರಾಮಕೃಷ್ಣರಾವ್ ಎರಮಾಳು, ಸುಲೋಚನಾಬಾಯಿ, ಮಂಜುಳ ಎ, ರೇವತಿ ಎಚ್ ಡಿ, ಶೈಲಕುಮಾರಿ, ಸುಧೀಂದ್ರ ಸಿ.ಎನ್. ಶಾಂತಿ ಲೋಬೊ ಸದಸ್ಯರಾಗಿದ್ದಾರೆ.

ಹಿಂದಿನ ಪಠ್ಯಪುಸ್ತಕದ ಪಾಠಗಳನ್ನೇ ಸೆಮಿಸ್ಟರ್ ಪದ್ಧತಿಗೆ ಹೊಂದಾಣಿಕೆ ಮಾಡಲಾಗಿದೆ. ಮೊದಲ ಸೆಮಿಸ್ಟರ್‌ನಲ್ಲಿ ಮಧ್ಯಯುಗದ ಆರಂಭ-ಉತ್ತರ ಭಾರತ, ಯುಗದ ಆರಂಭ- ದಕ್ಷಿಣ ಭಾರತ, ಮತಧರ್ಮ ಮತ್ತು ಸಮಾಜ ಸುಧಾರಕರು, ದೆಹಲಿ ಸುಲ್ತಾನರು ಎಂಬ ಪಾಠಗಳಿವೆ. ೨ನೇ ಸೆಮಿಸ್ಟರಿನಲ್ಲಿ ಮಧ್ಯಕಾಲೀನ ಭಕ್ತಿ ಪಂಥಗಳು, ವಿಜಯನಗರ ಸಾಮ್ರಾಜ್ಯ, ಬಹಮನಿ ಸುಲ್ತಾನರು, ಮೊಘಲ್ ಸಾಮ್ರಾಟರು, ಛತ್ರಪತಿ ಶಿವಾಜಿ ಎಂಬ ಪಾಠಗಳಿವೆ.

ಪಾಠಗಳು ಬದಲಾಗದಿದ್ದರೂ ಆಕರ್ಷಕ ವರ್ಣಮಯ ಚಿತ್ರಗಳು ನಕ್ಷೆಗಳಿಂದ ಪಠ್ಯಪುಸ್ತಕ ಕೂಡಿದೆ. ಹಾಗೆಯೇ ಪಠ್ಯದ ವಿಷಯ ನಿರೂಪಣೆ ಹೆಚ್ಚು ಸರಳಗೊಂಡಿದೆ, ಮಕ್ಕಳ ಓದಿಗೆ ಅನುಕೂಲವಾಗುವಂತೆ ಅಭ್ಯಾಸ ಪಠ್ಯವನ್ನು ಅಳವಡಿಸಲಾಗಿದೆ. ಘಟಕದ ಶೀರ್ಷಿಕೆ ಉಪಶೀರ್ಷಿಕೆಗೆ ವಿದ್ಯಾರ್ಥಿಗಳನ್ನು ಆಕರ್ಷಿಸಲು ಬಣ್ಣಗಳಿಂದ ಕೂಡಿವೆ. ಅಕ್ಷರದೋಷದಿಂದ ಪುಸ್ತಕವು ಹೊರತಾಗಿರುವಂತೆ ನೋಡಿಕೊಳ್ಳಲಾಗಿದೆ.

ಮುಖಪುಟವನ್ನೂ ಸಹ ಆಕರ್ಷಕವಾಗಿ ರಚಿಸಲಾಗಿದೆ. ಒಟ್ಟಾರೆಯಾಗಿ ಗುಣಮಟ್ಟದ ಮುದ್ರಣದಿಂದ ಕೂಡಿದೆ.

**೫.೫.೩. ೭ನೇ ತರಗತಿ ಚರಿತ್ರೆ ಪಠ್ಯಪುಸ್ತಕಗಳು**

೧೯೬೫ರಲ್ಲಿ ೬ನೇ ತರಗತಿಯ ಮಕ್ಕಳಿಗೆ ಸಚಿತ್ರ ಸಾಮಾಜಿಕ ಅಭ್ಯಾಸ ಎಂಬ ಶೀರ್ಷಿಕೆಯಡಿಯಲ್ಲಿ ಚರಿತ್ರೆ ಪಾಠಗಳನ್ನು ಅಳವಡಿಸಲಾಗಿದೆ.[೩೯] ಈ ಪಠ್ಯಪುಸ್ತಕವನ್ನು ಎ.ಜಿ. ಕುಲಕರ್ಣಿ ಮತ್ತು ಎಸ್.ಎಂ. ಮಲಕಾಯಿ ರಚಿಸಿದ್ದಾರೆ. ಈ ಪಠ್ಯವು ಮೈಸೂರು ಸರ್ಕಾರದ ಹೊಸ ಅಭ್ಯಾಸ ಪಠ್ಯವನ್ನು ಅನುಸರಿಸಿ ಇರಿಸಲಾಗಿದೆ. ಇದರಲ್ಲಿ ೩ ಭಾಗಗಳಿದ್ದು ೧ನೇ ಭಾಗದಲ್ಲಿ ಭೂವಿವರಣೆ ಅಭ್ಯಾಸ, ೨ನೇ ಭಾಗದಲ್ಲಿ ಭಾರತೀಯರ ಚರಿತ್ರೆ, ೩ನೇ ಭಾಗದಲ್ಲಿ ಭಾರತೀಯ ಸಂವಿಧಾನ ಎಂದಿದೆ.

ಭಾಗ-೨ರ ಚರಿತ್ರೆಗೆ ಸಂಬಂಧಿಸಿದ ಪಠ್ಯದಲ್ಲಿ ೧. ಭಾರತಕ್ಕೆ ಬರಲು ಜಲಮಾರ್ಗದ ಶೋಧ, ೨. ಭಾರತದಲ್ಲಿ ಯುರೋಪಿನ ರಾಷ್ಟ್ರಗಳ ಮೇಲಾಟ, ೩. ಬ್ರಿಟಿಷ್ ಪ್ರಭುತ್ವ-ಪ್ರಸ್ತಾಪನೆ, ಅಭಿವೃದ್ಧಿ, ೪. ಬ್ರಿಟಿಷರ ಆಳ್ವಿಕೆಯಿಂದಾದ ಬದಲಾವಣೆಗಳು, ೫. ಭಾರತೀಯರ ಸ್ವಾತಂತ್ರ್ಯ ಚಳುವಳಿಯ ಕಥೆ, ೬. ಪ್ರಥಮ ಜಾಗತಿಕ ಯುದ್ಧ ಮತ್ತು ರಾಷ್ಟ್ರ ಸಂಘ, ೭. ದ್ವಿತೀಯ ಜಾಗತಿಕ ಯುದ್ಧ ಮತ್ತು ಸಂಯುಕ್ತ ರಾಷ್ಟ್ರ ಸಂಘ, ೮. ಸ್ವಾತಂತ್ರ್ಯ ನಂತರದ ೧೭ ವರ್ಷಗಳು ಎಂಬ ಪಾಠಗಳಿವೆ.

ಬ್ರಿಟಿಷ್ ಪ್ರಭುತ್ವ ಎಂಬ ಪಾಠದಲ್ಲಿ ಪ್ಲಾಸಿ ಕದನ, ಬಕ್ಸರ್ ಕದನಗಳ ಬಗ್ಗೆ ಮಕ್ಕಳಿಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಅದರಲ್ಲಿ ಬ್ರಿಟಿಷರ ಪ್ರಭುತ್ವ ಸ್ಥಾಪನೆಯ ಹಿನ್ನೆಲೆಯಲ್ಲಿ ಅವರು ಭಾರತದ ವಿವಿಧ ರಾಜ್ಯಗಳೊಂದಿಗೆ ಮಾಡಿದ ಯುದ್ಧಗಳ ಬಗ್ಗೆ ತಿಳಿಸಲಾಗಿದೆ. ಬ್ರಿಟಿಷರ ಗವರ್ನರ್‌ಗಳನ್ನು ಮುಖ್ಯವಾಗಿ ಬಿಂಬಿಸಿ ಅವರ ಸಾಧನೆಗಳ ಅಡಿಯಲ್ಲಿ ಚರಿತ್ರೆ ಕಟ್ಟುವ ಕೆಲಸವನ್ನು ಮಾಡಲಾಗಿದೆ.

ಬ್ರಿಟಿಷರ ಆಳ್ವಿಕೆಯಿಂದಾದ ಬದಲಾವಣೆಗಳು ಎಂಬ ಅಧ್ಯಾಯದಲ್ಲಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಬದಲಾವಣೆಗಳ ಕುರಿತು ತಿಳಿಸಲಾಗಿದೆ. ಶೈಕ್ಷಣಿಕ ಬದಲಾವಣೆ ಕುರಿತು ತಿಳಿಸುವಾಗ ಬ್ರಿಟಿಷರು ಬರುವ ಪೂರ್ವದಲ್ಲಿ ವಿಜ್ಞಾನ, ಗಣಿತ, ಭೂಗೋಳ, ಇತಿಹಾಸ, ಸಾಮಾನ್ಯ ವಿಜ್ಞಾನ ಮೊದಲಾದ ವಿಷಯಗಳ ವಿಚಾರ ಆಗ ಇರಲಿಲ್ಲ ಎಂದು ಬರೆಯಲಾಗಿದೆ. ಬ್ರಿಟಿಷರು ಬರುವ ಪೂರ್ವದಲ್ಲಿ ಭಾರತೀಯರಿಗೆ ವಿಜ್ಞಾನದ ತಿಳುವಳಿಕೆಯೇ ಇರಲಿಲ್ಲ, ಅಜ್ಞಾನಾವಸ್ಥೆಯಲ್ಲಿದ್ದರು ಎಂದು ಬರೆಯಲಾಗಿದೆ.[೨೦] ಭಾರತೀಯರು ವಿಜ್ಞಾನಕ್ಕೆ ನೀಡಿದ ಕೊಡುಗೆ ಅಪಾರವಾದುದು. ಭಾಸ್ಕರ, ಭಟ್ಟಾಚಾರ್ಯ, ಕಲಾವತಿಯಂಥವರು ತುಂಬಾ ಹಿಂದೆಯೇ ಖಗೋಳ ವಿಜ್ಞಾನಿಗಳೆಂದು ಗುರುತಿಸಲ್ಪಟ್ಟಿದ್ದರು. ವಿಜ್ಞಾನಕ್ಕೆ ಭಾರತೀಯರು ಸೊನ್ನೆಯನ್ನು ಕೊಡುಗೆಯಾಗಿ ನೀಡಿದ್ದಾರೆ. ಗ್ರಹಣ, ಅಮವಾಸ್ಯೆ ಹುಣ್ಣಿಮೆ, ಸೂರ್ಯನ ಚಲನೆ ಮುಂತಾದ ವಿಚಾರಗಳನ್ನು ಭಾರತೀಯರು ಕರಾರುವಾಕ್ಕಾಗಿ ಅರಿತವರಾಗಿದ್ದರು. ರಸವಿದ್ಯೆಯಲ್ಲಿ ಪ್ರವೀಣರಾದ ಭಾರತೀಯರು ರಸಾಯನಶಾಸ್ತ್ರ ಬಲ್ಲವರಾಗಿದ್ದರು ಆದರೂ ಕೂಡ ಸ್ವಾತಂತ್ರ್ಯ ದೊರೆತ ತರುವಾಯ ಕೂಡ ಭಾರತೀಯರಿಗೆ ಅವಹೇಳನ ಮಾಡುವ ರೀತಿಯ ಹೇಳಿಕೆಗಳನ್ನು ಲೇಖಕರು ಹೇಳಿರುವುದನ್ನು ನೋಡಿದರೆ ಅವರಿನ್ನೂ ವಸಾಹತುಶಾಹಿಯ ಪೂರ್ವಗ್ರಹದಿಂದಲೇ ಬಳಲುತ್ತಿದ್ದರೆನಿಸುತ್ತದೆ.

ಭಾರತೀಯರ ಸ್ವಾತಂತ್ರ್ಯ ಚಳುವಳಿಯ ಕಥೆ ಎಂಬುವ ಪಾಠದಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣವಾದ ಅಂಶಗಳು ದಂಗೆಯ ಗತಿ, ಪರಿಣಾಮಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ನಂತರ ಸ್ವಾತಂತ್ರ್ಯ ಚಳುವಳಿಯ ಹಂತಗಳನ್ನು ಘಟನೆಗಳ ರೀತಿಯಲ್ಲಿ ತಿಳಿಸಲಾಗಿದೆ.

ಪ್ರಥಮ ಜಾಗತಿಕ ಯುದ್ಧ ಮತ್ತು ರಾಷ್ಟ್ರ ಸಂಘ ಎಂಬ ಪಾಠದಲ್ಲಿ ೧ನೇ ಮಹಾಯುದ್ಧದಲ್ಲಿ ಬ್ರಿಟಿಷರ ಪರವಾಗಿ ಹೋರಾಡಿದ ಭಾರತೀಯ ಸೈನ್ಯದ ಸಂಖ್ಯೆಯನ್ನು ನೀಡಲಾಗಿದ್ದು ಯುದ್ಧದ ಸಂಕ್ಷಿಪ್ತ ಕಾರಣಗಳನ್ನು ತಿಳಿಸಲಾಗಿದೆ

೨ನೇ ಜಾಗತಿಕ ಯುದ್ಧ ಮತ್ತು ಸಂಯುಕ್ತ ರಾಷ್ಟ್ರ ಸಂಘ ಪಾಠದಲ್ಲಿ ೨ನೇ ಜಾಗತಿಕ ಯುದ್ಧದ ಕಾರಣಗಳು ಮತ್ತು ಪರಿಣಾಮಗಳ ಬಗ್ಗೆ ತಿಳಿಸಲಾಗಿದೆ. ೨ನೇ ಜಾಗತಿಕ ಯುದ್ಧದಲ್ಲಿ ಸುಭಾಷಚಂದ್ರ ಭೋಸ್‌ರ ಸಾಹಸವನ್ನು ತಿಳಿಸುತ್ತ ಭೋಸ್‌ರು ಬರ್ಮಾದಲ್ಲಿ ಬ್ರಿಟಿಷ್ ಸೈನ್ಯ ಪಡೆಯನ್ನು ಸೋಲಿಸಿ ಹಿಮ್ಮೆಟ್ಟಿಸಿದ ವಿಚಾರವನ್ನು ಉಲ್ಲೇಖಿಸಲಾಗಿದೆ. ಈ ರೀತಿಯ ಅಂಶಗಳನ್ನು ಮಕ್ಕಳಿಗೆ ತಿಳಿಸಿಕೊಟ್ಟಿರುವುದು ಶ್ಲಾಘನೀಯ ವಿಚಾರವೇ ಸರಿ.

ಸ್ವಾತಂತ್ರ್ಯದ ನಂತರದ ೧೭ ವರ್ಷಗಳು ಪಾಠದಲ್ಲಿ ಸ್ವಾತಂತ್ರ್ಯ ನಂತರ ಭಾರತ ಎದುರಿಸಿದ ಸಮಸ್ಯೆಗಳನ್ನು ತಿಳಿಸಲಾಗಿದೆ. ಸಂಸ್ಥಾನಗಳ ವಿಲೀನೀಕರಣ ಮತ್ತು ಪುನಾರಚನೆಗಳ

ಬಗ್ಗೆ ತಿಳಿಸುವ ಪ್ರಯತ್ನ ನಡೆದಿದೆ. ಒಟ್ಟಾರೆಯಾಗಿ ಪಠ್ಯವನ್ನು ನೋಡಿದಾಗ ಪಠ್ಯವು ಇಸ್ವಿಗಳನ್ನು ಸ್ಪಷ್ಟವಾಗಿ ಕಾಣುವಂತೆ ನೀಡಿದ್ದರೆ ಒಳಿತು ಎನಿಸುತ್ತದೆ. ಮಕ್ಕಳಿಗೆ ಪಠ್ಯವು ಹೊರೆಯಾಗುವಷ್ಟು ಇರಿಸಿದ್ದಾರೆನಿಸುತ್ತದೆ.

ಮುಖಪುಟದಲ್ಲಿ ಬಸವೇಶ್ವರ, ಬುದ್ಧನ ಚಿತ್ರಗಳು ಯಾವ ಉದ್ದೇಶದ ಹಿನ್ನೆಲೆಯಲ್ಲಿರಿಸಿದ್ದಾರೆ ಎಂಬುದು ತಿಳಿದುಬರುವುದಿಲ್ಲ.

೨. ಇದೇ ಸಂದರ್ಭದಲ್ಲಿ ಬಾಗಲಕೋಟೆಯ ಕರ್ನಾಟಕ ಪಬ್ಲಿಕೇಶನ್ನಿನವರು ಸಮಾಜ ಪರಿಚಯ ಪಾಠಗಳು ಎಂಬ ಮೈಸೂರು ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಮಂಜೂರಾದ ಪಠ್ಯಪುಸ್ತಕವನ್ನು ಇರಿಸಲಾಗಿದೆ. ಇದನ್ನು ಕೆ.ವಿ. ಸುಬ್ಬರಾವ್, ಬಿ.ಎ. ಬಿಜ್ಜಳ ಎಂಬುವವರು ಬರೆದಿದ್ದಾರೆ.[೯] ಮೇಲೆ ತಿಳಿಸಿದ ಪಠ್ಯಗಳೇ ಇಲ್ಲಿಯೂ ಇದ್ದರೂ ಕೂಡ ಅವು ಸಂಕ್ಷಿಪ್ತ ರೂಪದಲ್ಲಿವೆ ಎನಿಸುತ್ತದೆ. ಈ ಪಠ್ಯವನ್ನು ಬೆಳಗಾವಿ ಮತ್ತು ನಾರ್ಥ್ ಕೆನರಾದ ಭಾಗಗಳಿಗೆ ನಿಗದಿಗೊಳಿಸಲಾಗಿತ್ತು. ಈ ಪಠ್ಯಪುಸ್ತಕಗಳನ್ನು ಗಮನಿಸಿದರೆ ವಿಭಾಗವಾರು ಬೇರೆ ಬೇರೆ ಪಠ್ಯಪುಸ್ತಕಗಳನ್ನು ಇರಿಸಿರುವುದು ಕಂಡುಬರುತ್ತದೆ.

ಈ ಪಠ್ಯದಲ್ಲಿ ಆಧುನಿಕ ಕಾಲದಲ್ಲಿ ಭಾರತ ಎಂಬ ಶಿರೋನಾಮೆಯಡಿ ಚರಿತ್ರೆ ಪಠ್ಯಗಳನ್ನು ಇರಿಸಲಾಗಿದೆ.

೧. ಪ್ರಸ್ತಾವನೆ, ೨. ಭಾರತಕ್ಕೆ ಯುರೋಪಿಯನ್ನರ ಆಗಮನ, ೩. ಭಾರತದಲ್ಲಿ ಐರೋಪ್ಯ ರಾಷ್ಟ್ರಗಳ ಏರಾಟ, ೪. ಭಾರತದಲ್ಲಿ ಕಂಪನಿಯ ರಾಜ್ಯ ವಿಸ್ತಾರ ೫. ಬ್ರಿಟಿಷರ ಕಾಲದಲ್ಲಿಯ ಭಾರತ ಸಮಾಜ, ೬. ಭಾರತ ಸ್ವಾತಂತ್ರ್ಯ ಯುದ್ಧ ೭. ಸ್ವಾತಂತ್ರ್ಯ ನಂತರದ ಮೊದಲ ೧೦ ವರ್ಷಗಳು ಎಂಬ ಪಾಠಗಳಿವೆ. ಭಾರತಕ್ಕೆ ಯುರೋಪಿನವರ ಆಗಮನ ಎಂಬ ಅಧ್ಯಾಯದಲ್ಲಿ ೧೫ನೇ ಶತಮಾನದಲ್ಲಿ ಭಾರತ ಮತ್ತು ಐರೋಪ್ಯಗಳ ನಡುವಣ ವ್ಯಾಪಾರ ಇದ್ದಕ್ಕಿದ್ದಂತೆ ಕಟ್ಟಾಯಿತು, ಇದಕ್ಕೆ ಪ್ರಮುಖ ಕಾರಣ ಪಶ್ಚಿಮ ಏಷ್ಯಾ ರಾಷ್ಟ್ರಗಳ ಒಡೆತನ ತುರ್ಕರ ಅಧೀನದಲ್ಲಿ ಬಂದದು. ಇದಕ್ಕೆ ಬದಲಾಗಿ ಕ್ರಿ.ಶ. ೧೪೫೩ರಲ್ಲಿ ಅಟೋಮನ್ ಟರ್ಕರು ಕಾನ್‌ಸ್ಟಾಂಟೀನ್‌ನೋಪಲ್ ನಗರವನ್ನು ವಶಪಡಿಸಿಕೊಂಡಿದ್ದರಿಂದ ಭೂಮಾರ್ಗ ಮುಚ್ಚಲ್ಪಟ್ಟಿತು ಎಂದು ತಿಳಿಸಿದ್ದರೆ ಒಳಿತಿತ್ತು. ಇದೇ ಅಧ್ಯಾಯದಲ್ಲಿ ಪೋರ್ಚುಗೀಸರ ನಾವಿಕರು ಹಿಂದೂ ಸಾಗರವನ್ನು ದಾಟಿ ಭಾರತಕ್ಕೆ ಬಂದರು ಎಂದಿದೆ. ಇದನ್ನು ಹಿಂದೂ ಮಹಾಸಾಗರವೆಂದು ತಿಳಿಸಿದ್ದರೆ ಒಳಿತಿತ್ತು. ಭಾರತದಲ್ಲಿ ಐರೋಪ್ಯ ರಾಷ್ಟ್ರಗಳ ಏರಾಟ ಎಂಬ ಪಾಠದಲ್ಲಿ ಬ್ರಿಟಿಷರು ಸಾಮ್ರಾಜ್ಯ ಸ್ಥಾಪನೆಗಾಗಿ ನಡೆಸಿದ ಯುದ್ಧಗಳ ಬಗ್ಗೆ ತಿಳಿಸಲಾಗಿದೆ. ಭಾರತದಲ್ಲಿ ಕಂಪನಿ ರಾಜ್ಯ ವಿಸ್ತಾರ ಎಂಬಲ್ಲಿ ಪ್ಲಾಸಿ, ಬಕ್ಸರ್ ಕದನಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಆಂಗ್ಲೋ ಮರಾಠ ಯುದ್ಧಗಳು, ಆಂಗ್ಲೋ ಮೈಸೂರು ಯುದ್ಧಗಳ ಕುರಿತು ತಿಳಿಸಲಾಗಿದೆ. ಸ್ವಾತಂತ್ರ್ಯ ನಂತರ ಪ್ರಮುಖ ಘಟನೆಗಳ ಬಗ್ಗೆ ೧, ೨ನೇ ಜಾಗತಿಕ ಯುದ್ಧಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

ಈ ಪಠ್ಯವು ಸಂಕ್ಷಿಪ್ತವಾಗಿದ್ದು ಮಕ್ಕಳಿಗೆ ಹೊರೆಯಾಗದ ರೀತಿಯಲ್ಲಿ ವಿಷಯ ಮಂಡನೆ ಇದೆ. ಇದು ಆಧುನಿಕ ಭಾರತದ ಸಮಗ್ರ ಚರಿತ್ರೆಯನ್ನು ಮಕ್ಕಳ ಬೌದ್ಧಿಕ ಮಟ್ಟಕ್ಕೆ ತಕ್ಕಂತೆ ಇರಿಸಲಾಗಿದೆ. ಅಕ್ಷರ ದೋಷಗಳಿಲ್ಲದಂತೆ ಪಠ್ಯವು ರಚನೆಗೊಂಡಿರುವುದು ಶ್ಲಾಘನೀಯ ವಿಚಾರವೇ ಸರಿ. ಹಿಂದೆ ತಿಳಿಸಿದ ಪಠ್ಯದಲ್ಲಿ ಸ್ವಾತಂತ್ರ್ಯ ನಂತರದ ೧೭ ವರ್ಷಗಳ ಚರಿತ್ರೆ ತಿಳಿಸಿದ್ದರೆ ಈ ಪಠ್ಯದಲ್ಲಿ ೧೦ ವರ್ಷಗಳ ಚರಿತ್ರೆಯನ್ನು ತಿಳಿಸಲಾಗಿದೆ. ಅಂದರೆ ಈ ಪಠ್ಯದಲ್ಲಿ ಪಂಚವಾರ್ಷಿಕ ಯೋಜನೆಗಳ ಕುರಿತಾದ ಮಾಹಿತಿ ಇಲ್ಲ.

೩. ಇದೇ ಸಂದರ್ಭದಲ್ಲಿ ಮೈಸೂರು ಜಿಲ್ಲೆಯ ೭ನೇ ತರಗತಿ ಮಕ್ಕಳಿಗಾಗಿ ಬೆಂಗಳೂರಿನ ಸುದರ್ಶನ ಅಂಡ್ ಕಂಪನಿ ಪಬ್ಲಿಕೇಷನ್‌ನವರು ಆಧುನಿಕ ಸಮಾಜಶಾಸ್ತ್ರ ಪಾಠಗಳು ಎಂಬ ಮೈಸೂರು ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಮಂಜೂರಾದ ಪಠ್ಯಪುಸ್ತಕವನ್ನು ಇರಿಸಲಾಗಿದೆ. ಇದನ್ನು ಬಿ.ಎನ್. ರಾಮಯ್ಯ, ಬಿ.ಕೆ. ಮಾಧವಮೂರ್ತಿ ಎಂಬುವವರು ಬರೆದಿದ್ದಾರೆ.[೮] ಈ ಪಠ್ಯದಲ್ಲಿ ೫ ಅಧ್ಯಾಯಗಳಿದ್ದು ೩-೫ ಅಧ್ಯಾಯಗಳು ಚರಿತ್ರೆಗೆ ಸಂಬಂಧಿಸಿವೆ. ಅಧ್ಯಾಯ ೩ರಲ್ಲಿ ಭಾರತಕ್ಕೆ ಹೊಸ ಮಾರ್ಗ, ಭಾರತಕ್ಕೆ ಐರೋಪ್ಯರ ಆಗಮನ, ಭಾರತದಲ್ಲಿ ಇಂಗ್ಲೀಷರ ಮತ್ತು ಫ್ರೆಂಚರ ಸ್ಪರ್ಧೆ, ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಬೆಳವಣಿಗೆ ಎಂದಿವೆ. ಅಧ್ಯಾಯ-೪ರಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ಕಥೆ ಎಂದಿದ್ದು ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ರಾಷ್ಟ್ರೀಯತೆಯ ಬೆಳವಣಿಗೆ, ಬಂಗಾಳದ ವಿಭಜನೆ ಮತ್ತು ಸ್ವದೇಶಿ ಚಳುವಳಿ, ಗಾಂಧಿ ಯುಗ, ಸ್ವರಾಜ್ಯ ಸ್ಥಾಪನೆ, ಮಹಾಯುದ್ಧಗಳು, ವಿಶ್ವಸಂಸ್ಥೆ ಪಾಠಗಳಿವೆ. ಅಧ್ಯಾಯ-೫ರಲ್ಲಿ ಭಾರತೀಯ ಸಂಸ್ಥಾನಗಳ ಸಂಘಟನೆ, ನಮ್ಮ ಪಂಚವಾರ್ಷಿಕ ಯೋಜನೆಗಳು, ಭಾರತೀಯ ಪೌರರ ಹಕ್ಕು, ಕರ್ತವ್ಯಗಳು ಎಂದಿವೆ.

ಈ ಪಠ್ಯದ ವಿಶೇಷತೆಯೆಂದರೆ ಆರಂಭದಲ್ಲಿ ಗ್ರಂಥಋಣ ನೀಡಿರುವುದು ಕಂಡುಬರುತ್ತದೆ. ಮೇಲಿನ ಪಠ್ಯದ ವಸ್ತುಗಳೇ ಇಲ್ಲಿಯೂ ಬಂದಿವೆಯಾದರೂ ಸ್ವಲ್ಪ ಬದಲಾವಣೆಗಳಿರುವುದು ಕಂಡುಬರುತ್ತದೆ. ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ ಮತ್ತು ರಾಮಕೃಷ್ಣ ಪರಮಹಂಸರ ಕುರಿತ ಮಾಹಿತಿ ಈ ಪಠ್ಯದಲ್ಲಿವೆ. ಇದೇ ಕಾಲದ ಬೇರೆ ಕರ್ನಾಟಕದ ಪ್ರದೇಶದ ಪಠ್ಯಗಳಲ್ಲಿ ಈ ಅಂಶಗಳು ಬಂದಿರುವುದಿಲ್ಲ.

ಮೇಲೆ ತಿಳಿಸಿದ ೭ನೇ ತರಗತಿಯ ಮಕ್ಕಳಿಗಾಗಿ ಬೇರೆ ಬೇರೆ ವಲಯಗಳಿಗೆ ಸೀಮಿತಗೊಳಿಸಿದ್ದ ಪಠ್ಯಗಳು ಒಂದೇ ಕಾಲಮಿತಿಯಲ್ಲಿ ಪ್ರಕಟಗೊಂಡಿವೆ. ಇಡೀ ಪಠ್ಯದ ವಸ್ತು ಹೆಚ್ಚು ಕಡಿಮೆ ಆಧುನಿಕ ಭಾರತದ ಇತಿಹಾಸವಾಗಿದೆ. ಆದರೆ ಈ ವಲಯವಾರು ಪಠ್ಯಗಳನ್ನು ಒಬ್ಬ ಲೇಖಕನಿಂದ ಬರೆಸದೇ ಆಯಾ ವಲಯದ ವ್ಯಕ್ತಿಗಳಿಂದ ಬರೆಸಿರುವುದು ಕಂಡುಬರುತ್ತದೆ. ಹಾಗೆಯೇ ಆಯಾ ವಲಯದ ಪ್ರಕಾಶಕರು ಪಠ್ಯವನ್ನು ಪ್ರಕಟಿಸಿದ್ದಾರೆ. ಇವುಗಳ ಪಠ್ಯವು ಮೈಸೂರು ರಾಜ್ಯ ವಿದ್ಯಾ ಸಂಸ್ಥೆ ನಿಗದಿಗೊಳಿಸಿದ ಪಠ್ಯಕ್ರಮದಲ್ಲಿರುವಂತೆ ತಿಳಿಸಲಾಗಿದೆ. ಅವುಗಳ ವಸ್ತು ಸಹ ಆಧುನಿಕ ಭಾರತದ ಚರಿತ್ರೆಯಾದರೂ ವಲಯವಾರು ಲೇಖಕರು ತಮ್ಮ ಅನುಕೂಲಕ್ಕೆ ತಕ್ಕಂತೆ ಪಠ್ಯದೊಳಗಿನ ವಿಷಯಗಳನ್ನು ಹಿಗ್ಗಿಸುವ ಅಥವಾ ಕುಗ್ಗಿಸುವ ಅಧಿಕಾರ ಹೊಂದಿದ್ದಾರೆನಿಸುತ್ತದೆ.

ಮೇಲೆ ತಿಳಿಸಿದ ಬೆಳಗಾವಿ, ಉತ್ತರ ಕನ್ನಡದ ವಲಯಗಳಿಗೆ ಸೀಮಿತಗೊಳಿಸಿದ ಪಠ್ಯದ ಒಂದು ಪಾಠವು ಸ್ವಾತಂತ್ರ್ಯಾನಂತರ ೧೦ ವರ್ಷಗಳೆಂದಿದ್ದು ಪಂಚವಾರ್ಷಿಕ ಯೋಜನೆಗಳ ಮಾಹಿತಿ ಕೈಬಿಡಲಾಗಿದೆ. ಅದೇ ರೀತಿ ಮೈಸೂರು ಬಿಜಾಪುರ ವಲಯಕ್ಕೆ ಸೇರಿದ ಬಾಗಲಕೋಟೆಯಲ್ಲಿ ಪ್ರಕಟವಾದ ಇದೇ ಕಾಲ ಹಾಗೂ ೭ನೇ ತರಗತಿಗಾಗಿ ರಚಿಸಿದ ಪಠ್ಯದಲ್ಲಿ ಪಂಚವಾರ್ಷಿಕ ಯೋಜನೆಗಳನ್ನು ಕೈಬಿಟ್ಟು ಸ್ವಾತಂತ್ರ್ಯಾನಂತರ ೧೦ ವರ್ಷಗಳೆಂಬ ಪಾಠವನ್ನೇ ಇರಿಸಲಾಗಿದೆ. ಆದರೆ ಧಾರವಾಡದಲ್ಲಿ ಪ್ರಕಟಗೊಂಡ ಇದೇ ಕಾಲಾವಧಿಯ ೭ನೇ ತರಗತಿ ಸಾಮಾಜಿಕ ಅಭ್ಯಾಸ ಎಂಬ ಪಠ್ಯದಲ್ಲಿ ಪಂಚವಾರ್ಷಿಕ ಯೋಜನೆ ಸೇರಿಸಿಕೊಂಡಿದ್ದು ೧೭ ವರ್ಷಗಳಿಗೆ ಸೀಮಿತಗೊಳಿಸಿದ್ದು ಆಶ್ಚರ್ಯವಾಗುತ್ತದೆ.

ರಾಜ್ಯ ಪುನರ್‌ವಿಂಗಡನೆಯ ತರುವಾಯ ೧೯೬೨ರಲ್ಲಿ ಶಿಕ್ಷಣದಲ್ಲಿ ಸಮಗ್ರತೆಯನ್ನು ಸಾಧಿಸುವ ದೃಷ್ಟಿಯಿಂದ ಮೈಸೂರು ಸರ್ಕಾರವು ಎಲ್ಲಾ ಶಾಲೆಗಳಿಗೆ ಏಕರೂಪದ ಪಠ್ಯವನ್ನು ರಚಿಸಲು ಸೂಚಿಸಿದ್ದರೂ ವಲಯವಾರು ಪ್ರಕಟಗೊಳ್ಳುವಾಗ ಇಲಾಖೆಯ ಸೂಚನೆಯನ್ನೇ ಗಣನೆಗೆ ತೆಗೆದುಕೊಂಡಿಲ್ಲ.

೪. ಮೈಸೂರು ಸರ್ಕಾರದ ೭ನೇ ತರಗತಿ ಮಕ್ಕಳಿಗಾಗಿ ಮೈಸೂರು ವಿದ್ಯಾ ಇಲಾಖೆಯವರು ಸಮಾಜ ಪರಿಚಯ ಪಾಠಗಳು ಎಂಬ ಮೈಸೂರು ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಮಂಜೂರು ಮಾಡಲಾಗಿದೆ.[೪೩] ಈ ಪಠ್ಯಪುಸ್ತಕ ಸಮಿತಿಗೆ ಎಂ.ಆರ್. ರಾಮಯ್ಯ ಅಧ್ಯಕ್ಷರಾಗಿದ್ದರು. ಸದಸ್ಯರಾಗಿ ಎಸ್.ಜಿ. ನಾಡಿಗರ್, ಡಿ.ಆರ್. ಮುರುಗೇಂದ್ರಪ್ಪ, ಎಸ್.ವಿ. ಪಾಟೀಲ್, ಕಾಳೆಯವರಿದ್ದಾರೆ. ಈ ಪಠ್ಯದಲ್ಲಿ ೩೨ ಅಧ್ಯಾಯಗಳಿವೆ. ಮೊದಲ ೧೨ ಅಧ್ಯಾಯಗಳು ಚರಿತ್ರೆಗೆ ಸಂಬಂಧಿಸಿವೆ. ಅವುಗಳು ಕ್ರಮವಾಗಿ ಆಗಸ್ಟ್ ೧೫, ಭಾರತಕ್ಕೆ ಸಮುದ್ರ ಮಾರ್ಗಗಳನ್ನು ಕಂಡುಹಿಡಿದವರು. ಭಾರತದಲ್ಲಿ ಯುರೋಪಿಯನ್ ಸಾಮ್ರಾಜ್ಯಗಳ ನಡುವೆ ಸ್ಪರ್ಧೆ, ಭಾರತದಲ್ಲಿ ಬ್ರಿಟಿಷ್ ಅಧಿಪತ್ಯದ ಬೆಳವಣಿಗೆ, ಭಾರತದಲ್ಲಿ ಬ್ರಿಟಿಷ್ ಆಡಳಿತದ ಪರಿಣಾಮಗಳು, ಭಾರತದಲ್ಲಿ ರಾಷ್ಟ್ರೀಯತೆಯ ಉದಯ, ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಬಂಗಾಳದ ವಿಭಜನೆ ಮತ್ತು ಸ್ವಾತಂತ್ರ್ಯದ ಹೋರಾಟದ ಮುನ್ನಡೆ, ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮಾಗಾಂಧಿಯವರ ಪಾತ್ರ, ಸ್ವಾತಂತ್ರ್ಯ ಪ್ರಾಪ್ತಿ, ಸ್ವಾತಂತ್ರ್ಯ ನಂತರದ ಮೊದಲ ೨೦ ವರ್ಷಗಳು, ಪಂಚವಾರ್ಷಿಕ ಯೋಜನೆಗಳು ಇವೆ.

ಈ ಪಠ್ಯದಲ್ಲಿ ಆಗಸ್ಟ್ ೧೫ ಎಂಬ ಪಾಠವಿಟ್ಟು ಅದರ ಮಹತ್ವವನ್ನು ಮಕ್ಕಳಿಗೆ ರಾಷ್ಟ್ರೀಯತೆ ಕಲ್ಪನೆ ಮೂಡಿಸುವ ಉದ್ದೇಶವಿದೆ. ಆದರೆ ಈ ಅಧ್ಯಾಯವನ್ನು ಆರಂಭಕ್ಕೆ ಇಡುವುದರ ಬದಲಾಗಿ ಸ್ವಾತಂತ್ರ್ಯ ಪ್ರಾಪ್ತಿ ಎಂಬ ಪಾಠದ ಸಂದರ್ಭದಲ್ಲಿ ಇರಿಸಿದ್ದರೆ ಒಳಿತಿತ್ತು. ಏಕೆಂದರೆ ಇತಿಹಾಸವನ್ನು ಕಾಲಾನುಕ್ರಮದಿಂದ ಅಧ್ಯಯನ ಮಾಡುವುದರಿಂದ ಮಕ್ಕಳಿಗೆ ಕಾಲದ ಕುರಿತು ತಿಳುವಳಿಕೆ ನೀಡಿದಂತಾಗುತ್ತದೆ. ಪಾಠಗಳು ಘಟನೆಗೆ ಸಂಬಂಧಿಸಿದಂತೆ ಕ್ರಮವಾಗಿ ಇರದೇ ಹಿಂದುಮುಂದಾಗಿ ಕೊಟ್ಟರೆ ಮಕ್ಕಳು ಗೊಂದಲಗೊಳ್ಳುವ ಸಾಧ್ಯತೆಯೂ ಹೆಚ್ಚು ಎನಿಸುತ್ತದೆ. ಆಗಸ್ಟ್ ೧೫ರ ಪಾಠದಲ್ಲಿ ದೇಶ ಸ್ವಾತಂತ್ರ್ಯ ಹೊಂದಿದ ದಿನ ಬ್ರಿಟಿಷರ ಆಡಳಿತ ಪ್ರತೀಕವಾಗಿ

ಕೆಂಪುಕೋಟೆ ಮೇಲೆ ಹಾರಾಡುತ್ತಿದ್ದ ಬ್ರಿಟಿಷರ ಯೂನಿಯನ್ ಜಾಕ್ ಬಾವುಟವನ್ನು ಭಾರತದ ತ್ರಿವರ್ಣ ಧ್ವಜವನ್ನು ಮೇಲೇರಿಸಲಾಯಿತು. ಬ್ರಿಟಿಷರ ರಾಷ್ಟ್ರಧ್ವಜವನ್ನು ಯೂನಿಯನ್ ಜಾಕ್ ಎಂದು ಕರೆಯುತ್ತಿದ್ದರೆಂಬ ಅಂಶ ಹಿಂದಿನ ಯಾವ ಪಠ್ಯದಲ್ಲಿಯೂ ನಮೂದಾಗಿಲ್ಲ.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಪಾಠದಲ್ಲಿ ೧೮೫೭ರ ದಂಗೆಯ ಕಾರಣಗಳನ್ನು ತಿಳಿಸುವ ಸಂದರ್ಭದಲ್ಲಿ ಅನೇಕ ಕಾರಣಗಳಿದ್ದರೂ ಭಾರತದ ಸೈನಿಕರಲ್ಲಿದ್ದ ಅಸಮಾಧಾನವೇ ಈ ದಂಗೆಗೆ ಕಾರಣವೆಂದು ತಿಳಿಸುವುದು ಹೆಚ್ಚು ಸಮಂಜಸವಲ್ಲವೆನಿಸುತ್ತದೆ. ಈ ದಂಗೆಗೆ ಸಂಬಂಧಿಸಿದ ಇತರ ಕಾರಣಗಳನ್ನು ತಿಳಿಸಿದ್ದರೆ ಒಳಿತಿತ್ತು.

ಈ ಪಠ್ಯದಲ್ಲಿ ಸಮಾಜ ಸುಧಾರಕರ ಕುರಿತಾದ ಪರಿಚಯ ಪಾಠಗಳನ್ನು ಕೈಬಿಡಲಾಗಿದೆ. ಹಾಗೆಯೇ ಭಾರತದ ಆಡಳಿತವನ್ನು ಹಿಡಿಯುವ ಸಂದರ್ಭದಲ್ಲಿ ಬ್ರಿಟಿಷರು ನಡೆಸಿದ ಪ್ರಮುಖ ಯುದ್ಧಗಳ ಬಗ್ಗೆಯೂ ಇಲ್ಲಿ ತಿಳಿಸಿಲ್ಲ. ಆಂಗ್ಲೋ ಮೈಸೂರು ಯುದ್ಧ ಮುಂತಾದವುಗಳನ್ನು ಈ ಪಠ್ಯದಲ್ಲಿ ಸೇರಿಸಿಲ್ಲ. ಪ್ರಾಯಶಃ ಮಕ್ಕಳ ಬೌದ್ಧಿಕ ಮಟ್ಟಕ್ಕೆ ಹೊರೆಯಾಗಬಾರದೆಂಬ ಕಾರಣಕ್ಕೆ ಇವುಗಳನ್ನು ಬಿಟ್ಟಿರಬಹುದು.

ಈ ಪಠ್ಯದಲ್ಲಿ ಆಗಸ್ಟ್ ೧೫ ಎಂಬ ಪಾಠವನ್ನು ಮೊದಲಿಗೇ ಇಟ್ಟಿರುವುದನ್ನು ಗಮನಿಸಿದರೆ ರಾಷ್ಟ್ರದ ಉದಯದೊಂದಿಗೆ ಮಕ್ಕಳಿಗೆ ಪಾಠಗಳನ್ನು ಪ್ರಾರಂಭಿಸುವ ಉದ್ದೇಶವಿರುವುದು ಸ್ಪಷ್ಟವಾಗುತ್ತದೆ. ೧೯೭೧ರಲ್ಲಿಯೂ ಇದೇ ಪಠ್ಯವೇ ಮುಂದುವರೆದಿದೆ.

೫. ಕರ್ನಾಟಕ ಸರ್ಕಾರದ ೭ನೇ ತರಗತಿ ಮಕ್ಕಳಿಗಾಗಿ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆಯವರು ಸಮಾಜ ವಿಜ್ಞಾನ ಎಂಬ ಪಠ್ಯ ಇಡಲಾಗಿದೆ.[೪೪] ಈ ಪಠ್ಯಪುಸ್ತಕ ಸಮಿತಿಗೆ ಡಾ. ಆರ್. ರಾಮಕೃಷ್ಣನ್ ಅಧ್ಯಕ್ಷರಾಗಿದ್ದರು. ಸದಸ್ಯರಾಗಿ ಎಚ್. ತುಕರಾಂರಾವ್, ನರೇಂದ್ರಪ್ರಸಾದ್, ಸಿದ್ದಲಿಂಗಯ್ಯ, ಸಂದೀಪ್‌ಶಾಸ್ತ್ರಿ, ಸಿಸ್ಟರ್ ಎಂ. ಸಿಲ್ವೆಟ, ಕೆ.ಆರ್. ರಂಗಾಚಾರ್ ಮುಂತಾದವರಿದ್ದಾರೆ.

ಈ ಪಠ್ಯಪುಸ್ತಕವು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಪಠ್ಯವಸ್ತುವಿನ ಆಧಾರದ ಮೇಲೆ ಪಠ್ಯಪುಸ್ತಕ ರಚಿಸಲಾಗಿದೆ. ಈ ಪಠ್ಯವು ಚರಿತ್ರೆ, ಭೂಗೋಳ, ಪೌರನೀತಿ ಎಂಬ ಭಾಗಗಳಿಂದ ಕೂಡಿದೆ. ಚರಿತ್ರೆಗೆ ಸಂಬಂಧಿಸಿದ ೧೦ ಅಧ್ಯಾಯಗಳಿವೆ. ಆಧುನಿಕ ಭಾರತದ ಇತಿಹಾಸವನ್ನು ಪಠ್ಯ ಹೊಂದಿದೆ.

ಪುನರುತ್ಥಾನ, ಸುಧಾರಣೆಗಳು, ಭೌಗೋಳಿಕ ಅನ್ವೇಷಣೆಗಳು, ಯುರೋಪಿಯನ್ನರ ಆಗಮನ, ಬ್ರಿಟಿಷರ ಪ್ರಾಬಲ್ಯ, ೧೮೫೮ರತನಕ ಬ್ರಿಟಿಷ್ ಆಡಳಿತ ಸ್ವರೂಪ, ಭಾರತದ ಆರ್ಥಿಕತೆ ಮತ್ತು ಸಮಾಜದ ಮೇಲೆ ಬ್ರಿಟೀಷ್ ಆಡಳಿತದ ಪ್ರಭಾವ, ನವಭಾರತದ ಉದಯ, ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ೧೮೫೭, ಭಾರತದಲ್ಲಿಯ ರಾಷ್ಟ್ರೀಯತೆಯ ಉದಯ, ಗಾಂಧಿಯುಗ, ಸ್ವಾತಂತ್ರ್ಯದ ಕಡೆಗೆ ಎಂಬ ಪಾಠಗಳಿವೆ. ಈ ಪಠ್ಯಪುಸ್ತಕದಲ್ಲಿ ವಿಷಯವನ್ನು ಸರಳೀಕರಿಸುವ ಕೆಲಸ ನಡೆದಿದೆ. 'ನವಭಾರತದ ಉದಯ' ಎಂಬ ಶೀರ್ಷಿಕೆಯಡಿಯಲ್ಲಿ ತಿಳಿಸಲಾಗಿರುವ ಪಾಶ್ಚಿಮಾತ್ಯ ಪ್ರಭಾವ, ಧಾರ್ಮಿಕ ಸುಧಾರಣಾ ಚಳುವಳಿಗಳು, ಘಟಕದ ಶೀರ್ಷಿಕೆಗಳು ವಿಷಯಕ್ಕೆ ಹೆಚ್ಚು

ಸಂಬಂಧಗಳನ್ನು ಕಲ್ಪಿಸುವುದಿಲ್ಲ. ಈ ಪಾಠದಲ್ಲಿ ಸಾಮಾಜಿಕ-ಧಾರ್ಮಿಕ ಸುಧಾರಣಾ ಚಳುವಳಿಯ ರಾಜಾರಾಂಮೋಹನರಾಯ್, ಆತ್ಮರಾಮ್‌ಪಾಂಡುರಂಗ ಜೊತೆಗೆ ಜ್ಯೋತಿಬಾಫುಲೆ, ನಾರಾಯಣಗುರು ಮುಂತಾದವರನ್ನು ಗುರುತಿಸಿರುವುದು ತುಂಬಾ ಸೂಕ್ತವಾದುದು. ಇಂತಹ ಮಹಾನೀಯರ ಕುರಿತು ಮಕ್ಕಳಲ್ಲಿ ತಿಳುವಳಿಕೆ ಬರಬೇಕೆಂಬ ಉದ್ದೇಶದಿಂದ ಪಾಠದಲ್ಲಿ ಈ ವ್ಯಕ್ತಿಗಳ ಕುರಿತ ಚಿತ್ರಣ ನೀಡಿದೆ ಅನಿಸುತ್ತದೆ.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅಧ್ಯಾಯದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಅಕ್ಷರದೋಷಗಳು ಪಠ್ಯದಲ್ಲಿಲ್ಲ. ಆಕರ್ಷಕವಾದ ಚಿತ್ರ, ನಕ್ಷೆಗಳನ್ನು ಕೊಟ್ಟಿದೆಯಾದರೂ ಅವು ವರ್ಣಮಯವಾಗಿದ್ದರೆ ಮಕ್ಕಳಿಗೆ ಇನ್ನೂ ಹೆಚ್ಚು ಇಷ್ಟವಾಗುವ ಸಾಧ್ಯತೆ ಹೆಚ್ಚಿತ್ತು.

೬. ಕರ್ನಾಟಕ ಸರ್ಕಾರದ ೭ನೇ ತರಗತಿ ಮಕ್ಕಳಿಗಾಗಿ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆಯವರು ಸಮಾಜ ವಿಜ್ಞಾನ ಎಂಬ ಪಠ್ಯ ಇಡಲಾಗಿದೆ.[೨೯] ಈ ಪಠ್ಯ ಪುಸ್ತಕ ಸಮಿತಿಗೆ ಕುಮಾರ ಪಿ.ಎ., ರಾಮಕೃಷ್ಣ ಯರಮಾಳು, ಶ್ರೀ ರಂಗರಾಜು ಎಸ್.ಕೆ., ರೇವತಿ ಎಚ್.ಡಿ. ಉಮಾಬಾಯಿ, ಉಷಾರಾಣಿ ಜಿ.ಎಸ್. ಪಠ್ಯಪುಸ್ತಕ ಸಮಿತಿಯಲ್ಲಿದ್ದಾರೆ. ಈ ಪಠ್ಯವು ೩ ಭಾಗಗಳಿಂದ ಕೂಡಿದ್ದು ಇತಿಹಾಸ, ಪೌರನೀತಿ, ಭೂಗೋಳದಿಂದ ಕೂಡಿದೆ. ಇತಿಹಾಸಕ್ಕೆ ಸಂಬಂಧಿಸಿದಂತೆ ೧೩ ಅಧ್ಯಾಯಗಳಿವೆ.

ಪುನರುಜ್ಜೀವನ ಕಾಲ, ಮತ ಸುಧಾರಣೆ, ಭೌಗೋಳಿಕ ಅನ್ವೇಷಣೆ, ಭಾರತದಲ್ಲಿ ಯುರೋಪಿಯನ್ನರು, ೧೮ನೇ ಶತಮಾನದ ಭಾರತ, ಮೈಸೂರು ಸುಲ್ತಾನರು, ಭಾರತದ ಮೇಲೆ ಆಂಗ್ಲರ ಆಡಳಿತದ ಪ್ರಭಾವ, ಸಾಮಾಜಿಕ ಸುಧಾರಣಾ ಚಳುವಳಿ, ಭಾರತದ ಮೊದಲನೆ ಸ್ವಾತಂತ್ರ್ಯ ಸಮರ, ರಾಷ್ಟ್ರೀಯ ಚಳುವಳಿ-ಗಾಂಧಿ ಯುಗ, ರಾಷ್ಟ್ರೀಯ ಚಳುವಳಿ-ವಿಭಜನೆ ಮತ್ತು ಸ್ವಾತಂತ್ರ್ಯ ಪಾಠಗಳಿವೆ. ಈ ಪಠ್ಯಪುಸ್ತಕವು ಹಿಂದಿನ ಪಠ್ಯಪುಸ್ತಕಕ್ಕಿಂತ ಹೆಚ್ಚಿನ ಉತ್ತಮ ಗುಣಮಟ್ಟದಿಂದ ಕೂಡಿದೆ. ಆಕರ್ಷಕ ವರ್ಣ ಚಿತ್ರಗಳು, ಉತ್ತಮ ಮುದ್ರಣದಿಂದ ಕೂಡಿದೆ. ಇವುಗಳು ಸಂದರ್ಭಕ್ಕೆ ತಕ್ಕಂತೆ ಅರ್ಥಗರ್ಭಿತವಾಗಿ ಅಚ್ಚಾಗಿವೆ. ಇದರಲ್ಲಿ ಮತೀಯ ಗೊಂದಲವುಂಟುಮಾಡುವ ಅಂಶಗಳಿಂದ ಪಠ್ಯವನ್ನು ದೂರವಿರಿಸಲಾಗಿದೆ. ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸರಿಹೊಂದುವ ರೀತಿಯಲ್ಲಿ ಪಠ್ಯವನ್ನು ರೂಪಿಸಲಾಗಿದೆ. ಈ ಹಿಂದೆ ಮುದ್ರಿತವಾದ ಪಠ್ಯಗಳಲ್ಲಿ ಸ್ವಾತಂತ್ರ್ಯ ನಂತರದ ಭಾರತದ ಚರಿತ್ರೆಯನ್ನು ತಿಳಿಸಲಾಗಿತ್ತು. ಆದರೆ ಈ ಪಠ್ಯದಲ್ಲಿ ಅಂತಹ ಅಂಶಗಳನ್ನು ಕಡೆಗಣಿಸಿರುವುದು ಕಂಡುಬರುತ್ತದೆ. ಇದರಿಂದ ಮಕ್ಕಳಿಗೆ ಚರಿತ್ರೆಯೆಂದರೆ ಕೇವಲ ಸ್ವಾತಂತ್ರ್ಯದವರೆಗಿನ ಘಟನೆಗಳು ಮಾತ್ರ ಎಂಬ ಕಲ್ಪನೆ ಮೂಡುವ ಸಾಧ್ಯತೆ ಇದೆ. ನಂತರದ ಘಟನೆಗಳು ಚರಿತ್ರೆಯಲ್ಲ ಎಂಬ ಕಲ್ಪನೆಯಿಂದ ಮಗು ಕೂಡಿರುವ ಅಪಾಯಗಳೂ ಇವೆ.

ಸ್ವಾತಂತ್ರ್ಯಪೂರ್ವದ ಪಠ್ಯಗಳಿಂದ ಹಿಡಿದು ೨೦೦೯ರವರೆಗಿನ ಪಠ್ಯಗಳನ್ನು ಗಮನಿಸಿದಾಗ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ

ಸ್ವಾತಂತ್ರ್ಯಪೂರ್ವದಲ್ಲಿ ಪಠ್ಯಪುಸ್ತಕಗಳನ್ನು ರಚಿಸುವ ಸಮಿತಿಗಳು ಇರಲಿಲ್ಲ. ಆ ಸಂದರ್ಭದಲ್ಲಿ ಬ್ರಿಟಿಷ್ ಆಡಳಿತವು ಪ್ರಾಂತ್ಯವಾರು ಪಠ್ಯಪುಸ್ತಕಗಳನ್ನು ರಚಿಸಲು ಕೆಲವು ವ್ಯಕ್ತಿಗಳಿಗೆ ಸೂಚಿಸುತ್ತಿದ್ದರು ಹಾಗೆಯೇ ಪಠ್ಯಪುಸ್ತಕಗಳ ಮುದ್ರಣದ ಹೊಣೆಯನ್ನು ಸರ್ಕಾರ ವಹಿಸಿಕೊಳ್ಳದೆ ಖಾಸಗಿ ಪ್ರಕಾಶಕರಿಗೆ ಮುದ್ರಣ ಕಾರ್ಯವಹಿಸುತ್ತಿದ್ದುದು ಕಂಡುಬರುತ್ತದೆ. ಈ ಪಠ್ಯಪುಸ್ತಕಗಳನ್ನು ರಚಿಸುತ್ತಿದ್ದ ಪಂಡಿತರು ಬಹುತೇಕ ಆಗಿನ ಆಡಳಿತ ವ್ಯವಸ್ಥೆಯನ್ನು ಓಲೈಸಲು ವಸಾಹತುಶಾಹಿ ಹಿನ್ನೆಲೆಯಲ್ಲಿ ಪಠ್ಯಗಳನ್ನು ರಚಿಸಿರುವುದು ತಿಳಿದುಬರುತ್ತದೆ. ಏಕೆಂದರೆ ಪ್ರತಿ ತರಗತಿಗೆ ಪಠ್ಯಪುಸ್ತಕಗಳನ್ನು ರಚಿಸಲು ಕೇವಲ ಒಬ್ಬರಿಗೆ ವಹಿಸದೆ ಹಲವಾರು ಪಂಡಿತರಿಗೆ ವಹಿಸಲಾಗುತ್ತಿತ್ತು. ಇವರು ರಚಿಸಿಕೊಟ್ಟ ಪುಸ್ತಕಗಳಲ್ಲಿ ಪ್ರಾಂತೀಯ ಸರ್ಕಾರವನ್ನು ಮೆಚ್ಚಿಸುವ ಹಿತಾಸಕ್ತಿಯಿಂದ ಕೂಡಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಸ್ವಾತಂತ್ರ್ಯ ತರುವಾಯ ರಾಜ್ಯಗಳ ಪುನರ್‌ವಿಂಗಡನೆಯ ನಂತರ ಮೈಸೂರು ಸರ್ಕಾರಕ್ಕೆ ಏಕಸ್ವರೂಪದ ಪಠ್ಯಪುಸ್ತಗಳನ್ನು ರಚಿಸಲು ತೀರ್ಮಾನಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಪಠ್ಯಗಳು ಏಕಸ್ವರೂಪದಲ್ಲಿರದೆ ಲೇಖಕರ ಹಿತಾಸಕ್ತಿಗೆ ಅನುಗುಣವಾಗಿ ವಲಯವಾರು ಪಠ್ಯಗಳಲ್ಲಿ ಬದಲಾವಣೆಗಳಿರುವುದು ಕಂಡುಬರುತ್ತದೆ. ಇಲ್ಲಿಯೂ ಕೂಡ ಕೆಲವು ಪಠ್ಯಗಳ ಪಾಠಗಳಲ್ಲಿ ವಸಾಹತುಶಾಹಿ ವಾಸನೆ ಹಾಗೇ ಉಳಿದಿದೆ ಎನಿಸುತ್ತದೆ.

ಈ ಪಠ್ಯಪುಸ್ತಕಗಳು ರಾಷ್ಟ್ರೀಯ ಶಿಕ್ಷಣ ಆಯೋಗ/ಕೊಠಾರಿ ಶಿಕ್ಷಣ ಆಯೋಗ (೧೯೬೪-೬೬)ಹಿನ್ನೆಲೆಯಲ್ಲಿಯು ರಚನೆಗೊಂಡಿವೆ. ಈ ಪಠ್ಯಗಳು ವರದಿ ಶಿಫಾರಸ್ಸು ಮಾಡಿದ ಸಲಹೆಗೆ ಅನುಗುಣವಾಗಿ ನಂತರದ ಪಠ್ಯಗಳಲ್ಲಿ ಬದಲಾವಣೆ ಮಾಡಿಕೊಂಡಿರುವುದು ಕಂಡುಬರುತ್ತದೆ.

ಈ ಪಠ್ಯಗಳು ಬಹುತೇಕವಾಗಿ ಸ್ವಾತಂತ್ರ್ಯ ನಂತರದ ಪಠ್ಯಗಳಾಗಿರುವುದರಿಂದ ಪ್ರಾಥಮಿಕ ೩-೪ನೇ ತರಗತಿಯ ಚರಿತ್ರೆಯ ಪಾಠಗಳಲ್ಲಿ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರೀಯ ಲಾಂಛನ, ರಾಷ್ಟ್ರೀಯ ನಾಯಕರ ಕುರಿತು ಹೆಚ್ಚು ವಿಚಾರಗಳು ಬಿಂಬಿತಗೊಂಡಿವೆ. ಏಕೆಂದರೆ ಮಕ್ಕಳಿಗೆ ರಾಷ್ಟ್ರದ ಕುರಿತು ಗೌರವ ಅಭಿಮಾನಗಳು ಮೂಡುವಂತೆ ಮಾಡುವುದು ಈ ಪಠ್ಯಗಳ ಉದ್ದೇಶವಾಗಿದೆ. ಈ ಪಠ್ಯಗಳು ರಾಷ್ಟ್ರೀಯ ಚರಿತ್ರೆಕಾರರ ಬರವಣಿಗೆಯ ಹಿನ್ನೆಲೆಯಲ್ಲಿ ಬಂದಿವೆ.

ಮಾಧ್ಯಮಿಕ ೫, ೬, ೭ನೇ ತರಗತಿಗಳಲ್ಲಿ ಪ್ರಾಚೀನ, ಮಧ್ಯಯುಗೀನ, ಆಧುನಿಕ ಭಾರತದ ಚರಿತ್ರೆಯನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಕೆಲವು ಪಠ್ಯಗಳಲ್ಲಿ ಸ್ವಾತಂತ್ರ್ಯದ ಬಗ್ಗೆ ಸ್ಪಷ್ಟವಾದ ವಿಚಾರಗಳನ್ನು ತಿಳಿಸುವಲ್ಲಿ ಕೆಲವೊಮ್ಮೆ ಸೋತಿವೆಯೆನಿಸುತ್ತದೆ. ಜಾತ್ಯಾತೀತ ಮನೋಭಾವನೆಯು ಮಕ್ಕಳಲ್ಲಿ ಬರಲಿ ಎಂಬ ಉದ್ದೇಶದಿಂದ ಹಿಂದೂ, ಬೌದ್ಧ, ಜೈನ, ಇಸ್ಲಾಂ, ಸಿಖ್ ಧರ್ಮಗಳ ಬಗ್ಗೆ ತಿಳಿಸಿರುವುದೇ ಹೆಚ್ಚು. ಕ್ರೈಸ್ತ ಧರ್ಮದ ಕುರಿತು ತಿಳಿಸುವಲ್ಲಿ ಪಠ್ಯಪುಸ್ತಕ ರಚನಾಕಾರರು ಉದಾಸೀನತೆಯನ್ನು ತೋರಿಸಿದ್ದಾರೆಂಬುದು ಸ್ಪಷ್ಟ.

ಇತ್ತೀಚೆಗೆ ಬದಲಾದ ಎನ್.ಸಿ.ಎಫ್. ೨೦೦೫ರ ಪಠ್ಯಕ್ರಮದ ಹಿನ್ನೆಲೆಯಲ್ಲಿ ಕ್ರೈಸ್ತಧರ್ಮದ ಕುರಿತ ಉಲ್ಲೇಖ ಕಂಡುಬರುತ್ತದೆ.

## ೧೯೮೬ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಪಠ್ಯಕ್ರಮ

೧೯೮೬ ಮೇ ೬ ರಂದು ಆಗಿನ ಪ್ರಧಾನಿಯಾಗಿದ್ದ ಶ್ರೀ ರಾಜೀವ್ ಗಾಂಧಿಯವರ ಆಪೇಕ್ಷೆಯ ಮೇರೆಗೆ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಗೆ ಬಂದಿತು. ಶಿಕ್ಷಣವು ಪ್ರತಿಯೊಬ್ಬ ನಾಗರಿಕನಿಗೂ ಅತ್ಯವಶ್ಯಕವಾಗಿದೆ. ಈ ಹೊಸ ಶಿಕ್ಷಣ ನೀತಿಯೂ ಏಕತೆ, ಸಮಗ್ರತೆ, ವೈಜ್ಞಾನಿಕ ಮನೋಭಾವ, ಶೈಕ್ಷಣಿಕ ತಂತ್ರಜ್ಞಾನ, ಮೂಲಶಿಕ್ಷಣ, ಶಿಶುಕೇಂದ್ರಿತ ಶಿಕ್ಷಣ, ಹೊಸ ಸಂಶೋಧನೆ ಇನ್ನೂ ಮುಂತಾದ ವಿಷಯಗಳನ್ನು ಅವಲಂಬಿಸಿಕೊಂಡು ಹೊಸ ಶಿಕ್ಷಣ ನೀತಿಯು ಜಾರಿಗೆ ಬಂದಿತು. ಶಾಲಾ ಪಠ್ಯಕ್ರಮವು ಸಮಾಜದ ಅವಶ್ಯಕತೆಗೆ ತಕ್ಕಂತೆ ಬದಲಾಗಬೇಕು. ೧೯೮೬ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯು ಭಾವೈಕ್ಯತೆಯನ್ನು ಬೆಳೆಸಲು ಮತ್ತು ಸಂವಿಧಾನಾತ್ಮಕ ಮೌಲ್ಯಗಳನ್ನು ಅಭಿವೃದ್ಧಿಗೊಳಿಸಲು ಹತ್ತು ಮೂಲಾಂಶಗಳನ್ನು ನೀಡಿತು. ಆ ಹತ್ತು ಮೂಲಾಂಶಗಳು ಈ ರೀತಿಯಾಗಿವೆ.

೧. ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸ.

೨. ಸಂವಿಧಾನಾತ್ಮಕ ಬಾಧ್ಯತೆಗಳು.

೩. ರಾಷ್ಟ್ರೀಯ ವ್ಯಕ್ತಿತ್ವವನ್ನು ಪೋಷಿಸಲು ಅವಶ್ಯವಿರುವ ವಿಷಯಗಳು.

೪. ಭಾರತದ ಸಾಂಸ್ಕೃತಿಕ ಪರಂಪರೆ.

೫. ಸಮಾನತೆ, ಪ್ರಜಾಪ್ರಭುತ್ವ ಮತ್ತು ಸಮಾಜವಾದ.

೬. ಗಂಡು ಹೆಣ್ಣಿನ ಸಮಾನತೆ.

೭. ಪರಿಸರ ಸಂರಕ್ಷಣೆ.

೮. ಸಾಮಾಜಿಕ ಕಟ್ಟುಪಾಡುಗಳ ನಿರ್ಮೂಲನೆ.

೯. ಸಣ್ಣ ಕುಟುಂಬದ ಪಾಲನೆ.

೧೦. ವೈಜ್ಞಾನಿಕ ಮನೋಭಾವ ಬೆಳವಣಿಗೆ.[೬] ಈ ಹತ್ತು ಮೂಲಾಂಶಗಳಿಗೆ ಅನುಗುಣವಾಗಿ ಭಾರತದಾದ್ಯಂತ ಪಠ್ಯಪುಸ್ತಕಗಳು ಬದಲಾವಣೆಗೆ ಒಳಗಾದವು. ಈ ಯೋಜನೆ ಕರ್ನಾಟಕಕ್ಕೆ ಹೊರತಾಗಿರಲಿಲ್ಲ. ಇಲ್ಲಿ ಹಂತ ಹಂತವಾಗಿ ಪ್ರಾಥಮಿಕ, ಮಾಧ್ಯಮಿಕ ಪಠ್ಯಪುಸ್ತಕಗಳು ಬದಲಾವಣೆಗೊಳ್ಳುತ್ತಾ ಹೋದವು.

ಈ ರೀತಿ ಬಂದ ಪಠ್ಯಪುಸ್ತಕಗಳಲ್ಲಿ ಕಂಡುಬಂದ ಅಂಶಗಳೆಂದರೆ ಪ್ರಾಥಮಿಕ ಹಂತದ ೩-೪ನೇ ತರಗತಿಗಳ ಪಠ್ಯಪುಸ್ತಕದಲ್ಲಿ ದೇಶಾಭಿಮಾನ ಮೂಡಿಸುವ ಅಂಶಗಳು ಕಣ್ಮರೆಗೊಂಡಿವೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಪೂರ್ಣ ಉದ್ದೇಶಗಳನ್ನು ಪಠ್ಯಗಳು ಈಡೇರಿಸಲು ಸಾಧ್ಯವಾಗಿಲ್ಲವೆನ್ನಿಸುತ್ತದೆ. ಇದರ ತರುವಾಯ ೨೦೦೦ದ ತರುವಾಯ ಪಠ್ಯಪುಸ್ತಕಗಳು ಮುದ್ರಿಸಲಾಗಿದರೂ ಸಣ್ಣಪುಟ್ಟ ಪರಿಷ್ಕರಣೆಗೆ ಒಳಗಾಗಿವೆ.

**೨೦೦೫, ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು**

ಸಮಾಜ ವಿಜ್ಞಾನವು ಸಮಾಜದ ವಿಭಿನ್ನ ಕಾಳಜಿಗಳನ್ನು ಒಳಗೊಂಡಿರುತ್ತದೆ. ಭೂಗೋಳ ವಿಜ್ಞಾನ, ರಾಜಕೀಯ ವಿಜ್ಞಾನ, ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರ, ಮಾನವಶಾಸ್ತ್ರ ಶಾಖೆಗಳಿಂದ ಪಡೆಯಲಾದ ವ್ಯಾಪಕ ವಿಷಯಗಳನ್ನು ಒಳಗೊಳ್ಳುತ್ತದೆ. ಶಾಂತಿ ಮತ್ತು ನ್ಯಾಯಯುತ ಸಮಾಜದ ನಿರ್ಮಾಣಕ್ಕೆ ಅಗತ್ಯವಾದ ಜ್ಞಾನದ ಬುನಾದಿಯನ್ನು ರೂಪಿಸಲು ಸಮಾಜವಿಜ್ಞಾನದ ದೃಷ್ಟಿಕೋನ ಮತ್ತು ಜ್ಞಾನ ಅನಿವಾರ್ಯ. ಅತಿ ಪರಿಚಿತವಾದ ಸಾಮಾಜಿಕ ವಾಸ್ತವತೆಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಅನ್ವೇಷಿಸುವ ಮತ್ತು ಪ್ರಶ್ನಿಸುವ ಮುಖಾಂತರ ವಿದ್ಯಾರ್ಥಿಗಳ ಅರಿವಿನ ಮಟ್ಟವನ್ನು ಹೆಚ್ಚಿಸುವುದು ಈ ವಿಷಯದ ಗುರಿಯಾಗಿರಬೇಕು. ಹೊಸ ಆಯಾಮಗಳನ್ನು ಮತ್ತು ಕಾಳಜಿಗಳನ್ನು ವಿಶೇಷವಾಗಿ ವಿದ್ಯಾರ್ಥಿಯ ಬದುಕಿನ ಅನುಭವದ ದೃಷ್ಟಿಯಿಂದ, ಅಳವಡಿಸಿಕೊಳ್ಳುವ ಅಪಾರ ಸಾಧ್ಯತೆಗಳಿವೆ. ಆದುದರಿಂದ ವಿದ್ಯಾರ್ಥಿಗಳು ಸಮಾಜದ ಬಗ್ಗೆ ವಿಮರ್ಶಾತ್ಮಕ ತಿಳಿವಳಿಕೆಯನ್ನು ಪಡೆಯಲು ಸಾಧ್ಯವಾಗುವಂತಹ ವಿಷಯಗಳನ್ನು ಆಯ್ಕೆ ಮಾಡುವುದು ಮತ್ತು ಅವನ್ನು ಅರ್ಥಪೂರ್ಣ ಪಠ್ಯಕ್ರಮದ ರೂಪದಲ್ಲಿ ಪ್ರಸ್ತುತಪಡಿಸುವುದು ನಿಜಕ್ಕೂ ಒಂದು ಸವಾಲೇ ಸರಿ.

ಸಮಾಜ ವಿಜ್ಞಾನವನ್ನು ನಿಷ್ಪ್ರಯೋಜಕ ವಿಷಯವೆಂದರೆ ಪರಿಗಣಿಸಿ ಪ್ರಾಕೃತಿಕ ವಿಜ್ಞಾನಗಳಿಗಿಂತ ಕಡಿಮೆ ಮಹತ್ವ ನೀಡಲಾಗುತ್ತಿರುವುದರಿಂದ, ಇದು ಅತಿಯಾಗಿ ಅವಲಂಬನೆಯಿಂದ ಕೂಡಿದ ವಿಶ್ವದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲು, ರಾಜಕೀಯ ಹಾಗೂ ಆರ್ಥಿಕ ವಾಸ್ತವ ಸ್ಥಿತಿಗತಿಗಳೊಡನೆ ವ್ಯವಹರಿಸಲು ಸಾಮಾಜಿಕ, ಸಾಂಸ್ಕೃತಿಕ ಮತ್ತು ವಿಶ್ಲೇಷಣಾತ್ಮಕ ಕೌಶಲಗಳನ್ನು ಒದಗಿಸುತ್ತಿವೆಂಬುದನ್ನೂ ಒತ್ತಿ ಹೇಳಬೇಕಾಗುತ್ತದೆ.

ಸಮಾಜ ವಿಜ್ಞಾನವು ಕೇವಲ ಮಾಹಿತಿಯನ್ನು ವರ್ಗಾಯಿಸುತ್ತದೆಂಬ ಮತ್ತು ಪಠ್ಯಕೇಂದ್ರಿತ ಶಾಸ್ತ್ರವೆಂಬ ನಂಬಿಕೆಯಿದೆ. ಆದುದರಿಂದ ಪರೀಕ್ಷೆಗಾಗಿ ನೆನಪಿನಲ್ಲಿಡಬೇಕಾದ ಕೆಲವು ಸಂಗತಿಗಳನ್ನು ಸಾಲಾಗಿ ನಮೂದಿಸುವ ಬದಲು ಪರಿಕಲ್ಪನೆಯನ್ನು ಸ್ಪಷ್ಟವಾಗಿ ಅರಿತುಕೊಳ್ಳಲು ಸಹಾಯಕವಾಗುವ ವಸ್ತುಗಳತ್ತ ನಾವು ಕೇಂದ್ರೀಕರಿಸಬೇಕು. ಅರ್ಥವನ್ನು ಗ್ರಹಿಸದೆ ಕೇವಲ ಮಾಹಿತಿಯನ್ನಷ್ಟೇ ನೆನಪಿನಲ್ಲಿಡುವ ಬದಲು 'ಲರ್ನಿಂಗ್ ವಿತೌಟ್ ಬರ್ಡನ್' (೧೯೯೩) ವರದಿಯಲ್ಲಿ ಶಿಫಾರಸ್ಸು ಮಾಡಿರುವಂತೆ ಸಮಾಜೋ–ರಾಜಕೀಯ ವಾಸ್ತವತೆಗಳನ್ನು ವಿಶ್ಲೇಷಿಸುವ ಸಾಮರ್ಥ್ಯವನ್ನು ಒದಗಿಸುವ ಪರಿಕಲ್ಪನೆಗಳನ್ನು ಬೆಳೆಸುವುದಕ್ಕೆ ಒತ್ತು ನೀಡಬೇಕು.

ಈ ಸಮಾಜ ವಿಜ್ಞಾನ ವಿಷಯಗಳಲ್ಲಿ ವಿಶೇಷ ಜ್ಞಾನ ಪಡೆದ ವಿದ್ಯಾರ್ಥಿಗಳಿಗೆ ಹೆಚ್ಚಿನ ಉದ್ಯೋಗಾವಕಾಶಗಳು ಲಭ್ಯವಿಲ್ಲವೆಂಬ ಗ್ರಹಿಕೆ ಕೆಲವರಲ್ಲಿದೆ. ಆದರೆ ಈಗ ಅತಿ ಶೀಘ್ರವಾಗಿ ವಿಸ್ತಾರಗೊಳ್ಳುತ್ತಿರುವ ಸೇವಾವಲಯಗಳಲ್ಲಿ ಮತ್ತು ವಿಶ್ಲೇಷಣಾತ್ಮಕ ಮತ್ತು ಸೃಜನಶೀಲ ಕೌಶಲಗಳನ್ನು ಬೆಳೆಸುವ ಉದ್ಯೋಗಗಳಲ್ಲಿ ಸಮಾಜ ವಿಜ್ಞಾನದ ಪಾತ್ರ ಹೆಚ್ಚಾಗುತ್ತಿದೆ.

ನಮ್ಮಂತಹ ಬಹುಸಮುದಾಯವುಳ್ಳ ಸಮಾಜದಲ್ಲಿ ಎಲ್ಲ ಪ್ರಾದೇಶಿಕ ಕ್ಷೇತ್ರಗಳಿಗೆ ಮತ್ತು ಎಲ್ಲ ಸಾಮಾಜಿಕ ಗುಂಪುಗಳಿಗೆ ಪಠ್ಯಪುಸ್ತಕಗಳೊಡನೆ ಸಂಬಂಧ ಕಲ್ಪಿಸುವುದು ಅತಿಮುಖ್ಯ.

ಬೋಧನೆ ಮತ್ತು ಕಲಿಕೆಯಲ್ಲಿ ಸ್ಥಳೀಯ ಅಂಶಗಳನ್ನು ಅಳವಡಿಸಬೇಕು ಮತ್ತು ಸ್ಥಳೀಯ ಸಂಪನ್ಮೂಲವನ್ನು ಆಧರಿಸಿ ಶಾಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು.

ಸ್ವಾತಂತ್ರ್ಯ, ನಂಬಿಕೆ, ಪರಸ್ಪರ ಗೌರವ ಮತ್ತು ಬಹುತ್ವವನ್ನು ಗೌರವಿಸುವುದು ಇವೇ ಮುಂತಾದ ಮಾನವ ಮೌಲ್ಯಗಳನ್ನು ಜನರ ಮನಸ್ಸಿನಲ್ಲಿ ಮೂಡಿಸುವ ಗುರುತರ ಜವಾಬ್ದಾರಿ ಸಮಾಜ ವಿಜ್ಞಾನದ ಮೇಲಿದೆ. ಈ ಮೌಲ್ಯಗಳನ್ನು ನಾಶಪಡಿಸುವ ಶಕ್ತಿಗಳ ಬಗ್ಗೆ ಎಚ್ಚರವಹಿಸಲು ಸಹಾಯಕವಾಗುವಂತೆ ನೈತಿಕ ಮತ್ತು ಮಾನಸಿಕ ಶಕ್ತಿಯನ್ನು ಸಮಾಜ ವಿಜ್ಞಾನ ವಿದ್ಯಾರ್ಥಿಗಳಲ್ಲಿ ತುಂಬಬೇಕು. ಸಮಕಾಲೀನ ಕಾಳಜಿಯ ಭಾಗವಾಗಿ ಮಾಡುವಾಗ ಲಿಂಗ ಕಾಳಜಿಗಳನ್ನು ಸೇರಿಸುವುದು ಅಗತ್ಯ. ಇದಕ್ಕಾಗಿ ಐತಿಹಾಸಿಕವಾಗಿ ಹಾಗೂ ಸಮಕಾಲೀನವಾಗಿ ಮಹಿಳಾ ಹೋರಾಟದ ಮುಂಚೂಣಿಯಲ್ಲಿರುವ ವ್ಯಕ್ತಿಗಳನ್ನು ಪ್ರಧಾನವಾಗಿ ಬಿಂಬಿಸಬೇಕಾಗುತ್ತದೆ. ಇದಕ್ಕೆ ಪಿತೃಪ್ರಧಾನ ರಾಷ್ಟ್ರೀಯ ಚೌಕಟ್ಟಿನಿಂದ ಜ್ಞಾನಮೀಮಾಂಸೆಯ ಪರಿವರ್ತನೆ ಆಗಬೇಕಾಗುತ್ತದೆ.[೪೭]

ಒಟ್ಟಾರೆಯಾಗಿ ಸ್ವಾತಂತ್ರ್ಯಪೂರ್ವದ ಚರಿತ್ರೆ ಪಠ್ಯಪುಸ್ತಕಗಳಿಂದ ೨೦೦೯ರವರೆಗಿನ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಪಠ್ಯಪುಸ್ತಕಗಳು ಕಾಲದಿಂದ ಕಾಲಕ್ಕೆ ಬದಲಾವಣೆಗೆ ಒಳಗಾಗುತ್ತಲೇ ಸಾಗಿರುವುದು ಕಂಡುಬರುತ್ತದೆ. ಆದರೂ ಕೂಡ ಅವುಗಳಲ್ಲಿರುವ ನ್ಯೂನತೆಗಳನ್ನು ಹೋಗಲಾಡಿಸಲು ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು ೨೦೦೫ರ ಆಶಯದ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಮರಳಿ ೨೦೧೨ರ ತರುವಾಯ ಬದಲಾವಣೆಗೊಂಡಿವೆ. ಈ ಪಠ್ಯಪುಸ್ತಕಗಳು ಕೇಂದ್ರೀಯ ಪಠ್ಯಕ್ರಮಕ್ಕೆ ಅನುಗುಣವಾಗಿ ಸಿದ್ಧಪಡಿಸಲಾಗಿದೆ. ೫ನೇ ತರಗತಿಯ ಸಮಾಜ ವಿಜ್ಞಾನ ಕೋರ್ ವಿಷಯದಲ್ಲಿ ರಾಜ್ಯದ ೪ ವಿಭಾಗಗಳ ಪ್ರಮುಖ ವ್ಯಕ್ತಿಗಳಾದ ಸಾಹಿತಿ, ಕವಿ, ನಾಟಕಕಾರರು, ಹೋರಾಟಗಾರರು, ವಿಜ್ಞಾನಿಗಳು ಮುಂತಾದವರ ಕುರಿತು ತಿಳಿಸುವುದರೊಂದಿಗೆ ಆಯಾ ವಿಭಾಗದ ಐತಿಹಾಸಿಕ ಸ್ಥಳ, ಗಿರಿಧಾಮ, ಮಠಮಂದಿರ, ಉದ್ಯಾನ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಮುಂತಾದ ವಿಚಾರಗಳನ್ನು ಮೊದಲ ಅಧ್ಯಾಯದಲ್ಲಿ ಕೊಡಲಾಗಿದೆ. ಇದರಿಂದ ಮಕ್ಕಳಿಗೆ ಸ್ಥಳೀಯ ಚರಿತ್ರೆಯು ಸುಲಭವಾಗಿ ಅರಿಯಲು ಸಾಧ್ಯವಾಗುತ್ತದೆ. ಇನ್ನುಳಿದಂತೆ ಹಿಂದಿನ ವಿಷಯಗಳನ್ನೇ ಪಠ್ಯ ವಿಷಯಗಳನ್ನೇ ಇರಿಸಿದ್ದು ಹೊಸ ಹೊಸ ವಿಚಾರಗಳನ್ನು ಸೇರಿಸಲಾಗಿದೆ. ಆದರೆ ೨೦೧೨ರಲ್ಲಿ ಪ್ರಕಟಗೊಂಡ ಕೋರ್ ಪಠ್ಯಪುಸ್ತಕವು ಕೇಸರಿಕರಣಕ್ಕೆ ಒಳಗಾಗಿತ್ತೆಂಬ ಆಪಾದನೆಯೂ ಇದೆ. ಇದರ ವಿರುದ್ಧ ಡಾ. ಸಿ.ಎಸ್. ದ್ವಾರಕನಾಥ್‌ರವರು ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿ ಕೆಲವು ವಿಚಾರಗಳನ್ನು ಬೆಳಕಿಗೆ ತಂದರು. ಅಲ್ಲದೆ ಈ ವಿಚಾರ ಕುರಿತು ೨೦೧೨ರ ಫೆಬ್ರವರಿ ೧೪ರಂದು ಬೆಂಗಳೂರಿನ ಸೆಂಟ್ರಲ್ ಕಾಲೇಜ್‌ನ ಸೆಂಟ್ರಲ್ ಹಾಲಿನಲ್ಲಿ ಪಠ್ಯದಲ್ಲಿ ಕೇಸರೀಕರಣ ಎಂಬ ವಿಚಾರವನ್ನು ಆಧರಿಸಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯಿಂದ ಚರ್ಚೆ ಹಾಗೂ ಹೋರಾಟ ನಡೆಯಿತು. ಈ ಸಂದರ್ಭದಲ್ಲಿ ಡಾ. ಮರಳಸಿದ್ದಯ್ಯ, ಜಿ. ಗೋವಿಂದರಾವ್, ಡಿ. ಎಸ್.ಎಸ್. ವೆಂಕಟಸ್ವಾಮಿ, ಮಾಜಿ ಶಿಕ್ಷಣ ಸಚಿವ ವಿಶ್ವನಾಥ್ ದ್ವಾರಕನಾಥ್ ಸಿ.ಎಸ್. ಮುಂತಾದವರು ಈ ಸಭೆಯಲ್ಲಿ ಭಾಗವಹಿಸಿ ಪಠ್ಯವು ಕೇಸರೀಕರಣದಿಂದ ಪಾರಾಗಬೇಕೆಂದು ಹೇಳಿಕೆ ನೀಡಿದರು. ಹಾಗೆಯೇ ಕೇಸರೀಕರಣದಿಂದ ಪಠ್ಯವನ್ನು ಹೊರತರದಿದ್ದರೆ ಹೋರಾಟ ಮುಂದುವರೆಸುವುದಾಗಿ ಆಗಿನ

ಸರ್ಕಾರಕ್ಕೆ ಎಚ್ಚರಿಕೆಯನ್ನು ನೀಡಿದ್ದರು. ಅಲ್ಲದೆ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯೂ ಇದರ ಕುರಿತು ಪ್ರತಿಭಟನೆಗಳು ನಡೆದವು. ಈ ಚರ್ಚೆ ಸಾಮಾಜಿಕ ಕಳಕಳಿಗಿಂತ ರಾಜಕೀಯ ಪ್ರೇರಿತವಾಗಿದ್ದು ಸ್ಪಷ್ಟವಾಗಿ ಕಂಡುಬಂದದ್ದರ ಕುರಿತು ಸಭೆಗೆ ಹಾಜರಾದ ಹಲವರ ಅಭಿಪ್ರಾಯವಾಗಿದೆ. ಇದಕ್ಕೆ ಪ್ರತಿಯಾಗಿ ಪಠ್ಯಪುಸ್ತಕ ಸಮಿತಿಯ ನಿರ್ದೇಶಕರಾದ ಮುಂಡಬಡಿತ್ತಾಯ ಜಿ.ಎಸ್. ಅವರು ಪತ್ರಿಕೆಯ ಮೂಲಕ ಪ್ರತಿಕ್ರಿಯೆಯನ್ನು ನೀಡಿದರು.

**೨೦೦೫ರ ಎನ್‌ಸಿಎಫ್‌ನ ಆಶಯದ ಹಿನ್ನೆಲೆಯಲ್ಲಿ ಹೊರಬಂದ ಪಠ್ಯಪುಸ್ತಕ ಮತ್ತು ಪಠ್ಯಸೂಚಿಗಳ(ಸಿಲೆಬಸ್) ನಡುವಿನ ವ್ಯತ್ಯಾಸಗಳು**

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಿಗೆ ಕರ್ನಾಟಕ ರಾಜ್ಯ ಸರ್ಕಾರವು ೨೦೧೨ರಲ್ಲಿ ಪಠ್ಯಪುಸ್ತಕ ಬದಲಾವಣೆ ಮಾಡಿತು. ಈ ಕಾರ್ಯ ಹಂತ ಹಂತವಾಗಿ ನಡೆಯಿತು. ಈ ಪಠ್ಯಪುಸ್ತಕವು ೨೦೦೫ರ ರಾಷ್ಟ್ರೀಯ ಪಠ್ಯಕ್ರಮದ ಅನ್ವಯದಂತೆ ರಚಿಸಲು ಮುಂದಾಯಿತು. ಅದರಂತೆ ಇಂದು ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢ ಶಾಲೆಯ ಎಲ್ಲಾ ವಿಷಯಗಳನ್ನು ಬದಲಾವಣೆ ಮಾಡಲಾಗಿದೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳ ಸಮಾಜ ವಿಜ್ಞಾನದ ಒಂದು ಭಾಗದವಾದ ಚರಿತ್ರೆ ಪಠ್ಯಪುಸ್ತಕಗಳೂ ಸಹ ಬದಲಾಗಿವೆ. ಚರಿತ್ರೆ ಪಠ್ಯಪುಸ್ತಕಗಳನ್ನು ಬದಲಾವಣೆ ಮಾಡುವಾಗ ಅದಕ್ಕೆ ಅಗತ್ಯವಾದಂತಹ ಪಠ್ಯಸೂಚಿಯನ್ನು ತಜ್ಞರ ತಂಡವೊಂದು ರಚಿಸಿಕೊಟ್ಟಿದೆ. ಈ ತಜ್ಞರ ತಂಡದ ಪ್ರಮುಖರೆಂದರೆ ಡಾ. ವಿಜಯಪೂಣಚ್ಚ ತಂಬಂಡ, ಚರಿತ್ರೆ ವಿಭಾಗದ ಮುಖ್ಯಸ್ಥರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಡಾ. ನರೇಂದ್ರ ಪ್ರಸಾದ್ ಎಸ್., ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಜೆ.ಎಸ್.ಎಸ್. ಮಹಿಳಾ ಕಾಲೇಜು, ಮೈಸೂರು, ಡಾ. ಕೆ. ಮಹೇಶ್, ಹಿರಿಯಶ್ರೇಣಿ ಉಪನ್ಯಾಸಕರು, ಪ್ರಥಮದರ್ಜೆ ಕಾಲೇಜು, ಶಿಡ್ಲಘಟ್ಟ, ಡಾ. ಶಶಿಧರ, ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ ಮತ್ತು ಡಾ. ಪ್ರಮೀಳಾರಾವ್, ಸಿಡಬ್ಲ್ಯೂಡಿಎಸ್, ನವದೆಹಲಿ. ಈ ರಚನಾ ಕಾರ್ಯಕ್ಕೆ ಡಾ. ವಿಜಯ್ ಪೂಣಚ್ಚ ತಂಬಂಡ ಅವರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿತ್ತು. ಈ ತಂಡವು ರಚಿಸಿ ಕೊಟ್ಟ ಪಠ್ಯಸೂಚಿಗೆ ಅನುಗುಣವಾಗಿ ಬದಲಾದ ಪಠ್ಯಗಳನ್ನು ಪಠ್ಯಪುಸ್ತಕ ರಚನಾ ಸಮಿತಿಯು ಹೇಗೆ ಬಳಸಿಕೊಂಡು ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದೆ ಎಂಬುದು ತಿಳಿಯುವ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ ಪಠ್ಯಸೂಚಿ ಮತ್ತು ಪಠ್ಯಪುಸ್ತಕ ಮಧ್ಯ ಇರಬಹುದಾದ ಭಿನ್ನತೆಗಳನ್ನು ಈ ಮುಂದೆ ಗುರುತಿಸಲಾಗಿದೆ.

**ಅ. ಐದನೆಯ ತರಗತಿಯ ಚರಿತ್ರೆ ಪಠ್ಯಪುಸ್ತಕಗಳು**

ಪ್ರಸ್ತುತ ಐದನೆಯ ತರಗತಿಯಲ್ಲಿ ಎರಡು ಸೆಮಿಸ್ಟರ್‌ಗಳಿಗೆ ಅನುಗುಣವಾದ ಪಠ್ಯಸೂಚಿಯನ್ನು ಸಿದ್ಧಪಡಿಸಿದ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಪಠ್ಯಪುಸ್ತಕಗಳು ರಚನೆಯಾಗಿವೆ. ಈ ರೀತಿ ರಚನೆಯಾದ ಪಠ್ಯಸೂಚಿಯ ಮೊದಲ ಅಧ್ಯಾಯವು ಭಾರತ ಮತ್ತು ಅದರ ಜನರು ಎಂದಿದ್ದು ಅದರಲ್ಲಿ ನಾಲ್ಕು ಉಪಘಟಕಗಳನ್ನು ಒಳಗೊಂಡಿದೆ. ಆದರೆ ಪಠ್ಯಪುಸ್ತಕದಲ್ಲಿ ನಮ್ಮ ಸುತ್ತಮುತ್ತ ಎಂಬ ಅಧ್ಯಾಯವಿದೆ. ಇದರಲ್ಲಿ ಆರರಿಂದ ಏಳು ಉಪಘಟಕಗಳನ್ನು ಮಾಡಿಕೊಳ್ಳಲಾಗಿದೆ.

ಆದರೆ ಪಠ್ಯಸೂಚಿಯಲ್ಲಿ ತಿಳಿಸಲಾದ ಉಪಘಟಕದಲ್ಲಿ ಭಾರತದ ವಿಶಾಲತೆ, ಗಡಿಗಳು, ನದಿಗಳು, ಕರಾವಳಿ ಪ್ರದೇಶದ ಬಗ್ಗೆ ತಿಳಿಸುವಂತೆ ಸೂಚಿಸಲಾಗಿದೆ. ಅಲ್ಲದೇ ಅವುಗಳಲ್ಲಿ ಗಡಿ ಸಮಸ್ಯೆಗಳು, ಜಲವಿವಾದಗಳು, ಸುನಾಮಿ, ಅದರ ಪರಿಣಾಮಗಳ ಬಗ್ಗೆ ತಿಳಿಸಲಾಗಿದೆ. ಇದಕ್ಕೆ ಪ್ರತಿಯಾಗಿ ರಚಿತವಾದ ಚರಿತ್ರೆಯ ಐದನೆಯ ತರಗತಿಯ ಪಠ್ಯಪುಸ್ತಕವು ಕರ್ನಾಟಕದಲ್ಲಿ ನಾಲ್ಕು ವಿಭಾಗಗಳಿಗೆ ಮೊದಲ ಅಧ್ಯಾಯದ ವಿಷಯಗಳನ್ನು ಭಿನ್ನವಾಗಿ ರಚಿಸಿಕೊಂಡಿದೆ. ಬೆಂಗಳೂರು ವಿಭಾಗದ ಮೊದಲ ಅಧ್ಯಾಯ ನಮ್ಮ ಸುತ್ತಮುತ್ತ ಎಂದಿದೆ. ಇದರಲ್ಲಿ ಬೆಂಗಳೂರು ವಿಭಾಗದ ವಾಯುಗುಣ, ನದಿಗಳು, ಮಣ್ಣು, ಬೆಳೆಗಳು, ಅರಣ್ಯ ಸಂಪತ್ತು, ಜೀವಸಂಕುಲ, ಉದ್ದಿಮೆ, ಉದ್ಯೋಗಗಳು, ಉಡುಪು, ಆಹಾರ ಮತ್ತು ವಸತಿಯ ಬಗ್ಗೆ ತಿಳಿಸಿದ್ದಾರೆ. ನಂತರದ ಉಪಘಟಕವಾದ ಗತಕಾಲದ ನೆನಪುಗಳಲ್ಲಿ ಪಾಳೆಯಗಾರರು, ಕೆಳದಿಯ ನಾಯಕರು, ಚಿತ್ರದುರ್ಗದ ನಾಯಕರು ಮತ್ತು ಯಲಹಂಕ ನಾಡಪ್ರಭುಗಳ ಬಗ್ಗೆ ಪ್ರಮುಖ ನಾಯಕ ನಾಯಕಿಯರ ಪರಿಚಯ ಮಾಡಿಕೊಡಲಾಗಿದೆ. 'ಸುತ್ತೋಣ ಬಾ' ಎಂಬ ಉಪಘಟಕದಲ್ಲಿ ವಿಧಾನಸೌಧ, ಉಚ್ಚ ನ್ಯಾಯಾಲಯ, ಕಬ್ಬನ್ ಪಾರ್ಕ್, ಲಾಲ್‌ಬಾಗ್, ಬನ್ನೇರುಘಟ್ಟ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ನಮ್ಮ ಮೆಟ್ರೊ ಬಗ್ಗೆ ತಿಳಿಸಿದ್ದಾರೆ. ಬೆಂಗಳೂರು ಗ್ರಾಮಾಂತರ, ಚಿತ್ರದುರ್ಗ, ದಾವಣಗೆರೆ, ತುಮಕೂರು, ಚಿಕ್ಕಬಳ್ಳಾಪುರ, ಶಿವಮೊಗ್ಗ, ಕೋಲಾರ ಜಿಲ್ಲೆಗಳ ಐತಿಹಾಸಿಕ ಸ್ಥಳ, ದೇವಾಲಯ, ವನ್ಯಧಾಮ, ಪಕ್ಷಿಧಾಮ, ಮಠಗಳ ಬಗ್ಗೆ ತಿಳಿಸಿದ್ದಾರೆ. ಇದರಲ್ಲಿ ಕೇವಲ "ಹಜರತ ಬಾಬಾ ಹೈದರವಾಲಿ ದರ್ಗಾವನ್ನು ಹೊರತುಪಡಿಸಿ ಉಳಿಯದ ಯಾವುದೇ ಮುಸ್ಲಿಂ ಹಾಗೂ ಕ್ರೈಸ್ತ ಧರ್ಮ ಮಸೀದಿ ಬಗ್ಗೆ ಹಾಗೂ ಚರ್ಚ್‌ಗಳ ಬಗ್ಗೆ ಮಾಹಿತಿ ನೀಡುವ ಪ್ರಯತ್ನ ನಡೆದಿಲ್ಲ".[೮೮]

ಸಾಹಿತ್ಯ, ಕಲೆ, ಜನಪದ ಎಂಬ ಮತ್ತೊಂದು ಉಪಘಟಕದಲ್ಲಿ ವಾಚನ ಸಾಹಿತ್ಯ, ದಾಸಸಾಹಿತ್ಯ, ಹೊಸಗನ್ನಡ ಸಾಹಿತ್ಯದ ಪ್ರಮುಖ ಕವಿಗಳ ಪರಿಚಯ ಮಾಡಿಕೊಡಲಾಗಿದೆ. ಇದಲ್ಲದೆ ರಂಗಭೂಮಿ, ನೃತ್ಯ, ಚಿತ್ರಕಲೆ, ಚಲನಚಿತ್ರರಂಗದ ಪ್ರಮುಖ ನಾಯಕರ ಪರಿಚಯವನ್ನು ಮಾಡಿಕೊಡಲಾಗಿದೆ. ಇದು ಚರಿತ್ರೆ ಪಠ್ಯಪುಸ್ತಕದ ಮುಖ್ಯ ಭಾಗದಲ್ಲಿ ಸೇರ್ಪಡೆಯಾಗಿರುವುದು ಒಂದು ಅಸಮಂಜಸವೆಂದು ಕಂಡುಬರುತ್ತದೆ. ಭಾಷಾ ವಿಷಯದಲ್ಲಿ ಮಕ್ಕಳಿಗೆ ಇವರ ಪರಿಚಯ ಮಾಡಿಕೊಟ್ಟಿದ್ದರೆ ಉತ್ತಮವಾಗಿರುತ್ತಿತ್ತು. ಇದಕ್ಕೆ ಬದಲಾಗಿ ಐತಿಹಾಸಿಕ ಘಟನೆಗಳನ್ನು ತಿಳಿಸುವ ಪ್ರಯತ್ನ ಮಾಡಬಹುದಿತ್ತು. ಇದಕ್ಕೆ ಪಠ್ಯಸೂಚಿಯ ಐದನೆಯ ಉಪಘಟಕದಲ್ಲಿ ಸಿನಿಮಾ, ಸಾಹಿತ್ಯ, ಕ್ರೀಡೆಗಳ ಬಗ್ಗೆ ತಿಳಿಸಲಾಗಿದೆ. ಅದಕ್ಕೆ ಪೂರಕವಾಗಿ ಬರೆಯುವ ಪ್ರಯತ್ನ ನಡೆದಿದೆ ಎಂಬುದು ಕಂಡುಬಂದಿದೆ.

ಅಧ್ಯಾಯ ಎರಡಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿ ಭಾರತದ ಪ್ರಾಚೀನ ಇತಿಹಾಸ ಎಂಬ ಶೀರ್ಷಿಕೆ ನೀಡಲಾಗಿದೆ. ಇದರಲ್ಲಿ ಮಾನವನ ಜೀವವಿಕಾಸ ಮತ್ತು ಶಿಲಾಯುಗಗಳು ಉಪಘಟಕಗಳಾಗಿವೆ. ಪುಸ್ತಕದ ಎರಡನೆಯ ಅಧ್ಯಾಯ 'ನಮ್ಮ ಅತ್ಯಂತ ಪ್ರಾಚೀನ ನಗರಗಳು' ಎಂದಿದೆ. ಈ ಅಧ್ಯಾಯದಲ್ಲಿ ಹರಪ್ಪ ಒಂದು ಪ್ರಾಚೀನ ನಗರವೆಂದು ಅದರ ಮೂಲಕ ಸಿಂಧು ಬಯಲಿನ ನಾಗರಿಕತೆ ಬಗ್ಗೆ ತಿಳಿಸಲಾಗಿದೆ. ಆದರೆ ಪಠ್ಯಸೂಚಿ ತಿಳಿಸುವುದು ಮಾನವ

ಜೀವವಿಕಾಸ ಹೇಗೆ ನಡೆಯಿತು. ಶಿಲಾಯುಗದ ಮಾನವನ ಬಗ್ಗೆ ತಿಳಿಸದೇ ನೇರವಾಗಿ ನಾಗರಿಕತೆಯ ಬಗ್ಗೆ ತಿಳಿಸಿದ್ದಾರೆ. ಇದರಿಂದ ಆ ವಿಷಯಗಳಿಂದ ಮಕ್ಕಳು ವಂಚಿತರಾಗಿದ್ದಾರೆ.

ಅಧ್ಯಾಯ ಮೂರಕ್ಕೆ ಸಂಬಂಧಿಸಿದಂತೆ ಸಿಂಧೂ ನಾಗರಿಕತೆ ಎಂದು ಪಠ್ಯಸೂಚಿಯಲ್ಲಿ ತಿಳಿಸಿದ್ದಾರೆ. ಇದು ಪಠ್ಯಪುಸ್ತಕದ ೨ನೆಯ ಅಧ್ಯಾಯವಾಗಿದೆ. ಪಠ್ಯಸೂಚಿಯ ಉಪಘಟಕ ಮತ್ತು ಪಠ್ಯಪುಸ್ತಕದ ಉಪಘಟಕಗಳಿಗೆ ಬಹುತೇಕ ಸಾಮ್ಯತೆ ಇದೆ.

ಅಧ್ಯಾಯ ನಾಲ್ಕಕ್ಕೆ ಸಂಬಂಧಿಸಿದಂತೆ ವೇದಗಳ ಯುಗ ಎಂಬುದು ಪಠ್ಯಸೂಚಿಯಲ್ಲಿದೆ. ಪಠ್ಯಪುಸ್ತಕದಲ್ಲಿ ೩ನೆಯ ಅಧ್ಯಾಯವಾಗಿದೆ. ಆದರೆ ಎರಡರಲ್ಲಿ ಸಾಮ್ಯತೆಗಳು ಕಂಡುಬಂದಿವೆ.

ಅಧ್ಯಾಯ ಐದಕ್ಕೆ ಸಂಬಂಧಿಸಿದಂತೆ ಜೈನಧರ್ಮ ಮತ್ತು ಬೌದ್ಧ ಧರ್ಮ ಎಂದು ಪಠ್ಯಸೂಚಿ ತಿಳಿಸಿದೆ. ಪಠ್ಯಪುಸ್ತಕದಲ್ಲಿ ಹೊಸ ಮತಗಳ ಉದಯ ಎಂದು ಶೀರ್ಷಿಕೆ ನೀಡಲಾಗಿದೆ. ಬಹುತೇಕ ಎರಡೂ ಒಂದೇ ಅರ್ಥವನ್ನು ಒಳಗೊಂಡ ವಿಷಯಗಳಾಗಿವೆ. ಆದರೆ ಹೊಸ ಮತಗಳ ಉದಯಕ್ಕೆ ಕಾರಣವನ್ನು ಪಠ್ಯಸೂಚಿಸಿ ತಿಳಿದೆ. ಪಠ್ಯಪುಸ್ತಕದಲ್ಲಿ ಅದಕ್ಕೆ ಸರಿಯಾದ ಕಾರಣಗಳನ್ನು ತಿಳಿಸುವಲ್ಲಿ ವಿಫಲವಾಗಿದೆ. ಇದಲ್ಲದೆ ಜೈನ ಧರ್ಮದ ತತ್ವಗಳನ್ನು ಇನ್ನೂ ಉತ್ತಮವಾಗಿ ತಿಳಿಸಬಹುದಿತ್ತು. ಪಠ್ಯಸೂಚಿಯಲ್ಲಿ ಆರನೆಯ ಅಧ್ಯಾಯವು ಪ್ರಾಚೀನ ಉತ್ತರ ಭಾರತವೆಂದಿದೆ. ಈ ಅಧ್ಯಾಯದಲ್ಲಿ ಗಣರಾಜ್ಯಗಳು, ಮಹಾಜನಪದಗಳು ಮತ್ತು ವಿದೇಶಿಯರ ಆಗಮನದ ಪರಿಣಾಮವೆಂದಿದೆ. ಆದರೆ ಪಠ್ಯಪುಸ್ತಕದಲ್ಲಿ ಅಧ್ಯಾಯ ಐದರಲ್ಲಿಯೇ ಸಂಕ್ಷಿಪ್ತವಾಗಿ ಗಣರಾಜ್ಯ ಮತ್ತು ಮಹಾಜನಪದಗಳ ಬಗ್ಗೆ ತಿಳಿಸಿದ್ದಾರೆ. ಕೆಲವು ಗಣರಾಜ್ಯಗಳು ಮತ್ತು ಮಹಾಜನಪದಗಳ ಬಗ್ಗೆ ಉದಾಹರಣೆ ನೀಡಲಾಗಿದೆ. ಈ ಅಧ್ಯಾಯದಲ್ಲಿ ಎಷ್ಟು ಮಹಾಜನಪದಗಳು ಇದ್ದವು ಎಂದು ತಿಳಿಸಬಹುದಾಗಿತ್ತು. ಇದಲ್ಲದೇ ಅಲೆಗ್ಸಾಂಡರ್‌ನ ಭಾರತದ ಆಗಮನ ಬಗ್ಗೆ ತಿಳಿಸುವಂತೆ ಪಠ್ಯಸೂಚಿಯಲ್ಲಿ ತಿಳಿಸಲಾಗಿದೆ.[೮೯] ಆದರೆ ಅದರ ಉಲ್ಲೇಖವೂ ಪಠ್ಯಪುಸ್ತಕದಲ್ಲಿ ಇಲ್ಲ.

ಎರಡನೆಯ ಸೆಮಿಸ್ಟರ್‌ನಲ್ಲಿ ಚರಿತ್ರೆಯ ಮೊದಲ ಭಾಗ ರಾಜ್ಯ ಮತ್ತು ದೇಶದ ಪರಿಚಯ ಎಂದಿದೆ. ಇದರಲ್ಲಿ ಎರಡು ಅಧ್ಯಾಯಗಳಿವೆ. ಒಂದು ಚೆಲುವ ಕನ್ನಡನಾಡು, ಮತ್ತೊಂದು ಭಾರತ - ನಮ್ಮ ಹೆಮ್ಮೆ. ಈ ಅಧ್ಯಾಯದಲ್ಲಿ ಈ ಪಾಠದಲ್ಲಿ ಕನ್ನಡ ನಾಡಿನ ಹೆಸರಿನ ಉಲ್ಲೇಖದ ಬಗ್ಗೆ, ಕನ್ನಡ ನಾಡಿನ ಸೊಬಗು, ಕನ್ನಡಿಗರ ಸ್ವಭಾವ, ನಾಡಿನ ವೀರ ಮಹಿಳೆಯರು, ಕನ್ನಡ ಸಾಹಿತಿಗಳು, ಕನ್ನಡ ಸಾಹಿತ್ಯ, ಶಿಲ್ಪಕಲೆ, ಸಂಗೀತ, ನೃತ್ಯ, ಚಿತ್ರಕಲೆ ಮತ್ತು ಜ್ಞಾನವಿಜ್ಞಾನದ ಬಗ್ಗೆ ತಿಳಿಸಿದ್ದಾರೆ. ಆದರೆ ಪಠ್ಯಸೂಚಿಯಲ್ಲಿ ಇದರ ಉಲ್ಲೇಖವಿಲ್ಲ. ಇದು ನಮ್ಮ ಪ್ರಾದೇಶಿಕತೆಯನ್ನು ಪರಿಚಯಿಸುವ ದೃಷ್ಟಿಯಿಂದ ತಿಳಿಸಲಾಗಿದೆ ಎಂದೆನಿಸುತ್ತದೆ. ಆದರೆ ಮೊದಲ ಸೆಮಿಸ್ಟರ್‌ನ ಕೆಲವು ವಿಷಯಗಳಾದ ಸಾಹಿತಿಗಳು, ವಿಜ್ಞಾನಿಗಳು ಇಲ್ಲಿ ಪುನಃ ಉಲ್ಲೇಖವಿದೆ. ಆದ್ದರಿಂದ ಅಂತಹ ವಿಷಯಗಳಿಗೆ ಹೊರತಾಗಿ ಚಾರಿತ್ರಿಕ ವ್ಯಕ್ತಿಗಳು, ಘಟನೆಗಳ ಬಗ್ಗೆ ತಿಳಿಸುವ ಪ್ರಯತ್ನ ಮಾಡಬಹುದಿತ್ತು. ಭಾರತ-ನಮ್ಮ ಹೆಮ್ಮೆ ಎಂಬ ಪಾಠದಲ್ಲಿ ಭಾರತದ ಪ್ರಾಚೀನತೆ, ಭಾರತದ ಭವ್ಯತೆ, ಗಣಿತ ಕ್ಷೇತ್ರಕ್ಕೆ ಭಾರತೀಯರು ನೀಡಿದ ಕೊಡುಗೆ, ವಿದೇಶಗಳಲ್ಲಿ ಭಾರತದ ಸಂಸ್ಕೃತಿಯ

ಪ್ರಭಾವ ಮತ್ತು ಸಾರ್ವಕಾಲಿಕ ಮೌಲ್ಯಗಳ ಬಗ್ಗೆ ತಿಳಿಸಿರುವುದು ಔಚಿತ್ಯ ಪೂರ್ಣವಾಗಿದೆ. ಆದರೆ ಪಠ್ಯಸೂಚಿಯಲ್ಲಿ ಇದರ ಸೂಚನೆಗಳು ಅಥವಾ ಅಧ್ಯಾಯವನ್ನು ಅಳಡಿಸಿಲ್ಲ.

ಪಠ್ಯಸೂಚಿಯಲ್ಲಿ ಅಧ್ಯಾಯ ಏಳರಲ್ಲಿ ಮೌರ್ಯ ಯುಗದಲ್ಲಿ ಚಂದ್ರಗುಪ್ತ ಮೌರ್ಯ, ಅಶೋಕ, ಧರ್ಮ ಪ್ರಚಾರ, ಆಡಳಿತ, ಕಲೆ, ವಾಸ್ತುಶಿಲ್ಪ ಮತ್ತು ಅವನತಿ ನೀಡಿದ್ದಾರೆ. ಪಠ್ಯಪುಸ್ತಕದ ಈ ಅಧ್ಯಾಯದಲ್ಲಿ ಅದಕ್ಕೆ ಪೂರಕವಾಗಿ ವಿಷಯವಸ್ತುವಿದೆ.

ಪಠ್ಯಪುಸ್ತಕದ ನಾಲ್ಕನೆಯ ಅಧ್ಯಾಯ ಗುಪ್ತರ ಕಾಲ - ಸುವರ್ಣಯುಗವೆಂದಿದೆ. ಪಠ್ಯಸೂಚಿಯಲ್ಲಿ ಈ ಅಧ್ಯಾಯವು ೧೦ನೆಯ ಅಧ್ಯಾಯವಾಗಿದೆ. ಪಠ್ಯಸೂಚಿಯಲ್ಲಿ ೧ನೆಯ ಚಂದ್ರಗುಪ್ತನ ಬಗ್ಗೆ ತಿಳಿಸುವಂತೆ ಸೂಚಿಸಲಾಗಿದೆ. "ಆದರೆ ಪಠ್ಯಪುಸ್ತಕದಲ್ಲಿ ೧ನೆಯ ಚಂದ್ರಗುಪ್ತನ ಬಗ್ಗೆ ಒಂದು ವಾಕ್ಯವನ್ನು ಬರೆದಿಲ್ಲ".[೫೦] ಶುಂಗರು ಮತ್ತು ಕಣ್ವರ ಬಗ್ಗೆ, ಕುಶಾಣರ ಬಗ್ಗೆ ಅದರಲ್ಲಿ ಕಾನಿಷ್ಕನ ಪ್ರಾದೇಶಿಕತೆ, ಕಲೆ, ವಾಸ್ತುಶಿಲ್ಪ, ಸಾಹಿತ್ಯದ ಬಗ್ಗೆ ತಿಳಿಸುವಂತೆ ಪಠ್ಯಸೂಚಿಯ ೨ನೆಯ ಅಧ್ಯಾಯದಲ್ಲಿ ಸೂಚಿಸಲಾಗಿದೆ. ಆದರೆ ಪಠ್ಯಪುಸ್ತಕದಲ್ಲಿ ಈ ಸಾಮ್ರಾಜ್ಯಗಳ ಬಗ್ಗೆ ಉಲ್ಲೇಖಿಸಿಲ್ಲ.

ಪಠ್ಯಸೂಚಿಯ ೮ನೆಯ ಅಧ್ಯಾಯವು ಪ್ರಾಚೀನ ದಕ್ಷಿಣ ಭಾರತವೆಂದಿದೆ. ಇದರಲ್ಲಿ ಸಂಘಂ ಯುಗ, ಶಾತವಾಹನರು, ನಗರ ಮತ್ತು ಗ್ರಾಮೀಣ ಜೀವನ, ಧರ್ಮ, ಭಾಷೆ ಮತ್ತು ಸಾಹಿತ್ಯದ ಬಗ್ಗೆ ತಿಳಿಸಲಾಗಿದೆ. ಇದಲ್ಲದೆ ಕದಂಬರು-ಮಯೂರವರ್ಮ ಅವನ ಕೊಡುಗೆ, ಗಂಗರು-ದುರ್ವಿನೀತ, ಸಾಹಿತ್ಯಕ್ಕೆ ಅವನ ಕೊಡುಗೆ, ಕಲೆ, ವಾಸ್ತುಶಿಲ್ಪ ಮತ್ತು ಮಹಿಳೆಯರ ಸ್ಥಾನಮಾನದ ಮಾನದ ಬಗ್ಗೆ ತಿಳಿಸುವಂತೆ ಸೂಚಿಸಲಾಗಿದೆ. ಇದಕ್ಕೆ ಪೂರಕವಾಗಿ ಈ ಸೆಮಿಸ್ಟರ್ ೫ನೆಯ ಅಧ್ಯಾಯದಲ್ಲಿ ಆದಕ್ಕೆ ಪೂರಕವಾಗಿ ರಚಿಸಲಾಗಿದೆ. ಇದರಲ್ಲಿ ಗಂಗರ ದುರ್ವಿನೀತನ ಬಗ್ಗೆ ತಿಳಿಸಲಾಗಿಲ್ಲ. ಇದಲ್ಲದೆ ಹರ್ಷವರ್ಧನ, ಪಲ್ಲವರ ಬಗ್ಗೆ ತಿಳಿಸಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಐದನೆಯ ತರಗತಿಯ ಪಠ್ಯಸೂಚಿಗೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ನೋಡಿದಾಗ ಹೆಚ್ಚಿನ ಭಿನ್ನತೆಗಳು ಕಂಡುಬರುವುದಿಲ್ಲ. ಆದರೆ ಮೊದಲ ಸೆಮಿಸ್ಟರ್‌ನ ಮೊದಲು ಅಧ್ಯಾಯ ಹಾಗೂ ಎರಡನೆಯ ಸೆಮಿಸ್ಟರ್‌ನ ಮೊದಲ ಅಧ್ಯಾಯಗಳಲ್ಲಿ ಭಿನ್ನತೆಗಳು ಇವೆ. ಇದು ಪಠ್ಯಪುಸ್ತಕ ರಚನಾ ಸಮಿತಿಯವರು ತಮ್ಮ ಪರಿಮಿತಿಯಲ್ಲಿ ಅದನ್ನು ಸೇರ್ಪಡೆಗೊಳಿಸಿದ್ದಾರೆ ಎಂದೆನ್ನಿಸುತ್ತದೆ. ಇದಕ್ಕೆ ಅನೇಕ ಕಾರಣಗಳು ಇರಬಹುದು.

ಪಠ್ಯಸೂಚಿ(ಸಿಲೆಬಸ್)ಯ ಮೊದಲ ಅಧ್ಯಾಯದಲ್ಲಿ ಭಾರತದ ಆಂತರಿಕ ಸಮುದಾಯಗಳ ಬಗ್ಗೆ ವಿವರವಿದೆ. ಜಲ ವಿವಾದಗಳು, ಗಡಿ ವಿವಾದಗಳು ಇದಕ್ಕೆ ಸಂಬಂಧಿಸಿದ ಯುದ್ಧಗಳು, ಉತ್ತರ ಭಾರತ ಮತ್ತು ದಕ್ಷಿಣ ಭಾರತದ ನದಿಗಳು ಹೇಗೆ ಒಂದಕ್ಕೊಂದು ಅಂತರಸಂಬಂಧ ಹೊಂದಿದ ಬಗ್ಗೆ ವಿಶ್ಲೇಷಿಸಲಾಗಿದೆ. ಸುನಾಮಿಯ ಪರಿಣಾಮ ಬಗ್ಗೆ, ಭಾರತದ ಸೈನ್ಯದ ಸಮಸ್ಯೆಗಳು ಹೀಗೆ ಕೆಲವು ಉದ್ದೇಶಗಳನ್ನು ಆಧರಿಸಿದೆ. ಇದಕ್ಕನುಗುಣವಾಗಿ ಪಠ್ಯಸೂಚಿಯ ಉದ್ದೇಶಗಳನ್ನು ಈಡೇರಿಸುವ ಪ್ರಯತ್ನ ಈ ತರಗತಿಯಲ್ಲಿ ನಡೆದಿಲ್ಲ. ಭಾರತದ ವ್ಯಾಪಾರ, ಕೃಷಿ, ಜನಸಂಖ್ಯೆ, ವೈವಿಧ್ಯಮಯ ಸಂಸ್ಕೃತಿಯಲ್ಲದೆ, ವ್ಯಕ್ತಿಗಳ ಪರಿಚಯವಿದೆ. ಸಿನಿಮಾ, ಸಾಹಿತ್ಯ ಬಗ್ಗೆ ಈ ಅಧ್ಯಾಯದಲ್ಲಿ ಮಕ್ಕಳಿಗೆ ತಿಳಿಸುವ ಪ್ರಯತ್ನ ಮಾಡಲಾಗಿದೆ. ಪಠ್ಯಸೂಚಿಯಲ್ಲಿ

ಕ್ರೀಡೆಯಲ್ಲಿ ಸಾಧನೆ ಮಾಡಿದ ವ್ಯಕ್ತಿಗಳ ಬಗ್ಗೆ ತಿಳಿಸುವ ಉದ್ದೇಶವಿದೆ. ಆದರೆ ಪಠ್ಯಪುಸ್ತಕದಲ್ಲಿ ಒಬ್ಬ ಕ್ರೀಡಾಪಟುವಿನ ಬಗ್ಗೆ ತಿಳಿಸುವ ಪ್ರಯತ್ನಗಳು ನಡೆದಿಲ್ಲ.

ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿಯ ಚಟುವಟಿಕೆಯಲ್ಲಿ ಮುಂದಿನ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ತರಲು ಸೂಚಿಸಿದೆ. ಜಿಲ್ಲೆ, ತಾಲ್ಲೂಕು, ಹೋಬಳಿ, ಹಳ್ಳಿ, ನದಿ, ಹಳ್ಳ, ಬೆಟ್ಟ, ಕಾಡು, ಮೈದಾನ ಹಾಗೂ ಗಡಿಗಳನ್ನು ತಮ್ಮ ಸ್ವಂತ ಜಿಲ್ಲೆಗೆ ಸಂಬಂಧಿಸಿದಂತೆ ಗುರುತಿಸುವಂತೆ ತಿಳಿಸಿದೆ. ವೈವಿಧ್ಯಮಯ, ಮಣ್ಣು, ನೀರನ್ನು ಸಂಗ್ರಹಣೆ ಮಾಡುವುದು, ವಿವಿಧ ಎಲೆಗಳು, ಹೂಗಳನ್ನು ಕಾಗದದಿಂದ ತಯಾರಿಸುವುದು, ಸ್ಥಳೀಯ ಭಾಷೆಯಲ್ಲಿ ಮಕ್ಕಳ ವಿಳಾಸಗಳನ್ನು ಪರಿಚಯ ಮಾಡಿಕೊಡುವುದು, ಧಾರ್ಮಿಕ ಹಬ್ಬಗಳು, ಆಹಾರ ಹಬ್ಬ(ಸಸ್ಯಹಾರ-ಮಾಂಸಹಾರ)ಗಳನ್ನು ಮಾಡಿಸುವ ಉದ್ದೇಶವನ್ನು ಇಟ್ಟುಕೊಂಡು ಪಠ್ಯಪುಸ್ತಕದಲ್ಲಿ ಸಿದ್ಧಪಡಿಸ ಬೇಕೆಂಬುದು ಪಠ್ಯಸೂಚಿಯ ಆಶಯವಾಗಿದೆ. ಆದರೆ ಈ ಅಧ್ಯಾಯದಲ್ಲಿ ಕೇವಲ ತಮ್ಮ ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳಿಗೆ ಆದ್ಯತೆಯಿದೆ. ಹಿರಿಯರೊಂದಿಗೆ ಹೋಗಿ ನೋಡಿ ಮಾಹಿತಿ ಸಂಗ್ರಹಿಸಿ, ಸುತ್ತಮುತ್ತಲಿನ ಗುಡ್ಡ ಬೆಟ್ಟ, ಕಾಡುಗಳಿಗೆ ಚಾರಣ ಮಾಡಿ ಅನುಭವಗಳನ್ನು ಸಹಪಾಠಿಗಳೊಂದಿಗೆ ಹಂಚಿಕೊಳ್ಳಿ ಎಂಬ ಎರಡು ಚಟುವಟಿಕೆಗಳನ್ನು ಮಾತ್ರ ನೀಡಲಾಗಿದೆ. ಇದರಿಂದ ಪಠ್ಯಸೂಚಿಯ ಬಹುತೇಕ ಈ ಉದ್ದೇಶ ಈ ಅಧ್ಯಾಯದಲ್ಲಿ ಈಡೇರಿಸಲ್ಪಟ್ಟಿಲ್ಲ.

ಎರಡನೆಯ ಅಧ್ಯಾಯದಲ್ಲಿ ಪಠ್ಯಸೂಚಿ ತಿಳಿಸಿದ ಪ್ರಾಚೀನ ಭಾರತದ ಇತಿಹಾಸದಲ್ಲಿ ಮಾನವ ಸಂಘಜೀವಿ ಎಂಬುದನ್ನು ವಿವರಿಸಿದ್ದು, ಪ್ರಸ್ತುತ ಜೀವನದೊಂದಿಗೆ ಹೋಲಿಸಿ ಎಂಬ ಉದ್ದೇಶವಿದೆ. ಆದರೆ ಪಠ್ಯಪುಸ್ತಕ ಈ ಅಧ್ಯಾಯವನ್ನು ಸೇರ್ಪಡೆಗೊಳಿಸಿಲ್ಲ. ಪಠ್ಯಪುಸ್ತಕದಲ್ಲಿ ಈ ವಿಷಯ ಆದಿ ಮಾನವನ ಜೀವನಕ್ಕೂ ಮತ್ತು ಇಂದಿನ ಮಾನವನ ಜೀವನಕ್ಕೂ ಏನು ವ್ಯತ್ಯಾಸಗಳಿವೆ ಎಂಬುದನ್ನು ಮಕ್ಕಳು ತಿಳಿದುಕೊಳ್ಳಲು ಇದು ಸಹಾಯಕವಾಗುತ್ತಿತ್ತು.

ಸಿಂಧೂ ಬಯಲಿನ ನಾಗರಿಕತೆ ಅಧ್ಯಾಯಕ್ಕೆ ಸಂಬಂಧಿಸಿದಂತೆ, ಪಠ್ಯಸೂಚಿಯ ಉದ್ದೇಶ ಪ್ರಸ್ತುತ ನಗರ ಯೋಜನೆ ಬಗ್ಗೆ, ನಗರ ವಿನ್ಯಾಸಗಳ ಮೂಲ ತಿಳಿಯುವುದಾಗಿದೆ. ಆದರೆ ಪಠ್ಯಪುಸ್ತಕಗಳಲ್ಲಿ ಸಿಂಧೂ ಬಯಲಿನ ನಾಗರಿಕತೆ ಸಂದರ್ಭದಲ್ಲಿ ನಗರ ಯೋಜನೆ, ವಿನ್ಯಾಸ ಮತ್ತು ಇಟ್ಟಿಗೆ ಬಳಕೆ ತಿಳಿಸಲಾಗಿದೆ. ಆದರೆ ಪಠ್ಯಪುಸ್ತಕದಲ್ಲಿ ನೇರವಾಗಿ ಹೋಲಿಕೆ ಮಾಡಿ ಬರೆಯದಿದ್ದರೂ ಪಾಠ ಮಾಡುವ ಸಂದರ್ಭದಲ್ಲಿ ಶಿಕ್ಷಕರು ಹೋಲಿಕೆ ಮಾಡಿ ಮಕ್ಕಳಿಗೆ ಅರ್ಥೈಸಬೇಕಾಗಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಸಿಂಧೂ ನಾಗರಿಕತೆಯ ವಿವಿಧ ನಗರಗಳನ್ನು ಪಟ್ಟಿ ಮಾಡಿ ಮತ್ತು ಭಾರತದ ನಕ್ಷೆಯಲ್ಲಿ ಗುರುತಿಸಿ ಎಂದು ಸೂಚಿಸಲಾಗಿದೆ. ಪಠ್ಯಪುಸ್ತಕದಲ್ಲಿ ಈ ನಾಗರಿಕತೆಯ ನಗರದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಜೀವನದಲ್ಲಿ ಕಾಣುವ ಸಮಾನ ಅಂಶಗಳನ್ನು ಚರ್ಚಿಸಿ, ಜಗತ್ತಿನ ಪ್ರಾಚೀನ ನಾಗರಿಕತೆಗೆ ಸಂಬಂಧಿಸಿದ ಚಿತ್ರಗಳನ್ನು ಮಾಹಿತಿಯೊಂದಿಗೆ ಸಂಗ್ರಹಿಸಿ ಎಂದು ತಿಳಿಸಲಾಗಿದೆ. ಇಲ್ಲಿಯೂ ಸಹ ಪಠ್ಯಸೂಚಿಯ ಮೂಲ ಆಶಯ ಈಡೇರಿಲ್ಲ. ಇಂಥ ಅನೇಕ ಕೊರತೆಗಳನ್ನು ಕಾಣಬಹುದು.

ವೇದಗಳ ಯುಗ ಅಧ್ಯಾಯದಲ್ಲಿ ಪ್ರಸ್ತುತ ದಿನಗಳ ರಾಜಕೀಯ, ಸಾಮಾಜಿಕ ಅಸ್ಮಿತೆಗಳನ್ನು ತಿಳಿಸಲಾಗಿದೆ. ಪಂಚಾಯತ್, ಮದುವೆ, ಜಾತಿ, ಸ್ತರವಿನ್ಯಾಸಗಳನ್ನು ತಿಳಿಸುವ ಉದ್ದೇಶವಿದೆ. ಆದರೆ ಪಠ್ಯಪುಸ್ತಕದಲ್ಲಿ ಪೂರ್ವ ವೇದಗಳ ಕಾಲ ಮತ್ತು ಉತ್ತರ ವೇದಗಳ ಕಾಲದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಅಂಶಗಳಲ್ಲಿ ಆದಂತಹ ಬದಲಾವಣೆಗಳನ್ನು ತಿಳಿಸಿದ್ದಾರೆ. ಇದು ಪ್ರಸ್ತುತಕ್ಕೆ ಅನ್ವಯಿಸಿ ಹೇಳಬಹುದಿತ್ತು.

ಚಟುವಟಿಕೆಯಲ್ಲಿ ಪಠ್ಯಸೂಚಿಯು ಒಂದು ಕ್ಷೇತ್ರದಲ್ಲಿನ ವಿವಿಧ ಉದ್ಯೋಗಗಳನ್ನು ಪಟ್ಟಿ ಮಾಡಿ ಎಂದು ತಿಳಿಸಿದೆ. ಪಠ್ಯಪುಸ್ತಕದಲ್ಲಿ ವೇದ ಪಠಣದ ಧ್ವನಿ ಸುರುಗಳಿಗಳಲ್ಲಿ ವೇದ ಮಂತ್ರಗಳನ್ನು ಆಲಿಸಿರಿ ಮತ್ತು ಮಕ್ಕಳ ಸಚಿತ್ರ ರಾಮಾಯಣ ಮತ್ತು ಮಹಾಭಾರತವನ್ನು ಓದಿ ಆನಂದಿಸಿ ಎಂಬುದು ಚಟುವಟಿಕೆಯಾಗಿದೆ.

ಜೈನ ಧರ್ಮ ಮತ್ತು ಬೌದ್ಧ ಧರ್ಮ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿಯೂ ಹೇಗೆ ಹೊಸ ಮತಗಳು ಹುಟ್ಟಿದವು. ಪ್ರಸ್ತುತ ದಿನಗಳಲ್ಲಿ ಎಲ್ಲಾ ಧರ್ಮಗಳು ಹೇಗೆ ವಿನ್ಯಾಸ ಹೊಂದಿವೆ. ಈ ಧರ್ಮಗಳು ಅಂದು ಹೇಗೆ ವೈದಿಕ ಧರ್ಮದ ವಿರುದ್ಧ ಪ್ರತಿಭಟಿಸಿದವು ಎಂಬ ಉದ್ದೇಶವನ್ನು ಮಕ್ಕಳು ತಿಳಿಯುವರು ಎಂದು ತಿಳಿಸುತ್ತದೆ. ಅದಕ್ಕೆ ಅನುಗುಣವಾಗಿ ಪಠ್ಯಪುಸ್ತಕದಲ್ಲಿ ಹೊಸ ಮತಗಳ ಉದಯಕ್ಕೆ ಕಾರಣ. ಅಂದು ವೈದಿಕ ಧರ್ಮದಲ್ಲಿ ಇದ್ದ ಕಂದಾಚರಣೆಗಳ ಬಗ್ಗೆ ತಿಳಿಸುವ ಮೂಲಕ ಈ ಉದ್ದೇಶವನ್ನು ಈಡೇರಿಸಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಜೈನ ಮತ್ತು ಬೌದ್ಧ ಸ್ಥಳಗಳಿಗೆ ಭೇಟಿ ನೀಡುವುದು ಪಠ್ಯಸೂಚಿಯ ಉದ್ದೇಶವಾಗಿದೆ. ಪಠ್ಯಪುಸ್ತಕದಲ್ಲಿ ಇದಕ್ಕೆ ಪೂರಕವಾಗಿ ಜೈನ ಬಸದಿ ಬಗ್ಗೆ ತಿಳಿಯಿರಿ ಮತ್ತು ಚಿತ್ರ ಸಂಗ್ರಹಿಸಿ ಎಂದಿದೆ. ಬೌದ್ಧ ಧರ್ಮದ ಬಗ್ಗೆ ಚಟುವಟಿಕೆ ನೀಡುವ ಅಗತ್ಯತೆ ಇದೆ.

ದಕ್ಷಿಣ ಭಾರತದ ಪ್ರಾಚೀನ ಅರಸುಮನೆತನಗಳಲ್ಲಿ ದಕ್ಷಿಣ ಭಾರತದ ಕನ್ನಡ, ತಮಿಳು, ತೆಲುಗು ಮತ್ತು ಇತರೆ ಪ್ರಾದೇಶಿಕ ಸಂಸ್ಕೃತಿಗಳು ಹೇಗೆ ಹುಟ್ಟಿಕೊಂಡವು ಹಾಗೂ ಪ್ರಸ್ತುತ ಆರ್ಥಿಕತೆಗೆ ದೇವಾಲಯಗಳು ಮತ್ತು ನಗರದ ವ್ಯಾಪಾರಿ ಕೇಂದ್ರಗಳು ಪೂರಕವಾಗಿದೆ ಎಂಬುದನ್ನು ತಿಳಿಸುವುದಾಗಿದೆ. ಇದಕ್ಕೆ ಪಠ್ಯಪುಸ್ತಕದಲ್ಲಿ ಕದಂಬ, ಗಂಗ, ಹೊಯ್ಸಳ, ರಾಷ್ಟ್ರಕೂಟ, ಪಲ್ಲವ, ಚೋಳ ಅರಸರ ಕಾಲದಲ್ಲಿ ಆದ ಸಾಹಿತ್ಯ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಬೆಳವಣಿಗೆಯನ್ನು ತಿಳಿಸಲಾಗಿದೆ. ಅಲ್ಲದೆ ಕಂಚಿ, ಮಧುರೈ, ಬನವಾಸಿ, ಬೇಲೂರು, ಹಳೇಬೀಡಿನಂತಹ ಹಲವಾರು ಸ್ಥಳಗಳು ಇಂದು ವ್ಯಾಪಾರ, ವಾಣಿಜ್ಯ, ಧಾರ್ಮಿಕ, ಯಾತ್ರಾ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿವೆ.

ಚಟುವಟಿಕೆಗೆ ಸಂಬಂಧಿಸಿದಂತೆ ನಗರ ವ್ಯಾಪಾರಿ ಕೇಂದ್ರಗಳನ್ನು ಪಟ್ಟಿ ಮಾಡಿ ಹಾಗೂ ದಕ್ಷಿಣ ಭಾರತದ ನಕ್ಷೆಯಲ್ಲಿ ಪ್ರಾಚೀನ ಮತ್ತು ಆಧುನಿಕ ನಗರ ಮತ್ತು ಬಂದರುಗಳನ್ನು ತೋರಿಸಿ. ದೇವಾಲಯ, ಬಸದಿ ಚೈತ್ಯಾಲಯಗಳಿಗೆ ಕ್ಷೇತ್ರ ಪ್ರವಾಸ ಕೈಗೊಳ್ಳಿ ಎಂಬ ಚಟುವಟಿಕೆ ನೀಡಲಾಗಿದೆ. ಪಠ್ಯಪುಸ್ತಕದಲ್ಲಿ ಚಾಲುಕ್ಯ ಮತ್ತು ಪಲ್ಲವರ ವಾಸ್ತುಶಿಲ್ಪದ ಚಿತ್ರಗಳನ್ನು ಮಾಹಿತಿ ಯೊಂದಿಗೆ ಸಂಗ್ರಹಿಸಿ ಹಾಗೂ ಗೊಮ್ಮಟೇಶ್ವರನ ಮೂರ್ತಿಯನ್ನು ಮಣ್ಣಿನಿಂದ ರಚಿಸಿ, ನಿಮ್ಮ

ಸುತ್ತಮುತ್ತಲಿನ ವೀರಗಲ್ಲುಗಳನ್ನು ವೀಕ್ಷಿಸಿ ಮಾಹಿತಿ ಸಂಗ್ರಹಿಸಿ ಎಂಬ ಚಟುವಟಿಕೆಗಳನ್ನು ನೀಡಿದ್ದಾರೆ. ಇದಲ್ಲದೆ ಶ್ರವಣಬೆಳಗೊಳಕ್ಕೆ ಭೇಟಿ ನೀಡಿ ಎಂಬ ಕ್ಷೇತ್ರಕಾರ್ಯದ ಚಟುವಟಿಕೆ ನೀಡಲಾಗಿದೆ. ಪಠ್ಯಪುಸ್ತಕದಲ್ಲಿ ಕೆಲವು ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿ ಎಂಬ ಚಟುವಟಿಕೆಯೂ ಸಹ ಇದೆ. ತೆಲುಗಿನ ಸಂಸ್ಕೃತಿಯ ಬಗ್ಗೆ ಮಕ್ಕಳಿಗೆ ಉಪಯುಕ್ತವಾಗುವಂತಹ ಮಾಹಿತಿಯನ್ನು ನೀಡಬಹುದಾಗಿತ್ತು. ಏಕೆಂದರೆ ಪಠ್ಯಸೂಚಿಯಲ್ಲಿ ಅಂತಹ ವಿಷಯಗಳಿಗೆ ಆದ್ಯತೆ ನೀಡುವಂತೆ ಸೂಚಿಸಲಾಗಿದೆ.

ಮೌರ್ಯ ಸಾಮ್ರಾಜ್ಯ ಅಧ್ಯಾಯಕ್ಕೆ ಸಂಬಂಧಿಸಿದಂತೆ ಅಶೋಕ ಚಕ್ರವರ್ತಿ ಒಬ್ಬ ಆಧುನಿಕ ಭಾರತಕ್ಕೆ ಮಾದರಿಯಾದ ಬಗ್ಗೆ ತಿಳಿಯುವುದು. ಹೇಗೆಂದರೆ ಅಶೋಕ ಚಕ್ರ, ನಾಣ್ಯ ಮುಂತಾದವುಗಳಿಂದ. ಪ್ರಸ್ತುತ ಜಿಲ್ಲೆ, ತಾಲ್ಲೂಕು ಮತ್ತು ಹೋಬಳಿ ಆಡಳಿತದ ಮೂಲವನ್ನು ಮೌರ್ಯ ಆಡಳಿತ ಪದ್ಧತಿಯಿಂದ ತಿಳಿಯುವುದು ಪಠ್ಯಸೂಚಿಯ ವಿಷಯವಾಗಿದೆ. ಇದಕ್ಕೆ ಪೂರಕವಾಗಿ ಅಶೋಕ ಚಕ್ರವರ್ತಿಯ, ಶಾಸನ, ಸ್ತಂಭಗಳು, ರಾಷ್ಟ್ರಲಾಂಛನದ ಬಗ್ಗೆ ತಿಳಿಸಲಾಗಿದೆ. ಇದಲ್ಲದೆ ಮೌರ್ಯರ ಆಡಳಿತ, ಕೇಂದ್ರಾಡಳಿತ, ಪ್ರಾಂತ್ಯಾಡಳಿತ, ಗ್ರಾಮಾಡಳಿತ ಬಗ್ಗೆ ತಿಳಿಸಿದ್ದಾರೆ. ಇದರಿಂದ ಪಠ್ಯಸೂಚಿಯ ಮೂಲ ಆಶಯ ಇಲ್ಲಿ ಪೂರ್ಣಗೊಂಡಿದೆ.

ಚಟುವಟಿಕೆಗೆ ಸಂಬಂಧಪಟ್ಟಂತೆ ಪಠ್ಯಸೂಚಿಯಲ್ಲಿ ಮೌರ್ಯರ ಸ್ಮಾರಕಗಳ ಚಿತ್ರ ಸಂಗ್ರಹಣೆ ಮತ್ತು ಅವುಗಳ ಚಿತ್ರ ಬರೆಯಿರಿ ಹಾಗೂ ಬೋಧನೆಯ ಸಂದರ್ಭದಲ್ಲಿ ಬಳಸಿಕೊಳ್ಳಿ ಎಂಬ ಉದ್ದೇಶವಿದೆ. ಅದಕ್ಕೆ ಪೂರಕವಾಗಿ ಮೌರ್ಯರ ವಾಸ್ತುಶಿಲ್ಪ ಚಿತ್ರಗಳನ್ನು ಸಂಗ್ರಹಿಸಿ ಆಲ್ಬಂ ತಯಾರಿಸಿ ನೀಡಿದ್ದಾರೆ. ಈ ಅಧ್ಯಾಯದಲ್ಲಿ ಚಟುವಟಿಕೆಗೆ ಸಂಬಂಧಿಸಿದಂತೆ ಸಾಮ್ಯತೆಗಳು ಪಠ್ಯಸೂಚಿ ಹಾಗೂ ಪಠ್ಯಪುಸ್ತಕದಲ್ಲಿ ಕಂಡು ಬರುತ್ತದೆ.

ಗುಪ್ತರ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿ ಈ ಉದ್ದೇಶವಿದೆ. ಆಯುರ್ವೇದ ಔಷಧ ಮೂಲ, ಭೌತಿಕ ವಿಜ್ಞಾನ, ಗಣಿತ, ಜ್ಯೋತಿಷ್ಯ, ಭಾಷೆಗಳ ಬಗ್ಗೆ ಮಕ್ಕಳು ತಿಳಿಯಬೇಕೆಂಬುದು ಇದರ ಆಶಯ. ಇದಕ್ಕೆ ಸಂಬಂಧವಾಗಿ ಪಠ್ಯಪುಸ್ತಕದಲ್ಲಿ ಗುಪ್ತರ ಕಾಲದಲ್ಲಿ ಬೆಳವಣಿಗೆ ಹೊಂದಿದ ವಿಜ್ಞಾನ, ಗಣಿತ, ಖಗೋಳಶಾಸ್ತ್ರ, ಲೋಹ ವಿಜ್ಞಾನ, ಆಯುರ್ವೇದ, ಚಿತ್ರಕಲೆ ಮುಂತಾದವುಗಳನ್ನು ತಿಳಿಸುವ ಮೂಲಕ ಈ ಉದ್ದೇಶ ಈಡೇರಿಸಲ್ಪಟ್ಟಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಗುಪ್ತರ ಕಲೆ ಮತ್ತು ವಾಸ್ತುಶಿಲ್ಪದ ಕೇಂದ್ರಗಳಿಗೆ ಭೇಟಿ ನೀಡಿ, ವೈಜ್ಞಾನಿಕ ಅನ್ವೇಷಣೆಗಳ ಮಹತ್ವವನ್ನು ಪಟ್ಟಿ ಮಾಡಿ ಎಂಬ ಚಟುವಟಿಕೆ ನೀಡಲಾಗಿದೆ. ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಪುಸ್ತಕದಲ್ಲಿ ಪ್ರಾಚೀನ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಚಿತ್ರಗಳನ್ನು ಮಾಹಿತಿಯೊಂದಿಗೆ ಸಂಗ್ರಹಿಸಿ ಹಾಗೂ ಸಮುದ್ರಗುಪ್ತ, ಎರಡನೆಯ ಚಂದ್ರಗುಪ್ತ ವಿಕ್ರಮಾದಿತ್ಯ, ಕಾಳಿದಾಸ, ಆರ್ಯಭಟ, ವರಾಹಮಿಹಿರ ಮತ್ತು ವಾಗ್ಭಟರ ಜೀವನ ಚರಿತ್ರೆಯನ್ನು ಓದಿ ಎಂಬ ಚಟುವಟಿಕೆ ಕೊಡಲಾಗಿದೆ. ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿನ ವಿಷಯಕ್ಕೂ ಮತ್ತು ಪಠ್ಯಪುಸ್ತಕದ ವಿಷಯಕ್ಕೂ ವ್ಯತ್ಯಾಸವಿರುವುದು ಕಂಡುಬರುತ್ತದೆ.

ಒಟ್ಟಾರೆ ಐದನೆಯ ತರಗತಿಯ ಪಠ್ಯಸೂಚಿಯ ಉದ್ದೇಶಗಳನ್ನು ಪಠ್ಯಪುಸ್ತಕದೊಂದಿಗೆ ಹೋಲಿಸಿದಾಗ ಕೆಲವು ಅಧ್ಯಾಯಗಳ ಮೂಲ ಆಶಯಗಳನ್ನು ಕೈಬಿಟ್ಟಿರುವುದು ಕಂಡುಬರುತ್ತದೆ. ಇದಲ್ಲದೆ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಪಠ್ಯಸೂಚಿ ನೀಡಿರುವ ಚಟುವಟಿಕೆಗಳು ಕೇವಲ ಎರಡು ಅಧ್ಯಾಯದಲ್ಲಿ ಸಾಮ್ಯತೆ ಕಂಡುಬರುತ್ತದೆ. ಉಳಿದ ಅಧ್ಯಾಯಗಳಲ್ಲಿ ಭಿನ್ನತೆಗಳೇ ಹೆಚ್ಚಾಗಿರುವುದು ಕಂಡುಬಂದಿದೆ.

## ಆ. ಆರನೆಯ ತರಗತಿಯ ಚರಿತ್ರೆ ಪಠ್ಯಪುಸ್ತಕಗಳು

ಪಠ್ಯಸೂಚಿಯೂ ಆರನೆಯ ತರಗತಿಯ ಎರಡೂ ಸೆಮಿಸ್ಟರ್‌ಗೆ ಅನುಗುಣವಾಗಿ ಒಟ್ಟು ೧೧ ಅಧ್ಯಾಯವನ್ನು ಸಿದ್ಧಪಡಿಸಿಕೊಟ್ಟಿದೆ. ಅದಕ್ಕೆ ಅನುಗುಣವಾಗಿ ಪಠ್ಯಪುಸ್ತಕ ರಚನಾ ಸಮಿತಿಯವರು ಸೆಮಿಸ್ಟರ್ ಪದ್ಧತಿಗೆ ಅನುಗುಣವಾಗಿ ವಿಭಾಗ ಮಾಡಿಕೊಂಡು ಪಠ್ಯಪುಸ್ತಕವನ್ನು ರಚಿಸಿಕೊಟ್ಟಿದ್ದಾರೆ. ಮೊದಲ ಸೆಮಿಸ್ಟರ್‌ನಲ್ಲಿ ಆರು ಅಧ್ಯಾಯಗಳನ್ನು ಉಳಿದ ಅಧ್ಯಾಯಗಳನ್ನು ಎರಡನೆಯ ಸೆಮಿಸ್ಟರ್‌ನಲ್ಲಿ ಅಳವಡಿಸಿಕೊಳ್ಳಲಾಗಿದೆ. ಪಠ್ಯಪುಸ್ತಕದಲ್ಲಿ ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯದ ವಿಷಯಗಳು ಪಠ್ಯಸೂಚಿಯ ೩ನೆಯ ಅಧ್ಯಾಯದಲ್ಲಿ ಸೇರ್ಪಡೆಗೊಂಡಿವೆ. ಇದರಲ್ಲಿ ಭಾರತ ಮತ್ತು ಹೊರಪ್ರಪಂಚ, ಭಾರತದ ಇತಿಹಾಸದಲ್ಲಿ ರಜಪೂತರು, ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಮತ್ತು ಚೋಳರು, ಧಾರ್ಮಿಕ-ಸಾಮಾಜಿಕ ಸುಧಾರಣಾ ಚಳುವಳಿ ಮತ್ತು ದಿಲ್ಲಿಯ ಸುಲ್ತಾನರು ಎಂಬ ಪಾಠಗಳಿಗೆ. ಈ ಪಾಠಗಳಲ್ಲಿ ಪಠ್ಯಸೂಚಿಯೂ ಸೂಚಿಸಿದ ವಿಷಯಕ್ಕೆ ಅನುಕ್ರಮವಾಗಿ ಪಠ್ಯಪುಸ್ತಕವನ್ನು ಪಾಠಗಳಲ್ಲಿ ಪಠ್ಯಸೂಚಿಯೂ ಸೂಚಿಸಿದ ವಿಷಯಕ್ಕೆ ಅನುಕ್ರಮವಾಗಿ ಪಠ್ಯಪುಸ್ತಕವನ್ನು ರಚನಾ ಸಮಿತಿಯು ವ್ಯವಸ್ಥಿತವಾಗಿ ಸಿದ್ಧಪಡಿಸಿಕೊಟ್ಟಿದೆ. ಆದರೆ ಅದ್ವೈತ, ವಿಶಿಷ್ಟಾದ್ವೈತ, ದ್ವೈತಸಿದ್ಧಾಂತ ಇನ್ನೂ ಹೆಚ್ಚಿನ ವಿಷಯವನ್ನು ಮಕ್ಕಳಿಗೆ ತಿಳಿಸುವ ಅವಶ್ಯಕತೆ ಇದೆ.

ಎರಡನೆಯ ಸೆಮಿಸ್ಟರ್‌ನಲ್ಲಿ ಪಠ್ಯಸೂಚಿಯ ವಿಷಯಕ್ಕೆ ಅನುಕ್ರಮವಾಗಿ ಭಕ್ತಿಪಂಥ, ವಿಜಯನಗರ ಸಾಮ್ರಾಜ್ಯ, ಬಹಮನಿ ಸಾಮ್ರಾಜ್ಯ, ಮೊಘಲ್ ಸಾಮ್ರಾಜ್ಯ, ಛತ್ರಪತಿ ಶಿವಾಜಿ, ಮೈಸೂರು ರಾಜ್ಯ, ಕೆಳದಿ, ಚಿತ್ರದುರ್ಗ ಮತ್ತು ಯಲಹಂಕ ನಾಯಕರು, ಕೊಡಗು, ಕಿತ್ತೂರು, ತುಳುನಾಡು ಮತ್ತು ಹೈದರಾಬಾದ್ ಕರ್ನಾಟಕದ ಬಗ್ಗೆ ವ್ಯವಸ್ಥಿತವಾಗಿ ರಚಿಸಲಾಗಿದೆ. ಆದರೆ ಪಠ್ಯಸೂಚಿಯಲ್ಲಿ ತಿಳಿಸಿರುವ ಕೆಲವು ವಿಷಯಗಳಾದ ವಿಜಯನಗರ ನಾಲ್ಕು ಮನೆತನಗಳ ಬಗ್ಗೆ ತಿಳಿಸುವ ಅವಶ್ಯಕತೆ ಇದೆ. ಬಹಮನಿ ಸುಲ್ತಾನರ ಅವನತಿ ಬಗ್ಗೆ ಮತ್ತು ಅದರ ಭಾಗಗಳಾದ ಬಿರಾರ್‌ನ ಸುಲ್ತಾನ, ಅಹಮದ್‌ನಗರದ ಸುಲ್ತಾನ, ಗೋಲ್ಕಂಡ ಸುಲ್ತಾನ, ಬೀದರ್‌ನ ಬಗ್ಗೆ ತಿಳಿಸಲಾಗಿಲ್ಲ. ಕೇವಲ ಬಿಜಾಪುರದ ಆದಿಷಾಹಿ ಮನೆತನದ ಬಗ್ಗೆ ತಿಳಿಸಲಾಗಿದೆ. ಇದು ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಹೆಚ್ಚಾಗಬಹುದೆಂದು ಈ ರೀತಿ ಮಾಡಿರಬಹುದು. ಮೊಘಲ್ ಸಾಮ್ರಾಜ್ಯದಲ್ಲಿ ಜಹಗೀರ್ ಮತ್ತು ಷಹಜಾನನ ಬಗ್ಗೆ ಒಂದೇ ವಾಕ್ಯದಲ್ಲಿ ಹೇಳಿ ಮುಂದುವರೆದಿದೆ. ಆದರೆ ಷೇರಷಾಹನ ಬಗ್ಗೆ ಪಠ್ಯಸೂಚಿ ತಿಳಿಸುವಂತೆ ಸೂಚಿಸಿದ್ದರೂ ಸಹ ಪಠ್ಯಪುಸ್ತಕದಲ್ಲಿ ಷೇರಷಾಹನ

ಬಗ್ಗೆ ಉಲ್ಲೆಖಗಳಿಲ್ಲ.[೫೧] ಒಟ್ಟಾರೆ ಈ ಪಠ್ಯಪುಸ್ತಕವು ಪಠ್ಯಸೂಚಿಯ ಸಂಪೂರ್ಣ ಭಾಗಗಳನ್ನು ಬಳಸಿಕೊಂಡು ಪಠ್ಯಪುಸ್ತಕವನ್ನು ರಚಿಸಲಾಗಿದೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಆರನೆಯ ತರಗತಿಯ ಮೊದಲ ಅಧ್ಯಾಯವಾದ ಭಾರತ ಮತ್ತು ಹೊರ ಪ್ರಪಂಚ ಅಧ್ಯಾಯದಲ್ಲಿ ಪಠ್ಯಸೂಚಿಯು ಭಾರತ ಇತರೆ ದೇಶಗಳೊಂದಿಗೆ ಹೊಂದಿರುವ ಸಂಬಂಧ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಭಾರತದಲ್ಲಿ ಹೇಗೆ ಪ್ರಭಾವ ಬೀರಿವೆ. ಭಾರತ ಅರೇಬಿಕ್, ಮುಂಗೋಲಿಯ ಮತ್ತು ತುರ್ಕಿ ದೇಶಗಳೊಂದಿಗೆ ಹೊಂದಿರುವ ಸಾಂಸ್ಕೃತಿಕ ಮತ್ತು ವಾಣಿಜ್ಯ ಸಂಬಂಧವನ್ನು ಮಕ್ಕಳಿಗೆ ತಿಳಿಸುವ ಉದ್ದೇಶವಿದೆ. ಪಠ್ಯಪುಸ್ತಕದಲ್ಲಿ ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಉದಯ ಹಾಗೂ ಧರ್ಮದ ಬೋಧನೆಗಳ ಬಗ್ಗೆ ತಿಳಿಸಿದ್ದಾರೆ. ಈ ಧರ್ಮಗಳು ಭಾರತದಲ್ಲಿ ಹೇಗೆ ಪ್ರಚಾರಗೊಂಡವು ಎಂಬುದರ ಬಗ್ಗೆ ಉಲ್ಲೇಖಗಳಿಲ್ಲ. ಇದು ಪಠ್ಯಸೂಚಿಯ ಆಶಯವಾಗಿತ್ತು. ಅರಬ್‌ರು, ಮಂಗೋಲನ್ನರು, ಟರ್ಕರು ಭಾರತದ ಮೇಲೆ ಮಾಡಿದ ದಾಳಿ ಮಾಡುವ ಮೂಲಕ ಮುಂದೆ ಹೇಗೆ ಆ ದೇಶಗಳೊಂದಿಗೆ ಸಂಬಂಧ ಬೆಳೆಯಿತು ಎಂಬುದನ್ನು ತಿಳಿಸಿದ್ದಾರೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಧರ್ಮದ ಸ್ಥಾಪಕರ ಚಿತ್ರ ಸಂಗ್ರಹಿಸಿ ಹಾಗೂ ಈ ಧರ್ಮಗಳ ಹಬ್ಬ ಮತ್ತು ಆಚಾರ ಪದ್ಧತಿಗಳ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ ಸೂಚಿಸಿದೆ. ಇದಕ್ಕೆ ಪ್ರತಿಯಾಗಿ ಪಠ್ಯಪುಸ್ತಕದಲ್ಲಿ ಬೈಬಲಿನ ದೃಷ್ಟಾಂತ ಕಥೆಗಳನ್ನು ಓದಿ, ಯೇಸುವಿನ ಜೀವನ ಚರಿತ್ರೆ ಓದಿ, ಕುರಾನ್ ಪಠಣವನ್ನು ಆಲಿಸಿ, ಪ್ರವಾದಿ ಮಹಮ್ಮದರ ಜೀವನ ಚರಿತ್ರೆ ಓದಿ, ಭೂಪಟದಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಮತಗಳಿಗೆ ಸಂಬಂಧಿಸಿದ ಸ್ಥಳಗಳನ್ನು ಗುರುತಿಸುವ ಚಟುವಟಿಕೆ ನೀಡಲಾಗಿದೆ. ಇದರಿಂದ ಇಲ್ಲಿಯೂ ಸಹ ಭಿನ್ನವಾದ ಮತ್ತು ವಿಷಯಕ್ಕೆ ಪೂರಕವಾದ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ನೀಡಲಾಗಿದೆ.

ರಜಪೂತರ ಪಾಠಕ್ಕೆ ಸಂಬಂಧಿಸಿದಂತೆ ನೀಡಿರುವ ಪಠ್ಯಸೂಚಿಯಲ್ಲಿ ಮುಖ್ಯ ಉದ್ದೇಶಗಳಾದ ರಜಪೂತರ ಕೊಡುಗೆಗಳು, ಗೂರ್ಜರರು ಅರಮನೆಗಳಿಗೆ ನೀಡಿರುವ ಕೊಡುಗೆ, ಅವರ ಆಡಳಿತ, ಸಾಮಾಜಿಕ, ಆರ್ಥಿಕ ಜೀವನದ ತಿಳಿಸುವುದಾಗಿದೆ. ಇದಕ್ಕೆ ಪೂರಕವಾಗಿ ಈ ಅಧ್ಯಾಯದಲ್ಲಿ ಎಲ್ಲಾ ಉದ್ದೇಶಗಳನ್ನು ಪಠ್ಯಪುಸ್ತಕದಲ್ಲಿ ಈಡೇರಿಸಲಾಗಿದೆ. ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿ ತಿಳಿಸಿರುವಂತೆ ರಜಪೂತರ ಪ್ರಮುಖ ಕೇಂದ್ರಗಳನ್ನು ಗುರುತಿಸುವುದು, ಸಾಹಿತಿಗಳು ಮತ್ತು ಕೃತಿಗಳ ಸಂಗ್ರಹಣೆ, ರಜಪೂತರ ಸಾಮ್ರಾಜ್ಯದ ಗಡಿಗಳನ್ನು ಗುರುತಿಸುವುದಾಗಿದೆ. ಇವುಗಳು ಪಠ್ಯಪುಸ್ತಕದಲ್ಲಿಯೂ ಸಹ ಅದೇ ಚಟುವಟಿಕೆಗಳನ್ನು ನೀಡಿರುವುದು ಕಂಡುಬರುತ್ತದೆ.

ದಕ್ಷಿಣ ಭಾರತದ ಪ್ರಮುಖ ರಾಜಮನೆತನಗಳಾದ ಪಲ್ಲವ, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಮತ್ತು ಹೊಯ್ಸಳ ಸಾಮ್ರಾಜ್ಯಗಳ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಆದ ಸಾಂಸ್ಕೃತಿಕ ಏಳಿಗೆ, ಈ ಮನೆತನಗಳ ಪ್ರಾಮುಖ್ಯತೆ, ಸಾಮ್ರಾಜ್ಯ ವಿಸ್ತರಿಸುವಲ್ಲಿ ನಡೆಸಿದ ಯುದ್ಧಗಳು ಮತ್ತು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಕೊಡುಗೆಗಳನ್ನು ಮಕ್ಕಳು ತಿಳಿದುಕೊಳ್ಳುವ ಉದ್ದೇಶವನ್ನು ಹೊಂದಿದೆ. ಇದಕ್ಕೆ ಪೂರಕವಾಗಿ ರಾಷ್ಟ್ರಕೂಟರ ಪ್ರಮುಖ ಅರಸರಾದ ಮೂರನೇ ಗೋವಿಂದ, ಅಮೋಘವರ್ಷ

ನೃಪತುಂಗ, ಮೂರನೆಯ ಕೃಷ್ಣನ ಸಾಧನೆ ಹಾಗೂ ಅವರ ಕಾಲದಲ್ಲಾದ ಸಾಹಿತ್ಯ ಕ್ಷೇತ್ರದ ಬೆಳವಣಿಗೆ ಬಗ್ಗೆ ಪರಿಚಯಿಸಲಾಗಿದೆ. ಅದೇ ರೀತಿಯಾಗಿ ಕಲ್ಯಾಣಿ ಚಾಲುಕ್ಯರು ಮತ್ತು ಹೊಯ್ಸಳರ ಬಗ್ಗೆಯೂ ತಿಳಿಸಲಾಗಿದೆ. ಈ ಮೂರು ಮನೆತನಗಳು ಕಲೆ ಮತ್ತು ವಾಸ್ತುಶಿಲ್ಪಕ್ಕೆ ನೀಡಿರುವ ಅಮೋಘ ಕೊಡುಗೆಯನ್ನು ಸಹ ಪರಿಚಯಿಸಿ ಪಠ್ಯಸೂಚಿಯ ಉದ್ದೇಶ ಈಡೇರಿಸುವ ಪ್ರಯತ್ನ ಮಾಡಲಾಗಿದೆ.

ಚಟುವಟಿಕೆಗೆ ಸಂಬಂಧಪಟ್ಟಂತೆ ಪಠ್ಯದಲ್ಲಿ ರಾಷ್ಟ್ರಕೂಟ, ಚಾಲುಕ್ಯ ಮತ್ತು ಹೊಯ್ಸಳರ ಸಾಮ್ರಾಜ್ಯದ ವಿಸ್ತಾರ ಗುರುತಿಸುವುದು ಮತ್ತು ಈ ಮನೆತನಗಳ ಕಾಲದ ಸಾಹಿತ್ಯದಲ್ಲಿ ಆದ ಬೆಳವಣಿಗೆಯ ಮಹತ್ವವನ್ನು ತಿಳಿಯುವ ಉದ್ದೇಶವಿದೆ. ಆದರೆ ಪಠ್ಯಪುಸ್ತಕದಲ್ಲಿ ಹೊಯ್ಸಳ ಮತ್ತು ಚೋಳರ ಮೂರ್ತಿಶಿಲ್ಪ ಮತ್ತು ವಾಸ್ತುಶಿಲ್ಪಗಳ ಭಾವಚಿತ್ರಗಳನ್ನು ವಿವರಣೆಯೊಂದಿಗೆ ಸಂಗ್ರಹಿಸುವುದು. ಭೂಪಟದಲ್ಲಿ ಈ ಎರಡೂ ಮನೆತನಗಳ ಐತಿಹಾಸಿಕ ಸ್ಥಳಗಳನ್ನು ಗುರುತಿಸುವ ಚಟುವಟಿಕೆ ನೀಡಲಾಗಿದೆ. ಇಲ್ಲಿಯೂ ಅಂತಹ ಭಿನ್ನವಾದ ಸಾಮ್ಯತೆಗಳೇನು ಕಂಡು ಬರುವುದಿಲ್ಲ.

ಸಾಮಾಜಿಕ, ಧಾರ್ಮಿಕ ಸುಧಾರಣಾ ಚಳುವಳಿ ಎಂಬ ಪಾಠದಲ್ಲಿ ಎಂತಹ ಸಂದರ್ಭಗಳಲ್ಲಿ ಧಾರ್ಮಿಕ ಸುಧಾರಣೆ ಮಾಡಲಾಯಿತು ಹಾಗೂ ಈ ಸುಧಾರಣೆಗಳು ಎಂತಹ ಪರಿಹಾರಗಳನ್ನು ಸೂಚಿಸಿದವು ಎಂಬುದನ್ನು ತಿಳಿಯುವ ಉದ್ದೇಶವಿದೆ. ಇದಕ್ಕೆ ಪೂರಕವಾಗಿ ಶಂಕರ, ಮಧ್ವ, ರಾಮಾನುಜಾಚಾರ್ಯ, ಬಸವೇಶ್ವರ ಸಿದ್ಧಾಂತಗಳನ್ನು ಮತ್ತು ತತ್ವಗಳನ್ನು ತಿಳಿಸುವ ಮೂಲಕ ಈ ಉದ್ದೇಶ ಈಡೇರಿಸಲಾಗಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪ್ರಮುಖ ಧಾರ್ಮಿಕ ಸುಧಾರಕರ ಭಾವಚಿತ್ರಗಳನ್ನು ಸಂಗ್ರಹಿಸಿ ಹಾಗೂ ವಚನ ಸಂಗ್ರಹಣೆ ಮಾಡಿ ಮತ್ತು ಹಾಡಿ ಎಂಬ ಚಟುವಟಿಕೆ ನೀಡಲಾಗಿದೆ. ಆದರೆ ಪಠ್ಯಪುಸ್ತಕದಲ್ಲಿ ಇದಕ್ಕಿಂತಲೂ ಹೆಚ್ಚಿನ ಚಟುವಟಿಕೆಗಳನ್ನು ನೀಡಲಾಗಿದೆ. ಅವುಗಳೆಂದರೆ ಭಜಗೋವಿಂದಂ ಆಲಿಸಿ, ಶಂಕರರು, ರಾಮಾನುಜರು, ಬಸವೇಶ್ವರರು ಮತ್ತು ಮಧ್ವರ ಜೀವನ ಚರಿತ್ರೆ ಓದಿ, ವಚನಕಾರರ ಅಂಕಿತನಾಮ ಕಳಬೇಡ, ಕೊಲಬೇಡ.... ಈ ವಚನದಲ್ಲಿ ಕಂಡುಬರುವ ಮೌಲ್ಯಗಳನ್ನು ಪ್ರಸ್ತುತ ಸಮಾಜದಲ್ಲಿ ಕಂಡು ಬರುತ್ತಿವೆಯೋ ಎಂಬುದರ ಬಗ್ಗೆ ಚರ್ಚಿಸಿ ಎಂದು ಮೊದಲಾದ ಚಟುವಟಿಕೆಗಳನ್ನು ಕೊಡಲಾಗಿದೆ. ಅಂದರೆ ಪಠ್ಯಸೂಚಿಗಿಂತ ಹೆಚ್ಚಿನ ಚಟುವಟಿಕೆ ನೀಡುವ ಪ್ರಯತ್ನ ಮಾಡಲಾಗಿದೆ.

ಭಕ್ತಿ ಚಳುವಳಿಗೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿ ಹೊಂದಿರುವ ಉದ್ದೇಶ ಈ ರೀತಿಯಾಗಿದೆ. ಭಕ್ತಿ ಚಳುವಳಿಯ ಗುರಿ ಮತ್ತು ಉದ್ದೇಶಗಳು, ವಿವಿಧ ಆಯಾಮವಾಗಿ ಭಕ್ತಿ ಚಳುವಳಿ ಪ್ರಚಾರ ಬಗ್ಗೆ ಹಾಗೂ ಭಕ್ತಿ ಚಳುವಳಿಯ ಸಂದರ್ಭದಲ್ಲಿ ಹುಟ್ಟಿಕೊಂಡು ಪ್ರಾದೇಶಿಕ ಭಾಷೆ ಮತ್ತು ಸಾಹಿತ್ಯವನ್ನು ಮಕ್ಕಳಿಗೆ ತಿಳಿಸುವುದು. ಪಠ್ಯಪುಸ್ತಕದಲ್ಲಿ ಈ ಉದ್ದೇಶವನ್ನು ಈಡೇರಿಸಲು ಚೈತನ್ಯ, ಗುರುನಾನಕ್, ಮೀರಾಬಾಯಿ, ಸೂಫಿ ಸಂತರು ಹಾಗೂ ಚೈತನ್ಯರ ಬೋಧನೆಗಳು ಹಾಗೂ ಅವರು ರಚಿಸಿದ ಗೀತೆಗಳ ಬಗ್ಗೆ ತಿಳಿಸುವುದರೊಂದಿಗೆ ಪಠ್ಯಸೂಚಿಯ ಉದ್ದೇಶವನ್ನು ಪೂರ್ಣಗೊಳಿಸಿದ್ದಾರೆ.

ಚಟುವಟಿಕೆಗೆ ಸಂಬಂಧಿಸಿದಂತೆ ಈ ಅಧ್ಯಾಯಕ್ಕೆ ಪ್ರಮುಖ ಧಾರ್ಮಿಕ ಸುಧಾರಕರ ಭಾವಚಿತ್ರಗಳನ್ನು ಸಂಗ್ರಹಿಸಿ ಹಾಗೂ ಧಾರ್ಮಿಕ ಸಂತರ ಹಾಡುಗಳು ಮತ್ತು ಸಾಹಿತ್ಯವನ್ನು ತಿಳಿಯಿರಿ ಎಂಬ ಚಟುವಟಿಕೆ ನೀಡಲಾಗಿದೆ. ಇದಕ್ಕೆ ಪೂರಕವಾಗಿ ಪಠ್ಯಪುಸ್ತಕದಲ್ಲಿ ಭಕ್ತಿ ಚಳುವಳಿಯ ಸುಧಾರಕರ ಚಿತ್ರ ಸಂಗ್ರಹಣೆ ಹಾಗೂ ಅವರ ಜೀವನ ಚರಿತ್ರೆ ಓದಿ, ಮೀರಾಬಾಯಿಯ ಭಜನೆಗಳನ್ನು ಸಂಗ್ರಹಿಸಿ ಇತ್ಯಾದಿ ಚಟುವಟಿಕೆಗಳನ್ನು ನೀಡಲಾಗಿದೆ. ಇಲ್ಲಿ ಯಾವುದೇ ವ್ಯತ್ಯಾಸಗಳು ಹೆಚ್ಚಾಗಿ ಕಂಡುಬರುವುದಿಲ್ಲ.

ವಿಜಯನಗರ ಸಾಮ್ರಾಜ್ಯ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯ ಎಂತಹ ಸಂದರ್ಭದಲ್ಲಿ ಏಳಿಗೆ ಹೊಂದಿತು. ವಿಜಯನಗರ ಅರಸರ ಸಾಧನೆ ಅವರ ಕೊಡುಗೆ, ಇವರ ಆಳ್ವಿಕೆಯಲ್ಲಿ ಭೇಟಿ ನೀಡಿ ವಿದೇಶಿ ಪ್ರವಾಸಿಗರು, ತಾಳಿಕೋಟೆ ಕದನದ ಮಹತ್ವ ಮತ್ತು ಸಾಹಿತ್ಯ, ಕಲೆ, ವಾಸ್ತುಶಿಲ್ಪಕ್ಕೆ ಅವರ ಕೊಡುಗೆಯನ್ನು ತಿಳಿಸುವ ಉದ್ದೇಶವಾಗಿತ್ತು. ಇದಕ್ಕೆ ಪಠ್ಯಪುಸ್ತಕ ರಚನಾ ಸಮಿತಿ ಪೂರಕವಾಗಿ ಎಲ್ಲಾ ಉದ್ದೇಶಗಳನ್ನು ಈಡೇರಿಸಿದೆ. ಅಲ್ಲದೆ ಚಟುವಟಿಕೆಗಳು ಸಹ ಸಾಮ್ಯತೆ ಹೊಂದಿರುವುದು ಕಂಡುಬರುತ್ತದೆ.

ಮೊಘಲ್ ಸಾಮ್ರಾಜ್ಯ ಅಧ್ಯಾಯದಲ್ಲಿ ರಾಜಕೀಯ ವ್ಯವಸ್ಥೆ ಪ್ರಮುಖ ಅರಸರ ಜೀವನ ಸಾಧನೆ, ಅವನತಿಗೆ ಕಾರಣಗಳು, ಆಡಳಿತದಲ್ಲಿ ತಂದ ಸುಧಾರಣೆಗಳು, ಆರ್ಥಿಕ, ಧಾರ್ಮಿಕ ವ್ಯವಸ್ಥೆ ಮತ್ತು ಕಲೆ ವಾಸ್ತುಶಿಲ್ಪಕ್ಕೆ ಅವರ ಕೊಡುಗೆಗಳನ್ನು ಈಡೇರಿಸಲು ಪಠ್ಯಪುಸ್ತಕದಲ್ಲಿ ಬಾಬರ್, ಅಕ್ಬರ್, ಔರಂಗಜೇಬ್, ಷಾಹಜಾನ್, ಜಹಾಂಗೀರರ ಜೀವನ ಮತ್ತು ಸಾಧನೆಗಳನ್ನು ತಿಳಿಸಿದ್ದಾರೆ. ಅಕ್ಬರನ ಧಾರ್ಮಿಕ ನೀತಿ, ಮೊಘಲರ ಆಡಳಿತ ವ್ಯವಸ್ಥೆ ಬಗ್ಗೆ ತಿಳಿಸಲಾಗಿದೆ. ಅಲ್ಲದೆ ಕಲೆ, ಸಾಹಿತ್ಯ ಮತ್ತು ವಾಸ್ತುಶಿಲ್ಪಕ್ಕೆ ನೀಡಿದ ಕೊಡುಗೆಗಳನ್ನು ಸಹ ವಿವರಿಸಿದ್ದಾರೆ. ಇದರಿಂದ ಮೂಲ ಆಶಯ ಈ ಅಧ್ಯಾಯದಲ್ಲಿ ಈಡೇರಿಸಲ್ಪಟ್ಟಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯು ಮುಂದಿನ ಚಟುವಟಿಕೆಗಳನ್ನು ಮಕ್ಕಳಿಗೆ ಪಠ್ಯಪುಸ್ತಕದಲ್ಲಿ ಅಳವಡಿಸಿಕೊಳ್ಳಲು ಸೂಚಿಸಿದೆ. ಮೊಘಲರ ವಾಸ್ತುಶಿಲ್ಪದ ಚಿತ್ರಗಳ ಸಂಗ್ರಹಣೆ ಹಾಗೂ ಸಂಕ್ಷಿಪ್ತ ವಿವರಣೆ ಸಂಗ್ರಹಿಸಿ, ಸಾಮ್ರಾಜ್ಯದ ಗಡಿಯ ವಿಸ್ತಾರ ಗುರುತಿಸುವುದು ಮತ್ತು ಅಕ್ಬರ ಹಾಗೂ ಔರಂಗಜೇಬನ ಧಾರ್ಮಿಕ ನೀತಿಯ ಬಗ್ಗೆ ಚರ್ಚೆ ಮಾಡಿ ಎಂಬ ಉದ್ದೇಶವನ್ನು ಪಠ್ಯಪುಸ್ತಕ ಹೊಂದಿದೆ. ಆದರೆ ಪಠ್ಯಸೂಚಿಯಲ್ಲಿ ಕೇವಲ ಮೊಘಲ್ ಸಾಮ್ರಾಜ್ಯದ ಗಡಿಯಲ್ಲಿ ಅವರ ರಾಜಧಾನಿ, ವಾಣಿಜ್ಯ ನಗರಗಳನ್ನು ಗುರುತಿಸಿ, ತಾಜ್‌ಮಹಲ್ ಮತ್ತು ಮಯೂರ ಸಿಂಹಾಸನದ ಬಗ್ಗೆ ಮಾಹಿತಿ ಸಂಗ್ರಹಿಸಿ ನೀಡಿದ್ದಾರೆ. ಇಲ್ಲಿ ಪಠ್ಯಸೂಚಿಗಿಂತ ಹೆಚ್ಚಿನ ಚಟುವಟಿಕೆ ನೀಡಿರುವುದು ಕಂಡು ಬರುತ್ತದೆ.

ಶಿವಾಜಿ ಎಂಬ ಅಧ್ಯಾಯದಲ್ಲಿ ಶಿವಾಜಿಗೆ ಸಾಮ್ರಾಜ್ಯ ಸ್ಥಾಪಿಸಲು ರಾಜಕೀಯ ಪರಿಸರ ಹೇಗೆ ಪೂರಕವಾಗಿತ್ತು. ಶಿವಾಜಿ ಆದಿಲ್‌ಶಾಹಿ ಮತ್ತು ಮೊಘಲರೊಂದಿಗೆ ಹೊಂದಿದ ಸಂಬಂಧ

ಮರಾಠ ರಾಜ್ಯದ ವ್ಯವಸ್ಥೆಯ ಲಕ್ಷಣಗಳನ್ನು ತಿಳಿಸುವ ಉದ್ದೇಶವಿದೆ. ಇದಕ್ಕೆ ಪೂರಕವಾಗಿ ಪಠ್ಯಪುಸ್ತಕದಲ್ಲಿ ಶಿವಾಜಿಯ ಜೀವನ, ಸಾಧನೆ, ಆಡಳಿತ ವ್ಯವಸ್ಥೆ, ಮರಾಠ ಆಡಳಿತ ಪದ್ಧತಿಗಳನ್ನು ತಿಳಿಸುವ ಮೂಲಕ ಮೂಲ ಆಶಯವನ್ನು ಈ ಅಧ್ಯಾಯದಲ್ಲಿ ಪೂರ್ಣಗೊಳಿಸಲಾಗಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯು ಶಿವಾಜಿಯ ಭಾವಚಿತ್ರದೊಂದಿಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿ ಹಾಗೂ ಶಿವಾಜಿ ನೌಕಾ ಸೈನ್ಯವನ್ನು ಅಭಿವೃದ್ಧಪಡಿಸಿದ ಬಗ್ಗೆ ತಿಳಿಯಿರಿ ಎಂಬುದನ್ನು ಪಠ್ಯದಲ್ಲಿ ಅಳವಡಿಸಬೇಕೆಂಬ ಆಶಯವಾಗಿದೆ. ಆದರೆ ಪಠ್ಯಪುಸ್ತಕದಲ್ಲಿ ಕೇವಲ ಶಿವಾಜಿಯ ಸಾಮ್ರಾಜ್ಯದ ಗಡಿಯನ್ನು ಚಿತ್ರಿಸಿ ನೀಡಲಾಗಿದೆ. ಇಲ್ಲಿ ಮೂಲ ಆಶಯವನ್ನು ಕಡೆಗಣಿಸಲಾಗಿದೆ.

ಕರ್ನಾಟಕ ಇತಿಹಾಸದಲ್ಲಿ ಮೈಸೂರು ಒಡೆಯರು ಎಂಬ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯದ ನಂತರ ಕರ್ನಾಟಕದಲ್ಲಿ ರಾಜಕೀಯ ವ್ಯವಸ್ಥೆ ಬೆಳವಣಿಗೆಯಾದ ಬಗೆ, ಪ್ರಾದೇಶಿಕ ರಾಜ್ಯಗಳು ಆರ್ಥಿಕಾಭಿವೃದ್ಧಿ ಮತ್ತು ಸಂಸ್ಕೃತಿಗೆ ನೀಡಿದ ಕೊಡುಗೆಗಳು ಹಾಗೂ ಹೈದರ್ ಮತ್ತು ಟಿಪ್ಪು ಸುಲ್ತಾನನ ಕಾಲದಲ್ಲಿ ಆದ ಮಿಲಿಟರಿ, ರಾಜಕೀಯ ವ್ಯವಸ್ಥೆ ಮತ್ತು ಆರ್ಥಿಕ ಸುಧಾರಣೆಯ ಬಗ್ಗೆ ಮಕ್ಕಳಿಗೆ ತಿಳಿಸುವ ಉದ್ದೇಶವನ್ನು ಹೊಂದಿತ್ತು. ಈ ಉದ್ದೇಶವನ್ನು ಆಧಾರವಾಗಿಟ್ಟುಕೊಂಡು ಮೈಸೂರು ಒಡೆಯರು, ಕೆಳದಿನಾಯಕರು, ಚಿತ್ರದುರ್ಗದ ಪಾಳೆಯಗಾರರು, ಯಲಹಂಕದ ನಾಡಪ್ರಭುಗಳು, ಕೊಡಗು, ಕಿತ್ತೂರು, ತುಳುನಾಡು ಮತ್ತು ಹೈದರಾಬಾದ್ ಕರ್ನಾಟಕ ರಾಜ್ಯಗಳ ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಸುವುದರೊಂದಿಗೆ ಪ್ರಾದೇಶಿಕ ರಾಜ್ಯಗಳ ಕೊಡುಗೆಗಳನ್ನು ಪೂರೈಸಿದಂತಾಗಿದೆ. ಇದಲ್ಲದೆ ಹೈದರ್ ಮತ್ತು ಟಿಪ್ಪುಸುಲ್ತಾನನ ಆಡಳಿತ ಜೀವನ ಮತ್ತು ಸಾಧನೆಗಳನ್ನು ತಿಳಿಸಿದ್ದಾರೆ.

ಚಟುವಿಟಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯು ಮೈಸೂರು ದಸರದ ಚಿತ್ರವನ್ನು ವಿಷಯದೊಂದಿಗೆ ಸಂಗ್ರಹಿಸಿ, ಅರಮನೆ, ಚಿತ್ರದುರ್ಗ ಕೋಟೆ, ಕೆಳದಿ ನಾಯಕರು, ಯಲಹಂಕ ನಾಡಪ್ರಭುಗಳು ಹಾಗೂ ಟಿಪ್ಪುಸುಲ್ತಾನನ ಚಿತ್ರಗಳನ್ನು ಸಂಗ್ರಹಿಸಿ ಎಂಬ ಚಟುವಟಿಕೆ ಅಳವಡಿಸಿಕೊಳ್ಳುವಂತೆ ಸೂಚಿಸಿದೆ. ಆದರೆ ಪಠ್ಯಪುಸ್ತಕದಲ್ಲಿ ಮೈಸೂರು ಒಡೆಯರ ಪ್ರಮುಖ ಐತಿಹಾಸಿಕ ಸ್ಥಳಗಳನ್ನು ಗುರುತಿಸಿ ಮತ್ತು ಟಿಪ್ಪುಸುಲ್ತಾನನು ವಿದೇಶಾಂಗ ನೀತಿಯಲ್ಲಿ ವಿಫಲವಾದುದಕ್ಕೆ ಕಾರಣಗಳನ್ನು ಚರ್ಚಿಸಿ ಉತ್ತರ ಸಿದ್ಧಪಡಿಸಿ ಎಂಬ ಕಠಿಣವಾದಂತಹ ಚಟುವಟಿಕೆಯನ್ನು ನೀಡಿದ್ದಾರೆ. ಬೆಂಗಳೂರಿನ ನಾಡಪ್ರಭುಗಳು ಬೆಂಗಳೂರು ಮತ್ತು ಬೆಂಗಳೂರಿನ ಸುತ್ತಮುತ್ತ ಅನೇಕ ಟ್ಯಾಂಕ್‌ಗಳನ್ನು ನಿರ್ಮಿಸಿದ್ದರು. ಆದರೆ ಇಂದು ಅವುಗಳು ಕಣ್ಮರೆಯಾಗಿರುವುದಕ್ಕೆ ಕಾರಣಗಳನ್ನು ಕುರಿತು ಸರ್ಕಾರಕ್ಕೆ ಒಂದು ವರದಿ ಬರೆಯಿರಿ ಎಂಬ ಚಟುವಿಟಕೆ ನೀಡಲಾಗಿದೆ. ಫೀಲ್ಡ್ ಮಾರ್ಷಲ್ ಕೆಂ.ಎಂ. ಕಾರ್ಯಪ್ಪ ಹಾಗೂ ಜನರಲ್ ತಿಮ್ಮಯ್ಯನವರ ಜೀವನ ಮತ್ತು ಸಾಧನೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿ. ಹೀಗೆ ಇನ್ನೂ ಹಲವಾರು ಚಟುವಟಿಕೆಗಳನ್ನು ನೀಡಲಾಗಿದೆ. ಇಲ್ಲಿ ಪಠ್ಯಸೂಚಿ ಸೂಚಿಸಿರುವ ಚಟುವಟಿಕೆಗಳಿಂತ ಹೆಚ್ಚಿನ ಚಟುವಟಿಕೆಗಳನ್ನು ನೀಡಿದ್ದಾರೆ.

**ಏಳನೆಯ ತರಗತಿಯ ಚರಿತ್ರೆ ಪಠ್ಯಪುಸ್ತಕಗಳು**

ಏಳನೆಯ ತರಗತಿಯ ಚರಿತ್ರೆ ಪಠ್ಯಪುಸ್ತಕಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿ ಕಮಿಟಿಯು ಎರಡು ಸೆಮಿಸ್ಟರ್‌ಗೆ ಸೇರಿದಂತೆ ಒಟ್ಟು ೧೧ ಅಧ್ಯಾಯವನ್ನು ರಚಿಸಿಕೊಟ್ಟಿದೆ. ಈ ಪಠ್ಯಸೂಚಿಗೆ ಅನುಗುಣವಾಗಿ ಪಠ್ಯಪುಸ್ತಕ ರಚನಾ ಸಮಿತಿಯೂ ಎರಡು ಸೆಮಿಸ್ಟರ್‌ಗೆ ಪಠ್ಯಪುಸ್ತಕವನ್ನು ಸಿದ್ಧಪಡಿಸಿದೆ. ಮೊದಲ ಸೆಮಿಸ್ಟರ್‌ನಲ್ಲಿ ಏಳು ಅಧ್ಯಾಯಗಳು ಇವೆ. ಪುನರುಜ್ಜೀವನ, ಧಾರ್ಮಿಕ ಸುಧಾರಣೆ, ಭೌಗೋಳಿಕ ಅನ್ವೇಷಣೆ, ಭಾರತಕ್ಕೆ ಯೂರೋಪಿಯನ್ನರ ಆಗಮನ, ೧೮ನೆಯ ಶತಮಾನದ ಭಾರತ, ಬ್ರಿಟಿಷ್ ಪ್ರಭುತ್ವದ ಬೆಳವಣಿಗೆ ಮತ್ತು ಭಾರತದಲ್ಲಿ ಬ್ರಿಟಿಷರ ಆಡಳಿತ ಎಂಬ ಪಾಠಗಳು ಪಠ್ಯಸೂಚಿಯ ವಿಷಯಾನುಸಾರವಾಗಿಯೇ ಬರೆಯಲ್ಪಟ್ಟಿವೆ. ಇದರಲ್ಲಿ ಯಾವುದೇ ಮಹತ್ವದ ಬದಲಾವಣೆಗಳನ್ನು ಮಾಡಿಕೊಂಡಿಲ್ಲ. ಎರಡನೆಯ ಸೆಮಿಸ್ಟರ್‌ಗೆ ಸಂಬಂಧಿಸಿದಂತೆ ಪಠ್ಯಪುಸ್ತಕದಲ್ಲಿ ಪಠ್ಯಸೂಚಿಗೆ ಬದಲಾಗಿ ಹೊಸ ವಿಷಯವನ್ನು ಸೇರ್ಪಡೆಗೊಳಿಸಿಕೊಂಡಿದೆ. ಇದರಲ್ಲಿ ಮುಖ್ಯವಾಗಿ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳು, ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಸ್ವಾತಂತ್ರ್ಯ ಚಳುವಳಿ, ಗಾಂಧಿಯುಗದವರೆಗೆ ಪಠ್ಯಸೂಚಿಯ ನಿಯಮನುಸಾರ ವಾಗಿ ಬರೆಯಲ್ಪಟ್ಟಿದೆ. ಮುಂದೆ ಪಠ್ಯಪುಸ್ತಕದಲ್ಲಿ ಕರ್ನಾಟಕ ಏಕೀಕರಣ ಮತ್ತು ಗಡಿವಿವಾದಗಳು, ಕರ್ನಾಟಕ-ಸಮಾಜಮುಖಿ ಚಳುವಳಿಗಳು, ಕರ್ನಾಟಕ-ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆ, ಸಮೂಹ ಮಾಧ್ಯಮಗಳು, ತಂತ್ರಜ್ಞಾನ, ಕೃಷಿ ಮತ್ತು ಕೈಗಾರಿಕೆ ಎಂಬ ಹೊಸ ನಾಲ್ಕು ಅಧ್ಯಾಯಗಳು ಸೇರ್ಪಡೆಗೊಂಡಿವೆ. ಈ ಅಧ್ಯಾಯದಲ್ಲಿ ಕರ್ನಾಟಕದ ಪ್ರಾದೇಶಿಕ ಜ್ವಲಂತ ಸಮಸ್ಯೆಗಳ ಬಗ್ಗೆ ಮಕ್ಕಳಿಗೆ ತಿಳಿಸಲಾಗಿದೆ. ಅಲ್ಲದೇ ಅವುಗಳ ವಿರುದ್ಧ ನಡೆದ ಹೋರಾಟಗಳನ್ನು ಮಕ್ಕಳಿಗೆ ಪರಿಚಯಿಸಿದ್ದಾರೆ. ಇದರಿಂದ ಮಕ್ಕಳಿಗೆ ಪ್ರಸ್ತುತ ಜ್ಞಾನವನ್ನು ಕಟ್ಟಿಕೊಡುವ ಕೆಲವು ಪಠ್ಯಪುಸ್ತಕ ರಚನಾ ಸಮಿತಿಯಿಂದ ನಡೆದಿದೆ. ಪಠ್ಯಸೂಚಿಯಲ್ಲಿನ ವಿಷಯಗಳಾದ ಮೊದಲ ಮಹಾಯುದ್ಧ ಮತ್ತು ಅದಕ್ಕೆ ಭಾರತದ ಪ್ರತಿಕ್ರಿಯೆ ಹಾಗೂ ಎರಡನೆಯ ಮಹಾಯುದ್ಧದ ಪರಿಣಾಮಗಳನ್ನು ಪಠ್ಯಪುಸ್ತಕದಿಂದ ಕೈಬಿಡಲಾಗಿದೆ. ಆದರೂ ಸಹ ಮಕ್ಕಳಿಗೆ ಮಾನವ ಹಕ್ಕುಗಳು, ವರ್ಣಭೇದ ನೀತಿ, ಆರ್ಥಿಕ ಅಸಮಾನತೆ, ಭಯೋತ್ಪಾದನೆ, ನಕ್ಸಲ್ ಚಳುವಳಿಯಂತಹ ಪ್ರಮುಖ ವಿಷಯಗಳನ್ನು ಪಠ್ಯಪುಸ್ತಕದಲ್ಲಿ ಸೇರ್ಪಡೆಗೊಳಿಸಿಕೊಂಡು ಮಕ್ಕಳಿಗೆ ವಾಸ್ತವಿಕ ಹಾಗೂ ಪ್ರಸ್ತುತ ಸಮಸ್ಯೆಗಳ ಬಗ್ಗೆ ಚರಿತ್ರೆ ಪಾಠಗಳ ಮೂಲಕ ತಿಳಿಸುವ ಪ್ರಯತ್ನ ನಡೆದಿದೆ.

ಏಳನೆಯ ತರಗತಿಗೆ ಸಂಬಂಧಿಸಿದಂತೆ ಪಠ್ಯಸೂಚಿಯು ಒಟ್ಟು ೧೧ ಅಧ್ಯಾಯಗಳನ್ನು ಅಳವಡಿಸಿದೆ. ಇದರಲ್ಲಿ ಪ್ರತಿಯೊಂದು ಅಧ್ಯಾಯಕ್ಕೆ ವಿಭಿನ್ನವಾದಂತಹ ಉದ್ದೇಶಗಳನ್ನು ಮತ್ತು ಚಟುವಟಿಕೆಗಳನ್ನು ಸೂಚಿಸಿದೆ. ಇದನ್ನು ಆಧಾರವಾಗಿಟ್ಟುಕೊಂಡು ಪಠ್ಯಪುಸ್ತಕ ರಚನಾ ಸಮಿತಿ ರಚಿಸಿದ ಚರಿತ್ರೆ ಪಠ್ಯಪುಸ್ತಕದಲ್ಲಿ ಇರಬಹುದಾದ ಸಾಮ್ಯತೆ ಮತ್ತು ಭಿನ್ನತೆಗಳು ಕೆಳಗಿನಂತಿವೆ.

ಭಾರತ ಮತ್ತು ಆಧುನಿಕ ಪ್ರಪಂಚದ ಮೊದಲ ಅಧ್ಯಾಯದಲ್ಲಿ ೨೦ನೇ ಶತಮಾನದ ಏಷ್ಯಾ, ಆಫ್ರಿಕಾ, ಅಮೇಕಾದಲ್ಲಿನ ರಾಜಕೀಯ ಮತ್ತು ಆರ್ಥಿಕ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳುವುದು. ಈ ಪ್ರದೇಶಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಇದ್ದ ಅಡೆತಡೆಗಳ ಬಗ್ಗೆ ತಿಳಿಯುವುದು, ಗುಲಾಮಗಿರಿ, ರೆಡ್ ಇಂಡಿಯನ್ಸ್ ಮತ್ತು ಆಫ್ರಿಕಾ ಜನರ ಸಮಸ್ಯೆಗಳನ್ನು

ತಿಳಿಯುವುದು ಇದರ ಮೂಲ ಆಶಯವಾಗಿದೆ. ಇದಕ್ಕೆ ಪ್ರತಿರೂಪವಾಗಿ ಪಠ್ಯಪುಸ್ತಕ ಮೊದಲ ಅಧ್ಯಾಯ ಹಾಗೂ ಎರಡನೆಯ ಅಧ್ಯಾಯದಲ್ಲಿ ನವೋದಯ, ನವೋದಯ ಕಾಲದಲ್ಲಿ ಆದ ಬದಲಾವಣೆ, ಭೌಗೋಳಿಕ ಅನ್ವೇಷಕರ ಬಗ್ಗೆ ತಿಳಿಸುವ ಮೂಲಕ ಮೂಲ ಉದ್ದೇಶವನ್ನು ಈಡೇರಿಸುವ ಪ್ರಯತ್ನವನ್ನು ಪಠ್ಯಪುಸ್ತಕ ರಚನಾ ಸಮಿತಿ ಮಾಡಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪ್ರಸಿದ್ಧ ಪರಿಚಯವಿರುವ ಮತ ಸುಧಾರಕರು ಹಾಗೂ ವಿಜ್ಞಾನಿಗಳ ಜೀವನ ಚರಿತ್ರೆಯನ್ನು ಸಂಗ್ರಹಿಸಿ ಹಾಗೂ ಹೊಸ ಅನ್ವೇಷಕರ ಹೆಸರನ್ನು ಪಟ್ಟಿ ಮಾಡಿ ನೀಡಲಾಗಿದೆ. ಇದಕ್ಕೆ ಅನುಗುಣವಾಗಿ ಪಠ್ಯಪುಸ್ತಕವು ಹೊಸ ನಾವಿಕ ಕುರಿತು ಮಾಹಿತಿ ಸಂಗ್ರಹಿಸಿ, ಬಿ.ಜಿ.ಎಲ್. ಸ್ವಾಮಿಯರ 'ನನ್ನ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ' ಕೃತಿ ಓದಿ ಯೂರೋಪಿನಿಂದ ಭಾರತಕ್ಕೆ ಪರಿಚಯವಾದ ಹಣ್ಣು ಮತ್ತು ತರಕಾರಿಗಳನ್ನು ಪಟ್ಟಿ ಮಾಡಿ ನೀಡಲಾಗಿದೆ. ಈ ಚಟುವಟಿಕೆ ಹೆಚ್ಚು ಸೂಕ್ತವಲ್ಲವೆಂಬುದು ಕಂಡುಬರುತ್ತದೆ. ಏಕೆಂದರೆ ಮಕ್ಕಳಿಗೆ ಅಂತಹ ಕೃತಿ ಓದುವ ಸಾಮರ್ಥ್ಯ ಕಡಿಮೆ ಇರುತ್ತದೆ.

ಭಾರತಕ್ಕೆ ಯೂರೋಪಿಯನ್ನರ ಆಗಮನ ಅಧ್ಯಾಯದಲ್ಲಿ ಭಾರತಕ್ಕೆ ಬರಲು ಯೂರೋಪಿಯನ್ನರಿಗೆ ಇದ್ದ ಅನುಕೂಲದ ಹಿನ್ನೆಲೆ, ಪೋರ್ಚುಗೀಸರ ಅಲ್ಬುಕರ್ಕ್ ಮತ್ತು ಪೋರ್ಚುಗೀಸರ ಅವನತಿಗೆ ತಿಳಿಸುವುದರೊಂದಿಗೆ ಯೂರೋಪಿಯನ್ನರ ಅನ್ವೇಷಣೆ ಬಗ್ಗೆ ವಿಶ್ಲೇಷಣೆ ಮಾಡುವಂತೆ ಸೂಚಿಸಿದೆ. ಇಂಗ್ಲೀಷ್ ಭಾಷೆಯ ಮತ್ತು ಪ್ರಸ್ತುತ ಅದರ ಸಂಸ್ಕೃತಿಯ ಬಗ್ಗೆ ತಿಳಿಸುವುದು. ವಸಾಹತುಪೂರ್ವ ಕಾಲದಲ್ಲಿ ಇದ್ದ ಆರ್ಥಿಕ ಸ್ಥಿತಿಗೂ ಪ್ರಸ್ತುತ ಆರ್ಥಿಕ ಸ್ಥಿತಿಗೂ ಇರುವ ವ್ಯತ್ಯಾಸಗಳನ್ನು ತಿಳಿಸುವುದು ಪಠ್ಯಸೂಚಿಯ ಉದ್ದೇಶವಾಗಿತ್ತು. ಇದಕ್ಕೆ ಪೂರಕವಾಗಿ ಪೋರ್ಚುಗೀಸರು ಭಾರತಕ್ಕೆ ಬಂದ ಬಗೆ, ಅವರು ಇಲ್ಲಿ ಕೋಟೆಗಳ ಸ್ಥಾಪನೆ ಮತ್ತು ಬ್ರಿಟಿಷರೊಂದಿಗೆ ಅವರ ಹೋರಾಟದಿಂದಾಗಿ ಅವನತಿ ಹೊಂದಿದ ಬಗೆಯನ್ನು ವಿವರಿಸಿದ್ದಾರೆ. ಆದರೆ ವಸಾಹತುಪೂರ್ವ ಮತ್ತು ಪ್ರಸ್ತುತ ಆರ್ಥಿಕ ವ್ಯವಸ್ಥೆಗಳ ಮಧ್ಯೆ ಇರಬಹುದಾದ ವ್ಯತ್ಯಾಸಗಳು ಕಂಡುಬರುವುದಿಲ್ಲ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯು ಭಾರತದಿಂದ ಯೂರೋಪಿನ ರಾಷ್ಟ್ರಗಳಿಗೆ ಸರಬರಾಜು ಮಾಡುತ್ತಿದ್ದ ವಸ್ತುಗಳನ್ನು ಪಟ್ಟಿ ಮಾಡಿ ಎಂಬ ಆಶಯ ಹೊಂದಿದೆ. ಆದರೆ ಪಠ್ಯಪುಸ್ತಕದಲ್ಲಿ ಭಾರತದ ರೇಖಾನಕ್ಷೆಯನ್ನು ಬರೆದು ಯೂರೋಪಿಯನ್ನರ ಆರಂಭಿಕ ನೆಲೆಗಳನ್ನು ಗುರುತಿಸಿ ಎಂಬ ಚಟುವಟಿ ನೀಡಿದ್ದಾರೆ. ಇದು ಪಠ್ಯಸೂಚಿಯ ನಿಯಮಗಳನ್ನು ಪಾಲನೆ ಮಾಡದಿದ್ದರೂ ಇದು ಪ್ರಸ್ತುತ ಪಾಠಕ್ಕೆ ಸಮಂಜಸವಾದ ಚಟುವಟಿಕೆಯಾಗಿದೆ.

ಹದಿನೆಂಟನೆಯ ಶತಮಾನದ ಭಾರತ ಎಂಬ ಅಧ್ಯಾಯದಲ್ಲಿ ಅಂತರ್ ರಾಜ್ಯಗಳ ವ್ಯಾಜ್ಯಗಳು ಹೇಗೆ ಚಳುವಳಿಯ ಪ್ರಾಮುಖ್ಯತೆಯನ್ನು ಕಂಡುಕೊಂಡವು. ಇಲ್ಲಿ ಅಂತಃಕಲಹ ಹೇಗೆ ಬ್ರಿಟಿಷರು ಸಾಮ್ರಾಜ್ಯ ಸ್ಥಾಪನೆ ಮಾಡಲು ಪೂರಕವಾದವು ಎಂಬುದನ್ನು ತಿಳಿಯುವ ಉದ್ದೇಶವಾಗಿದೆ. ಇದಕ್ಕೆ ಪೂರಕವಾಗಿ ಪಠ್ಯಪುಸ್ತಕದಲ್ಲಿ ಮೊಘಲರ ಅವನತಿಯನ್ನು ತಿಳಿಸುವುದರೊಂದಿಗೆ ಮರಾಠರ ನಾಯಕ ಶಿವಾಜಿ, ನಂತರ ಪೇಶ್ವೆಗಳು ಪ್ರಬಲಗೊಂಡು ಅವರ ಮಧ್ಯೆ ಇದ್ದ ಒಳಜಗಳನ್ನು ಬ್ರಿಟಿಷರು ಬಳಕೆ ಮಾಡಿಕೊಂಡು ಸಾಮ್ರಾಜ್ಯ ನಿರ್ಮಿಸಿದ ಬಗೆಯನ್ನು

ವಿವರಿಸುವುದರೊಂದಿಗೆ ಪಠ್ಯಸೂಚಿಯ ಉದ್ದೇಶವನ್ನು ಈಡೇರಿಸುವ ಪ್ರಯತ್ನ ಮಾಡಲಾಗಿರುವುದು ಕಂಡುಬರುತ್ತದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಮೊಘಲರ ಅಮೂಲ್ಯ ವಸ್ತುಗಳನ್ನು ಪಟ್ಟಿ ಮಾಡಿ ಈಗ ಅವುಗಳು ಎಲ್ಲಿವೆ ತಿಳಿಯಿರಿ ಎಂಬ ಚಟುವಟಿಕೆ ಇದೆ. ಇದಲ್ಲದೆ ಅಧ್ಯಾಯದ ಮಧ್ಯದಲ್ಲಿಯೇ ಕೊಹಿನೂರು ವಜ್ರದ ಬಗ್ಗೆ ಮಕ್ಕಳಿಗೆ ಶಿಕ್ಷಕರಿಂದ ತಿಳಿದುಕೊಳ್ಳುವಂತೆ ಮತ್ತೊಂದು ಚಟುವಟಿಕೆಯನ್ನು ನೀಡಲಾಗಿದೆ.

ಭಾರತದಲ್ಲಿ ಬ್ರಿಟಿಷರ ಏಳಿಗೆ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಸೂಚಿಯಲ್ಲಿ ಬ್ರಿಟಿಷರು, ಫ್ರೆಂಚರು, ಡಚ್ಚರು ಮತ್ತು ಇತರೆ ಯೂರೋಪಿಯನ್ನರು ಭಾರತದಲ್ಲಿ ಏಳಿಗೆ ಹೊಂದಲು ಇದ್ದಂತಹ ಅವಕಾಶಗಳನ್ನು ಪ್ರದರ್ಶಿಸುವುದು ಇದರ ಉದ್ದೇಶವಾಗಿದೆ. ಇದಲ್ಲದೆ ಅವರುಗಳು ಇಲ್ಲಿ ಕೋಟೆಗಳನ್ನು ಸ್ಥಾಪಿಸಿ ವ್ಯಾಪಾರ ಮಾಡಲು ಮುಂದಾದ ಬಗೆಯನ್ನು ವಿದ್ಯಾರ್ಥಿಗಳಿಗೆ ತಿಳಿಸುವ ಉದ್ದೇಶವಾಗಿದೆ. ಈ ಉದ್ದೇಶಕ್ಕೆ ಅನುಸಾರವಾಗಿ ಕರ್ನಾಟಿಕ್ ಯುದ್ಧಗಳು, ಪ್ಲಾಸಿ ಕದನ, ಬಕ್ಸಾರ್ ಕದನಗಳಲ್ಲಿ ಬ್ರಿಟಿಷರು ಜಯವನ್ನು ಸಾಧಿಸಿ ಇಲ್ಲಿ ರಾಜಕೀಯ ಪ್ರಭುತ್ವ ಸ್ಥಾಪಿಸಿಕೊಂಡು ವ್ಯಾಪಾರ ಮಾಡಲು ದಸ್ತಾಕ್‌ಚೀಟಿಯನ್ನು ಪಡೆದ ಬಗೆಯನ್ನು ವಿವರಿಸಲಾಗಿದೆ. ಇಲ್ಲಿಯೂ ಸಹ ಪಠ್ಯಸೂಚಿಯ ಉದ್ದೇಶವನ್ನು ಈಡೇರಿಸುವ ಪ್ರಯತ್ನ ಕಂಡುಬಂದಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯೂ ರಾಜರ ಹೆಸರು, ರಾಜಧಾನಿ ಮತ್ತು ಯುದ್ಧದ ಕೇಂದ್ರಗಳನ್ನು ಪಟ್ಟಿ ಮಾಡಿ ಎಂಬ ಸೂಚನೆಯನ್ನು ನೀಡಲಾಗಿದೆ. ಪಠ್ಯಪುಸ್ತಕದಲ್ಲಿ ರಾಬರ್ಟ್ ಕ್ಲೈವ್ ಮತ್ತು ಡ್ಯೂಪ್ಲೆಯನ್ನು ಕುರಿತು ಹೆಚ್ಚಿನ ಮಾಹಿತಿ ಸಂಗ್ರಹಿಸಿ ಎಂಬ ಚಟುವಟಿಕೆ ನೀಡಲಾಗಿದೆ. ಇಲ್ಲಿ ಪಠ್ಯಸೂಚಿ ಮತ್ತು ಪಠ್ಯಪುಸ್ತಕದ ಮಧ್ಯೆ ಚಟುವಟಿಕೆಯಲ್ಲಿ ಭಿನ್ನತೆ ಕಂಡು ಬರುತ್ತದೆ. ಆದರೆ ಈ ಚಟುವಟಿಕೆ ಈ ಅಧ್ಯಾಯಕ್ಕೆ ಪೂರಕವಾಗಿದೆ.

ಭಾರತದಲ್ಲಿ ಬ್ರಿಟಿಷ್ ಆಡಳಿತದ ಪರಿಣಾಮ ಅಧ್ಯಾಯದಲ್ಲಿ ಪಠ್ಯಸೂಚಿಯು ಹೊಂದಿರುವ ಉದ್ದೇಶವು ಮುಂದಿನಂತಿದೆ. ಪಂಚಾಯತ್ ರಾಜ್ಯ ವ್ಯವಸ್ಥೆ ಅವನತಿ ಹೊಂದಲು ಕಾರಣಗಳನ್ನು ತಿಳಿಯುವುದು ಮತ್ತು ಇಂಗ್ಲೀಷ್ ಭಾಷೆ ಬೆಳವಣಿಗೆ ಆದ ಬಗೆಯನ್ನು ತಿಳಿಸುವುದಾಗಿದೆ. ಈ ಉದ್ದೇಶಕ್ಕೆ ಅನುಸಾರವಾಗಿ ಈ ಅಧ್ಯಾಯದಲ್ಲಿ ಬ್ರಿಟಿಷರ ಆಡಳಿತ ವ್ಯವಸ್ಥೆ, ಶಿಕ್ಷಣದ ಮೇಲೆ ಅವರ ಪ್ರಭಾವ, ಆರ್ಥಿಕ ಕ್ಷೇತ್ರದಲ್ಲಿ ಆದ ಬದಲಾವಣೆ, ವ್ಯಾಪಾರ, ಸಾಮಾಜಿಕ ಸುಧಾರಣೆಯನ್ನು ವಿವರಿಸಿದ್ದಾರೆ. ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಪುಸ್ತಕದಲ್ಲಿ ಯಾವುದೇ ಚಟುವಟಿಕೆ ನೀಡಲಾಗಿಲ್ಲ (ನೋಡಿ: ಸಮಾಜವಿಜ್ಞಾನ ಪಠ್ಯಪುಸ್ತಕ, ೭ನೇ ತರಗತಿ, ಪು. ೫೪).

ಸಾಮಾಜಿಕ-ಧಾರ್ಮಿಕ ಸುಧಾರಕರು ಎಂಬ ಅಧ್ಯಾಯದಲ್ಲಿ ಜಾತಿ, ವರದಕ್ಷಿಣೆ ಮೂಲ ಸ್ವರೂಪವನ್ನು ತಿಳಿಸುವುದು. ಜನರು ಮತ್ತು ಸಂಘಸಂಸ್ಥೆಗಳು ಹೇಗೆ ಅವುಗಳನ್ನು ಹೋಗಲಾಡಿಸಲು ಪ್ರಯತ್ನಿಸಿದ ಬಗೆಯನ್ನು ತಿಳಿಸುವುದಾಗಿದೆ. ಈ ಉದ್ದೇಶ ಸಾಧನೆಗಾಗಿ ರಾಜಾರಾಮ ಮೋಹನ್‌ರಾಯ್‌ರವರಿಂದ ಆಲಿಘರ್ ಚಳುವಳಿಯವರೆಗೆ ವಿವಿಧ ಸಂಘ-ಸಂಸ್ಥೆ ಅವುಗಳ ವಿರುದ್ಧ ಹೋರಾಡಿದ ಮತ್ತು ಸುಧಾರಣೆ ಮಾಡಲು ಬಯಸಿದ ಕ್ರಮವನ್ನು ವಿವರಿಸಲಾಗಿದೆ.

ಈ ಅಧ್ಯಾಯದಲ್ಲಿ ಪಠ್ಯಸೂಚಿಯ ಉದ್ದೇಶ ಈಡೇರಿಸಲ್ಪಟ್ಟಿರುವುದು ಕಂಡುಬರುತ್ತದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಸೂಚಿಯು ತರಗತಿಯಲ್ಲಿ ಮಹಿಳೆಯ ಸ್ಥಾನಮಾನದ ಬಗ್ಗೆ ಚರ್ಚೆ ಮಾಡಿ ಎಂಬ ಚಟುವಟಿಕೆ ನೀಡಲಾಗಿದೆ. ಪಠ್ಯಪುಸ್ತಕದಲ್ಲಿ ಮಹದೇವ ಗೋವಿಂದ ರಾನಡೆ, ಜ್ಯೋತಿಬಾ ಫುಲೆ, ರಾಜಾರಾಮ ಮೋಹನ್‌ರಾಯ್, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಸರ್. ಸೈಯದ್ ಅಹಮದ್‌ಖಾನ್, ನಾರಾಯಣಗುರುಗಳ ಜೀವನ ಚರಿತ್ರೆಯನ್ನು ಓದಿ ಚಟುವಟಿಕೆ ನೀಡಲಾಗಿದೆ. ಇದಕ್ಕೆ ಪಠ್ಯಸೂಚಿಯ ನಿಯಮವನ್ನು ಇಲ್ಲಿ ಪಾಲಿಸದೇ ಇರುವುದು ಕಂಡುಬರುತ್ತದೆ. ಮಹಿಳೆಯರ ಸ್ಥಾನಮಾನ ಬಗ್ಗೆ ವಿವರಗಳಿರಬೇಕಿತ್ತು.

ಸ್ವಾತಂತ್ರ್ಯ ಚಳುವಳಿ ಅಧ್ಯಾಯದಲ್ಲಿ ಗಾಂಧೀಜಿಯವರ ಅಹಿಂಸಾತ್ಮಕ ತತ್ವದ ಹಿನ್ನೆಲೆಯನ್ನು ತಿಳಿಯುವುದಾಗಿದೆ. ಈ ಅಧ್ಯಾಯದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣ ಮತ್ತು ಪರಿಣಾಮಗಳನ್ನು ತಿಳಿಸಲಾಗಿದೆ. ಚಟುವಟಿಕೆಯಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ನಡೆದ ಯುದ್ಧದ ಪ್ರಮುಖ ಸ್ಥಳಗಳನ್ನು ಗುರುತಿಸಿ ಮತ್ತು ಪ್ರಮುಖ ದಿನಗಳನ್ನು ಪಟ್ಟಿ ಮಾಡಿ ಚಟುವಟಿಕೆ ನೀಡಲಾಗಿದೆ. ಪ್ರಮುಖ ನಾಯಕರಾದ ಮಂಗಲ್‌ಪಾಂಡೆ, ತಾತ್ಯಾಟೋಪಿ, ಝಾನ್ಸಿ ರಾಣಿಲಕ್ಷ್ಮೀಬಾಯಿ ಮುಂತಾದವರ ಜೀವನ ಚರಿತ್ರೆ ಓದಿ ಎಂಬ ಚಟುವಟಿಕೆ ಇದೆ.

ಪಠ್ಯಪುಸ್ತಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಎಂಬ ಅಧ್ಯಾಯದಲ್ಲಿ ಪಠ್ಯಸೂಚಿ ತಿಳಿಸಿದ ಉದಾರೀಕರಣ ಮತ್ತು ಜಾಗತೀಕರಣಕ್ಕೆ ವಿರುದ್ಧವಾಗಿ ವಸಾಹತುಶಾಹಿ ನೀತಿ ಹೇಗೆ ಕಾರಣವಾಗಿದೆ ಎಂಬುದು ತಿಳಿಸುವುದು ಮುಖ್ಯ. ಪಠ್ಯಪುಸ್ತಕದಲ್ಲಿ ೧೮೮೫ ರಿಂದ ೧೯೪೭ರವರೆಗೆ ನಡೆದ ಸ್ವಾತಂತ್ರ್ಯ ಸಂಗ್ರಾಮದ ಘಟನಾವಳಿಗಳನ್ನು ಮತ್ತು ಪ್ರಮುಖ ಹೋರಾಟಗಾರರನ್ನು ಪರಿಚಯಿಸಿದ್ದಾರೆ. ಇವರು ಬ್ರಿಟಿಷರ ವಿರುದ್ಧ ಹೋರಾಡಿದ ರೀತಿಯನ್ನು ಚರ್ಚಿಸಿದ್ದಾರೆ. ಭಾರತದಲ್ಲಿ ಬ್ರಿಟಿಷರು ಜಾರಿಗೆ ತಂದ ಸಂವಿಧಾನಾತ್ಮಕ ಬದಲಾವಣೆ ಕಾಯ್ದೆಗಳು ಭಾರತಕ್ಕೆ ವಿರುದ್ಧವಾಗಿದ್ದವು ಎಂಬುದನ್ನು ತಿಳಿಸುವ ಮೂಲಕ ಈ ಉದ್ದೇಶವನ್ನು ಪೂರ್ಣಗೊಳಿಸುವ ಕಾರ್ಯವನ್ನು ಪಠ್ಯಪುಸ್ತಕ ರಚನಾ ಸಮಿತಿ ಮಾಡಿದೆ.

ಚಟುವಟಿಕೆಗೆ ಸಂಬಂಧಿಸಿದಂತೆ ಸ್ವಾತಂತ್ರ್ಯಕ್ಕೆ ಹೋರಾಟ ಮಾಡಿದ ನಾಯಕರ ಹೆಸರು ಮತ್ತು ಘಟನೆಗಳನ್ನು ತಯಾರಿಸಿ ನೀಡಲಾಗಿದೆ. ಆದರೆ ಪಠ್ಯಪುಸ್ತಕದಲ್ಲಿ ಇದಕ್ಕೆ ಬದಲಾದ ಚಟುವಟಿಕೆಗಳನ್ನು ನೀಡಿದ್ದಾರೆ.

ಗಾಂಧಿಯುಗ ಎಂಬ ಅಧ್ಯಾಯದಲ್ಲಿ ಗಾಂಧೀಜಿಯವರ ಅಹಿಂಸೆ, ಸತ್ಯಾಗ್ರಹ, ಸ್ವರಾಜ್ಯದ ಕಲ್ಪನೆಗಳು ಭಾರತದ ಆಧುನಿಕ ಪ್ರಜಾಪ್ರಭುತ್ವದ ಬೆಳವಣಿಗೆಗೆ ಹೇಗೆ ಪ್ರೇರಣೆಯಾಗಿವೆ ಎಂಬುದನ್ನು ತಿಳಿಸುವ ಉದ್ದೇಶವಾಗಿದೆ. ಈ ಉದ್ದೇಶವನ್ನು ಈಡೇರಿಸಲು ಗಾಂಧೀಜಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮ ತತ್ವಗಳನ್ನು ಬಳಸಿಕೊಂಡು ಹೋರಾಡಿದ ಘಟನಾವಳಿಗಳನ್ನು ತಿಳಿಸುವುದರ ಮೂಲಕ ಹಾಗೂ ಅದರಿಂದ ಅವರು ಯಶಸ್ಸು ಪಡೆದ ರೀತಿಯನ್ನು ವಿವರಿಸಲಾಗಿದೆ. ಚಟುವಟಿಕೆಗೆ ಸಂಬಂಧಿಸಿದಂತೆ ಪಠ್ಯಪುಸ್ತಕದಲ್ಲಿ ದಂಡಿ ಸತ್ಯಾಗ್ರಹದ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿ

ನೀಡಲಾಗಿದೆ. ಪತ್ರಿಕೆಗಳಲ್ಲಿನ ಗಾಂಧಿಯುಗದ ಮಾಹಿತಿಯನ್ನು ಸಂಗ್ರಹಿಸಿ.

ಕೊನೆಯ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪಠ್ಯಪುಸ್ತಕದಲ್ಲಿ ಏಕೀಕರಣ ಕರ್ನಾಟದಲ್ಲಿ ಗಡಿ ವಿವಾದ, ಜಲವಿವಾದ, ಪರಿಸರ ಚಳುವಳಿ, ಹಿಂದುಳಿದ ವರ್ಗಗಳ ಹೋರಾಟಗಳ ಬಗ್ಗೆ ತಿಳಿಸಲಾಗಿದೆ. ಆದರೆ ಪಠ್ಯಸೂಚಿಯಲ್ಲಿ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನನ ಬಗ್ಗೆ ತಿಳಿಸುವಂತೆ ಸೂಚಿಸಲಾಗಿದೆ. ಇಲ್ಲಿ ಪಠ್ಯಪುಸ್ತಕ ಒಂದು ಅಧ್ಯಾಯವನ್ನೇ ಸಂಪೂರ್ಣವಾಗಿ ಕೈಬಿಟ್ಟಿದೆ. ಕೇವಲ ಆಂಗ್ಲೋ-ಮೈಸೂರು ಯುದ್ಧದ ಬಗ್ಗೆ ಮೊದಲ ಸೆಮಿಸ್ಟರ್‌ನಲ್ಲಿ ಕೊಡಲಾಗಿದೆ. ಆರನೆಯ ತರಗತಿಯಲ್ಲಿ ಹೈದರ್ ಮತ್ತು ಟಿಪ್ಪುವಿನ ಬಗ್ಗೆ ತಿಳಿಸಲಾಗಿದೆ.

ಒಟ್ಟಾರೆಯಾಗಿ ಪಠ್ಯಸೂಚಿಯನ್ನು ತಜ್ಞರ ತಂಡವು ರಚಿಸಿಕೊಂಡ ಮಾರ್ಗದರ್ಶನದಲ್ಲಿಯೇ ಪಠ್ಯಪುಸ್ತಕ ರಚನಾ ಸಮಿತಿಯ ತಂಡವು ರಚಿಸುವ ಪ್ರಯತ್ನ ಮಾಡಿದೆ. ಅದರಲ್ಲಿ ಕರ್ನಾಟಕ ಪ್ರಾದೇಶಿಕತೆ ಒತ್ತು ನೀಡುವ ಉದ್ದೇಶದಿಂದ ಕೆಲವೊಂದು ತರಗತಿಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಪಠ್ಯಸೂಚಿ ಮತ್ತು ಪಠ್ಯಪುಸ್ತಕಗಳು ಮಧ್ಯೆ ಉದ್ದೇಶಗಳು ಹಾಗೂ ಚಟುವಟಿಕೆಗಳನ್ನು ಹೋಲಿಕೆ ಮಾಡಿದಾಗ ಭಿನ್ನವಾಗಿ ಇರುವ ಅಂಶಗಳು ಕಂಡುಬಂದಿವೆ. ಇದರಲ್ಲಿ ಪಠ್ಯಸೂಚಿ ಪ್ರತಿ ತರಗತಿ ಹಾಗೂ ಪ್ರತಿಪಾಠಕ್ಕೆ ಸಂಬಂಧಿಸಿದಂತೆ ಸೂಚಿಸಿದ ಉದ್ದೇಶಗಳಿಗೆ ಅನುಸಾರವಾಗಿ ಪಠ್ಯಪುಸ್ತಕ ರಚನಾ ಸಮಿತಿ ಪಠ್ಯಪುಸ್ತಕ ರಚಿಸುವ ಕೆಲಸ ಮಾಡಿದ್ದರೂ ಕೆಲವೊಂದು ಸಂದರ್ಭಗಳಲ್ಲಿ ಮೂಲ ಉದ್ದೇಶವನ್ನು ಈಡೇರಿಸುವಲ್ಲಿ ವಿಫಲವಾಗಿದೆ. ಚಟುವಟಿಕೆಗೆ ಸಂಬಂಧಿಸಿದಂತೆ ಸಾಮ್ಯತೆಗಿಂತ ಭಿನ್ನತೆಗಳೇ ಹೆಚ್ಚಾಗಿ ಇರುವುದು ಕಂಡುಬಂದಿದೆ. ಇದಕ್ಕೆ ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ಕೆಲಸ ನಿರ್ವಹಿಸುವವರ ಮನೋಧೋರಣೆ, ಆಶಯ, ಒಲವು ಒತ್ತಡಗಳು ಅವರ ಸೈದ್ಧಾಂತಿಕ ಭಿನ್ನತೆಗಳು ಹಾಗೂ ಅವರ ಹಿನ್ನೆಲೆಗಳು ಕಾರಣವಾಗಿರುತ್ತವೆ. ಇದಲ್ಲದೆ ಮಕ್ಕಳ ವಯೋಸಾಮರ್ಥ್ಯ ಮತ್ತು ಬೌದ್ಧಿಕ ಸಾಮರ್ಥ್ಯಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಳ್ಳಲಾಗಿದೆ ಎಂಬುದು ಪಠ್ಯಪುಸ್ತಕ ರಚನಾ ಸಮಿತಿಯ ಒಟ್ಟಾರೆ ಅಭಿಪ್ರಾಯವಾಗಿದೆ.

**ಟಿಪ್ಪಣಿಗಳು**

೧. ಸಂ: ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗೆಜಿಟೀರ್, ಭಾಗ ೩, ೧೯೮೬, ಪು. ೫.

೨. ಅದೇ, ಪು. ೫.

೩. ಅದೇ, ಪು. ೫.

೪. ಅದೇ, ಪು. ೫.

೫. ಅದೇ, ಪು. ೮.

೬. ಅದೇ, ಪು. ೮.

೭ ಹಿಂದೂ ದೇಶದ ಚರಿತ್ರೆ ಪಾಠಗಳು, ಮ್ಯಾಕ್ ಮಿಲನ್ ಅಂಡ್ ಕೋ ಲಿಮಿಟೆಡ್, ಬಾಷೆಲ್ ಮಿಷನ್, ಮಂಗಳೂರು, ೧೯೦೭.

೮. ಮೂಲ ಶಾಲೆಗಳ ಶಿಕ್ಷಣ ಕ್ರಮ ಪದ್ಧತಿ, ಮ್ಯಾಕ್ ಮಿಲನ್ ಅಂಡ್ ಕೋ ಲಿಮಿಟೆಡ್, ಬಾಷೆಲ್ ಮಿಷನ್, ಮಂಗಳೂರು, ೧೯೦೮.

೯. ಹಿಂದೂ ದೇಶದ ಚರಿತ್ರೆ ಸಂಗ್ರಹ, ಕೆ. ಚೌರಪ್ಪ ಅಂಡ್ ಸನ್ಸ್, ೧೯೨೩, ಬೆಂಗಳೂರು.

೧೦. ಸಚಿತ್ರ ಚರಿತ್ರೆ ಮತ್ತು ಕಥೆಗಳು, ಕರರೆಸ್ ಮಿಷನ್ ಪ್ರೆಸ್ ಅಂಡ್ ಬುಕ್ ಡಿಪೋ, ಮಂಗಳೂರು ೧೯೨೬.

೧೧. ಕರ್ನಾಟಕ ಇತಿಹಾಸ ಬೋಧಿನಿ, ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ, ಧಾರವಾಡ, ೬ನೇ ಮುದ್ರಣ, ೧೯೩೯)

೧೨. ಹಿಂದೂಸ್ತಾನ ಇತಿಹಾಸ ಬೋಧಿನಿ, ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ, ಧಾರವಾಡ, ೧೯೪೨.

೧೩. ಹಿಂದೂಸ್ತಾನ ಇತಿಹಾಸ ಬೋಧಿನಿ, ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ, ಧಾರವಾಡ, ೧೯೪೬.

೧೪. ಕರ್ನಾಟಕ ರಾಜ್ಯ ಗೆಜಿಟೀರ್ ಭಾಗ ೩,(ಸಂ) ಸೂರ್ಯನಾಥ ಕಾಮತ್, ೧೯೮೬, ಪು. ೯.

೧೫. ಅದೇ, ಪು. ೧೦.

೧೬. ಮಕ್ಕಳ ಸಮಾಜಶಾಸ್ತ್ರ, ಸುದರ್ಶನಮ್ ಅಂಡ್ ಕಂಪೆನಿ, ಬೆಂಗಳೂರು, ೧೯೬೪.

೧೭. ಸಮಾಜ ಪರಿಚಯ ಪಾಠಗಳು, ಮೈಸೂರು ಪಠ್ಯಪುಸ್ತಕ ಇಲಾಖೆ, ಮೈಸೂರು ಸರ್ಕಾರ, ೧೯೭೦.

೧೮. ಸಮಾಜ ಪಾಠಗಳು ಭಾಗ ೧ ಹಾಗೂ ಭಾಗ ೨, ಕರ್ನಾಟಕ ರಾಜ್ಯ ಸರ್ಕಾರ.

೧೯. ಗಮನಿಸಿ: ಸಮಾಜ ಪಾಠಗಳು ಭಾಗ ೨, ಚಿತ್ರದುರ್ಗ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಪು. ೧೬–೨೧.

೨೦. ಗಮನಿಸಿ: ಸಮಾಜ ಪಾಠಗಳು ಭಾಗ ೨ ಮೈಸೂರು ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಪು. ೧೮–೨೨.

೨೧. 'ಸಮಾಜ ಪರಿಚಯ' ಮೈಸೂರು ವಿದ್ಯಾ ಇಲಾಖೆ, ಮೈಸೂರು ರಾಜ್ಯ, ೧೯೬೪.

೨೨. ಸಮಾಜ ಪಾಠಗಳು, ೪ನೇ ತರಗತಿ, ಕರ್ನಾಟಕ ಸರ್ಕಾರದ ಪರಿಷ್ಕೃತ ಮುದ್ರಣದ ಪಠ್ಯ, ಪು. ೬೭–೮೩.

೨೩. ಸಮಾಜ ಪರಿಚಯ; ೫ನೇ ತರಗತಿ, ೧೯೭೧.

೨೪. ಸಮಾಜ ಪರಿಚಯ ಪಾಠಗಳು; ೫ನೇ ತರಗತಿ, ಕರ್ನಾಟಕ ರಾಜ್ಯ ಸರ್ಕಾರ, ೧೯೭೯.

೨೫. ಸಮಾಜ ಪರಿಚಯ ಪಾಠಗಳು; ೫ನೇ ತರಗತಿ, ಕರ್ನಾಟಕ ರಾಜ್ಯ ಸರ್ಕಾರ, ಪು. ೪, ೧೯೭೯.

೩೦. ಸಾಮಾಜಿಕ ವಿಜ್ಞಾನ ೫ನೇ ತರಗತಿ, ಕರ್ನಾಟಕ ಸರ್ಕಾರ, ೧೯೯೩.

೩೧. ಸಮಾಜ ವಿಜ್ಞಾನ ೫ನೇ ತರಗತಿ ಪಠ್ಯಪುಸ್ತಕ, ೨ನೇ ಸೆಮಿಸ್ಟರ್, ಕರ್ನಾಟಕ ಸರ್ಕಾರ, ೨೦೦೮.

೩೨. ಆರ್ ಎಸ್ ಶರ್ಮ, ಪ್ರಾಚೀನ ಭಾರತದ ಇತಿಹಾಸ' ಪು. ೧೯೮.

೩೩. ಸಮಾಜ ಪರಿಚಯ ಪಾಠಗಳು, ಮೈಸೂರು ವಿದ್ಯಾ ಇಲಾಖೆ, ೧೯೬೯.

೩೪. ಸಮಾಜ ಪರಿಚಯ ಪಾಠಗಳು, ಮೈಸೂರು ವಿದ್ಯಾ ಇಲಾಖೆ, ೧೯೭೯.

೩೫. ಸಮಾಜ ಪರಿಚಯ ಪಾಠಗಳು, ೬ನೇ ತರಗತಿ, ಮೈಸೂರು ವಿದ್ಯಾ ಇಲಾಖೆ, ೧೯೭೯, ಪು. ೩೬–೩೭.

೩೬. ೬ನೇ ತರಗತಿಗೆ ಸಮಾಜ ವಿಜ್ಞಾನ, ಕರ್ನಾಟಕ ಸರ್ಕಾರ, ೧೯೯೪,

೩೭. ೬ನೇ ತರಗತಿಗೆ ಸಮಾಜ ವಿಜ್ಞಾನ, ಕರ್ನಾಟಕ ಸರ್ಕಾರ, ೨೦೦೮.

೩೮. ಸಮಾಜ ವಿಜ್ಞಾನ, ಸೆಮಿಸ್ಟರ್ ೧, ೨, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು, ೨೦೧೧.

೩೯. ಸಚಿತ್ರ ಸಾಮಾಜಿಕ ಅಭ್ಯಾಸ, ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ, ಧಾರವಾಡ, ೧೯೬೫.

೪೦. ಅದೇ ಪು. ೯೨.

೪೧. ಸಮಾಜ ಪರಿಚಯ ಪಾಠಗಳು, ೭ನೇ ತರಗತಿ, ಕರ್ನಾಟಕ ಪಬ್ಲಿಕೇಷನ್, ಬಾಗಲಕೋಟೆ, ೧೯೬೫.

೪೨. ಆಧುನಿಕ ಸಮಾಜಶಾಸ್ತ್ರ ಪರಿಚಯ ಪಾಠಗಳು; ೭ನೇ ತರಗತಿ, ಸುದರ್ಶನ ಅಂಡ್ ಕಂಪನಿ, ಬೆಂಗಳೂರು, ೧೯೬೫.

೪೩. ಸಮಾಜ ಪರಿಚಯ ಪಾಠಗಳು; ೭ನೇ ತರಗತಿ, ಮೈಸೂರು ವಿದ್ಯಾ ಇಲಾಖೆ, ಬೆಂಗಳೂರು, ೧೯೬೯.

೪೪. ಸಮಾಜ ವಿಜ್ಞಾನ; ೭ನೇ ತರಗತಿ, ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆ, ಬೆಂಗಳೂರು, ೧೯೯೪.

೪೫. ಸಮಾಜ ವಿಜ್ಞಾನ; ೭ನೇ ತರಗತಿ, ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆ, ಬೆಂಗಳೂರು, ೨೦೦೯.

೪೬. ರಾಜೇಶ್ ಇ ಬೆಳ್ಳೇರ್, ಪಠ್ಯಕ್ರಮ ಸಂವಹನ ತತ್ವಗಳು, ಕಾವೇರಿ ಪ್ರಕಾಶನ, ಬೆಂಗಳೂರು, ೨೦೦೪, ಪು. ೧೨.

೪೭. ಯದುರಾಜನ್ ಎಸ್.ಎಸ್, ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು, ರಾಷ್ಟ್ರೀಯ ಶಿಕ್ಷಣ ಸಂಶೋಧನಾ ಮತ್ತು ತರಬೇತಿ ಮಂಡಲಿ, ಕರ್ನಾಟಕ ಸರ್ಕಾರ, ೨೦೦೫, ಪು. ೬೫–೬೬.

೪೮. ನೋಡಿ: ೫ನೇ ತರಗತಿ ಮೊದಲ ಸೆಮಿಸ್ಟರ್ ಸಮಾಜ ವಿಜ್ಞಾನ, ಪು. ೮-೨೩.

೪೯. ನೋಡಿ: www. dsert.kar.nic.in - ಪಠ್ಯಸೂಚಿ, ಐದನೆಯ ತರಗತಿ ಪು. ೫.

೫೦. ನೋಡಿ: ಎರಡನೆಯ ಸೆಮಿಸ್ಟರ್ ಸಮಾಜ ವಿಜ್ಞಾನ, ಪು. ೨೪-೩೨.

೫೧. ನೋಡಿ: ಎರಡನೆಯ ಸೆಮಿಸ್ಟರ್ ಸಮಾಜ ವಿಜ್ಞಾನ, ಪು. ೨೬-೩೬.


□□

ಅಧ್ಯಾಯ : ಆರು

# ಕರ್ನಾಟಕದ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳ ರಚನೆ ಸ್ವರೂಪ : ಅವಲೋಕನ

೬.೧. ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ

೬.೨. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು

೬.೩. ಚರಿತ್ರೆ ಪಠ್ಯಕ್ಕೆ ಸಂಬಂಧಿಸಿದಂತೆ ಶಿಕ್ಷಕರ ಅನುಭವಗಳು

೬.೪. ಪೋಷಕರ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು

೬.೫. ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರ ಅಭಿಪ್ರಾಯಗಳು

ಅಧ್ಯಾಯ : ಆರು

# ಕರ್ನಾಟಕದ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪ : ಅವಲೋಕನ

---

ಪ್ರಸ್ತುತ ಅಧ್ಯಯನದಲ್ಲಿ ಬಳ್ಳಾರಿ, ಚಿತ್ರದುರ್ಗ ಮತ್ತು ದಾವಣಗೆರೆ ಮೂರು ಜಿಲ್ಲೆಗಳನ್ನು ವ್ಯಾಪ್ತಿಯನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿಯೊಂದು ಜಿಲ್ಲೆಯಿಂದ ಮೂರು ತಾಲ್ಲೂಕುಗಳನ್ನು ಆಯ್ದುಕೊಂಡಿದ್ದು ಪ್ರತಿ ತಾಲೂಕಿಗೆ ೫ ಶಾಲೆಗಳು ಹಾಗೂ ಪ್ರತಿ ಶಾಲೆಗೆ ೫ ಮಕ್ಕಳಂತೆ ಒಟ್ಟು ೪೫ ಶಾಲೆಗಳು ಹಾಗೂ ೨೨೫ ಮಕ್ಕಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದರಲ್ಲಿಯೂ ೭೫ ಮಕ್ಕಳು ೫ನೇ ತರಗತಿಯಲ್ಲಿಯೂ ೭೫ ಮಕ್ಕಳು ೬ನೇ ತರಗತಿಯಲ್ಲಿಯೂ ೭೫ ಮಕ್ಕಳು ೭ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದು, ವಿವಿಧ ಕೋಮಿಗೆ ಸೇರಿದ ೧೧೩ ಗಂಡು ಹಾಗೂ ೧೧೨ ಹೆಣ್ಣು ಮಕ್ಕಳನ್ನು ಸಂದರ್ಶಿಸಲಾಗಿದೆ. ಒಟ್ಟಾರೆಯಾಗಿ ೩ ಜಿಲ್ಲೆಗಳಿಂದ ೨೨೫ ಮಕ್ಕಳನ್ನು ಆಯ್ಕೆ ಮಾಡಿಕೊಂಡಿದೆ. ೫, ೬, ೭ನೇ ತರಗತಿಯ ಮಕ್ಕಳು ತುಂಬಾ ಮುಗ್ಧವಾಗಿ ತಮಗೆ ತೋಚಿದ್ದನ್ನು ವ್ಯಕ್ತಪಡಿಸಿವೆ. ಒಟ್ಟಾರೆಯಾಗಿ ಮೂರು ಜಿಲ್ಲೆಗಳಿಂದ ೧೧೩ ಗಂಡುಮಕ್ಕಳು ಹಾಗೂ ೧೧೨ ಹೆಣ್ಣು ಮಕ್ಕಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅದೇ ರೀತಿಯಾಗಿ ಪ್ರತಿ ಜಿಲ್ಲೆಯ ೧೫ ಶಾಲೆಗಳಂತೆ ಮೂರು ಜಿಲ್ಲೆಗಳಿಂದ ೪೫ ಶಾಲೆಗಳನ್ನು ಹಾಗೂ ಇತಿಹಾಸ ಬೋಧಿಸುವ ಇಬ್ಬರು ಶಿಕ್ಷಕರಂತೆ ಒಟ್ಟು ೯೦ ಶಿಕ್ಷಕರನ್ನು ಸಂದರ್ಶನ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಅದೇ ರೀತಿ ಶಾಲೆಯಿರುವ ಗ್ರಾಮಗಳಲ್ಲಿ ಅಂದರೆ ೪೫ ಗ್ರಾಮಗಳಿಂದ ಕನಿಷ್ಠ ಮೂವರಂತೆ ಒಟ್ಟು ೧೩೫ ಪೋಷಕರನ್ನು ಸಂದರ್ಶಿಸಲಾಗಿದೆ. ನಾವು ಕೇಳಿದ ಪ್ರಶ್ನೆಗಳಿಗೆ ಅವರು ನೀಡಿದ ಪ್ರತಿಕ್ರಿಯೆಯನ್ನು ಪ್ರಸ್ತುತ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಸಂದರ್ಶನಕ್ಕೊಳಪಡಿಸಿದ ಪ್ರತಿ ಶಾಲೆಗೆ ಒಟ್ಟು ೫ ವಿದ್ಯಾರ್ಥಿಯಂತೆ ಸಂದರ್ಶಿಸಲಾಗಿ ವಿದ್ಯಾರ್ಥಿಗಳ ಪ್ರತಿಕ್ರಿಯೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮಕ್ಕಳಿಗೆ ಚರಿತ್ರೆ ಪಠ್ಯಗಳು ಎಷ್ಟರಮಟ್ಟಿಗೆ ಗ್ರಹಿಕೆಯಾಗುತ್ತವೆ. ಮಕ್ಕಳ ಗ್ರಹಿಕೆಯ ಸಾಮರ್ಥ್ಯವನ್ನು ಶಿಕ್ಷಕರು ಎಷ್ಟರಮಟ್ಟಿಗೆ ಹೆಚ್ಚಿಸಲು ಕಾರಣರಾಗಿದ್ದಾರೆ ಹಾಗೂ ಅದಕ್ಕಾಗಿ ಯಾವ ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾರೆ ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಆರಂಭದಲ್ಲಿ ಆ ಮೂರು ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿ ತರುವಾಯ ಚರಿತ್ರೆಯ ಪಠ್ಯಗಳ ಕುರಿತು ಮಕ್ಕಳ ಅನಿಸಿಕೆ ಏನಿದೆ ಎಂಬುದನ್ನು ತಿಳಿಯಲಾಗಿದೆ.

## ೬.೧. ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ

ಚಿತ್ರದುರ್ಗವು ಒಂದು ಆಯಕಟ್ಟಿನ ಪ್ರದೇಶವಾಗಿದ್ದು ಸುತ್ತಲೂ ಸಪ್ತಕೋಟೆಗಳಿಂದ ಕೂಡಿದ್ದು ಕರ್ನಾಟಕದ ಹೃದಯ ಭಾಗದಲ್ಲಿ ಭೌಗೋಳಿಕವಾಗಿ ಈ ಜಿಲ್ಲೆಯು ದಕ್ಷಿಣ ಭಾರತದ ಕರ್ನಾಟಕದ ಮಧ್ಯ ಭಾಗದಲ್ಲಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೯೭ರಲ್ಲಿ ಜಿಲ್ಲಾ ಪುನರ್‌ವಿಂಗಡಣೆಯಾಗುವ ಪೂರ್ವದಲ್ಲಿ ಚಳ್ಳಕೆರೆ, ಚಿತ್ರದುರ್ಗ, ದಾವಣಗೆರೆ, ಹರಿಹರ, ಹಿರಿಯೂರು, ಹೊಳಲ್ಕೆರೆ, ಹೊಸದುರ್ಗ, ಜಗಳೂರು ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಿದ್ದವು.[೧] ಚಳ್ಳಕೆರೆ, ಜಗಳೂರು, ಮೊಳಕಾಲ್ಮೂರು, ಹಿರಿಯೂರು ಶೈಕ್ಷಣಿಕವಾಗಿ ಹಿಂದೆ ಉಳಿದಿರುವ ತಾಲ್ಲೂಕುಗಳಾಗಿವೆ.

ದಾವಣಗೆರೆ ಜಿಲ್ಲೆಯೂ ೧೯೯೭ ಆಗಸ್ಟ್ ೧೫ರಂದು ಚಿತ್ರದುರ್ಗ ಜಿಲ್ಲೆಯಿಂದ ಪ್ರತ್ಯೇಕಗೊಂಡು ಹೊಸ ಜಿಲ್ಲೆಯಾಯಿತು. ಈ ಜಿಲ್ಲೆಯಲ್ಲಿ ಒಟ್ಟು ೬ ತಾಲ್ಲೂಕುಗಳಿವೆ. ದಾವಣಗೆರೆ, ಹರಿಹರ, ಜಗಳೂರು, ಹರಪನಹಳ್ಳಿ, ಹೊನ್ನಾಳಿ, ಚನ್ನಗಿರಿ. ಹಿಂದಿನ ಚಿತ್ರದುರ್ಗ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಇದ್ದ ಈ ತಾಲ್ಲೂಕುಗಳು ಈ ಜಿಲ್ಲೆಗಳಲ್ಲಿ ಸೇರಿಸಲ್ಪಟ್ಟವು.[೨] ಈ ಜಿಲ್ಲೆಯಲ್ಲಿ ಹರಪನಹಳ್ಳಿ ಮತ್ತು ಜಗಳೂರು ಶೈಕ್ಷಣಿಕವಾಗಿ ಹಿಂದೆ ಉಳಿದಿರುವ ತಾಲ್ಲೂಕುಗಳಾಗಿವೆ.

೧೯೯೭ರಲ್ಲಿ ಜಿಲ್ಲಾ ಪುನರ್‌ವಿಂಗಡಣೆಯಾದ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕನ್ನು ದಾವಣಗೆರೆ ಜಿಲ್ಲೆಗೆ ಸೇರ್ಪಡೆ ಮಾಡಲಾಯಿತು. ಜಿಲ್ಲೆಯಲ್ಲಿ ಪ್ರಮುಖವಾಗಿ ಬಳ್ಳಾರಿ, ಹೊಸಪೇಟೆ, ಸಿರಗುಪ್ಪ, ಕೂಡ್ಲಿಗಿ, ಸೊಂಡೂರು, ಹಗರಿಬೊಮ್ಮನಹಳ್ಳಿ ಮತ್ತು ಹೂವಿನಹಡಗಲಿ ತಾಲ್ಲೂಕುಗಳಿವೆ. ಹೂವಿನಹಡಗಲಿ, ಕೂಡ್ಲಿಗಿ, ಸೊಂಡೂರು, ಬಳ್ಳಾರಿ ತಾಲ್ಲೂಕು ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಗಳೆಂದು ಗುರುತಿಸಲ್ಪಟ್ಟಿವೆ.

ಚಿತ್ರದುರ್ಗ ಜಿಲ್ಲೆಯು ನವಶಿಲಾಯುಗದಿಂದ ಜನರನ್ನು ಹೊಂದಿತೆಂದು ಇಲ್ಲಿ ನಡೆದ ಉತ್ಖನನಗಳಿಂದ ತಿಳಿದುಬರುತ್ತದೆ. ಕಬ್ಬಿಣಯುಗದ ಸಂಸ್ಕೃತಿಯೂ ಇಲ್ಲಿ ಇತ್ತು ಎಂಬುದು ನಮಗೆ ಬ್ರಹ್ಮಗಿರಿ, ಚಿಕ್ಕಮಧುರೆ, ತುರುವನೂರು ಮೊದಲಾದ ಕಡೆ ಸಿಕ್ಕಿರುವ ಬೃಹತ್ ಶಿಲಾ ಸಮಾಧಿಯಿಂದ ತಿಳಿದು ಬರುತ್ತದೆ.[೩]

ದಾವಣಗೆರೆ ಜಿಲ್ಲೆ ಪ್ರತ್ಯೇಕವಾಗುವುದಕ್ಕಿಂತ ಮೊದಲು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಇದ್ದುದ್ದರಿಂದ ಬಹುತೇಕ ಅದೇ ಐತಿಹಾಸಿಕ ಕುರುಹುಗಳನ್ನು ಇಲ್ಲಿ ಕಾಣಬಹುದಾಗಿದೆ.

ಹಳೆಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗದ ಅನೇಕ ನಿವೇಶನಗಳು ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು, ಸಂಗನಕಲ್ಲು, ಕುರೆಕುಪ್ಪಿ, ಹಲಕುಂದಿ, ಗಾದಿಗನೂರು ಮುಂತಾದ ಪ್ರದೇಶಗಳಲ್ಲಿ ಕಂಡು ಬಂದಿರುವುದರಿಂದ ಈ ಜಿಲ್ಲೆಯೂ ಪ್ರಾಚೀನವಾದ ಚರಿತ್ರೆಯನ್ನು ಹೊಂದಿದೆ. ರಾಬರ್ಟ್ ಬ್ರೂಸ್‌ಫುಟ್‌ರವರು "ಇತಿಹಾಸಪೂರ್ವ ಅವಧಿಗೆ ಸಂಬಂಧಿಸಿದಂತೆ ಬಳ್ಳಾರಿಯು ಶ್ರೀಮಂತವಾಗಿದೆ"[೪] ಎಂದು ಅಭಿಪ್ರಾಯಪಟ್ಟಿದ್ದಾರೆ.

ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳೆರಡೂ ಮೌರ್ಯ ಸಾಮ್ರಾಜ್ಯದ ಆಡಳಿತದ ಅವರ ಅಧೀನಕ್ಕೆ ಒಳಪಟ್ಟಿದ್ದವು ಎಂಬುದು ಬ್ರಹ್ಮಗಿರಿ, ಸಿದ್ಧಾಪುರ, ಜಟ್ಟಿಂಗ ರಾಮೇಶ್ವರ,

ಚಂದ್ರವಳ್ಳಿ ಮುಂತಾದ ಕಡೆಗಳಲ್ಲಿ ದೊರೆತ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಇದೇ ಅವಧಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಉದೀಗೊಳಂ, ನಿಟ್ಟೂರು ಒಳಗೊಂಡಂತೆ ಜಿಲ್ಲೆಯ ನಾಲ್ಕು ದಿಕ್ಕುಗಳ ಗಡಿಯ ಹತ್ತಿರ ಪ್ರದೇಶಗಳಲ್ಲಿ ಮೌರ್ಯರ ಅಶೋಕನ ಶಾಸನಗಳು ಪತ್ತೆಯಾಗಿವೆ. ನಂತರ ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ ಶಾತವಾಹನರು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳನ್ನು ತಮ್ಮ ಆಡಳಿತ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದು ತಿಳಿದುಬರುತ್ತದೆ. ಶಾತವಾಹನ ಕೊನೆಯ ದೊರೆಗಳಲ್ಲಿ ಒಬ್ಬನಾದ ಬಹುಶಃ ಪುಲುಮಾಯಿ ಅವಧಿಗೆ ಸಂಬಂಧಿಸಿದ ಶಾಸನವೊಂದು ಬಳ್ಳಾರಿ ಜಿಲ್ಲೆಯಲ್ಲಿ ದೊರೆಕಿದೆ. ಹೀಗಾಗಿ ಈ ಪ್ರದೇಶ ಅವರ ಆಳ್ವಿಕೆಯ ಭಾಗವಾಗಿತ್ತು ಎಂದು ಹೇಳಬಹುದಾಗಿದೆ. ಅಲ್ಲದೆ ಶಾತವಾಹನರು ಬಹುತೇಕ ಕಡೆಗಳಲ್ಲಿ ತಮ್ಮನ್ನು ಆಂಧ್ರ ಭತೃಗಳೆಂದು ಕರೆದುಕೊಂಡಿದ್ದಾರೆ.

ಕ್ರಿ.ಶ. ೩೪೫ರಿಂದ ೫೪೦ರ ಅವಧಿಯಲ್ಲಿ ಬನವಾಸಿಯ ಕದಂಬರು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ್ದಾರೆ. ಈ ಅವಧಿಯಲ್ಲಿ ಚಿತ್ರದುರ್ಗದ ಅನೇಕ ಭಾಗಗಳಲ್ಲಿ ದೊರೆತಿರುವ ಶಾಸನಗಳು ಇದಕ್ಕೆ ಪುಷ್ಟಿ ನೀಡಿವೆ. ದಾವಣಗೆರೆ ಸಮೀಪದ ಅಣಜಿ ಗ್ರಾಮದಲ್ಲಿ ಕದಂಬರ ಅರಸ ಶಿವಸ್ಕಂದವರ್ಮನಿಗೆ ಸಂಬಂಧಿಸಿದ ಶಾಸನವೊಂದು ದೊರೆತಿದೆ.[೫] ಇದರಿಂದ ಈ ಪ್ರದೇಶವು ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಬಹುದು. ಬಳ್ಳಾರಿ ಜಿಲ್ಲೆಯ ಸಂಡೂರಿನ ಬೆಟ್ಟದಲ್ಲಿರುವ ಕಾರ್ತಿಕೇಯ ದೇವಸ್ಥಾನವು ಕದಂಬರ ಆಧಾರಗಳಲ್ಲಿ ಸ್ವಾಮಿ ಮಲೈ ಎಂದು ಉಲ್ಲೇಖಿತವಾಗಿದೆ.

ಕ್ರಿ.ಶ. ೬ನೇ ಶತಮಾನದ ನಂತರ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಸುತ್ತಮುತ್ತಲಿನ ಪ್ರದೇಶಗಳು ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣಿ ಚಾಲುಕ್ಯರಿಗೆ ಸೇರಿತ್ತೆಂದು ತಿಳಿದುಬರುತ್ತದೆ. ಹದಡಿ ಗ್ರಾಮದಲ್ಲಿ ದೊರೆತಿರುವ ಶಾಸನದಿಂದ ಚಾಲುಕ್ಯ ಅರಸನಾದ ಸೋಮೇಶ್ವರನ ಸಾಮಂತರಲ್ಲಿ ಒಬ್ಬನಾದ ಪಲ್ಲವ ನೊಳಂಬನು ಇಲ್ಲಿನ ಈಶ್ವರ ದೇವರಿಗೆ ದಾನ ನೀಡಿರುವ ಮಾಹಿತಿ ತಿಳಿದುಬರುತ್ತದೆ. ಚೋಳರು ಬಳ್ಳಾರಿ ಪ್ರದೇಶಗಳಾದ ಹಡಗಲಿ, ಕಂಪ್ಲಿ ಮತ್ತು ಪೂರ್ವ ಬಳ್ಳಾರಿ ಜಿಲ್ಲೆ ತಾಲ್ಲೂಕಾದ ಹರಪನಹಳ್ಳಿಯ ಉಚ್ಚಂಗಿದುರ್ಗವನ್ನು ಕ್ರಿ.ಶ. ೧೧ನೆಯ ಶತಮಾನದಲ್ಲಿ ವಶಪಡಿಸಿಕೊಂಡು ಆಳ್ವಿಕೆ ನಡೆಸಿದರು. ಎರಡನೇ ತೈಲಪನು ಅಧಿಕಾರಕ್ಕೆ ಬಂದ ಮೇಲೆ ಕಲ್ಯಾಣಿ ಚಾಲುಕ್ಯರು ಬಳ್ಳಾರಿ ಜಿಲ್ಲೆಯ ಎಲ್ಲಾ ಪ್ರದೇಶಗಳ ಮೇಲೆ ತಮ್ಮ ನಿಯಂತ್ರಣವನ್ನು ಸಾಧಿಸಿದರು. ಕುರುಗೋಡಿನ ಶಾಸನವೊಂದು ೪ನೇ ಸೋಮೇಶ್ವರನು ಮತ್ತು ಸಿಂದವಾಡಿ ರಾಚಮಲ್ಲನು ಕುರುಗೋಡನ್ನು ಆಳಿದ್ದಾನೆಂದು ತಿಳಿಸುತ್ತದೆ.

ಚಿತ್ರದುರ್ಗ ಜಿಲ್ಲೆಯ ಭಾಗವಾದ ನೊಳಂಬವಾಡಿಯನ್ನು ಕ್ರಿ.ಶ. ೧೧–೧೨ನೆಯ ಶತಮಾನದಲ್ಲಿ ಉಚ್ಚಂಗಿಯ ಪಾಂಡ್ಯರು ಆಳುತ್ತಿದ್ದರು. ಈ ಭಾಗಕ್ಕೆ ಅವರು ಪಾಂಡ್ಯ ರಾಜ್ಯ ಅಥವಾ ಪಾಂಡ್ಯ ಮಂಡಲವೆಂದು ಕರೆಯುತ್ತಿದ್ದರು. ದಾವಣಗೆರೆ ಜಿಲ್ಲೆಯೂ ಕೂಡ ಇವರ ಆಳ್ವಿಕೆ ಒಳಪಟ್ಟಿತ್ತು ಎಂದು ಕ್ರಿ.ಶ. ೧೧೨೧ರ ಕಾಲದ ದಾವಣಗೆರೆ ೩ನೇ ಶಾಸನದಲ್ಲಿ 'ದಾವಣಗೆರೆ ಸೀಮೆಯಂ' ಎಂದು ಉಲ್ಲೇಖಿಸಿದೆ.[೬] ಈ ಶಾಸನದಲ್ಲಿ ಮೊದಲ ಬಾರಿಗೆ ದಾವಣಗೆರೆ ಜಿಲ್ಲೆಯನ್ನು ಉಲ್ಲೇಖ ಮಾಡಲಾಗಿದೆ.

ಹೊಯ್ಸಳರ ಆಳ್ವಿಕೆಯ ಅವಧಿಯಲ್ಲಿ ಚಿತ್ರದುರ್ಗದ ಅನೇಕ ಕಡೆ ಅವರ ದೇವಾಲಯಗಳು ನಿರ್ಮಾಣಗೊಂಡಿರುವುದು ಕಂಡುಬಂದಿವೆ. ಹೊರೆಕೆರೆದೇವರಪುರಂ, ಹೊಳಲ್ಕೆರೆ ಕೆಲವು ಹಳ್ಳಿಗಳಲ್ಲಿ ಇವರ ಕಾಲದ ಕೆಲವು ದೇವಾಲಯಗಳು ಕಂಡುಬಂದಿವೆ. ಇದರಿಂದ ಈ ಕಾಲದಲ್ಲಿ ಚಿತ್ರದುರ್ಗದ ಬಹುತೇಕ ಪ್ರದೇಶ ಹೊಯ್ಸಳ ಭಾಗವಾಗಿತ್ತು ಎಂದು ತಿಳಿದುಬರುತ್ತದೆ. ದಾವಣಗೆರೆ ಜಿಲ್ಲೆಯಲ್ಲಿ ಹೊಯ್ಸಳ ಆಳ್ವಿಕೆಯ ಅನೇಕ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದೆ. ಹರಿಹರ, ಬೇಲೂರುಗಳಲ್ಲಿನ ಹೊಯ್ಸಳ ಶೈಲಿಯ ದೇವಾಲಯಗಳ ಜೊತೆಗೆ ದಾವಣಗೆರೆ ಸಮೀಪದ ಲೋಕಿಕೆರೆ ಗ್ರಾಮದಲ್ಲಿ ಸಿಕ್ಕಿರುವ ದಾನಶಾಸನದಿಂದ ಈ ಪ್ರದೇಶವು ಅವರ ಆಳ್ವಿಕೆ ಒಳಪಟ್ಟಿತ್ತು ಎಂದು ತಿಳಿಯಬಹುದಾಗಿದೆ. ಈ ಶಾಸನವು ಹೊಯ್ಸಳರ ಸಾಮಂತ ರಣಸಿಂಗಯ್ಯನು ಕಲ್ಲೇಶ್ವರ ದೇವರ ನಂದಾದೀವಿಗೆಗೆ, ಅಡಿಕೆ–ಎಲೆ ಮೇಲಿನ ಹಣವನ್ನು ದಾನ ನೀಡಿದ ಮಾಹಿತಿ ನೀಡುತ್ತದೆ.[೭] ಕರ್ನಾಟಕ ಆರಂಭಿಕ ರಾಜವಂಶವಾಗಿ ಕಂಡುಬಂದ ಹೊಯ್ಸಳರು ತಮ್ಮ ಸಾಮ್ರಾಜ್ಯವನ್ನು ಉತ್ತರದಲ್ಲಿ ಬಳ್ಳಾರಿಯವರೆಗೆ ವಿಸ್ತರಿಸಿದ್ದರು. ಬಿಟ್ಟಿದೇವ ಖ್ಯಾತಿಯ ವಿಷ್ಣುವರ್ಧನನು ತುಂಗಭದ್ರಾ ಪ್ರದೇಶದವರೆಗೆ ದಾಳಿ ನಡೆಸಿ ಕಂಪ್ಲಿ, ಬಳ್ಳಾರಿ, ರಾಯಚೂರು ಕೋಟೆಗಳನ್ನು ಸಾಮ್ರಾಜ್ಯದ ಉತ್ತರದ ಗಡಿಯಾಗಿಸಿಕೊಂಡಿದ್ದನು. ಇದರಿಂದ ಈ ಪ್ರದೇಶವು ಹೊಯ್ಸಳರ ಆಳ್ವಿಕೆಯಲ್ಲಿ ಲೀನವಾಗಿತ್ತು ಎಂದು ತಿಳಿದುಬರುತ್ತದೆ.

ಕ್ರಿ.ಶ. ೧೩೩೬ರಲ್ಲಿ ದಕ್ಷಿಣ ಭಾರತದಲ್ಲಿ ಪ್ರಬಲ ರಾಜಮನೆತನವಾಗಿ ಹಿಂದೂ ಸಾಮ್ರಾಜ್ಯವೆಂದು ಕರೆಸಿಕೊಂಡ ವಿಜಯನಗರ ಸಾಮ್ರಾಜ್ಯವು ತಲೆಎತ್ತಿತ್ತು. ಈ ಸಂದರ್ಭದಲ್ಲಿ ಚಿತ್ರದುರ್ಗದ ಪ್ರದೇಶಗಳು ಅವರ ಆಳ್ವಿಕೆ ಒಳಪಟ್ಟಿದ್ದವು. ದಾವಣಗೆರೆಯ ಚನ್ನಗಿರಿಯಲ್ಲಿನ ಶಾಸನ ವಿಜಯನಗರದ ಇಮ್ಮಡಿ ದೇವರಾಯ, ಬುಕ್ಕರಾಯರು ಆಳುತ್ತಿದ್ದಾಗ ವೀರಭದ್ರ ದೇವರನ್ನು ಪ್ರತಿಷ್ಠಾಪಿಸಿ ಗ್ರಾಮಗಳನ್ನು ಉಂಬಳಿ ನೀಡಿದ ಮಾಹಿತಿ ನೀಡುತ್ತದೆ.[೮] ಇದರಿಂದ ಈ ಪ್ರದೇಶವು ಅವರ ಭಾಗವಾಗಿತ್ತೆಂದು ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆಯೂ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಪ್ರದೇಶವಾಗಿದೆ. ಈ ಜಿಲ್ಲೆಯ ಹಂಪಿ ಪ್ರದೇಶವು ಇವರ ರಾಜಧಾನಿಯಾಗಿತ್ತು. ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳ ಅನೇಕ ರಾಜರು ಎರಡು ಶತಮಾನಕ್ಕೂ ಹೆಚ್ಚು ಕಾಲ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದಾರೆ.

ಹದಿನೈದನೆಯ ಶತಮಾನದಲ್ಲಿ ಏಳಿಗೆ ಹೊಂದಿದ ಚಿತ್ರದುರ್ಗದ ಪಾಳೆಯಗಾರರು ಚಿತ್ರದುರ್ಗವನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ೧೮ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದರು. ಅಂದು ಚಿತ್ರದುರ್ಗದ ಪಾಳೆಯಗಾರರು ಈ ಪ್ರದೇಶದ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ್ದರು ಅಲ್ಲದೇ ಈ ಪ್ರದೇಶಗಳ ಮೇಲೆ ನಡೆದ ದಾಳಿಗಳನ್ನು ಸಂಪೂರ್ಣವಾಗಿ ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾಗಿದ್ದರು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೭೪೭-೪೮ರಲ್ಲಿ ಹರಪನಹಳ್ಳಿ ಸೋಮೇಶ್ವರ ನಾಯಕನಿಗೂ, ಚಿತ್ರದುರ್ಗ ಸಂಸ್ಥಾನದ ಪಾಳೆಯಗಾರನಾಗಿದ್ದ ಬಿಚ್ಚುಗತ್ತಿ ಭರಮಣ್ಣ ನಾಯಕನಿಗೂ ಮಾಯಕೊಂಡದಲ್ಲಿ ಯುದ್ಧ ನಡೆಯಿತು.[೯] ಈ ಯುದ್ಧದಲ್ಲಿ ಹಿರೇಮದಕರಿ ನಾಯಕ ಮರಣ ಹೊಂದಿದನು. ಆತನ ಸಮಾಧಿಯನ್ನು ಅಲ್ಲಿಯೇ ಮಾಡಲಾಯಿತು. ಅದು

ಇಂದಿಗೂ ಅಲ್ಲಿರುವುದನ್ನು ಕಾಣಬಹುದಾಗಿದೆ. ಇದರಿಂದ ದಾವಣಗೆರೆ ಜಿಲ್ಲೆಯ ಭಾಗವಾಗಿರುವ ಮಾಯಕೊಂಡ ಅವರ ವ್ಯಾಪ್ತಿಗೆ ಒಳಪಟ್ಟಿತ್ತು ಎಂಬುದು ತಿಳಿದುಬರುತ್ತದೆ. ವಿಜಯನಗರದ ಅವನತಿಯ ಪೂರ್ವದ ಉನ್ನತ ಅಧಿಕಾರಿಗಳು ಬಿಜಾಪುರದ ಸುಲ್ತಾನರಿಗೆ ಸಾಮಂತರಾಗಿ ಬಳ್ಳಾರಿಯ ವಿವಿಧ ಕೋಟೆ ಪ್ರದೇಶಗಳಾದ ಬಳ್ಳಾರಿ, ಗುಡೆಕೋಟೆ, ಜರ್ಮಲಿ, ಸಂಡೂರುಗಳಲ್ಲಿ ವಿವಿಧ ಕುಲಕ್ಕೆ ಸೇರಿದ ಪಾಳೆಯಗಾರರು ಅಧಿಕಾರಕ್ಕೆ ಬಂದರು. ಅವರಲ್ಲಿ ಹರಪನಹಳ್ಳಿಯ ಪಾಳೆಯಗಾರರು ಪ್ರಮುಖರಾಗಿದ್ದಾರೆ.

ಕ್ರಿ.ಶ. ೧೭೯೯ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಮರಣ ಹೊಂದಿದನು. ಆಗ ಮೈಸೂರನ್ನು ವಶಪಡಿಸಿಕೊಂಡ ಬ್ರಿಟಿಷ್ ನೇತೃತ್ವ ಪಡೆಯು ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ಮಾಡಿತು. ಅದರಲ್ಲಿ ಮೈಸೂರಿನ ಒಡೆಯರಿಗೆ ಇಂದಿನ ಚಿತ್ರದುರ್ಗದ ಪ್ರದೇಶದವು ಒಳಗೊಂಡಂತೆ ತುಂಗಭದ್ರಾ ನದಿಯ ಕೆಳಗಿನ ಭಾಗವನ್ನು ನೀಡಲಾಯಿತು. ದಾವಣಗೆರೆ ಜಿಲ್ಲೆಯ ಹರಿಹರ, ತುಂಗಾಭದ್ರಾ ನದಿಯ ಉತ್ತರದ ಭಾಗಗಳನ್ನು ಮರಾಠರಿಗೆ ಮಾರಿದರು. ದಾವಣಗೆರೆ ಅಂದು ಮೈಸೂರು ಸಂಸ್ಥಾನದ ಉತ್ತರದ ಗಡಿಯಾಗಿತ್ತು.[೧೦] ಬಳ್ಳಾರಿ ಭಾಗವನ್ನು ಪಕ್ಕದ ಹೈದರಾಬಾದ್ ನಿಜಾಮನ ಸಾಮ್ರಾಜ್ಯಕ್ಕೆ ಸೇರಿಸಲಾಯಿತು. ಈ ಮೊದಲಿನ ಸಹಾಯಕ ಸೈನ್ಯ ಪದ್ಧತಿಯ ನಿಯಮದ ಪ್ರಕಾರ ಹೈದರಾಬಾದ್ ನಿಜಾಮನು ಬ್ರಿಟಿಷರಿಗೆ ನೀಡಬೇಕಾಗಿದ್ದ ಮೊತ್ತವು ಅಪಾರವಾಗಿತ್ತು. ಇದನ್ನು ನೀಡಲಾಗದ ನಿಜಾಮನು ತನ್ನ ಸಾಮ್ರಾಜ್ಯದ ದಕ್ಷಿಣ ಪ್ರದೇಶಗಳಾದ ಬಳ್ಳಾರಿ (ಸಂಡೂರು ಹೊರತು), ಕಡಪ ಮತ್ತು ಕರ್ನೂಲ್‌ಗಳನ್ನು ಬ್ರಿಟಿಷರಿಗೆ ಒಪ್ಪಿಸಲು ನಿರ್ಧರಿಸಿದನು. ಕ್ರಿ.ಶ. ೧೮೦೦ರ ಅಕ್ಟೋಬರ್ ೧೨ರಂದು ಅಧಿಕೃತವಾಗಿ ಈ ಪ್ರದೇಶವು ಬ್ರಿಟಿಷರಿಗೆ ಒಳಪಟ್ಟಿತು.

ಹೀಗೆ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಯ ಪ್ರದೇಶಗಳು ಅಂದು ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟು ಈ ಭಾಗದಲ್ಲಿ ಶೈಕ್ಷಣಿಕವಾಗಿ, ಅಭಿವೃದ್ಧಿಯ ಕಾರ್ಯಗಳಿಗೆ ಶ್ರಮ ಒಡೆಯರ್ ವಹಿಸಿದ್ದಾರೆ. ಬಳ್ಳಾರಿ ಮದ್ರಾಸ್ ಪ್ರಾಂತ್ಯಕ್ಕೆ ಅಂದು ಸೇರಿದ್ದು ಈ ಬ್ರಿಟಿಷ್ ಸರ್ಕಾರದ ಮಿಷನರಿಗಳಿಂದ ಅನೇಕ ಶಿಕ್ಷಣ ಮತ್ತು ಸಮಾಜ ಸೇವಾಕೇಂದ್ರಗಳನ್ನು ತೆರೆದು ಸ್ಥಳೀಯರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಹೀಗೆ ಮೂರು ಜಿಲ್ಲೆಗಳು ತಮ್ಮದೇಯಾದ ಚಾರಿತ್ರಿಕ ಹಿನ್ನೆಲೆಯುಳ್ಳ ಪ್ರದೇಶಗಳಾಗಿವೆ. ಈಗ ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳು ಅನೇಕ ಪ್ರಾಥಮಿಕ ಶಾಲೆಗಳಿಂದ ವೈದ್ಯಕೀಯ ಶಿಕ್ಷಣದ ಹಂತದವರೆಗಿನ ಶಾಲಾ-ಕಾಲೇಜುಗಳನ್ನು ಹೊಂದಿರುವ ಪ್ರದೇಶಗಳಾಗಿವೆ. ಈ ಮೂರು ಜಿಲ್ಲೆಗಳಲ್ಲಿ ದಾವಣಗೆರೆ ಜಿಲ್ಲೆ ಶೈಕ್ಷಣಿಕ ಪ್ರಗತಿಯಲ್ಲಿ ಮುಂದುವರೆದ ಜಿಲ್ಲೆಯಾದದ್ದು ಚಿತ್ರದುರ್ಗ ಮಧ್ಯಮ ಶೈಕ್ಷಣಿಕ ಪ್ರಗತಿಯಲ್ಲಿ ಇರುವ ಹಾಗೂ ಬಳ್ಳಾರಿ ಜಿಲ್ಲೆಯು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಯಾಗಿ ಕಂಡುಬಂದಿದೆ. ಈ ಮೂರು ಜಿಲ್ಲೆಗಳು ಚಾರಿತ್ರಿಕವಾಗಿ, ಭೌಗೋಳಿಕವಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ಭಿನ್ನತೆ ಹೊಂದಿರುವ ಪ್ರದೇಶಗಳಾಗಿವೆ. ಈ ಜಿಲ್ಲೆಗಳಲ್ಲಿ ಇರುವ ವೈರುಧ್ಯಗಳು ಕರ್ನಾಟಕದ ಇತರೆ ಪ್ರದೇಶಗಳಿಗೂ

ಅನ್ವಯಿಸುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನಕ್ಕೆ ರಾಜ್ಯದ ಈ ಮೂರು ಜಿಲ್ಲೆಗಳನ್ನು ಅಧ್ಯಯನದ ಅನುಕೂಲಕ್ಕೆ ಆಯ್ಕೆ ಮಾಡಿಕೊಂಡು ಸಮೀಕ್ಷೆ ನಡೆಸಲಾಗಿದೆ.

### ೬.೨ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳು

ವಿದ್ಯಾರ್ಥಿಗಳು ತುಂಬಾ ಮುಗ್ಧರು, ಅವರಿಗೆ ಏನೂ ತಿಳಿಯುವುದಿಲ್ಲವೆಂದು ಹಿರಿಯರು ಭಾವಿಸುತ್ತಾರೆ. ಆದರೆ ಮಗು ಭೂಮಿಗೆ ಬಂದ ತರುವಾಯ ಬಾಲ್ಯಾವಸ್ಥೆಯಲ್ಲಿಯೇ ತನ್ನ ಪರಿಸರದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಯನ್ನು ಗಮನಿಸುತ್ತದೆ ಹಾಗೂ ಅದನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತದೆಂದು ಮನೋವಿಜ್ಞಾನಿಗಳು ತಿಳಿಸುತ್ತಾರೆ. ಈ ದೃಷ್ಟಿಯಿಂದ ಮಗುವಿನ ಕಲಿಕಾ ಗ್ರಹಿಕೆಗಳು ಹೇಗಿವೆ, ಅದು ಚರಿತ್ರೆಯಂತಹ ಪಠ್ಯವನ್ನು ಹೇಗೆ ಅರ್ಥ ಮಾಡಿಕೊಳ್ಳಬಲ್ಲದು ಎಂಬುದನ್ನು ಅರಿಯಲು ಪ್ರಶ್ನಾವಳಿಯ ಮೂಲಕ ಮಗುವನ್ನು ಸಂದರ್ಶಿಸಿದಾಗ ನಮ್ಮ ಗ್ರಹಿಕೆಗೆ ನಿಲುಕದ ಉತ್ತರಗಳು ಮಕ್ಕಳಿಂದ ಬಂದವು. ಅಂತಹ ಪ್ರಯತ್ನದ ಫಲವನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ

**ಕೋಷ್ಟಕ ೬.೨.೧. ಚರಿತ್ರೆ ಪಠ್ಯಗಳನ್ನು ಗ್ರಹಿಸಿಕೊಳ್ಳಲು ತೊಂದರೆಯಾಗುತ್ತದೆ ಎಂದು ತಿಳಿಸುವ ವಿದ್ಯಾರ್ಥಿಗಳ ವಿವರ**

| ಕ್ರ.ಸಂ. | ಜಿಲ್ಲೆಗಳು | ಗ್ರಹಿಸಬಹುದು | | | ಗ್ರಹಿಸಲು ತೊಂದರೆಯಾಗುತ್ತದೆ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೮ | ೧೦ | ೧೮ | ೧೫ | ೧೬ | ೩೧ | ೧೫ | ೧೧ | ೨೬ |
| ೨. | ಚಿತ್ರದುರ್ಗ | ೦೯ | ೧೦ | ೧೯ | ೧೫ | ೧೧ | ೨೬ | ೧೪ | ೧೭ | ೩೧ |
| ೩. | ದಾವಣಗೆರೆ | ೧೦ | ೧೨ | ೨೨ | ೧೮ | ೧೪ | ೩೨ | ೧೦ | ೧೧ | ೨೧ |
| | ಒಟ್ಟು | ೨೭ | ೩೨ | ೫೯ | ೪೮ | ೪೧ | ೮೯ | ೩೯ | ೩೯ | ೭೮ |

ಚರಿತ್ರೆಪಠ್ಯಗಳು ಶುಷ್ಕವಾಗಿದ್ದು ಕೇವಲ ಇಸ್ವಿಯಂತಹ ಅಂಕಿ ಅಂಶಗಳನ್ನು ಒಳಗೊಂಡಿರುತ್ತವೆ. ಅವುಗಳನ್ನು ಮಕ್ಕಳು ಗ್ರಹಿಸುವಲ್ಲಿ ಸೋಲುತ್ತವೆ ಎನ್ನುವ ವಾದವಿದೆ. ಮಕ್ಕಳಿಗೆ ಆಕರ್ಷಕವಾಗುವ ರೀತಿಯಲ್ಲಿ ಕಥೆಗಳ ರೂಪದಲ್ಲಿ ಚರಿತ್ರೆ ಪಠ್ಯಗಳಿದ್ದರೆ ಒಳಿತು ಎನ್ನುವ ವಾದವು ಜನಸಾಮಾನ್ಯರ ಮಧ್ಯೆ ಕೇಳಿಬರುತ್ತದೆ. ಚರಿತ್ರೆ ಪಠ್ಯಗಳನ್ನು ನೀವು ಸುಲಭವಾಗಿ ಗ್ರಹಿಸಬಲ್ಲಿರಾ? ಎನ್ನುವ ಪ್ರಶ್ನೆಗೆ ಬಳ್ಳಾರಿ ಜಿಲ್ಲೆಯ ಒಟ್ಟು ೫ ಶಾಲೆಗಳಿಂದ ನಮಗೆ ಚರಿತ್ರೆ ಪಠ್ಯವನ್ನು ಗ್ರಹಿಸುವಲ್ಲಿ ತೊಡಕುಂಟಾಗುವುದಿಲ್ಲವೆಂದು ತಿಳಿಸಿದ ಗಂಡುಮಕ್ಕಳ ಪ್ರಮಾಣವು ಶೇಕಡ ೨೧.೦೫ರಷ್ಟಿದ್ದರೆ, ಚಿತ್ರದುರ್ಗ ಜಿಲ್ಲೆಯ ಗಂಡುಮಕ್ಕಳ ಪ್ರಮಾಣ ಶೇಕಡ ೨೩.೬೮ರಷ್ಟಿದೆ. ಹಾಗೆಯೇ ದಾವಣಗೆರೆಯ ಶೇ. ೨೬.೩೧ರಷ್ಟು ಗಂಡುಮಕ್ಕಳು ಚರಿತ್ರೆ ಪಠ್ಯ ಅರ್ಥವಾಗುತ್ತದೆಂದು ಪ್ರತಿಕ್ರಿಯಿಸಿದರು.

ಚರಿತ್ರೆ ಪಠ್ಯ ಸುಲಭವಾಗಿ ಗ್ರಹಿಕೆಯಾಗುತ್ತದೆಂದ ಹೆಣ್ಣುಮಕ್ಕಳಲ್ಲಿ ಬಳ್ಳಾರಿಯ ಪ್ರಮಾಣವು ಶೇಕಡ ೨೭.೦೨ ಇದ್ದರೆ, ಚಿತ್ರದುರ್ಗದ ಪ್ರಮಾಣವು ಶೇಕಡ ೨೭.೦೨ರಷ್ಟಿದೆ. ಆದರೆ ದಾವಣಗೆರೆ ಪ್ರಮಾಣವು ಶೇಕಡ ೩೨.೪೩ರಷ್ಟಿದೆ.

ಚರಿತ್ರೆ ಪಠ್ಯಗಳು ತುಂಬಾ ಕ್ಲಿಷ್ಟವಾಗಿದ್ದು ಅವುಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆಂದು ತಿಳಿಸಿದ ಮಕ್ಕಳಲ್ಲಿ ಬಳ್ಳಾರಿಯ ಗಂಡು ಮಕ್ಕಳ ಪ್ರಮಾಣ ಶೇಕಡ ೩೯.೪೭ರಷ್ಟಿದ್ದರೆ, ಹೆಣ್ಣುಮಕ್ಕಳ ಪ್ರಮಾಣ ಶೇಕಡ ೪೩.೨೪ರಷ್ಟಿದೆ. ಅದೇ ರೀತಿ ಚಿತ್ರದುರ್ಗದ ಗಂಡುಮಕ್ಕಳ ಪ್ರಮಾಣ ಶೇಕಡ ೬೫.೭೮ರಷ್ಟಿದ್ದರೆ, ಹೆಣ್ಣುಮಕ್ಕಳ ಪ್ರಮಾಣ ಶೇಕಡ ೨೯.೭೨ರಷ್ಟಿದೆ. ಹಾಗೆಯೇ ದಾವಣಗೆರೆಯ ಗಂಡು ಮಕ್ಕಳ ಪ್ರಮಾಣ ಶೇಕಡ ೪೮.೬೪ರಷ್ಟಿದ್ದರೆ ಹೆಣ್ಣುಮಕ್ಕಳ ಪ್ರಮಾಣ ಶೇಕಡ ೩೭.೮೮ರಷ್ಟಿದೆ.

ನನಗೆ ಏನೂ ಗೊತ್ತಿಲ್ಲ ಎಂದು ತಿಳಿಸಿದ ಮಕ್ಕಳಲ್ಲಿ ಬಳ್ಳಾರಿಯ ಗಂಡುಮಕ್ಕಳ ಪ್ರಮಾಣ ಶೇಕಡ ೬೫.೭೮ರಷ್ಟಿದ್ದರೆ, ಹೆಣ್ಣುಮಕ್ಕಳ ಪ್ರಮಾಣ ಶೇಕಡ ೨೯.೭೨ರಷ್ಟಿದೆ. ಚಿತ್ರದುರ್ಗ ಜಿಲ್ಲೆಯ ಗಂಡುಮಕ್ಕಳ ಪ್ರಮಾಣ ಶೇಕಡ ೩೬.೮೪ರಷ್ಟಿದ್ದರೆ ಹೆಣ್ಣುಮಕ್ಕಳ ಪ್ರಮಾಣ ಶೇಕಡ ೪೫.೯೪ರಷ್ಟಿದೆ. ಅದೇ ರೀತಿಯಾಗಿ ದಾವಣಗೆರೆ ಜಿಲ್ಲೆಯ ಗಂಡುಮಕ್ಕಳ ಪ್ರಮಾಣ ಶೇಕಡ ೨೬.೩೧ರಷ್ಟಿದ್ದರೆ, ಹೆಣ್ಣುಮಕ್ಕಳ ಪ್ರಮಾಣ ಶೇಕಡ ೨೯.೭೨ರಷ್ಟಿದೆ.

ಒಟ್ಟಾರೆಯಾಗಿ ಮೂರು ಜಿಲ್ಲೆಗಳ ಒಟ್ಟು ಮಕ್ಕಳನ್ನು ಗಮನಿಸಿದರೆ ಅರ್ಥವಾಗುತ್ತದೆ ಎಂದು ತಿಳಿಸಿದ ಮಕ್ಕಳ ಪ್ರಮಾಣದಲ್ಲಿ ಗಂಡು ಮಕ್ಕಳ ಪ್ರಮಾಣ ಶೇ. ೨೩.೮೯ರಷ್ಟಿದ್ದರೆ ಹೆಣ್ಣುಮಕ್ಕಳ ಪ್ರಮಾಣ ಶೇ. ೪೨.೪೭ರಷ್ಟಿದೆ.

ಅರ್ಥವಾಗುತ್ತಿಲ್ಲ ಎಂದು ತಿಳಿಸಿದ ಒಟ್ಟು ಗಂಡುಮಕ್ಕಳ ಪ್ರಮಾಣ ಶೇ. ೪೨.೬೦ ಇದ್ದರೆ ಹೆಣ್ಣುಮಕ್ಕಳ ಪ್ರಮಾಣ ಶೇ. ೩೬.೬೦ರಷ್ಟಿದೆ. ನನಗೇನೂ ಗೊತ್ತಿಲ್ಲ ಎನ್ನುವವರಲ್ಲಿ ಒಟ್ಟು ಗಂಡುಮಕ್ಕಳ ಪ್ರಮಾಣ ಶೇ. ೩೪.೫೧ ಹಾಗೂ ಹೆಣ್ಣುಮಕ್ಕಳ ಪ್ರಮಾಣ ಶೇ. ೩೪.೮೨ರಷ್ಟಿದೆ.

ಒಟ್ಟಾರೆಯಾಗಿ ಮೂರು ಜಿಲ್ಲೆಗಳ ಒಟ್ಟು ಮಕ್ಕಳ ಮನಸ್ಥಿತಿಯನ್ನು ಗಮನಿಸಿದರೆ ಚರಿತ್ರೆ ಪಠ್ಯಗಳನ್ನು ಗ್ರಹಿಸಬಲ್ಲೆವು ಎನ್ನುವವರ ಪ್ರಮಾಣ (ಶೇ. ೨೬.೨೨) ಅತ್ಯಂತ ಕಡಿಮೆ ಇದೆ. ಗ್ರಹಿಕೆಗೆ ನಿಲುಕುತ್ತಿಲ್ಲ ಎನ್ನುವ ಮಕ್ಕಳ ಪ್ರಮಾಣ (ಶೇ. ೩೯.೫೫) ಹೆಚ್ಚಾಗಿರುವುದು ಕಂಡುಬರುತ್ತದೆ. ನನಗೇನೂ ಗೊತ್ತಿಲ್ಲ ಎಂದು ಮುಗ್ಧವಾಗಿ ತಿಳಿಸಿದ ಮಕ್ಕಳ ಪ್ರಮಾಣ (ಶೇ. ೩೪.೬೬) ಅರ್ಥವಾಗುತ್ತಿಲ್ಲ ಎನ್ನುವವರ ಪ್ರಮಾಣಕ್ಕಿಂತ ಕಡಿಮೆ ಇದೆ.

ಕೋಷ್ಟಕ ೬.೨.೨. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆ ಪಠ್ಯಗಳು ಭವಿಷ್ಯಕ್ಕೆ ಪೂರಕವಾಗಿವೆ. ೩೮/೩೭

| ಕ್ರಸಂ. | ಜಿಲ್ಲೆಗಳು | ಪೂರಕವಾಗಿವೆ | | | ಪೂರಕವಾಗಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೧೫ | ೧೬ | ೩೧ | ೧೫ | ೧೦ | ೨೫ | ೦೮ | ೧೧ | ೧೯ |
| ೨. | ಚಿತ್ರದುರ್ಗ | ೧೧ | ೧೪ | ೨೫ | ೧೬ | ೧೫ | ೩೧ | ೧೦ | ೦೯ | ೧೯ |
| ೩. | ದಾವಣಗೆರೆ | ೧೨ | ೧೦ | ೨೨ | ೧೪ | ೧೮ | ೩೨ | ೧೧ | ೧೦ | ೨೧ |
| | ಒಟ್ಟು | ೩೮ | ೪೦ | ೭೮ | ೪೫ | ೪೩ | ೮೮ | ೨೯ | ೩೦ | ೫೯ |

ಜೀವನದಲ್ಲಿ ಭವಿಷ್ಯ ರೂಪಿಸಿಕೊಳ್ಳಲು ಹಳೆಯ ನೆನಪುಗಳು ಅತೀ ಅಗತ್ಯವೆಂದು ಹೇಳಲಾಗುತ್ತದೆ. ಆದರೆ ಚರಿತ್ರೆಪಠ್ಯಗಳು ಮಕ್ಕಳ ಭವಿಷ್ಯವನ್ನು ರೂಪಿಸುವಲ್ಲಿ ಸಹಾಯಕ ವಾಗಿವೆಯೆಂದು ಶೇಕಡ ೩೪.೬೬ರಷ್ಟು ಮಕ್ಕಳು ತಿಳಿಸಿದರೆ ಶೇಕಡ ೩೯.೫೫ರಷ್ಟು ಮಕ್ಕಳು ಭವಿಷ್ಯ ರೂಪಿಸುವಲ್ಲಿ ಚರಿತ್ರೆ ಪಠ್ಯಗಳು ಸಹಕಾರಿಯಾಗಿಲ್ಲವೆಂದು ತಿಳಿಸಿದವು. ಶೇಕಡ ೨೬.೨೨ರಷ್ಟು ಮಕ್ಕಳು ನಮಗೇನೂ ಅರ್ಥವಾಗುವುದಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದವು.

ಬಳ್ಳಾರಿ ಜಿಲ್ಲೆಯಲ್ಲಿ ಶೇ. ೩೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳು ನಮ್ಮ ಭವಿಷ್ಯ ರೂಪಿಸಬಲ್ಲವು ಎಂದು ಅಭಿಪ್ರಾಯ ವ್ಯಕ್ತಪಡಿಸಿದವು. ಶೇ. ೩೯.೪೭ ಗಂಡು ಹಾಗೂ ೨೭.೦೨ ಹೆಣ್ಣುಮಕ್ಕಳು ಭವಿಷ್ಯ ರೂಪಿಸಲು ಚರಿತ್ರೆ ಪಠ್ಯಗಳಿಂದ ಸಾಧ್ಯವಿಲ್ಲವೆಂದೇ ಹೇಳುತ್ತಾರೆ. ಶೇ. ೨೧.೮ ಗಂಡುಮಕ್ಕಳು ಹಾಗೂ ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ನಮಗೆ ಏನೂ ಗೊತ್ತಾಗುವುದಿಲ್ಲ ಎಂದು ತಿಳಿಸಿದರು.

ಚಿತ್ರದುರ್ಗದ ಶೇ. ೨೯.೭೨ರಷ್ಟು ಗಂಡುಮಕ್ಕಳು ಹಾಗೂ ಶೇ. ೩೪.೮೪ ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳು ಶಿಕ್ಷಣ ರೂಪಿಸಬಲ್ಲವು ಎಂದರೆ ಶೇ ೪೫.೯೪ಗಂಡು ಹಾಗೂ ೩೯.೮೪ ಹೆಣ್ಣುಮಕ್ಕಳು ಭವಿಷ್ಯ ರೂಪಿಸಲು ಚರಿತ್ರೆ ಪಠ್ಯಗಳಿಂದ ಸಾಧ್ಯವಿಲ್ಲವೆಂದೇ ಹೇಳುತ್ತಾರೆ. ಶೇ. ೨೭.೦೨ರಷ್ಟು ಗಂಡುಮಕ್ಕಳು ಹಾಗೂ ಶೇ. ೨೩.೬೮ರಷ್ಟು ಹೆಣ್ಣುಮಕ್ಕಳು ನಮಗೆ ಏನೂ ಗೊತ್ತಾಗುವುದಿಲ್ಲ ಎಂದು ತಿಳಿಸಿದರು

ಅದೇ ರೀತಿ ದಾವಣಗೆರೆಯ ಶೇ. ೩೨.೪೩ರಷ್ಟು ಗಂಡುಮಕ್ಕಳು ಹಾಗೂ ಶೇ. ೨೬.೩೧ರಷ್ಟು ಹೆಣ್ಣುಮಕ್ಕಳು ಚರಿತ್ರೆಪಠ್ಯಗಳು ಶಿಕ್ಷಣ ರೂಪಿಸಬಲ್ಲವು ಎಂದರೆ ಶೇ. ೩೭೮೩ಗಂಡು ಹಾಗೂ ೪೭.೩೬ ಹೆಣ್ಣುಮಕ್ಕಳು ಭವಿಷ್ಯ ರೂಪಿಸಲು ಚರಿತ್ರೆಪಠ್ಯಗಳಿಂದ ಸಾಧ್ಯವಿಲ್ಲವೆಂದೇ ಹೇಳುತ್ತಾರೆ. ಶೇ. ೨೯.೨೭ರಷ್ಟು ಗಂಡುಮಕ್ಕಳು ಹಾಗೂ ಶೇ. ೨೬.೩೧ರಷ್ಟು ಹೆಣ್ಣುಮಕ್ಕಳು ನಮಗೆ ಏನೂ ಗೊತ್ತಾಗುವುದಿಲ್ಲ ಎಂದು ತಿಳಿಸಿದರು.

**ಕೋಷ್ಟಕ ೬.೨.೩. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆ ಪಠ್ಯಗಳ ಘಟಕಗಳು ಅಧಿಕವಾಗಿವೆ ಎಂಬ ವಿವರ**

| ಕ್ರಸಂ. | ಜಿಲ್ಲೆಗಳು | ಅಧಿಕವಾಗಿವೆ | | | ಅಧಿಕವಾಗಿಲ್ಲ | | | ಯಾವುದೇ ಪ್ರತಿಕ್ರಿಯೆ ಇಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೧೪ | ೧೩ | ೨೭ | ೧೩ | ೧೨ | ೨೫ | ೧೧ | ೧೨ | ೨೩ |
| ೨. | ಚಿತ್ರದುರ್ಗ | ೧೨ | ೧೦ | ೨೨ | ೧೪ | ೧೮ | ೩೨ | ೧೧ | ೧೦ | ೨೧ |
| ೩. | ದಾವಣಗೆರೆ | ೧೫ | ೧೬ | ೩೧ | ೧೫ | ೧೦ | ೨೫ | ೦೮ | ೧೧ | ೧೯ |
| | **ಒಟ್ಟು** | **೪೧** | **೩೯** | **೮೦** | **೪೨** | **೪೦** | **೮೨** | **೩೦** | **೩೩** | **೬೩** |

ಬಳ್ಳಾರಿ ಜಿಲ್ಲೆಯಲ್ಲಿ ಶೇ. ೩೬.೮೪ರಷ್ಟು ಗಂಡು ಮಕ್ಕಳು ಹಾಗೂ ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳ ಘಟಕಗಳು ಅಧಿಕವಾಗಿರುವುದರಿಂದ ಓದಲು ತೊಂದರೆಯಾಗುತ್ತದೆ ಎಂದು ತಿಳಿಸಿದರು. ಶೇ. ೩೪.೨೧ ಗಂಡು ಹಾಗೂ ೩೨.೪೩ ಹೆಣ್ಣುಮಕ್ಕಳು ಘಟಕಗಳು ಅಧಿಕವಾಗಿರದೇ ಇರುವುದರಿಂದ ಚರಿತ್ರೆ ಪಠ್ಯಗಳು ಹೊರೆಯೆನಿಸುವುದಿಲ್ಲವೆಂದು ಹೇಳುತ್ತಾರೆ. ಶೇ. ೨೮.೯೪ ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

ಚಿತ್ರದುರ್ಗ ಜಿಲ್ಲೆಯಲ್ಲಿ ಶೇ. ೩೨.೪೫ರಷ್ಟು ಗಂಡುಮಕ್ಕಳು ಹಾಗೂ ಶೇ. ೨೬.೩೧ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳ ಘಟಕಗಳು ಅಧಿಕವಾಗಿರುವುದರಿಂದ ಓದಲು ತೊಂದರೆಯಾಗುತ್ತದೆ ಎಂದು ತಿಳಿಸಿದರು. ಶೇ. ೩೭.೮೩ ಗಂಡು ಹಾಗೂ ೪೭.೩೬ ಹೆಣ್ಣುಮಕ್ಕಳು ಘಟಕಗಳು ಅಧಿಕವಾಗಿರದೇ ಇರುವುದರಿಂದ ಚರಿತ್ರೆ ಪಠ್ಯಗಳು ಹೊರೆಯೆನಿಸುವುದಿಲ್ಲವೆಂದು ಹೇಳುತ್ತಾರೆ. ಶೇ. ೨೯.೭೨ ಗಂಡುಮಕ್ಕಳು ಹಾಗೂ ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

ಅದೇ ರೀತಿ ದಾವಣಗೆರೆ ಜಿಲ್ಲೆಯಲ್ಲಿ ಶೇ. ೩೪.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಚರಿತ್ರೆಪಠ್ಯಗಳ ಘಟಕಗಳು ಅಧಿಕವಾಗಿರುವುದರಿಂದ ಓದಲು ತೊಂದರೆಯಾಗುತ್ತದೆ ಎಂದು ತಿಳಿಸಿದರು. ಶೇ. ೩೯.೪೭ ಗಂಡು ಹಾಗೂ ೨೭.೦೨ ಹೆಣ್ಣು ಮಕ್ಕಳು ಘಟಕಗಳು ಅಧಿಕವಾಗಿರದೇ ಇರುವುದರಿಂದ ಚರಿತ್ರೆಪಠ್ಯಗಳು ಹೊರೆಯೆನಿಸುವುದಿಲ್ಲವೆಂದು ಹೇಳುತ್ತಾರೆ. ಶೇ. ೨೧.೮ ಗಂಡು ಮಕ್ಕಳು ಹಾಗೂ ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

**ಕೋಷ್ಟಕ ೬.೨.೪. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆ ಪಠ್ಯಗಳು ರಾಷ್ಟ್ರೀಯ ಮನೋಭಾವನೆ ಬೆಳೆಸಲು ಪೂರಕವಾಗಿವೆ.**

| ಕ್ರಸಂ. | ಜಿಲ್ಲೆಗಳು | ಪೂರಕವಾಗಿವೆ | | | ಪೂರಕವಾಗಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೧೫ | ೧೬ | ೩೧ | ೧೫ | ೧೦ | ೨೫ | ೦೮ | ೧೧ | ೧೯ |
| ೨. | ಚಿತ್ರದುರ್ಗ | ೧೪ | ೧೩ | ೨೭ | ೧೩ | ೧೨ | ೨೫ | ೧೧ | ೧೨ | ೨೩ |
| ೩. | ದಾವಣಗೆರೆ | ೧೪ | ೧೩ | ೨೭ | ೧೩ | ೧೨ | ೨೫ | ೧೧ | ೧೨ | ೨೩ |
| | **ಒಟ್ಟು** | **೪೩** | **೪೨** | **೮೫** | **೪೧** | **೩೪** | **೭೫** | **೩೦** | **೩೫** | **೬೫** |

ಚರಿತ್ರೆಯು ರಾಷ್ಟ್ರೀಯ ಮನೋಭಾವನೆ ಬೆಳೆಸುವಲ್ಲಿ ಮಹತ್ವದ ಕಾರ್ಯ ಮಾಡುತ್ತದೆಂದು ಹೇಳಲಾಗುತ್ತದೆ. ಆದರೆ ಪ್ರಾಥಮಿಕ ಶಾಲಾ ಹಂತದ ಮಕ್ಕಳಿಗೆ ಚರಿತ್ರೆಯ ಪಠ್ಯದಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯಲು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ನಿಟ್ಟಿನಲ್ಲಿ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳ ಪ್ರಾಥಮಿಕ ಹಂತದ ಮಕ್ಕಳನ್ನು ಸಂದರ್ಶಿಸಿದಾಗ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಶೇ. ೩೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯುತ್ತದೆ ಎಂದು ಅಭಿಪ್ರಾಯಪಟ್ಟರೆ, ಶೇ. ೩೯.೪೭ ಗಂಡು ಹಾಗೂ ೨೭.೦೨ ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯಲಾರದೆಂದು ಅಭಿಪ್ರಾಯಪಡುತ್ತಾರೆ. ಹಾಗೆಯೇ ಶೇ. ೨೧.೮೦ ಗಂಡುಮಕ್ಕಳು ಹಾಗೂ ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ರಾಷ್ಟ್ರೀಯ ಮನೋಭಾವನೆ ಬೆಳೆಸುವಲ್ಲಿ ಚರಿತ್ರೆ ಪಠ್ಯಗಳು ಹೇಗೆ ಪಾತ್ರ ವಹಿಸಬಲ್ಲವು ಎಂಬುದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

ಚಿತ್ರದುರ್ಗ ಜಿಲ್ಲೆಯಲ್ಲಿ ಶೇ. ೩೬.೮೪ರಷ್ಟು ಗಂಡು ಮಕ್ಕಳು ಹಾಗೂ ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯುತ್ತದೆ ಎಂದು ಅಭಿಪ್ರಾಯಪಟ್ಟರೆ ಶೇ. ೩೪.೨೧ ಗಂಡು ಹಾಗೂ ೩೨.೪೩ ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯಲಾರದೆಂದು ಅಭಿಪ್ರಾಯಪಡುತ್ತಾರೆ. ಹಾಗೆಯೇ ಶೇ. ೨೮.೯೪ ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ರಾಷ್ಟ್ರೀಯ ಮನೋಭಾವನೆ ಬೆಳೆಸುವಲ್ಲಿ ಚರಿತ್ರೆಪಠ್ಯಗಳು ಹೇಗೆ ಪಾತ್ರ ವಹಿಸಬಲ್ಲವು ಎಂಬುದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

ಅದೇ ರೀತಿ ದಾವಣಗೆರೆ ಜಿಲ್ಲೆಯಲ್ಲಿ ಶೇ. ೩೬.೮೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯುತ್ತದೆ ಎಂದು ಅಭಿಪ್ರಾಯಪಟ್ಟರೆ, ಶೇ. ೩೪.೨೧ ಗಂಡು ಹಾಗೂ ೩೨.೪೩ ಹೆಣ್ಣು ಮಕ್ಕಳು ಚರಿತ್ರೆ ಪಠ್ಯಗಳಿಂದ ರಾಷ್ಟ್ರೀಯ ಮನೋಭಾವನೆ ಬೆಳೆಯಲಾರದೆಂದು ಅಭಿಪ್ರಾಯಪಡುತ್ತಾರೆ. ಹಾಗೆಯೇ

ಶೇ. ೨೮.೯೪ ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ರಾಷ್ಟ್ರೀಯ ಮನೋಭಾವನೆ ಬೆಳೆಸುವಲ್ಲಿ ಚರಿತ್ರೆ ಪಠ್ಯಗಳು ಹೇಗೆ ಪಾತ್ರ ವಹಿಸಬಲ್ಲವು ಎಂಬುದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

**ಕೋಷ್ಟಕ ೬.೨.೫. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆ ಪಠ್ಯಗಳನ್ನು ಸ್ವತಂತ್ರವಾಗಿ ಗ್ರಹಿಸಬಹುದೆಂಬ ವಿವರ**

| ಕ್ರ.ಸಂ. | ಜಿಲ್ಲೆಗಳು | ಸ್ವತಂತ್ರವಾಗಿ ಗ್ರಹಿಸಬಹುದು | | | ಸ್ವತಂತ್ರವಾಗಿ ಗ್ರಹಿಸಲು ಸಾಧ್ಯವಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೧೧ | ೧೨ | ೨೩ | ೧೪ | ೧೩ | ೨೭ | ೧೩ | ೧೨ | ೨೫ |
| ೨. | ಚಿತ್ರದುರ್ಗ | ೧೧ | ೧೨ | ೨೩ | ೧೪ | ೧೩ | ೨೭ | ೧೩ | ೧೨ | ೨೫ |
| ೩. | ದಾವಣಗೆರೆ | ೦೮ | ೧೧ | ೧೯ | ೧೫ | ೧೬ | ೩೧ | ೧೫ | ೧೦ | ೨೫ |
| | ಒಟ್ಟು | ೩೦ | ೩೫ | ೬೫ | ೪೩ | ೪೨ | ೮೫ | ೪೧ | ೩೪ | ೭೫ |

ಶಿಕ್ಷಕರ ಸಹಾಯವಿಲ್ಲದೆ ವಿದ್ಯಾರ್ಥಿಗಳು ಚರಿತ್ರೆ ಪಠ್ಯಗಳನ್ನು ಗ್ರಹಿಸಲು ಸಾಧ್ಯವೆ ಎಂದು ಗಮನಿಸಿದಾಗ ಬಹುತೇಕ ವಿದ್ಯಾರ್ಥಿಗಳು ಸಾಧ್ಯವಾಗುವುದಿಲ್ಲ ಎಂದೇ ಅಭಿಪ್ರಾಯಪಟ್ಟರು. ಇನ್ನೂ ಕೆಲವು ವಿದ್ಯಾರ್ಥಿಗಳು ಶಿಕ್ಷಕರ ಸಹಾಯವಿಲ್ಲದೆ ಗ್ರಹಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯಪಟ್ಟರು. ಇನ್ನೂ ಕೆಲವು ವಿದ್ಯಾರ್ಥಿಗಳು ಏನು ಉತ್ತರ ನೀಡಬೇಕೋ ಎನ್ನುವ ಗೊಂದಲದಿಂದಾಗಿ ತಮಗೆ ಗೊತ್ತಿಲ್ಲವೆಂದೂ, ಇನ್ನೂ ಯಾವುದೇ ಉತ್ತರ ನೀಡದೇ ಮೌನವಾಗಿ ಉಳಿದುಬಿಟ್ಟರು.

ಶಿಕ್ಷಕರ ಸಹಾಯವಿಲ್ಲದೆ ಪ್ರಾಥಮಿಕ ಹಂತದ ಮಕ್ಕಳು ಪಠ್ಯಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟಸಾಧ್ಯದ ವಿಚಾರ. ಕೆಲವೇ ಕೆಲವು ಮೇಲ್ಜಾತಿಯ, ವಿದ್ಯಾವಂತ ಪಾಲಕರು ಇರುವ ಕುಟುಂಬಗಳ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳು ಮಾತ್ರ ತಮಗೆ ಶಿಕ್ಷಕರ ಸಹಾಯವಿಲ್ಲದಿದ್ದರೂ ಪಠ್ಯಗಳನ್ನು ಅರ್ಥ ಮಾಡಿಕೊಳ್ಳುತ್ತೇವೆ ಎಂದು ತಿಳಿಸಿದರು. ಬಳ್ಳಾರಿ ಜಿಲ್ಲೆಯಲ್ಲಿ ಈ ರೀತಿ ಉತ್ತರಿಸಿದ ವಿದ್ಯಾರ್ಥಿಗಳ ಪ್ರಮಾಣ ಶೇ. ೨೮.೯೪ರಷ್ಟು ಗಂಡುಮಕ್ಕಳಿದ್ದರೆ, ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಕಂಡಬರುತ್ತಾರೆ. ಆದರೆ ತಮಗೆ ಶಿಕ್ಷಕರ ಸಹಾಯವಿಲ್ಲದೆ ಸ್ವತಂತ್ರವಾಗಿ ಚರಿತ್ರೆಪಠ್ಯಗಳು ಅರ್ಥವಾಗುವುದಿಲ್ಲ ಎಂದು ಶೇ. ೩೯.೧೩ರಷ್ಟು ಗಂಡುಮಕ್ಕಳು ಹಾಗೂ ೩೫.೧೩ರಷ್ಟು ಹೆಣ್ಣುಮಕ್ಕಳು ಅಭಿಪ್ರಾಯ ವ್ಯಕ್ತಪಡಿಸಿದರು. ಈ ಪ್ರಶ್ನೆಯಿಂದ ತಮಗೆ ತುಂಬಾ ಏನೂ ತೋಚುವುದಿಲ್ಲ ಎಂದು ಅಭಿಪ್ರಾಯಪಟ್ಟವರಲ್ಲಿ ಶೇ. ೩೪.೨೧ ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳಿದ್ದಾರೆ.

**ಕೋಷ್ಟಕ ೬.೨.೬. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆ ಪಠ್ಯಗಳು ಭಾರತ/ಕರ್ನಾಟಕದ ಸ್ಮಾರಕಗಳ ವಿವರ ಹೊಂದಿವೆ.**

| ಕ್ರಸಂ. | ಜಿಲ್ಲೆಗಳು | ಸ್ಮಾರಕಗಳ ವಿವರ ಹೊಂದಿವೆ | | | ಸ್ಮಾರಕಗಳ ವಿವರ ಹೊಂದಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೧೪ | ೧೩ | ೨೭ | ೧೩ | ೧೨ | ೨೫ | ೧೧ | ೧೨ | ೨೩ |
| ೨. | ಚಿತ್ರದುರ್ಗ | ೧೪ | ೧೩ | ೨೭ | ೧೩ | ೧೨ | ೨೫ | ೧೧ | ೧೨ | ೨೩ |
| ೩. | ದಾವಣಗೆರೆ | ೦೮ | ೧೧ | ೧೯ | ೧೫ | ೧೬ | ೩೧ | ೧೫ | ೧೦ | ೨೫ |
| | ಒಟ್ಟು | ೩೬ | ೩೭ | ೭೩ | ೪೧ | ೪೦ | ೮೧ | ೩೭ | ೩೪ | ೭೧ |

ಚರಿತ್ರೆ ಪಠ್ಯಗಳನ್ನು ಓದುವ ಪ್ರಾಥಮಿಕ ಹಂತದ ಮಕ್ಕಳಲ್ಲಿ ಬಹುತೇಕ ಮಕ್ಕಳಿಗೆ ಸ್ಮಾರಕಗಳ ಕುರಿತು ಸ್ಪಷ್ಟವಾದ ಪರಿಕಲ್ಪನೆ ಇರುವುದಿಲ್ಲ. ಎಷ್ಟೋ ಮಕ್ಕಳು ಸ್ಮಾರಕಗಳಿರುವ ಪರಿಸರದಲ್ಲಿಯೇ ನೆಲೆಸಿರುತ್ತಾರೆ. ಆದರೆ ಅವು ಸ್ಮಾರಕಗಳೆಂಬ ಕುರಿತು ತಿಳುವಳಿಕೆ ಇರುವುದಿಲ್ಲ. ಸ್ಮಾರಕಗಳ ಕುರಿತಾದ ಸ್ಪಷ್ಟ ತಿಳುವಳಿಕೆ ಇರದಿರುವಾಗ ಚರಿತ್ರೆ ಪಠ್ಯಗಳಲ್ಲಿ ಸ್ಮಾರಕಗಳ ವಿವರ ಇವೆಯೋ ಇಲ್ಲವೋ ಎನ್ನುವ ಕುರಿತು ಮಾಹಿತಿ ನೀಡುವಾಗ ಮಕ್ಕಳು ಗೊಂದಲಕ್ಕೊಳಗಾಗುತ್ತಾರೆ.

ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದಲ್ಲಿ ಭಾರತ/ಕರ್ನಾಟಕದ ಸ್ಮಾರಕಗಳ ವಿವರಗಳಿವೆಯೇ? ಎಂದು ಪ್ರಶ್ನಿಸಿದಾಗ ಶೇ. ೩೬.೮೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯದಲ್ಲಿವೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೪.೨೧ರಷ್ಟು ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯ ಹೊಂದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ ೨೮.೯೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

ಚಿತ್ರದುರ್ಗ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದಲ್ಲಿ ಭಾರತ/ಕರ್ನಾಟಕದ ಸ್ಮಾರಕಗಳ ವಿವರಗಳಿವೆಯೇ? ಎಂದು ಪ್ರಶ್ನಿಸಿದಾಗ ಶೇ. ೩೬.೮೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯದಲ್ಲಿವೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೪.೨೧ರಷ್ಟು ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯ ಹೊಂದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ. ೨೮.೯೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

ದಾವಣಗೆರೆ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದಲ್ಲಿ ಭಾರತ/ಕರ್ನಾಟಕದ ಸ್ಮಾರಕಗಳ ವಿವರಗಳಿವೆಯೆ ಎಂದು ಪ್ರಶ್ನಿಸಿದಾಗ ಶೇ. ೨೧.೮೦ರಷ್ಟು ಗಂಡುಮಕ್ಕಳು

ಹಾಗೂ ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯದಲ್ಲಿವೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಸ್ಮಾರಕಗಳ ವಿವರ ಇತಿಹಾಸ ಪಠ್ಯ ಹೊಂದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ. ೨೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೨೭.೦೨ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

**ಕೋಷ್ಟಕ ೬.೨.೭. ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಚರಿತ್ರೆಪಠ್ಯಗಳನ್ನು ಶಾಲೆಯಲ್ಲಿ ಸರಿಯಾದ ಕ್ರಮದಲ್ಲಿ ಬೋಧಿಸಲಾಗುತ್ತದೆ.**

| ಕ್ರ.ಸಂ. | ಜಿಲ್ಲೆಗಳು | ಶಿಕ್ಷಕರು ಸರಿಯಾದ ಕ್ರಮದಲ್ಲಿ ಬೋಧಿಸುತ್ತಾರೆ | | | ಶಿಕ್ಷಕರು ಸರಿಯಾದ ಕ್ರಮದಲ್ಲಿ ಬೋಧಿಸುವುದಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೮ | ೦೭ | ೧೫ | ೧೪ | ೧೬ | ೩೦ | ೧೬ | ೧೪ | ೩೦ |
| ೨. | ಚಿತ್ರದುರ್ಗ | ೦೭ | ೦೭ | ೧೪ | ೧೫ | ೧೪ | ೨೯ | ೧೬ | ೧೬ | ೩೨ |
| ೩. | ದಾವಣಗೆರೆ | ೦೯ | ೧೦ | ೧೯ | ೧೫ | ೧೫ | ೩೦ | ೧೪ | ೧೨ | ೨೬ |
| | ಒಟ್ಟು | ೨೪ | ೨೪ | ೪೮ | ೪೪ | ೪೫ | ೮೯ | ೪೬ | ೪೨ | ೮೮ |

ಚರಿತ್ರೆ ಪಠ್ಯಗಳನ್ನು ಓದುವ ಪ್ರಾಥಮಿಕ ಹಂತದ ಮಕ್ಕಳಲ್ಲಿ ಬಹುತೇಕ ಮಕ್ಕಳಿಗೆ ಪಠ್ಯಗಳು ಅರ್ಥವಾಗುತ್ತಿವೆಯೋ ಇಲ್ಲವೋ ಎಂದು ಗಮನಿಸಿದಾಗ ಬಹುತೇಕ ಮಕ್ಕಳು ಪಾಠಗಳು ಅರ್ಥವಾಗುವುದಿಲ್ಲವೆಂದೇ ಹೇಳಿದವು. ಶಾಲೆಯಲ್ಲಿ ಚರಿತ್ರೆ ಪಠ್ಯ ಬೋಧಿಸುವಾಗ ಬಳಸಬೇಕಾದ ಪಟಗಳು, ಗ್ಲೋಬ್ ಮುಂತಾದವುಗಳನ್ನು ಪಾಠದ ಸಮಯದಲ್ಲಿ ತೋರಿಸುವುದಿಲ್ಲವೆಂದೇ ಹೇಳುತ್ತಾರೆ

ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದ ಬೋಧನೆ ಅರ್ಥವಾಗುವುದೇ? ಎಂದು ಪ್ರಶ್ನಿಸಿದಾಗ ಶೇ. ೨೧.೦೫ರಷ್ಟು ಗಂಡುಮಕ್ಕಳು ಹಾಗೂ ಶೇ. ೧೮.೯೧ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿದೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೬.೮೪ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿ ನಡೆಯುವುದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ. ೪೨.೧೦ರಷ್ಟು ಗಂಡುಮಕ್ಕಳು ಹಾಗೂ ಶೇ. ೩೭.೮೨ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

ಚಿತ್ರದುರ್ಗ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದ ಬೋಧನೆ ಅರ್ಥವಾಗುವುದೆ ಎಂದು ಪ್ರಶ್ನಿಸಿದಾಗ ಶೇ. ೧೮.೪೨ರಷ್ಟು ಗಂಡುಮಕ್ಕಳು ಹಾಗೂ ಶೇ. ೧೮.೯೧ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿದೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೩೭.೮೨ರಷ್ಟು

ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿ ನಡೆಯುವುದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ. ೪೨.೧೦ರಷ್ಟು ಗಂಡುಮಕ್ಕಳು ಹಾಗೂ ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

ದಾವಣಗೆರೆ ಜಿಲ್ಲೆಯ ಪ್ರಾಥಮಿಕ ಹಂತದ ಮಕ್ಕಳನ್ನು ನಿಮ್ಮ ಚರಿತ್ರೆ ಪಠ್ಯದ ಬೋಧನೆ ಅರ್ಥವಾಗುವುದೇ ಎಂದು ಪ್ರಶ್ನಿಸಿದಾಗ ಶೇ. ೩೨.೬೮ರಷ್ಟು ಗಂಡುಮಕ್ಕಳು ಹಾಗೂ ಶೇ. ೨೭.೦೨ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿದೆ ಎಂದು ತಿಳಿಸಿದರು. ಅದೇ ರೀತಿ ಶೇ. ೩೯.೪೭ರಷ್ಟು ಗಂಡುಮಕ್ಕಳು ಹಾಗೂ ಶೇ. ೪೦.೫೪ರಷ್ಟು ಹೆಣ್ಣುಮಕ್ಕಳು ಚರಿತ್ರೆ ಪಠ್ಯದ ಬೋಧನೆ ಸರಿಯಾದ ರೀತಿಯಲ್ಲಿ ನಡೆಯುವುದಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇನ್ನು ಶೇ. ೩೬.೮೪ರಷ್ಟು ಗಂಡುಮಕ್ಕಳು ಹಾಗೂ ಶೇ. ೩೨.೪೩ರಷ್ಟು ಹೆಣ್ಣುಮಕ್ಕಳು ಯಾವುದೇ ಸ್ಪಷ್ಟವಾದ ಉತ್ತರ ನೀಡಲಿಲ್ಲ.

**ಕೋಷ್ಟಕ ೬.೨.೮. ಚರಿತ್ರೆ ಪಠ್ಯಗಳು ಬದಲಾವಣೆಗೊಳ್ಳಬೇಕೆಂಬ ವಿವರ**

| ಕ್ರ.ಸಂ. | ಜಿಲ್ಲೆಗಳು | ಚರಿತ್ರೆ ಪಠ್ಯಗಳು ಬದಲಾವಣೆಗೊಳ್ಳಬೇಕು | | | ಪ್ರಸ್ತುತ ಇರುವಂತೆ ಇರಲಿ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೮ | ೦೮ | ೧೬ | ೧೩ | ೧೪ | ೨೭ | ೧೭ | ೧೫ | ೩೨ |
| ೨. | ಚಿತ್ರದುರ್ಗ | ೦೬ | ೦೭ | ೧೩ | ೧೪ | ೧೬ | ೩೦ | ೧೮ | ೧೪ | ೩೨ |
| ೩. | ದಾವಣಗೆರೆ | ೦೭ | ೦೬ | ೧೩ | ೧೫ | ೧೭ | ೩೨ | ೧೬ | ೧೪ | ೩೦ |
| | ಒಟ್ಟು | ೨೧ | ೨೧ | ೪೨ | ೪೨ | ೪೭ | ೮೯ | ೫೧ | ೪೩ | ೯೪ |

ಮಕ್ಕಳ ಅಧ್ಯಯನ ದೃಷ್ಟಿಯಿಂದ ಪ್ರಾಥಮಿಕ ಹಂತದ ಮಕ್ಕಳಿಗೆ ಈಗಿರುವ ಚರಿತ್ರೆ ಪಠ್ಯಕ್ಕಿಂತ ಭಿನ್ನವಾದ ಚರಿತ್ರೆ ಪಠ್ಯವನ್ನಿರಿಸಬೇಕೇ? ಎಂದು ಮಕ್ಕಳನ್ನು ಕೇಳಲಾದ ಪ್ರಶ್ನೆಗೆ ಪ್ರತಿಕ್ರಿಯಿಸಿದ ಮಕ್ಕಳ ವಿವರ ಈ ಕೆಳಗಿನಂತಿದೆ. ಬಳ್ಳಾರಿ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೨೧.೦೫ ಹಾಗೂ ಹೆಣ್ಣುಮಕ್ಕಳು ಶೇ. ೨೧.೬೮ರಷ್ಟು ಚರಿತ್ರೆ ಪಠ್ಯಗಳು ಬದಲಾವಣೆ ಗೊಳ್ಳಬೇಕು ಎಂದು ಹೇಳಿದರೆ ಶೇ. ೩೪.೨೧ ಗಂಡುಮಕ್ಕಳು ಶೇ. ೩೭.೮೩ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ ೪೪.೭೩ ಹಾಗೂ ಹೆಣ್ಣುಮಕ್ಕಳು ಶೇ ೩೯.೪೭ರಷ್ಟು ಕಂಡುಬಂದರು.

ಚಿತ್ರದುರ್ಗ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೧೫.೭೧ ಹಾಗೂ ಹೆಣ್ಣುಮಕ್ಕಳು ಶೇ. ೧೮.೯೧ರಷ್ಟು ಚರಿತ್ರೆಪಠ್ಯಗಳು ಬದಲಾವಣೆಗೊಳ್ಳಬೇಕು ಎಂದು ಹೇಳಿದರೆ ಶೇ. ೩೪.೮೧ ಗಂಡುಮಕ್ಕಳು ಶೇ. ೪೩.೨೪ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡವೆಂದು ತಿಳಿಸಿದರು.

ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೪೮.೬೪ ಹಾಗೂ ಹೆಣ್ಣುಮಕ್ಕಳು ಶೇ. ೩೭.೮೩ರಷ್ಟು ಕಂಡುಬಂದರು.

ದಾವಣಗೆರೆ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೧೮.೪೨ ಹಾಗೂ ಹೆಣ್ಣುಮಕ್ಕಳು ಶೇ. ೧೬.೨೧ರಷ್ಟು ಚರಿತ್ರೆ ಪಠ್ಯಗಳು ಬದಲಾವಣೆಗೊಳ್ಳಬೇಕು ಎಂದು ಹೇಳಿದರೆ ಶೇ. ೩೯.೪೭ ಗಂಡುಮಕ್ಕಳು ಶೇ. ೪೫.೯೪ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೪೩.೨೪ ಹಾಗೂ ಹೆಣ್ಣುಮಕ್ಕಳು ಶೇ. ೩೭.೮೩ರಷ್ಟು ಕಂಡುಬಂದರು.

**ಕೋಷ್ಟಕ ೬.೨೯. ಚರಿತ್ರೆ ಪಠ್ಯಗಳಲ್ಲಿ ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿವೆ.**

| ಕ್ರಸಂ. | ಜಿಲ್ಲೆಗಳು | ದಾಖಲಾಗಿವೆ | | | ದಾಖಲಾಗಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೯ | ೦೭ | ೧೬ | ೧೦ | ೧೦ | ೨೦ | ೧೯ | ೨೦ | ೩೯ |
| ೨. | ಚಿತ್ರದುರ್ಗ | ೦೮ | ೦೬ | ೧೪ | ೧೨ | ೧೪ | ೨೬ | ೧೮ | ೧೭ | ೩೫ |
| ೩. | ದಾವಣಗೆರೆ | ೦೭ | ೦೭ | ೧೪ | ೧೩ | ೧೩ | ೨೬ | ೧೮ | ೧೭ | ೩೫ |
| | ಒಟ್ಟು | ೩೪ | ೨೦ | ೪೪ | ೩೫ | ೩೭ | ೭೨ | ೫೫ | ೫೪ | ೧೦೯ |

ಮಕ್ಕಳಿಗೆ ತಮ್ಮ ಪರಿಸರದಲ್ಲಿರುವ ಚಾರಿತ್ರಿಕ ಸ್ಥಳಗಳೇ ಸರಿಯಾಗಿ ತಿಳಿದಿರುವುದಿಲ್ಲ. ಇಂತಹ ಮಕ್ಕಳಿಗೆ ಅಂತಾರಾಷ್ಟ್ರೀಯ ಮಟ್ಟದ ಚರಿತ್ರೆಯನ್ನು ಪಠ್ಯವಾಗಿಡುವುದು ಎಷ್ಟು ಸರಿ ಎನ್ನುವ ಪ್ರಶ್ನೆ ಕಾಡುತ್ತದೆ. ಇತ್ತೀಚೆಗೆ ಕರ್ನಾಟಕದಲ್ಲಿ ಕೇಂದ್ರೀಯ ಶಿಕ್ಷಣ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದೇವೆ ಎಂದು ಹೇಳಿ ಪಾಲಕರಿಂದ ಹಣ ಕೀಳುವ ಖಾಸಗಿ ಶಾಲೆಗಳು ನಗರ ಪ್ರದೇಶಗಳಲ್ಲಿ ಅಧಿಕವಾಗಿವೆಯೆಂಬ ವಾದ ಕೇಳಿಬರುತ್ತಿದೆ. ಸರ್ಕಾರವು ಅಂತಹ ಶಾಲೆಗಳನ್ನು ನಿಯಂತ್ರಿಸಲು ಇರುವ ಏಕೈಕ ದಾರಿ ಶಾಲೆಗಳನ್ನು ರಾಷ್ಟ್ರೀಕರಣಗೊಳಿಸುವುದು. ಆದರೆ ಸರ್ಕಾರಕ್ಕೆ ಶಾಲೆಗಳನ್ನು ರಾಷ್ಟ್ರೀಕರಣಗೊಳಿಸಲು ಹತ್ತು ಹಲವು ಅಡ್ಡಿಗಳಿವೆ. ಮುಖ್ಯವಾಗಿ ನಗರ ಪ್ರದೇಶದಲ್ಲಿರುವ ಖಾಸಗಿ ಶಾಲೆಗಳ ಒಡೆಯರು ಬಂಡವಾಳಶಾಹಿಗಳು ಹಾಗೂ ರಾಜಕೀಯ ಸೂತ್ರವನ್ನು ಹಿಡಿದಿರುವ ರಾಜಕಾರಣಿಗಳದ್ದಾಗಿರುತ್ತವೆ. ಇಲ್ಲವೇ ರಾಜಕೀಯ ಪ್ರಾಬಲ್ಯ ಹೊಂದಿರುವ ಮಠಮಾನ್ಯಗಳ ಶಾಲೆಗಳಾಗಿರುತ್ತವೆ. ಶಾಲೆಗಳ ರಾಷ್ಟ್ರೀಕರಣದಿಂದ ಇವರೆಲ್ಲರ ವಿರೋಧವನ್ನು ಕಟ್ಟಿಕೊಳ್ಳುವುದರಿಂದ ಆಡಳಿತ ಪಕ್ಷ ತನ್ನ ಅಧಿಕಾರವನ್ನು ಕಳೆದುಕೊಳ್ಳುವ ಭಯವನ್ನು ಹೊಂದಿರುತ್ತದೆ. ತಮ್ಮ ಈ ಎಲ್ಲಾ ನ್ಯೂನತೆಗಳನ್ನು ಸರಿಪಡಿಸದೇ ಖಾಸಗಿ ಶಾಲೆಗಳತ್ತ ಮುಖ ಮಾಡಿರುವ ಪಾಲಕರ ಮನಸ್ಸನ್ನು ಸರ್ಕಾರಿ ಶಾಲೆಗಳತ್ತ ತಿರುಗಿಸುವ ಪ್ರಯತ್ನವೇ ಕೇಂದ್ರೀಯ ಪಠ್ಯಕ್ರಮವನ್ನು ಪ್ರಾಥಮಿಕ ಮಕ್ಕಳ ಮೇಲೆ ಹೇರುವುದಾಗಿದೆ. ಮಕ್ಕಳ ಮನೋಭಿರುಚಿಯಾಗಲೀ ಅಥವಾ ಅವರ ಸಾಮರ್ಥ್ಯವನ್ನಾಗಲೀ ಪರಿಗಣಿಸದೇ ಈ ರೀತಿಯಲ್ಲಿ ಕೇಂದ್ರೀಯ ಪಠ್ಯಕ್ರಮವನ್ನು ಸರ್ಕಾರಿ ಶಾಲೆಗಳಲ್ಲಿ ಕಲಿಯುವ ಮಕ್ಕಳ ಮೇಲೆ ಹೇರುವುದು ಎಷ್ಟು ಸರಿ ಎನ್ನುವ ಪ್ರಶ್ನೆಯೂ ಉದ್ಭವಿಸುತ್ತದೆ. ಉದಾಹರಣೆಗೆ ನಮ್ಮ ನಾಡು

ನುಡಿಗಳ ಕುರಿತೇ ಪ್ರಾಥಮಿಕ ಹಂತದ ಮಕ್ಕಳಿಗೆ ತಿಳುವಳಿಕೆ ಇರುವುದಿಲ್ಲ. ಆದರೆ ೫-೬-೭ನೇ ತರಗತಿ ಮಕ್ಕಳಿಗೆ ಯುರೋಪಿನ ಇತಿಹಾಸ ಬೋಧಿಸುವುದು ಎಷ್ಟು ಸೂಕ್ತ ಎನ್ನುವ ಪ್ರಶ್ನೆಯೂ ಕಾಡುತ್ತದೆ. ಈ ನಿಟ್ಟಿನಲ್ಲಿ ಚರಿತ್ರೆ ಪಠ್ಯಗಳಿಗೆ ಸಂಬಂಧಿಸಿದಂತೆ ಸ್ಥಳೀಯ ಚಾರಿತ್ರಿಕ ವಿಷಯಗಳು ನಿಮ್ಮ ಪಠ್ಯದಲ್ಲಿ ದಾಖಲಾಗಿವೆಯೇ? ಎಂದು ಮಕ್ಕಳನ್ನು ಕೇಳಲಾಗಿ ಮಕ್ಕಳಿಂದ ಬಂದ ಪ್ರತಿಕ್ರಿಯೆಗಳು ಈ ರೀತಿಯಾಗಿವೆ.

ಬಳ್ಳಾರಿ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೨೩.೬೮ ಹಾಗೂ ಹೆಣ್ಣುಮಕ್ಕಳು ಶೇ. ೧೮.೯೧ರಷ್ಟು ಚರಿತ್ರೆ ಪಠ್ಯಗಳಲ್ಲಿ ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿವೆ ಎಂದು ತಿಳಿಸಿದರೆ, ಶೇ. ೨೬.೩೧ ಗಂಡುಮಕ್ಕಳು ಶೇ. ೨೭,೦೨ರಷ್ಟು ಹೆಣ್ಣುಮಕ್ಕಳು ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೪೯.೯೯ ಹಾಗೂ ಹೆಣ್ಣುಮಕ್ಕಳು ಶೇ. ೫೨.೬೩ರಷ್ಟು ಕಂಡುಬಂದರು.

ಚಿತ್ರದುರ್ಗ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೨೧.೦೫ ಹಾಗೂ ಹೆಣ್ಣುಮಕ್ಕಳು ಶೇ. ೧೬.೨೧ರಷ್ಟು ಚರಿತ್ರೆ ಪಠ್ಯಗಳಲ್ಲಿ ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿವೆ ಎಂದು ತಿಳಿಸಿದರೆ, ಶೇ. ೩೨.೧೪ ಗಂಡುಮಕ್ಕಳು ಶೇ. ೩೭.೮೨ರಷ್ಟು ಹೆಣ್ಣುಮಕ್ಕಳು ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೪೮.೬೪ ಹಾಗೂ ಹೆಣ್ಣುಮಕ್ಕಳು ಶೇ ೪೫.೯೪ರಷ್ಟು ಕಂಡುಬಂದರು.

ದಾವಣಗೆರೆ ಜಿಲ್ಲೆಯ ಮಕ್ಕಳಲ್ಲಿ ಗಂಡುಮಕ್ಕಳು ಶೇ. ೧೫.೭೮ ಹಾಗೂ ಹೆಣ್ಣುಮಕ್ಕಳು ಶೇ. ೧೮.೯೧ರಷ್ಟು ಚರಿತ್ರೆ ಪಠ್ಯಗಳಲ್ಲಿ ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿವೆ ಎಂದು ತಿಳಿಸಿದರೆ, ಶೇ. ೩೫.೧೩ ಗಂಡುಮಕ್ಕಳು ಶೇ. ೩೫.೧೩ರಷ್ಟು ಹೆಣ್ಣುಮಕ್ಕಳು ಸ್ಥಳೀಯ ಚಾರಿತ್ರಿಕ ವಿಷಯಗಳು ದಾಖಲಾಗಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೪೮.೬೪ ಹಾಗೂ ಹೆಣ್ಣುಮಕ್ಕಳು ಶೇ ೪೫.೯೪ರಷ್ಟು ಕಂಡುಬಂದರು.

**ಕೋಷ್ಟಕ ೬.೨.೧೦. ಪಠ್ಯದಲ್ಲಿರುವ ಐತಿಹಾಸಿಕ ಸ್ಥಳಗಳನ್ನು ವಿದ್ಯಾರ್ಥಿಗಳು ನೋಡಿದ ವಿವರ**

| ಕ್ರಸಂ. | ಜಿಲ್ಲೆಗಳು | ಐತಿಹಾಸಿಕ ಸ್ಥಳ ನೋಡಿದವರು | | | ಐತಿಹಾಸಿಕ ಸ್ಥಳ ನೋಡಿದವರು | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೯ | ೦೭ | ೧೬ | ೧೯ | ೨೦ | ೩೯ | ೧೦ | ೧೦ | ೨೦ |
| ೨. | ಚಿತ್ರದುರ್ಗ | ೦೮ | ೦೬ | ೧೪ | ೧೮ | ೧೭ | ೩೫ | ೧೨ | ೧೪ | ೨೬ |
| ೩. | ದಾವಣಗೆರೆ | ೦೭ | ೦೭ | ೧೪ | ೧೮ | ೧೭ | ೩೫ | ೧೩ | ೧೩ | ೨೬ |
| | ಒಟ್ಟು | ೩೪ | ೨೧ | ೪೪ | ೫೫ | ೫೪ | ೧೦೯ | ೩೫ | ೩೭ | ೭೨ |

ಚರಿತ್ರೆ ಪಠ್ಯಗಳನ್ನು ಓದುವ ಪ್ರಾಥಮಿಕ ಹಂತದ ಮಕ್ಕಳಲ್ಲಿ ಬಹುತೇಕ ಮಕ್ಕಳು ತಮ್ಮ ಪರಿಸರದ ಅಕ್ಕಪಕ್ಕ ಇರುವ ಚಾರಿತ್ರಿಕ ಸ್ಮಾರಕಗಳನ್ನೇ ನೋಡಿರುವುದಿಲ್ಲ. ಉದಾಹರಣೆಗೆ ಹಂಪಿ ಅಥವಾ ಚಿತ್ರದುರ್ಗದ ಪಕ್ಕದ ಹಳ್ಳಿಯ ಎಷ್ಟೋ ಬಡಮಕ್ಕಳು ತಮ್ಮ ಪಕ್ಕದಲ್ಲಿರುವ ಸ್ಮಾರಕಗಳನ್ನೇ ನೋಡಿಲ್ಲವೆಂದು ಸಂದರ್ಶನ ಸಮಯದಲ್ಲಿ ತಿಳಿಸಿದರು. ಮಕ್ಕಳಿಗೆ ಐತಿಹಾಸಿಕ ಸ್ಮಾರಕಗಳ ದರ್ಶನವಾಗಲಿ ಎನ್ನುವ ದೃಷ್ಟಿಯಿಂದ ಸರ್ಕಾರವು ಪ್ರಾಥಮಿಕ ಶಾಲಾ ಹಂತದ ಮಕ್ಕಳಿಗೆ ಕರ್ನಾಟಕ ದರ್ಶನ ಎಂಬ ಯೋಜನೆಯನ್ನು ಪ್ರಾರಂಭಿಸಿದೆ. ಆದರೆ ಈ ಯೋಜನೆಯ ಲಾಭವನ್ನು ನಾನಾ ಕಾರಣಗಳಿಗಾಗಿ ಮಕ್ಕಳು ಪಡೆಯಲಾಗುತ್ತಿಲ್ಲ ಎಂಬುದು ವಿಷಾದನೀಯ. ಒಟ್ಟಾರೆಯಾಗಿ ಕರ್ನಾಟಕ ರಾಜ್ಯದಲ್ಲಿರುವ ಮಕ್ಕಳು ಕರ್ನಾಟಕದ ಐತಿಹಾಸಿಕ ಸ್ಥಳಗಳನ್ನು ಎಷ್ಟು ಮಕ್ಕಳು ನೋಡಿದ್ದಾರೆ ಎಂದು ಸಮೀಕ್ಷಿಸಿದಾಗ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಗಂಡುಮಕ್ಕಳು ಶೇ. ೨೩.೬೮ ಹಾಗೂ ಹೆಣ್ಣುಮಕ್ಕಳು ಶೇ. ೧೮.೯೧ರಷ್ಟು ಐತಿಹಾಸಿಕ ಸ್ಥಳ ನೋಡಿದ್ದೇವೆ ಎಂದು ತಿಳಿಸಿದರೆ, ಶೇ. ೪೯.೯೯ ಗಂಡುಮಕ್ಕಳು ಶೇ. ೫೨.೬೩ರಷ್ಟು ಹೆಣ್ಣುಮಕ್ಕಳು ಐತಿಹಾಸಿಕ ಸ್ಥಳ ನೋಡಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೨೬.೩೧ ಹಾಗೂ ಹೆಣ್ಣುಮಕ್ಕಳು ಶೇ. ೨೭.೦೨ರಷ್ಟು ಕಂಡುಬಂದರು. ಇಲ್ಲಿ ಐತಿಹಾಸಿಕ ಸ್ಥಳಗಳನ್ನು ನೋಡದೇ ಇರುವವರಲ್ಲಿ ಹೆಚ್ಚಾಗಿ ಹೆಣ್ಣುಮಕ್ಕಳೇ ಕಂಡುಬರುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಗಂಡುಮಕ್ಕಳು ಶೇ. ೨೧.೦೫ ಹಾಗೂ ಹೆಣ್ಣುಮಕ್ಕಳು ಶೇ. ೧೬.೬೪ರಷ್ಟು ಐತಿಹಾಸಿಕ ಸ್ಥಳ ನೋಡಿದ್ದೇವೆ ಎಂದು ತಿಳಿಸಿದರೆ, ಶೇ. ४೮.೬४ ಗಂಡುಮಕ್ಕಳು ಶೇ. ४೫.೯४ರಷ್ಟು ಹೆಣ್ಣುಮಕ್ಕಳು ಐತಿಹಾಸಿಕ ಸ್ಥಳ ನೋಡಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೩೨.೧४ ಹಾಗೂ ಹೆಣ್ಣುಮಕ್ಕಳು ಶೇ. ೩೭.೮೨ರಷ್ಟು ಕಂಡುಬಂದರು. ಇಲ್ಲಿ ಐತಿಹಾಸಿಕ ಸ್ಥಳಗಳನ್ನು ನೋಡದೇ ಇರುವವರಲ್ಲಿ ಹೆಚ್ಚಾಗಿ ಹೆಣ್ಣುಮಕ್ಕಳೇ ಕಂಡುಬರುತ್ತಾರೆ.

ದಾವಣಗೆರೆ ಜಿಲ್ಲೆಯಲ್ಲಿ ಗಂಡುಮಕ್ಕಳು ಶೇ. ೧೫.೭೮ ಹಾಗೂ ಹೆಣ್ಣುಮಕ್ಕಳು ಶೇ. ೧೮.೯೧ರಷ್ಟು ಐತಿಹಾಸಿಕ ಸ್ಥಳ ನೋಡಿದ್ದೇವೆ ಎಂದು ತಿಳಿಸಿದರೆ, ಶೇ. ४೮.೬४ ಗಂಡುಮಕ್ಕಳು ಶೇ. ४೫.೯४ರಷ್ಟು ಹೆಣ್ಣುಮಕ್ಕಳು ಐತಿಹಾಸಿಕ ಸ್ಥಳ ನೋಡಿಲ್ಲವೆಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೩೫.೯४ ಹಾಗೂ ಹೆಣ್ಣುಮಕ್ಕಳು ಶೇ. ೩೫.೧೩ರಷ್ಟು ಕಂಡುಬಂದರು. ಇಲ್ಲಿ ಐತಿಹಾಸಿಕ ಸ್ಥಳಗಳನ್ನು ನೋಡದೇ ಇರುವವರಲ್ಲಿ ಹೆಚ್ಚಾಗಿ ಹೆಣ್ಣುಮಕ್ಕಳೇ ಕಂಡುಬರುತ್ತಾರೆ.

ಸಾಮಾನ್ಯವಾಗಿ ೬-೭ನೇ ತರಗತಿಗೆ ಬರುವಷ್ಟರಲ್ಲಿ ಹುಡುಗಿಯರು ನೈಸರ್ಗಿಕ ಕ್ರಿಯೆಗೆ ಒಳಗಾಗಿ ಪ್ರೌಢಾವಸ್ಥೆಗೆ ಬಂದಿರುತ್ತಾರೆ. ಈ ಹಂತದ ಹುಡುಗಿಯರನ್ನು ಸಾಮಾನ್ಯವಾಗಿ ಮನೆಯಿಂದ ಹೊರಗೆ ಕಳುಹಿಸಲು ಪಾಲಕರು ಇಷ್ಟಪಡುವುದಿಲ್ಲ. ಹೀಗಾಗಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳು ಐತಿಹಾಸಿಕ ಸ್ಥಳಗಳನ್ನು ಹೆಚ್ಚಾಗಿ ನೋಡಲು ಸಾಧ್ಯವಾಗದೇ ಇರುವ ಕಾರಣವೂ ಉಂಟು.

**ಕೋಷ್ಟಕ ೬.೨.೧೧. ಚರಿತ್ರೆ ಪಠ್ಯಗಳಲ್ಲಿ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ವಿವರಗಳು**

| ಕ್ರಸಂ. | ಜಿಲ್ಲೆಗಳು | ಸ್ಥಳೀಯ ಹೋರಾಟ ಗಾರರ ವಿವರಗಳಿವೆ | | | ಸ್ಥಳೀಯ ಹೋರಾಟ ಗಾರರ ವಿವರಗಳಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧ | ಬಳ್ಳಾರಿ | ೦೫ | ೦೪ | ೦೯ | ೦೮ | ೧೧ | ೧೯ | ೨೫ | ೨೨ | ೪೭ |
| ೨ | ಚಿತ್ರದುರ್ಗ | ೦೭ | ೦೮ | ೧೫ | ೦೯ | ೧೨ | ೨೧ | ೨೨ | ೧೭ | ೩೯ |
| ೩ | ದಾವಣಗೆರೆ | ೦೬ | ೦೮ | ೧೪ | ೦೯ | ೧೦ | ೧೯ | ೨೩ | ೧೯ | ೪೨ |
| | ಒಟ್ಟು | ೧೮ | ೨೦ | ೩೮ | ೨೬ | ೩೩ | ೫೯ | ೭೦ | ೫೮ | ೧೨೮ |

ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿ ಭಾರತದ ಎಲ್ಲಾ ಭಾಗಗಳಿಂದಲೂ ಜನ ಭಾಗವಹಿಸಿದ್ದರು. ಆ ರೀತಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಸ್ವಾತಂತ್ರ್ಯ ಹೋರಾಟಗಾರರು ಬಳ್ಳಾರಿ ಜಿಲ್ಲೆಯಲ್ಲಿಯೂ ಕಂಡುಬರುತ್ತಾರೆ. ಬಳ್ಳಾರಿ ಪ್ರದೇಶದಲ್ಲಿ ಪಂಡಿತ ತಾರಾನಾಥ, ಬಳ್ಳಾರಿ ರಾಘವ, ಸಂತ ದತ್ತಾತ್ರೇಯನಂತಹ ಮಹಾನ್ ಮೇಧಾವಿಗಳು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದರು. ಅದೇ ರೀತಿಯಾಗಿ ನಿಜಲಿಂಗಪ್ಪ, ತ.ರಾ ಸುಬ್ಬರಾಯರಂಥವರು ಚಿತ್ರದುರ್ಗ ಭಾಗದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇಂತಹ ಮಹಾನ್ ವ್ಯಕ್ತಿಗಳ ಕುರಿತು ಸ್ಥಳೀಯ ಪ್ರದೇಶದ ಮಕ್ಕಳಿಗೆ ಏನೇನೂ ಗೊತ್ತಿಲ್ಲ. ಪಂಡಿತ ತಾರಾನಾಥರ ಕುರಿತು ಹಿಂದೆ ಕನ್ನಡ ಪಠ್ಯದಲ್ಲಿ ಪಾಠವೊಂದಿದ್ದರೂ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಪಾತ್ರ ಏನಿತ್ತು ಎಂಬುದು ಮಕ್ಕಳಿಗೆ ತಿಳಿಯುವುದು ಕಷ್ಟಸಾಧ್ಯದ ವಿಚಾರವಾಗಿದೆ. ಇವರಂತಹ ಇನ್ನೂ ಎಷ್ಟೋ ಅಜ್ಞಾತ ಸ್ವಾತಂತ್ರ್ಯ ಹೋರಾಟಗಾರರು ಆಗಿ ಹೋಗಿದ್ದಾರೆ. ಅವರ ಕುರಿತು ಎಲ್ಲಿಯೂ ದಾಖಲಾಗಿಲ್ಲ. ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ಕುರಿತು ನಿಮ್ಮ ಚರಿತ್ರೆ ಪಠ್ಯದಲ್ಲಿ ವಿವರಗಳಿವೆಯೇ ಎಂದು ಪ್ರಶ್ನಿಸಿದಾಗ ಬಹುತೇಕ ಮಕ್ಕಳು ಗೊಂದಲಕ್ಕೆ ಒಳಗಾದವು. ಏನು ಉತ್ತರ ನೀಡಬೇಕೆಂಬ ಗೊಂದಲದಲ್ಲಿದ್ದ ಮಕ್ಕಳು ತಮಗೆ ತೋಚಿದಂತೆ ಉತ್ತರ ನೀಡಿದವು. ಆ ಮಕ್ಕಳ ಪ್ರತಿಕ್ರಿಯೆಯನ್ನು ಇಲ್ಲಿ ದಾಖಲಿಸಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ವಿವರಗಳು ನೀಡಲಾಗಿದೆ ಎಂದು ಶೇ. ೧೩.೦೫ ಗಂಡುಮಕ್ಕಳು ಹಾಗೂ ಶೇ. ೧೦.೮೧ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ ಶೇ ೨೧.೧೫ ಗಂಡುಮಕ್ಕಳು ಶೇ. ೨೯.೭೨ರಷ್ಟು ಹೆಣ್ಣುಮಕ್ಕಳು ವಿವರಗಳಿಲ್ಲ ಎಂಬ ಉತ್ತರ ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೬೫.೭೮ ಹಾಗೂ ಹೆಣ್ಣುಮಕ್ಕಳು ಶೇ. ೫೯.೪೫ರಷ್ಟು ಕಂಡುಬಂದರು.

ಚಿತ್ರದುರ್ಗ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ವಿವರಗಳು ನೀಡಲಾಗಿದೆ ಎಂದು ಶೇ ೧೮.೪೨ ಗಂಡುಮಕ್ಕಳು ಹಾಗೂ ಶೇ. ೨೧.೬೨ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ, ಶೇ. ೨೩.೬೮ ಗಂಡುಮಕ್ಕಳು ಶೇ. ೫೨.೪೨ ರಷ್ಟು ಹೆಣ್ಣುಮಕ್ಕಳು ವಿವರಗಳಿಲ್ಲ

ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೬೭.೮೯ ಹಾಗೂ ಹೆಣ್ಣುಮಕ್ಕಳು ಶೇ. ೪೫.೯೪ರಷ್ಟು ಕಂಡುಬಂದರು.

ದಾವಣಗೆರೆ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ವಿವರಗಳು ನೀಡಲಾಗಿದೆ ಎಂದು ಶೇ. ೧೫.೭೮ ಗಂಡುಮಕ್ಕಳು ಹಾಗೂ ಶೇ. ೨೧.೬೨ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ, ಶೇ. ೨೩.೬೮ ಗಂಡುಮಕ್ಕಳು ಶೇ ೨೭.೦೨ರಷ್ಟು ಹೆಣ್ಣುಮಕ್ಕಳು ವಿವರಗಳಿಲ್ಲ ಎಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೬೦.೦೨ ಹಾಗೂ ಹೆಣ್ಣುಮಕ್ಕಳು ಶೇ. ೫೧.೩೫ರಷ್ಟು ಕಂಡುಬಂದರು.

**ಕೋಷ್ಟಕ ೬.೨.೧೨. ಚರಿತ್ರೆ ಪಠ್ಯಪುಸ್ತಕಗಳು ಬದಲಾಗಬೇಕು ಎನ್ನುವವರ ವಿವರ**

| ಕ್ರಸಂ. | ಜಿಲ್ಲೆಗಳು | ಚರಿತ್ರೆ ಪಠ್ಯ ಬದಲಾಗಬೇಕು | | | ಚರಿತ್ರೆ ಪಠ್ಯ ಬದಲಾಗಬಾರದು | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧ | ಬಳ್ಳಾರಿ | ೦೪ | ೦೪ | ೦೮ | ೦೫ | ೦೫ | ೧೦ | ೨೯ | ೨೮ | ೫೭ |
| ೨ | ಚಿತ್ರದುರ್ಗ | ೦೪ | ೦೫ | ೦೯ | ೦೬ | ೦೫ | ೧೧ | ೨೮ | ೨೭ | ೫೫ |
| ೩ | ದಾವಣಗೆರೆ | ೦೫ | ೦೬ | ೧೧ | ೦೫ | ೦೪ | ೦೯ | ೨೮ | ೨೭ | ೫೫ |
| | ಒಟ್ಟು | ೧೩ | ೧೫ | ೨೮ | ೧೬ | ೧೪ | ೩೦ | ೮೫ | ೮೨ | ೧೬೭ |

ಚರಿತ್ರೆ ಪಠ್ಯಗಳು ಕೇಂದ್ರ ಪಠ್ಯ ಕ್ರಮದಂತಿರಬೇಕು ಎಂದು ಕೆಲವರು ತಿಳಿಸಿದರೆ ಇನ್ನೂ ಕೆಲವರು ರಾಜ್ಯ ಮಟ್ಟದ ಪಠ್ಯಕ್ರಮ ಇರಬೇಕೆಂದು ವಾದಿಸುತ್ತಾರೆ. ಅದೇ ರೀತಿಯಾಗಿ ಚರಿತ್ರೆಯಂತಹ ಪಠ್ಯಗಳಲ್ಲಿ ಸ್ಥಳೀಯ ಚರಿತ್ರೆಯನ್ನು ಬಿಂಬಿಸುವಂತಹ ಪಠ್ಯಗಳಿರಬೇಕೆಂದು ವಾದಿಸುವ ಪ್ರದೇಶಾಭಿಮಾನಿ ವ್ಯಕ್ತಿಗಳನ್ನೂ ಕಾಣುತ್ತೇವೆ. ಮೇಲೆ ತಿಳಿಸಿದ ವಿವರವೆಲ್ಲಾ ಹಿರಿಯರಿಗೆ ಸಂಬಂಧಿಸಿದ್ದು. ಆದರೆ ಚರಿತ್ರೆಯಂತಹ ಮಹತ್ವದ ಪಠ್ಯಗಳನ್ನು ಓದುವ ಮಕ್ಕಳು ಯಾವ ರೀತಿಯ ಅಭಿಪ್ರಾಯವನ್ನು ವ್ಯಕ್ತಮಾಡುತ್ತಾರೆ ಎಂಬುದನ್ನು ಗಮನಿಸಿದಾಗ ಕಂಡುಬಂದ ಅಂಶಗಳನ್ನು ಇಲ್ಲಿ ನೀಡಲಾಗಿದೆ.

೫ರಿಂದ ೭ನೇ ತರಗತಿಯ ಮಕ್ಕಳನ್ನು ನಿಮಗೆ ಯಾವ ಸ್ವರೂಪದ ಚರಿತ್ರೆ ಪಠ್ಯಗಳಿದ್ದರೆ ಉತ್ತಮ. ಚರಿತ್ರೆ ಪಠ್ಯಗಳು ಬದಲಾಗಬೇಕೋ ಬೇಡವೋ? ಎಂಬುದನ್ನು ಅರಿಯಲು ಮಕ್ಕಳನ್ನು ಪ್ರಶ್ನಿಸಿದಾಗ ಕಂಡುಬಂದ ಪ್ರತಿಕ್ರಿಯೆಗಳು ಈ ಕೆಳಗಿನಂತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಬದಲಾವಣೆ ಬೇಕು ಎಂದು ಶೇ. ೧೦.೫೨ ಗಂಡುಮಕ್ಕಳು ಹಾಗೂ ಶೇ. ೧೦.೮೧ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ, ಶೇ. ೧೩.೦೫ ಗಂಡುಮಕ್ಕಳು ಶೇ. ೧೩.೫೧ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡ ಎಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೭೬.೩೧ ಹಾಗೂ ಹೆಣ್ಣುಮಕ್ಕಳು ಶೇ. ೭೫.೬೭ರಷ್ಟು ಕಂಡುಬಂದರು.

ಚಿತ್ರದುರ್ಗ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಬದಲಾವಣೆ ಬೇಕು ಎಂದು ಶೇ. ೧೦.೫೨ ಗಂಡುಮಕ್ಕಳು ಹಾಗೂ ಶೇ. ೧೩.೫೧ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ, ಶೇ ೧೫.೭೮ ಗಂಡುಮಕ್ಕಳು ಶೇ. ೧೩.೫೧ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡ ಎಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೆ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೭೩.೬೮ ಹಾಗೂ ಹೆಣ್ಣುಮಕ್ಕಳು ಶೇ. ೭೨.೯೭ರಷ್ಟು ಕಂಡುಬಂದರು.

ದಾವಣಗೆರೆ ಜಿಲ್ಲೆಯಲ್ಲಿ ಚರಿತ್ರೆ ಪಠ್ಯದಲ್ಲಿ ಬದಲಾವಣೆ ಬೇಕು ಎಂದು ಹೇಳಿದವರಲ್ಲಿ ಶೇ. ೧೩.೦೫ ಗಂಡುಮಕ್ಕಳು ಹಾಗೂ ಶೇ. ೧೬.೨೧ರಷ್ಟು ಹೆಣ್ಣುಮಕ್ಕಳು ತಿಳಿಸಿದರೆ, ಶೇ. ೧೩.೦೫ ಗಂಡುಮಕ್ಕಳು ಶೇ. ೧೦.೮೧ರಷ್ಟು ಹೆಣ್ಣುಮಕ್ಕಳು ಬದಲಾವಣೆ ಬೇಡ ಎಂದು ತಿಳಿಸಿದರು. ಯಾವ ಉತ್ತರವನ್ನು ಕೊಡದೇ ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿದ ಗಂಡುಮಕ್ಕಳು ಶೇ. ೭೩.೬೮ ಹಾಗೂ ಹೆಣ್ಣುಮಕ್ಕಳು ಶೇ. ೭೨.೯೭ರಷ್ಟು ಕಂಡುಬಂದರು.

## ೬.೩. ಚರಿತ್ರೆ ಪಠ್ಯಕ್ಕೆ ಸಂಬಂಧಿಸಿದಂತೆ ಶಿಕ್ಷಕರ ಅನುಭವಗಳು

**ಕೋಷ್ಟಕ ೬.೩.೧. ಇತಿಹಾಸ ವಿಷಯಗಳು ಸರಿಯಾದ ಅನುಪಾತದಲ್ಲಿವೆ ಎನ್ನುವ ಕುರಿತಾದ ವಿವರ**

| ಕ್ರಸಂ. | ಜಿಲ್ಲೆಗಳು | ಇತಿಹಾಸ ಪಠ್ಯಗಳು ಸರಿಯಾದ ಅನುಪಾತದಲ್ಲಿವೆ | | | ಚರಿತ್ರೆ ಪಠ್ಯ ಸರಿಯಾದ ಅನುಪಾತದಲ್ಲಿಲ್ಲ | | | ತಜ್ಞರಿಗೆ ಗೊತ್ತು | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೩ | ೦೪ | ೦೭ | ೦೬ | ೦೫ | ೧೧ | ೬ | ೬ | ೧೨ |
| ೨, | ಚಿತ್ರದುರ್ಗ | ೦೪ | ೦೫ | ೦೯ | ೦೫ | ೦೪ | ೦೯ | ೬ | ೬ | ೧೨ |
| ೩ | ದಾವಣಗೆರೆ | ೦೨ | ೦೪ | ೦೬ | ೦೭ | ೦೬ | ೧೩ | ೬ | ೫ | ೧೧ |
| | ಒಟ್ಟು | ೯ | ೧೩ | ೨೨ | ೧೮ | ೧೫ | ೩೩ | ೧೮ | ೧೭ | ೩೫ |

ಪ್ರಾಥಮಿಕ ಹಂತದಲ್ಲಿ ಮಕ್ಕಳು ತಮಗಿರಿಸಿದ ಪಠ್ಯಗಳನ್ನು ಅರ್ಥ ಮಾಡಿಕೊಳ್ಳಲು ಶಿಕ್ಷಕರ ಅವಶ್ಯಕತೆ ಮುಖ್ಯವಾಗಿರುತ್ತದೆ. ನಿಜವಾದ ಶಿಕ್ಷಕನಾದವನಿಗೆ ಪ್ರತಿ ಮಗುವಿನ ಕಲಿಕೆಯ ಸಾಮರ್ಥ್ಯ, ಅವನಿಗೆ ಕಲಿಸುವ ರೀತಿ ಪ್ರತಿಯೊಂದು ಕರತಲಾಮಲಕವಾಗಿರುತ್ತದೆ. ಇದಕ್ಕೆ ಚರಿತ್ರೆ ಪಠ್ಯಗಳು ಹೊರತಲ್ಲ. ಮುಖ್ಯವಾಗಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮೂರು ಜಿಲ್ಲೆಗಳ ೪೫ ಶಾಲೆಗಳಿಂದ ಪ್ರತಿ ಶಾಲೆಗೆ ಇಬ್ಬರಂತೆ ಚರಿತ್ರೆ ಬೋಧಿಸುವ ಒಟ್ಟು ೯೦ ಶಿಕ್ಷಕರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ೯೦ ಜನ ಶಿಕ್ಷಕರಲ್ಲಿ ೪೫ ಪುರುಷ ಶಿಕ್ಷಕರು ಹಾಗೂ ೪೫ ಮಹಿಳಾ ಶಿಕ್ಷಕರನ್ನು ಆಯ್ಕೆ ಮಾಡಿಕೊಂಡು ಚರಿತ್ರೆ ಪಠ್ಯವನ್ನು ಕಲಿಸುವಲ್ಲಿ ಅವರಿಗೆ ಎದುರಾಗಬಹುದಾದ ಸಮಸ್ಯೆಗಳ ಕುರಿತು ಪ್ರಶ್ನಾವಳಿಯ ಆಧಾರದ ಮೇಲೆ ಚರ್ಚಿಸಲಾಗಿದೆ.

ಮಗುವಿನ ಕಲಿಕಾ ಸಾಮರ್ಥ್ಯದಲ್ಲಿ ಪಠ್ಯಗಳು ಮುಖ್ಯವಾಗಿ ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿವಿಯೇ? ಎಂದು ಚರಿತ್ರೆ ಬೋಧಿಸುವ ಶಿಕ್ಷಕರನ್ನು ವಿಚಾರಿಸಿದಾಗ ಕಂಡುಬಂದ ಅಂಶಗಳು ಹೀಗಿವೆ.

ಬಳ್ಳಾರಿಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೨೦ ಪುರುಷರು ಹಾಗೂ ಶೇಕಡ ೨೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿದ್ದು ಮಕ್ಕಳ ಕಲಿಕೆಗೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಸರಿಯಾದ ಅನುಪಾತದಲ್ಲಿಲ್ಲ. ಇದರಿಂದ ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುವ ಸಾಧ್ಯತೆಗಳು ಹೆಚ್ಚಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕಿರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿವೆಯೆಂದಾಗಲೀ ಸರಿಯಾದ ಅನುಪಾತದಲ್ಲಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಮಗೆ ಕೊಟ್ಟ ಅವಧಿಯಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ಪಾಠಗಳನ್ನು ಪೂರೈಸುತ್ತೇವೆ ಎಂದು ತಿಳಿಸಿದರು.

ಚಿತ್ರದುರ್ಗದ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೨೬.೬೬ ಪುರುಷರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿದ್ದು ಮಕ್ಕಳ ಕಲಿಕೆಗೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೧೫.೨೮ ಪುರುಷ ಶಿಕ್ಷಕರು ಹಾಗೂ ಶೇಕಡ ೨೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಸರಿಯಾದ ಅನುಪಾತದಲ್ಲಿಲ್ಲ. ಇದರಿಂದ ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುವ ಸಾಧ್ಯತೆಗಳು ಹೆಚ್ಚಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿವೆಯೆಂದಾಗಲೀ ಸರಿಯಾದ ಅನುಪಾತಲ್ಲಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸದೆ ತಮಗೆ ಕೊಟ್ಟ ಅವಧಿಯಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ಪಾಠಗಳನ್ನು ಪೂರೈಸುತ್ತೇವೆ ಎಂದು ತಿಳಿಸಿದರು.

ದಾವಣಗೆರೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೧೩.೩೩ ಪುರುಷರು ಹಾಗೂ ಶೇಕಡ ೧೬.೨೧ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿದ್ದು ಮಕ್ಕಳ ಕಲಿಕೆಗೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೧೩.೦೫ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಸರಿಯಾದ ಅನುಪಾತದಲ್ಲಿಲ್ಲ, ಇದರಿಂದ

ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುವ ಸಾಧ್ಯತೆಗಳು ಹೆಚ್ಚಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಸರಿಯಾದ ಅನುಪಾತದಲ್ಲಿವೆಯೆಂದಾಲೀ ಸರಿಯಾದ ಅನುಪಾತಲ್ಲಿಲ್ಲ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಮಗೆ ಕೊಟ್ಟ ಅವಧಿಯಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ಪಾಠಗಳನ್ನು ಪೂರೈಸುತ್ತೇವೆ ಎಂದು ತಿಳಿಸಿದರು.

**ಕೋಷ್ಟಕ ೬.೩.೨. ಚರಿತ್ರೆ ವಿಷಯಗಳು ವಿದ್ಯಾರ್ಥಿಗಳ ಸಾಮರ್ಥ್ಯಕ್ಕಿಂತ ಕಠಿಣವಾಗಿವೆ ಎನ್ನುವ ಕುರಿತಾದ ವಿವರ**

| ಕ್ರಸಂ. | ಜಿಲ್ಲೆಗಳು | ಚರಿತ್ರೆ ಪಠ್ಯಗಳು ವಿದ್ಯಾರ್ಥಿಗಳ ಸಾಮರ್ಥ್ಯಕ್ಕೆ ತಕ್ಕಂತಿವೆ. | | | ಚರಿತ್ರೆ ಪಠ್ಯಗಳು ವಿದ್ಯಾರ್ಥಿಗಳ ಸಾಮರ್ಥ್ಯಕ್ಕಿಂತ ಕಠಿಣವಾಗಿವೆ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೩ | ೦೪ | ೦೭ | ೦೬ | ೦೫ | ೧೧ | ೬ | ೬ | ೧೨ |
| ೨. | ಚಿತ್ರದುರ್ಗ | ೦೪ | ೦೫ | ೦೯ | ೦೫ | ೦೪ | ೦೯ | ೬ | ೬ | ೧೨ |
| ೩. | ದಾವಣಗೆರೆ | ೦೨ | ೦೪ | ೦೬ | ೦೭ | ೦೬ | ೧೩ | ೬ | ೦೫ | ೧೧ |
| | ಒಟ್ಟು | ೯ | ೧೩ | ೨೨ | ೧೮ | ೧೫ | ೩೩ | ೧೮ | ೧೭ | ೩೫ |

ಬಳ್ಳಾರಿ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೨೦ ಪುರುಷರು ಹಾಗೂ ಶೇಕಡ ೨೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಕಲಿಕಾ ಸಾಮರ್ಥ್ಯಕ್ಕೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೧೩.೦೫ ಪುರುಷ ಶಿಕ್ಷಕರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ದಕ್ಕದೇ ಕಠಿಣವಾಗಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಪೂರಕವಾಗಿವೆಯೆಂದಾಗಲೀ, ಕಠಿಣವಾಗಿವೆಯೆಂದಾಗಲೀ ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು.

ಚಿತ್ರದುರ್ಗ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೨೫.೬೬ ಪುರುಷರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಕಲಿಕಾ ಸಾಮರ್ಥ್ಯಕ್ಕೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೩೩.೩೩ ಪುರುಷ ಶಿಕ್ಷಕರು ಹಾಗೂ ಶೇಕಡ ೨೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು

ಮಕ್ಕಳ ಸಾಮರ್ಥ್ಯಕ್ಕೆ ದಕ್ಕದೇ ಕಠಿಣವಾಗಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಪೂರಕವಾಗಿವೆಯೆಂದಾಗಲೀ, ಕಠಿಣವಾಗಿವೆಯೆಂದಾಗಲೀ ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು.

ದಾವಣಗೆರೆ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೧೩.೩೩ ಪುರುಷರು ಹಾಗೂ ಶೇಕಡ ೨೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಕಲಿಕಾ ಸಾಮರ್ಥ್ಯಕ್ಕೆ ಪೂರಕವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೇಕಡ ೪೬.೬೬ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ದಕ್ಕದೇ ಕಠಿಣವಾಗಿವೆ ಎಂದು ಅಭಿಪ್ರಾಯಪಟ್ಟರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳು ಮಕ್ಕಳ ಸಾಮರ್ಥ್ಯಕ್ಕೆ ಪೂರಕವಾಗಿವೆಯೆಂದಾಗಲೀ, ಕಠಿಣವಾಗಿವೆಯೆಂದಾಗಲೀ ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು.

**ಕೋಷ್ಟಕ ೬.೩.೩. ನಿಗದಿತ ಸಮಯದಲ್ಲಿ ಚರಿತ್ರೆ ವಿಷಯಗಳನ್ನು ಬೋಧಿಸುವ ಕುರಿತಾದ ವಿವರ**

| ಕ್ರಸಂ. | ಜಿಲ್ಲೆಗಳು | ನಿಗದಿತ ಸಮಯದೊಳಗೆ ಬೋಧಿಸಬಹುದು | | | ನಿಗದಿತ ಸಮಯದೊಳಗೆ ಬೋಧಿಸುವುದು ಕಷ್ಟಸಾಧ್ಯ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧. | ಬಳ್ಳಾರಿ | ೦೩ | ೦೨ | ೦೫ | ೦೭ | ೦೭ | ೧೪ | ೦೫ | ೦೬ | ೧೧ |
| ೨. | ಚಿತ್ರದುರ್ಗ | ೦೪ | ೦೨ | ೦೬ | ೦೬ | ೦೬ | ೧೨ | ೦೬ | ೦೬ | ೧೨ |
| ೩. | ದಾವಣಗೆರೆ | ೦೨ | ೦೩ | ೦೫ | ೦೭ | ೦೭ | ೧೪ | ೦೬ | ೦೫ | ೧೧ |
| | ಒಟ್ಟು | ೯ | ೦೭ | ೧೬ | ೨೦ | ೨೦ | ೪೦ | ೧೭ | ೧೭ | ೩೪ |

ಸೆಮಿಸ್ಟರ್ ಪದ್ಧತಿ ಜಾರಿಯಾದ ತರುವಾಯ ಮಕ್ಕಳ ಕಲಿಕೆಯ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡದೇ ಕೇವಲ ಪಾಠವನ್ನು ನಿಗದಿತ ಸಮಯದೊಳಗೆ ಪೂರೈಸಬೇಕೆನ್ನುವ ಒತ್ತಡಗಳ ಕಡೆಗೆ ಶಿಕ್ಷಕರು ಹೆಚ್ಚಿನ ಒತ್ತನ್ನು ಕೊಡುತ್ತಾರೆ. ಈ ನಿಟ್ಟಿನಲ್ಲಿ ಶಿಕ್ಷಕರ ಅಭಿಪ್ರಾಯವನ್ನು ಕೇಳಿದಾಗ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ.

ಬಳ್ಳಾರಿ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ

೨೦ ಪುರುಷರು ಹಾಗೂ ಶೇಕಡ ೧೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ಸಮಯದಲ್ಲಿ ಬೋಧಿಸಬಹುದು ಎಂದರೆ ಶೇಕಡ ೪೬.೬೬ ಪುರುಷ ಶಿಕ್ಷಕರು ಹಾಗೂ ಶೇಕಡ ೪೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ವೇಳೆಯಲ್ಲಿ ಬೋಧಿಸಲು ಕಷ್ಟಸಾಧ್ಯ ಎಂದು ತಿಳಿಸಿದರು. ಅದೇ ರೀತಿಯಾಗಿ ಶೇಕಡ ೩೩.೩೩ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳ ಬೋಧನೆಯ ಕುರಿತು ಯಾವೊಂದು ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು.

ಚಿತ್ರದುರ್ಗ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೨೬.೬೬ ಪುರುಷರು ಹಾಗೂ ಶೇಕಡ ೧೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ಸಮಯದಲ್ಲಿ ಬೋಧಿಸಬಹುದು ಎಂದರೆ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ವೇಳೆಯಲ್ಲಿ ಬೋಧಿಸಲು ಕಷ್ಟಸಾಧ್ಯ ಎಂದು ತಿಳಿಸಿದರು. ಅದೇ ರೀತಿಯಾಗಿ ಶೇಕಡ ೩೩.೩೩ ಪುರುಷ ಶಿಕ್ಷಕರು ಹಾಗೂ ಶೇಕಡ ೪೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳ ಬೋಧನೆಯ ಕುರಿತು ಯಾವೊಂದು ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು.

ದಾವಣಗೆರೆ ಜಿಲ್ಲೆಯ ಒಟ್ಟು ೩೦ ಶಿಕ್ಷಕರಲ್ಲಿ ೧೫ ಜನ ಪುರುಷರೂ ಹಾಗೂ ೧೫ ಜನ ಮಹಿಳಾ ಶಿಕ್ಷಕರನ್ನು ಭೇಟಿ ಮಾಡಿ ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಶಿಕ್ಷಕರಲ್ಲಿ ಶೇಕಡ ೧೩.೩೩ ಪುರುಷರು ಹಾಗೂ ಶೇಕಡ ೨೦ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ಸಮಯದಲ್ಲಿ ಬೋಧಿಸಬಹುದು ಎಂದರೆ ಶೇಕಡ ೪೬.೬೬ ಪುರುಷ ಶಿಕ್ಷಕರು ಹಾಗೂ ಶೇಕಡ ೪೬.೬೬ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳನ್ನು ನಿಗದಿತ ವೇಳೆಯಲ್ಲಿ ಬೋಧಿಸಲು ಕಷ್ಟಸಾಧ್ಯ ಎಂದು ತಿಳಿಸಿದರು. ಅದೇ ರೀತಿಯಾಗಿ ಶೇಕಡ ೪೦ ಪುರುಷ ಶಿಕ್ಷಕರು ಹಾಗೂ ಶೇಕಡ ೩೩.೩೩ ಮಹಿಳಾ ಶಿಕ್ಷಕರು ಚರಿತ್ರೆ ಪಠ್ಯಗಳ ಬೋಧನೆಯ ಕುರಿತು ಯಾವೊಂದು ಅಭಿಪ್ರಾಯವನ್ನು ವ್ಯಕ್ತಪಡಿಸದೇ ತಟಸ್ಥ ಧೋರಣೆ ತೋರಿದರು

**ಕೋಷ್ಟಕ ೬.೩.೪. ಚರಿತ್ರೆ ವಿಷಯಗಳನ್ನು ರಾಜಕೀಯ ಪ್ರೇರಿತವಾಗಿ ಅಳವಡಿಸಿದ ಕುರಿತಾದ ವಿವರ**

| ಕ್ರ.ಸಂ. | ಜಿಲ್ಲೆಗಳು | ಚರಿತ್ರೆ ಪಠ್ಯಗಳು ರಾಜಕೀಯ ಪ್ರೇರಿತವಾಗಿವೆ | | | ಚರಿತ್ರೆ ಪಠ್ಯಗಳು ರಾಜಕೀಯ ಪ್ರೇರಿತವಾಗಿಲ್ಲ | | | ಗೊತ್ತಿಲ್ಲ | | |
|---|---|---|---|---|---|---|---|---|---|---|
| | | ಗಂ | ಹೆ | ಒ | ಗಂ | ಹೆ | ಒ | ಗಂ | ಹೆ | ಒ |
| ೧ | ಬಳ್ಳಾರಿ | ೦೧ | ೦೧ | ೦೨ | ೦೭ | ೦೭ | ೧೪ | ೭ | ೭ | ೧೪ |
| ೨. | ಚಿತ್ರದುರ್ಗ | ೦೧ | ೦೦ | ೦೧ | ೦೬ | ೦೮ | ೧೪ | ೮ | ೭ | ೧೫ |
| ೩ | ದಾವಣಗೆರೆ | ೦೦ | ೦೦ | ೦೦ | ೦೮ | ೦೯ | ೧೭ | ೭ | ೬ | ೧೩ |
| | ಒಟ್ಟು | ೦೨ | ೦೧ | ೦೩ | ೨೧ | ೨೪ | ೪೫ | ೨೨ | ೨೦ | ೪೨ |

ಮಿಷನರಿಗಳು ಸ್ಥಳೀಯ ಜನರು ಮಾತನಾಡುವ ಭಾಷೆಯಲ್ಲಿಯೇ ಶಿಕ್ಷಣವನ್ನು ನೀಡುವಂತಹ ಶಾಲೆಗಳನ್ನು ಪ್ರಾರಂಭಿಸಿದರು. ತಮಗೆ ಪರಕೀಯವಾದ ಸ್ಥಳೀಯ ಭಾಷೆಯನ್ನು ಕಲಿತು ಆ ಭಾಷೆಯಲ್ಲಿ ಪಠ್ಯವನ್ನು ರಚಿಸುವುದು, ಬೋಧಿಸುವುದನ್ನೂ ಮಾಡುತ್ತಿದ್ದರು. ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಕರ್ನಾಟಕವು ವಿವಿಧ ಪ್ರಾಂತಗಳಲ್ಲಿ ಹಂಚಿಹೋಗಿತ್ತು. ಒಂದು ಕಡೆ ಮೈಸೂರು ಸಂಸ್ಥಾನ, ಮತ್ತೊಂದು ಕಡೆ ಬಾಂಬೆ ಪ್ರೆಸಿಡೆನ್ಸಿ, ಮಗದೊಂದು ಕಡೆ ಮದ್ರಾಸ್ ಪ್ರೆಸಿಡೆನ್ಸಿ, ಇನ್ನೊಂದು ಕಡೆ ನಿಜಾಮ್ ಆಡಳಿತಕ್ಕೆ ಒಳಪಟ್ಟ ಹೈದರಾಬಾದ್ ನಿಜಾಮ್ ಪ್ರಾಂತ್ಯ, ಹೀಗೆ ಹಂಚಿಹೋಗಿದ್ದ ಕರ್ನಾಟಕವು ಸಮಗ್ರವಾಗಿ ಕನ್ನಡವನ್ನು ಮಾತನಾಡುತ್ತಿದ್ದರೂ ಆಯಾ ಪ್ರದೇಶಗಳಲ್ಲಿ ನೆಲೆಸಿದ್ದ ಜನ ಆಯಾ ಪ್ರಾಂತ್ಯಗಳು ನಿರ್ದಿಷ್ಟಗೊಳಿಸಿದ ಭಾಷೆ ಹಾಗೂ ಪಠ್ಯಗಳನ್ನೇ ಓದಬೇಕಾದ ಅನಿವಾರ್ಯವಾಗಿತ್ತು. ಅಂದರೆ ಹರಿದು ಹಂಚಿಹೋಗಿದ್ದ ಕರ್ನಾಟಕದ ಮಕ್ಕಳು ಅನಿವಾರ್ಯವಾಗಿ ಬೇರೆ ಬೇರೆ ರೀತಿಯ ಪಠ್ಯಗಳನ್ನು ಓದಬೇಕಾಗಿತ್ತು. ಇದಾದ ನಂತರ ಭಾಷಾವಾರು ಪ್ರದೇಶಗಳನ್ನು ಆಧರಿಸಿ ರಾಜ್ಯಗಳು ಹುಟ್ಟಿಕೊಂಡ ತರುವಾಯ ಕರ್ನಾಟಕವು ಮೈಸೂರು ರಾಜ್ಯವೆಂದು ಗುರುತಿಸಲ್ಪಟ್ಟು ಒಂದು ರಾಜ್ಯ ಒಂದು ಭಾಷೆ ಎಂಬ ಪರಿಕಲ್ಪನೆಗೆ ಒಳಗಾಯಿತು. ಈ ರೀತಿ ಬದಲಾವಣೆಗೊಂಡ ತರುವಾಯ ಮೈಸೂರು ರಾಜ್ಯ ವಿದ್ಯಾ ಇಲಾಖೆಯು ಪಠ್ಯಗಳನ್ನು ರಚಿಸಲು ತಜ್ಞರ ಸಮಿತಿಯನ್ನು ರಚಿಸದೇ ತರಗತಿಗಳಿಗೆ ಇಲಾಖೆಯು ಪಠ್ಯಕ್ರಮವನ್ನು ನಿರ್ದಿಷ್ಟಗೊಳಿಸಿ ಆರಂಭದಲ್ಲಿ ಕೆಲವು ಪಂಡಿತರಿಗೆ ಪಠ್ಯರಚನೆಯ ಜವಾಬ್ದಾರಿಯನ್ನು ವಹಿಸಿಕೊಡತೊಡಗಿತು. ಮೈಸೂರು ರಾಜ್ಯದ ಪಠ್ಯಕ್ರಮ ಒಂದೇ ಆಗಿದ್ದರೂ ಆಯಾ ವಿಭಾಗಗಳ ಪಂಡಿತರು ಸರ್ಕಾರ ವಿಧಿಸಿದ ಪಠ್ಯಕ್ರಮದ ಅನ್ವಯ ಪಠ್ಯಗಳನ್ನು ರಚಿಸುತ್ತಿದ್ದರಾದರೂ ವಿಭಾಗವಾರು ಬೇರೆ ಬೇರೆ ಪಂಡಿತರು ಪಠ್ಯಗಳನ್ನು ರಚಿಸುತ್ತಿದ್ದುದರಿಂದ ಇಡೀ ರಾಜ್ಯದ ಪಠ್ಯವು ಏಕಸ್ವರೂಪದಲ್ಲಿರದೇ ಭಿನ್ನ ಭಿನ್ನವಾಗಿ ತೋರುತ್ತಿದ್ದವು. ಮೈಸೂರು ರಾಜ್ಯವು ಏಕೀಕರಣವಾದ ತರುವಾಯ ಕೊಠಾರಿ ಶಿಕ್ಷಣ ಆಯೋಗದ ಶಿಫಾರಸ್ಸಿನನ್ವಯ ಪಠ್ಯಪುಸ್ತಕ ರಚನಾ ಸಮಿತಿ ನಿರ್ಮಾಣವಾಯಿತು. ಈ ಪಠ್ಯಪುಸ್ತಕ ರಚನಾ ಸಮಿತಿಗಳು ರಾಜ್ಯ ಸರ್ಕಾರದ ಶಿಕ್ಷಣ ಮಂತ್ರಿಗಳಿಂದ ನಿಯೋಜನೆಗೊಳ್ಳುತ್ತಿತ್ತು. ಆ ಪ್ರಕಾರ ೧೯೬೪ರ ಸುಮಾರಿಗೆ ಪಠ್ಯಪುಸ್ತಕ ರಚನಾ ಸಮಿತಿ ನಿಯೋಜನೆಗೊಂಡಿತು. ಪಠ್ಯಪುಸ್ತಕ ರಚನೆ ಮಾಡಿಕೊಡುವುದಷ್ಟೇ ಈ ಸಮಿತಿಯ ಕಾರ್ಯವಾಗಿರುತ್ತಿತ್ತು. ಮರಳಿ ಹೊಸ ಪಠ್ಯಪುಸ್ತಕ ರಚಿಸಬೇಕೆಂದಾಗ ಅಥವಾ ಪರಿಷ್ಕರಿಸಬೇಕೆಂದಾಗ ಆಡಳಿತದಲ್ಲಿರುವ ಸರ್ಕಾರಗಳು ಪಠ್ಯಪುಸ್ತಕ ರಚನಾ ಸಮಿತಿ ಅಥವಾ ಪರಿಷ್ಕರಣಾ ಸಮಿತಿಯನ್ನು ನಿರ್ಮಿಸಿ ಪಠ್ಯಪುಸ್ತಕದ ರಚನೆಯ ಜವಾಬ್ದಾರಿಯನ್ನು ಆ ಸಮಿತಿಗೆ ವಹಿಸುತ್ತಿತ್ತು. ೧೯೭೪ರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗುಣಮಟ್ಟದ ಶಿಕ್ಷಣ ಮಕ್ಕಳಿಗೆ ದೊರೆಯಬೇಕೆಂಬ ಆಶಯದಿಂದ ರಾಷ್ಟ್ರಮಟ್ಟದಲ್ಲಿ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಸಂಸ್ಥೆ(ಎನ್.ಸಿ.ಇ.ಆರ್.ಟಿ.)ಯನ್ನು ದೆಹಲಿಯಲ್ಲಿ ಹುಟ್ಟುಹಾಕಲಾಯಿತು. ತರುವಾಯ ಇದು ರಾಜ್ಯ ಮಟ್ಟದಲ್ಲಿ ಕೆಲಸ ಮಾಡಲು ಪ್ರತಿ ರಾಜ್ಯದಲ್ಲಿಯೂ ರಾಜ್ಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಸಂಸ್ಥೆ(ಡಿ.ಎಸ್.ಇ.ಆರ್.ಟಿ.)ಗಳು ಕಾರ್ಯಾರಂಭ ಮಾಡತೊಡಗಿದವು. ಇವುಗಳು ಶಿಕ್ಷಣದ ಕುರಿತಾದ ಸಂಶೋಧನೆ ಹಾಗೂ

ತರಬೇತಿಗಳನ್ನು ಕೊಡುವುದರೊಂದಿಗೆ ಶಿಕ್ಷಣದ ಕುರಿತಾದ ಮೌಲ್ಯಮಾಪನ ಮಾಡುವ ಕಾರ್ಯವನ್ನೂ ಮಾಡುತ್ತವೆ ಹಾಗೇ ಪ್ರಾಥಮಿಕ ಹಂತದಿಂದ ಪ್ರೌಢ ಶಾಲಾ ಹಂತದವರೆಗೆ ಪಠ್ಯಪುಸ್ತಕಗಳ ಸ್ವರೂಪಗಳನ್ನು ಸಹ ನಿರ್ಣಯಿಸುತ್ತವೆ. ಇದರಿಂದ ಪ್ರಮಾಣಿಕೃತಗೊಂಡ ಪಠ್ಯಕ್ರಮದಂತೆ ಪ್ರಸ್ತುತ ಪಠ್ಯಪುಸ್ತಕಗಳನ್ನು ಕರ್ನಾಟಕ ಪಠ್ಯಪುಸ್ತಕಗಳ ಸಂಘವು ಮುದ್ರಿಸುವ ಕಾರ್ಯವನ್ನು ಮಾಡುತ್ತದೆ.

ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರು ಹಾಗೂ ಪರಿಷ್ಕರಣಾ ಸಮಿತಿಯ ಕೆಲವು ಸದಸ್ಯರನ್ನು ಸಂದರ್ಶಿಸಿದಾಗ ಪಠ್ಯ ಪುಸ್ತಕಗಳನ್ನು ರಚಿಸುವ ಪೂರ್ವದಲ್ಲಿ ತರಗತಿಗಳಿಗೆ ಪಠ್ಯಕ್ರಮವನ್ನು ಯಾವ ಆಧಾರದ ಮೇಲೆ ನಿರ್ಧರಿಸಲಾಗುತ್ತಿತ್ತು. ತಮ್ಮ ಕೆಲಸದ ಸ್ವರೂಪವೇನು ಇತ್ಯಾದಿಗಳ ಕುರಿತು ಅವರ ಪ್ರತಿಕ್ರಿಯೆಯಲ್ಲಿ ಕಂಡುಬಂದ ಅಂಶಗಳನ್ನು ಈ ಕೆಳಗೆ ನೀಡಲಾಗಿದೆ.

ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರು ಹಾಗೂ ಪರಿಷ್ಕರಣಾ ಸಮಿತಿಯ ಸದಸ್ಯರಾಗಿದ್ದ ಎಸ್ ಮಂಚಯ್ಯ, ಪಿ.ಎ. ಕುಮಾರ್, ಹುಸೇನ್ ಶರೀಫ್, ನರೇಂದ್ರ ಪ್ರಸಾದ್, ಶಂಕರ್‌ಶಾಸ್ತ್ರಿ, ಎನ್. ಸತ್ಯಪ್ರಕಾಶ್, ಎಸ್.ಎನ್. ಆಶಾ, ಡಾ. ಯು. ಸೂರ್ಯನಾಥ ಕಾಮತ್ ಮುಂತಾದವರನ್ನು ಸಂದರ್ಶಿಸಲಾಯಿತು.

ಪಠ್ಯಪುಸ್ತಕ ರಚನಾ ಸಮಿತಿಯಲ್ಲಿರುವ ಇವರೆಲ್ಲರೂ ಶೈಕ್ಷಣಿಕ ಕ್ಷೇತ್ರದಲ್ಲಿ ದೀರ್ಘವಾದ ಸೇವಾನುಭವವನ್ನು ಹೊಂದಿದವರಾಗಿದ್ದಾರೆ. ಪಠ್ಯಪುಸ್ತಕ ರಚಿಸುವ ಸಂದರ್ಭದಲ್ಲಿ ರಾಷ್ಟ್ರೀಯ ಪಠ್ಯಕ್ರಮದ ನೀತಿಯನ್ವಯ ಪಠ್ಯ ಪುಸ್ತಕಗಳನ್ನು ಸಿದ್ಧಪಡಿಸಲಾಗಿದೆ ಎಂದು ಸದಸ್ಯರೆಲ್ಲಾ ತಿಳಿಸಿದರು. ಚರಿತ್ರೆ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದ ಇವರಲ್ಲಿ ಕೆಲವರು ಮಾತ್ರ ಚರಿತ್ರಾಕಾರರೊಂದಿಗೆ ಚರ್ಚಿಸಿ ಪಠ್ಯಪುಸ್ತಕಗಳನ್ನು ರಚಿಸಿದ್ದೇವೆ ಎಂದು ತಿಳಿಸಿದರು. ಇನ್ನೂ ಕೆಲವರು ಈಗಾಗಲೇ ಹೊರಬಂದ ಚರಿತ್ರೆ ಪುಸ್ತಕಗಳನ್ನು ಆಧರಿಸಿ ಪಠ್ಯಪುಸ್ತಕಗಳನ್ನು ರಚಿಸಿದ್ದೇವೆ ಎಂದು ತಿಳಿಸಿದರು. ಆದರೆ ಸಮಿತಿಯ ಸದಸ್ಯರೆಲ್ಲರೂ ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ಸರಿದೂಗುವಂತೆ ಯಾವ ರೀತಿಯಲ್ಲಿ ಚರಿತ್ರೆ ಪಾಠಗಳನ್ನು ಅಳವಡಿಸಬಹುದೆಂಬ ಕುರಿತು ತಜ್ಞ ಚರಿತ್ರೆಕಾರರೂ ಹಾಗೂ ಮಾನಸಿಕ ತಜ್ಞರೊಂದಿಗೆ ಚರ್ಚಿಸಿ ಪಠ್ಯಪುಸ್ತಕಗಳನ್ನು ರಚಿಸಿದ್ದರೆ ಒಳಿತಿತ್ತು ಎಂದು ಹೇಳಿದರು.

ಮಕ್ಕಳ ಮಾನಸಿಕ ದೈಹಿಕ ಹಾಗೂ ಸಂವೇದನಾತ್ಮಕ ಸಾಮರ್ಥ್ಯಗಳಿಗೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಲಾಗಿದೆ ಎಂದೇ ಬಹುತೇಕ ಸದಸ್ಯರು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಮಕ್ಕಳ ದೈಹಿಕ, ಮಾನಸಿಕ ಹಾಗೂ ಸಂವೇದನೆಗಳಿಗೆ ಪೂರಕವಾಗಿರುವಂತೆ ಪಠ್ಯಗಳನ್ನು ರಚಿಸಲು ಯಾವ ಕ್ರಮ ಕೈಗೊಳ್ಳಲಾಯಿತು ಹಾಗೂ ಅದರ ಮಾನದಂಡಗಳ ಕುರಿತು ಯಾವೊಬ್ಬ ಸದಸ್ಯರೂ ಪ್ರತಿಕ್ರಿಯೆ ನೀಡಲಿಲ್ಲ.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವ್ಯಕ್ತಿ ಚಿತ್ರಣವನ್ನು ಪಠ್ಯದಲ್ಲಿ ಅಳವಡಿಸಿಕೊಳ್ಳುವಾಗ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರಿಗೂ ಮನ್ನಣೆ ದೊರೆತಿದೆಯೇ ಎಂದು ಪ್ರಶ್ನಿಸಿದಾಗ ಹೌದು ದೊರೆತಿದೆ, ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಗಾರ ರೊಂದಿಗೆ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ಕುರಿತು ಪಠ್ಯದಲ್ಲಿ ತಿಳಿಸಲಾಗಿದೆ ಎಂದೇ

ತಿಳಿಸಿದರು. ಆದರೆ ಎಲ್ಲೋ ಕೆಲವು ರಾಜಕೀಯ ಹಿನ್ನೆಲೆಯಿರುವ ವ್ಯಕ್ತಿಗಳ ಹೊರತಾಗಿ ಸ್ಥಳೀಯ ಸ್ವಾತಂತ್ರ್ಯ ಹೋರಾಟಗಾರರ ಕುರಿತ ಮಾಹಿತಿ ಪಠ್ಯದಲ್ಲಿ ಎಲ್ಲಿಯೂ ಬಂದಿಲ್ಲ.

ಡಿ.ಎಸ್.ಇ.ಆರ್.ಟಿ.ಯಿಂದ ಮಾನ್ಯತೆ ಹೊಂದಿದ ಚರಿತ್ರೆಪಠ್ಯಪುಸ್ತಕಗಳು ಸಿ.ಬಿ.ಎಸ್.ಸಿ. ಹಾಗೂ ಐ.ಸಿ.ಎಸ್.ಸಿ. ಚರಿತ್ರೆ ಪಠ್ಯಪುಸ್ತಕಗಳ ಗುಣಮಟ್ಟಕ್ಕೆ ಸಮಾನವಾಗಿವೆಯೆ? ಎಂದು ಪ್ರಶ್ನಿಸಿದಾಗ ಬಹುತೇಕ ಸದಸ್ಯರು ನಮ್ಮ ಪಠ್ಯಗಳು ಆ ಗುಣಮಟ್ಟ ಪಡೆಯುವ ಪ್ರಯತ್ನ ಮಾಡಲಾಗಿದೆಯಾದರೂ ಇನ್ನೂ ಆ ಗುಣಮಟ್ಟವನ್ನು ಕನ್ನಡ ಪಠ್ಯಮಸ್ತಕಗಳು ತಲುಪಲಾಗಿಲ್ಲವೆಂದು ತಿಳಿಸಿದರು.

ಸಿ.ಬಿ.ಎಸ್.ಸಿ. ಹಾಗೂ ಐ.ಸಿ.ಎಸ್.ಸಿ.ಯ ಚರಿತ್ರೆ ಪಠ್ಯಪುಸ್ತಕಗಳ ಗುಣಮಟ್ಟಕ್ಕೆ ಡಿ.ಎಸ್.ಇ.ಆರ್.ಟಿ. ನಿರ್ಣಯಿತಗೊಂಡಿರುವ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಗಮನಿಸಿದಾಗ ಅವುಗಳ ಗುಣಮಟ್ಟ ತಲುಪುವ ಕಾಲ ಕನ್ನಡ ಚರಿತ್ರೆ ಪಠ್ಯಪುಸ್ತಕಗಳು ಇನ್ನೂ ತುಂಬಾ ದೂರ ಇವೆಯೆನಿಸುತ್ತದೆ.

ಸ್ಪರ್ಧಾತ್ಮಕ ಯುಗಕ್ಕೆ ಹೊಂದುವಂತೆ ಮಕ್ಕಳನ್ನು ಸಿದ್ಧಪಡಿಸಲು ಡಿ.ಎಸ್.ಇ.ಆರ್.ಟಿ. ಪಠ್ಯಕ್ರಮದ ಚರಿತ್ರೆ ಪಠ್ಯಪುಸ್ತಕಗಳಿಂದ ಸಾಧ್ಯತೆಗಳು ಎಷ್ಟಿವೆ ಎಂದು ಸಮಿತಿಯ ಸದಸ್ಯರನ್ನು ಪ್ರಶ್ನಿಸಿದಾಗ ಮಕ್ಕಳನ್ನು ಸ್ಪರ್ಧಾತ್ಮಕ ಯುಗಕ್ಕೆ ಸರಿಹೊಂದುವಂತೆ ತಲುಪಿಸಲು ಸಾಧ್ಯವಿದೆ ಎಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದರೆ, ಇನ್ನೂ ಕೆಲವರು ಪಠ್ಯಪುಸ್ತಕಗಳ ಉದ್ದೇಶ ಮಕ್ಕಳ ಕಲಿಕಾ ಸಾಮರ್ಥ್ಯವನ್ನು ಹೆಚ್ಚಿಸುವ ಉದ್ದೇಶಗಳಿಂದ ಕೂಡಿವೆ, ಅವುಗಳ ಉದ್ದೇಶ ಮಕ್ಕಳನ್ನು ಸ್ಪರ್ಧಾತ್ಮಕ ಯುಗಕ್ಕೆ ಕೊಂಡೊಯ್ಯುವುದಲ್ಲ ಎಂದು ತಿಳಿಸಿದರು.

ಇಂದಿನ ಸ್ಪರ್ಧಾತ್ಮಕ ಯುಗವನ್ನು ಪ್ರಾಥಮಿಕ ಹಂತದ ಮಕ್ಕಳು ನೇರವಾಗಿ ಎದುರಿಸುವುದಿಲ್ಲ ನಿಜ. ಆದರೆ ಪ್ರಾಥಮಿಕ ಹಂತದಲ್ಲಿ ಮುಂದಿನ ಸ್ಪರ್ಧಾತ್ಮಕ ವ್ಯವಸ್ಥೆಯನ್ನು ಎದುರಿಸಬೇಕಾದ ಅನಿವಾರ್ಯತೆ ಪ್ರತಿಯೊಂದು ಮಗುವಿಗೆ ಇದೆ. ಈ ನಿಟ್ಟಿನಲ್ಲಿ ಮಗುವಿಗೆ ಶೈಕ್ಷಣಿಕವಾಗಿ ಮನಸ್ಥೈರ್ಯವನ್ನು ಪ್ರಾಥಮಿಕ ಶಿಕ್ಷಣ ಹಂತದಲ್ಲಿಯೇ ತುಂಬಬೇಕಾದ ಅನಿವಾರ್ಯತೆಯೂ ಇದೆ ಎಂಬುದನ್ನು ಮರೆಯಲಾಗದು. ಅಲ್ಲದೆ ಇಂದಿನ ಪ್ರತಿಯೊಂದು ಸ್ಪರ್ಧಾತ್ಮಕ ಪರೀಕ್ಷಾ ಹಂತದಲ್ಲಿ ಚರಿತ್ರೆಯನ್ನು ವ್ಯಕ್ತಿ ಕಡ್ಡಾಯವಾಗಿ ಓದಬೇಕಾಗಿದೆ. ಹೀಗಾಗಿ ಚರಿತ್ರೆಗೆ ಸಂಬಂಧಿಸಿದ ಪ್ರಾಥಮಿಕ ಹಂತದ ಪಠ್ಯವನ್ನು ಆ ನಿಟ್ಟಿನಲ್ಲಿ ಆಯೋಜಿಸಿದರೆ ಉತ್ತಮವೆನಿಸುತ್ತದೆ.

ಭಾರತದ ಹಾಗೂ ವಿದೇಶದ ರಾಜ-ರಾಣಿಯರ, ಅವರ ಆಡಳಿತ, ವಾಸ್ತುಶಿಲ್ಪ, ಕಲೆ ಇತ್ಯಾದಿಗಳ ಕುರಿತೇ ಚರಿತ್ರೆ ಪಠ್ಯದುದ್ದಕ್ಕೂ ನೋಡುತ್ತೇವೆ. ಜನಸಾಮಾನ್ಯರ ಹೋರಾಟಗಳನ್ನು ಚರಿತ್ರೆ ಪಠ್ಯದಲ್ಲಿ ಸೇರಿಸಲಾಗಿದೆಯೆ? ಎಂಬ ಪ್ರಶ್ನೆಗೆ ಬಹುತೇಕ ಎಲ್ಲಾ ಸದಸ್ಯರು ಜನಸಾಮಾನ್ಯರ ಚರಿತ್ರೆಯನ್ನು ಪಠ್ಯದಲ್ಲಿ ಸೇರಿಸುವ ಪ್ರಯತ್ನ ಮಾಡಿದ್ದೇವೆ ಎಂದು ಹೇಳಿದರು. ಆದರೆ ಯಾವ ಪಠ್ಯದಲ್ಲಿಯೂ ಜನಸಾಮಾನ್ಯರ ಚರಿತ್ರೆ ಪಠ್ಯದಲ್ಲಿ ಸೇರ್ಪಡೆಯಾದ ಉದಾಹರಣೆಗಳು ಕಂಡುಬರುವುದಿಲ್ಲ. ಸರ್ಕಾರದ ಪಠ್ಯಸೂಚಿಯಂತೆ ಪಠ್ಯಪುಸ್ತಕ ಸಮಿತಿಯ ಜವಾಬ್ದಾರಿಯಲ್ಲವಾಗುವ ತಾರತಮ್ಯತೆಯನ್ನು ಇಲ್ಲಿ ಗುರುತಿಸಲಾಗಿದೆ.

**ಟಿಪ್ಪಣಿಗಳು**

೧. ಹೆಚ್.ಎಸ್. ನಾಗರಾಜ್, ಚಿತ್ರದುರ್ಗ ಜಿಲ್ಲೆಯ ಅಂಕಿ-ಅಂಶಗಳ ನೋಟ, ೧೯೮೮-೮೯, ಚಿತ್ರದುರ್ಗ, ಪು. ೬.

೨. ಹಾ.ಮಾ. ನಾಯಕ (ಪ್ರಸಂ.), ಕನ್ನಡ ವಿಶ್ವಕೋಶ, ಸಂ. ೫೬, ೧೯೯೭, ಪು. ೫೭೯.

೩. ಟಿ. ಗಿರಿಜಾ, ಚಿತ್ರದುರ್ಗ ಜಿಲ್ಲಾದರ್ಶಿನಿ, ೧೯೯೧, ಪು. ೬.

೪. ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಮೈಸೂರು ಸ್ಟೇಟ್, ಮೈಸೂರು ಸರ್ಕಾರ, ಬೆಂಗಳೂರು, ೧೯೭೨, ಪು. ೧.

೫. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ ೧೧, ಚಿತ್ರದುರ್ಗ ಶಾಸನ ಸಂಖ್ಯೆ ೧೬೧, ಪು. ೨೧೦.

೬. ಟಿ. ಗಿರಿಜಾ, ಹೆಚ್.ಜಿ. ಶೋಭಾ (ಸಂ), ಕರ್ಪೂರ ಸ್ಮರಣ ಸಂಚಿಕೆ, ೨೦೦೨, ಪು. ೩೫.

೭. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ ೧೧, ಚಿತ್ರದುರ್ಗ ಶಾಸನ ಸಂಖ್ಯೆ ೯೦, ಪು. ೧೬೨.

೮. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ ೭, ಶಿವಮೊಗ್ಗ ಜಿಲ್ಲೆ ಶಾಸನ ಸಂಖ್ಯೆ ೨೮, ಪು. ೪೩೭.

೯. ಟಿ. ಗಿರಿಜಾ, ಹೆಚ್.ಜಿ. ಶೋಭಾ (ಸಂ), ಕರ್ಪೂರ, ಸ್ಮರಣ ಸಂಚಿಕೆ, ದಾವಣಗೆರೆ, ೨೦೦೦, ಪು. ೩೬.

೧೦. ಟಿ. ಗಿರಿಜಾ, ದಾವಣಗೆರೆ ಇದು ನಮ್ಮ ಜಿಲ್ಲೆ, ೨೦೦೧, ಪು. ೨೭.

□□

## ಅಧ್ಯಾಯ : ಏಳು

# ಸಮಾರೋಪ

ಪ್ರಸ್ತುತ ಅಧ್ಯಯನವು ಚರಿತ್ರೆ ಪಠ್ಯಪುಸ್ತಕಗಳ ಸ್ವರೂಪವನ್ನು ಕುರಿತು ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ. ಪಠ್ಯಪುಸ್ತಕವೆಂಬುದು ಪ್ರಾಥಮಿಕ ಹಾಗೂ ಮಾಧ್ಯಮಿಕ ತರಗತಿಗಳಲ್ಲಿ ಒಂದು ಪ್ರಮುಖ ಕಲಿಕಾ ಸಾಧನ. ಏಕೆಂದರೆ ಈ ಶಾಲಾ ಹಂತಗಳಲ್ಲಿ ವಿದ್ಯಾರ್ಥಿ ಹಾಗೂ ಶಿಕ್ಷಕ ಇಬ್ಬರಿಗೂ ಪಠ್ಯಪುಸ್ತಕಗಳು ಮಾರ್ಗಸೂಚಿಗಳಾಗಿವೆ. ಅದರ ಮೂಲಕ ಅವರು ಒಂದು ನಿರ್ದಿಷ್ಟ ಗುರಿಯನ್ನು ತಲುಪಲು ಸಾಧ್ಯವಾಗುತ್ತದೆ. ಆದರೆ ಪ್ರಾಚೀನ ಕಾಲದಲ್ಲಿ ಪಠ್ಯಪುಸ್ತಕಗಳಿಲ್ಲದೇ ಗುರು ಮಕ್ಕಳಿಗೆ ಈ ಕಾರ್ಯವನ್ನು ಮಾಡುತ್ತಿದ್ದನು. ಅಂದು ಮೌಖಿಕವಾಗಿಯೇ ಎಲ್ಲಾ ಪಾಠ ಪ್ರವಚನಗಳು ನಡೆಯುತ್ತಿದ್ದವು. ಕಾಲ ಬದಲಾದಂತೆ ಹೊಸ ಹೊಸ ಆವಿಷ್ಕಾರಗಳು ಜಗತ್ತಿನ ಎಲ್ಲೆಡೆ ಕ್ರಾಂತಿಯನ್ನುಂಟುಮಾಡಿದವು. ಆಗ ಮುದ್ರಣ ಯಂತ್ರಗಳು ಜಾರಿಗೆ ಬಂದು ಪುಸ್ತಕಗಳನ್ನು ಮುದ್ರಿಸುವ ಕಾರ್ಯವನ್ನು ಮಾಡತೊಡಗಿದವು. ಆದರೆ ಮುದ್ರಣಕ್ಕೆ ಹೋಗುವ ಮೊದಲು ಪಂಡಿತರು ಪಠ್ಯಪುಸ್ತಕಗಳನ್ನು ಬರೆದುಕೊಡುತ್ತಿದ್ದರು. ಹೀಗೆ ಪ್ರಾರಂಭವಾದ ಈ ಕಾರ್ಯದಲ್ಲಿ ಹಲವಾರು ಲೋಪದೋಷಗಳು ಕಾಣುವುದಕ್ಕೆ ಅಂದಿನಿಂದಲೇ ಪ್ರಾರಂಭವಾಯಿತು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಮಕ್ಕಳಿಗೆ ಎಲ್ಲಾ ವಿಷಯಗಳಿಗೂ ನಿರ್ದಿಷ್ಟವಾದ ಪಠ್ಯಪುಸ್ತಕಗಳು ಸರಬರಾಜು ಆಗುತ್ತಿದ್ದವು. ವಸಾಹತು ಕಾಲಘಟ್ಟದ ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳು ಆಗತೊಡಗಿದವು. ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಶಿಕ್ಷಣದ ಮ್ಯಾಗ್ನಾಕಾರ್ಟ್ ಎಂದೇ ಕರೆಸಿಕೊಂಡ ವುಡ್ಸ್ ವರದಿಯು ಮೊದಲು ಶಿಕ್ಷಣದ ಬಗ್ಗೆ ಹಲವಾರು ಸಲಹೆ ಸೂಚನೆಗಳನ್ನು ನೀಡಿತು. ಇದಲ್ಲದೆ ಲಾರ್ಡ್ ಮೆಕಾಲೆಯ ಆಂಗ್ಲ ಶಿಕ್ಷಣ ನೀತಿಯೂ ಜಾರಿಗೊಂಡು ಭಾರತದಲ್ಲಿ ಹೊಸ ಸಂಚಲನವನ್ನುಂಟುಮಾಡಿತು. ಈ ಸಂದರ್ಭದಲ್ಲಿ ಭಾರತೀಯರಿಗೆ ತಮ್ಮದೇಯಾದ ಪ್ರಾಚೀನ ಸಾಹಿತ್ಯವಿಲ್ಲವೆಂದು ದೂರಿದ್ದು ಉಂಟು. ಆದರೆ ಮುಂದೆ ಭಾರತದ ಸಾಹಿತ್ಯ ಎಷ್ಟು ಪ್ರಾಚೀನವಾಗಿತ್ತು ಎಂಬುದು ಅವರ ಅರಿವಿಗೆ ಬಂತು. ಭಾರತದ ಚರಿತ್ರೆಯನ್ನು ಕುರಿತು ಈ ವೇಳೆಯಲ್ಲಿ ಬರೆಯಲ್ಪಟ್ಟ ಬಹುತೇಕ ಪುಸ್ತಕಗಳು ವಸಾಹತುಶಾಹಿ ನೀತಿ ಹಿನ್ನೆಲೆಯಲ್ಲಿ ಹೊರಬಂದವು. ಅವುಗಳ ಪ್ರಮುಖ ಅಂಶಗಳು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಚರಿತ್ರೆ ಪಠ್ಯಪುಸ್ತಕಗಳಲ್ಲಿ ನುಸುಳತೊಡಗಿದವು. ಚರಿತ್ರೆ ಪಠ್ಯಪುಸ್ತಕಗಳು ಇತರೆ ವಿಷಯಗಳು ಪಠ್ಯಪುಸ್ತಕಗಳಿಗಿಂತ ಹೆಚ್ಚು ಮಹತ್ವವನ್ನು ಪಡೆದುಕೊಂಡಿವೆ. ಚರಿತ್ರೆ ಪಠ್ಯಪುಸ್ತಕಗಳಲ್ಲಿ

ಪ್ರಾಚೀನ ಭಾರತೀಯ ಚರಿತ್ರೆಯನ್ನು ಒಳಗೊಂಡಂತೆ ಆಧುನಿಕ ಚರಿತ್ರೆಯ ಎಲ್ಲಾ ವಿಷಯಗಳನ್ನು ಈ ತರಗತಿಗೆ ಅಧ್ಯಯನಕ್ಕೆ ಅಳವಡಿಸಲಾಗಿದೆ. ಆದರೆ ಚರಿತ್ರೆ ಪಠ್ಯಪುಸ್ತಕವು ಮಕ್ಕಳಿಗೆ ಬಹುಮುಖಿಯಾದ ಪ್ರಯೋಜನವನ್ನು ತಂದುಕೊಡುವ ವಿಷಯವಾಗಿದೆ. ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಭಾರತದ ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ರಾಜಕೀಯ ಜೀವನ, ಆರ್ಥಿಕ ಜೀವನ, ಸಾಮಾಜಿಕ ಜೀವನ ಎಲ್ಲ ಸಂಗತಿಗಳನ್ನು ತಿಳಿಯಬಹುದಾಗಿದೆ. ಅಲ್ಲದೆ ದೇಶಪ್ರೇಮ ಮೂಡಿಸುವಂತಹ ಹಲವಾರು ವಿಷಯಗಳು ಇದರಲ್ಲಿ ಅಡಕವಾಗಿವೆ. ಆದರೆ ಇಂತಹ ಪಠ್ಯಪುಸ್ತಕಗಳು ಇಂದು ಪದೇ ಪದೇ ಕಟು ಟೀಕೆಗೆ ಗುರಿಯಾಗಲು ಅನೇಕ ಕಾರಣಗಳಿವೆ ಎಂಬುದು ನಿಜ. ಇದರ ಜೊತೆಯಲ್ಲಿ ಪಠ್ಯಪುಸ್ತಕದ ಪ್ರಮುಖ ಗುಣಲಕ್ಷಣಗಳನ್ನು ಇಂದು ಸ್ಪಷ್ಟವಾಗಿ ನಿರ್ಧರಿಸಲಾಗಿದೆ. ಈ ಲಕ್ಷಣಗಳಿಗೆ ಅನ್ವಯವಾಗುವಂತೆ ಚರಿತ್ರೆ ಪಠ್ಯಪುಸ್ತಕಗಳು ಮೂಡಿಲ್ಲವೆಂದು ಮೇಲ್ನೋಟಕ್ಕೆ ಕಂಡುಬಂದಿದೆ. ಸಮಾಜಮುಖಿಯಾಗಿ ಸಮಾಜ ನಿರ್ಮಾತೃಗಳನ್ನು ತಯಾರು ಮಾಡುವಲ್ಲಿ ಚರಿತ್ರೆ ಪಠ್ಯಪುಸ್ತಕಗಳ ಅವಶ್ಯಕತೆ ಎದ್ದು ಕಾಣುತ್ತಿದೆ. ಅದಕ್ಕಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದ ತರಗತಿಗಳಲ್ಲಿಯೇ ಮಕ್ಕಳಿಗೆ ನಮ್ಮ ನೈಜವಾದ ಚರಿತ್ರೆಯನ್ನು ತಿಳಿಸಲಾರದೆ ಹೋದರೆ ಅವರ ಮನಸ್ಸಿನ ಮೇಲೆ ಅಗಾಧವಾದ ಪರಿಣಾಮ ಬೀರುವುದು ಖಂಡಿತ ಸುಳ್ಳಲ್ಲ. ಏಕೆಂದರೆ ಇಂದು ವಿಜ್ಞಾನ ತಂತ್ರಜ್ಞಾನ ಕ್ಷೇತ್ರದಲ್ಲಿ ಚರಿತ್ರೆಯ ವಿಷಯವನ್ನು ಓದುವವರ ಸಂಖ್ಯೆ ಗಣನೀಯವಾಗಿ ಕ್ಷೀಣಿಸುತ್ತಿದೆ. ಆದರೆ ಅವರೆಲ್ಲರೂ ಕೆಳಹಂತದ ತರಗತಿಗಳಲ್ಲಿ ಚರಿತ್ರೆಯನ್ನು ಒಂದು ಕಡ್ಡಾಯ ವಿಷಯವಾಗಿ ಕಲಿಯುತ್ತಿದ್ದಾರೆ. ಆದ್ದರಿಂದ ಈ ಹಂತದಲ್ಲಿ ಅವರ ಮನಸ್ಸಿನಲ್ಲಿ ಭಾರತೀಯ ಚರಿತ್ರೆ ಹಾಗೂ ವಿದೇಶಿ ಚರಿತ್ರೆಯ ನೈಜ ವಿಷಯಗಳು ಅಡಕವಾಗಬೇಕು ಎಂಬುದು ಅಧ್ಯಯನದ ಪ್ರಮುಖ ತಿರುಳಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸ್ವಾತಂತ್ರ್ಯೋತ್ತರ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಡಿ.ಎಸ್.ಈ.ಆರ್.ಟಿಯಿಂದ ರಚಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಸಮಗ್ರವಾಗಿ ಚಾರಿತ್ರಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹಿಂದೆ ಪಠ್ಯಪುಸ್ತಕವನ್ನು ರಚಿಸಲ್ಪಟ್ಟವವರು ಯಾವ-ಯಾವ ಮಾನದಂಡಗಳನ್ನು ಆಧರಿಸಿ ರಚಿಸಬೇಕು ಎಂಬ ನಿರ್ದಿಷ್ಟವಾದ ಆಯಾಮಗಳಿರಲಿಲ್ಲ. ಕೆಲವು ಪ್ರಸಿದ್ಧ ಪಾಶ್ಚಿಮಾತ್ಯ ಶಿಕ್ಷಣ ತಜ್ಞರುಗಳು ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದ ತರಗತಿಯ ಮಕ್ಕಳ ಮನೋ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕಗಳ ರಚನೆ ಮಾಡಬೇಕು ಎಂಬುದನ್ನು ಸೂಚಿಸಿದ್ದಾರೆ. ಆದರೆ ಅವರೆಲ್ಲರ ಅಭಿಪ್ರಾಯಗಳು ಏಕಮುಖಿಯಾಗಿರದೇ ವಿಭಿನ್ನವಾಗಿವೆ. ಇದಕ್ಕೆ ಕಾರಣವೇನೆಂದರೆ ಅವರು ತಮ್ಮ ದೇಶದ ಶೈಕ್ಷಣಿಕ ವ್ಯವಸ್ಥೆಯನ್ನಾಧರಿಸಿ ಹೇಳಿರುವುದು. ಇದು ತಪ್ಪಲ್ಲವಾದರೂ ಭಾರತದ ಕೃಷಿ, ಹಳ್ಳಿಗಳ ಪ್ರದೇಶಕ್ಕೆ ಒಗ್ಗುವಂತಹ ಪಠ್ಯಪುಸ್ತಕಗಳು ರಚಿಸಲ್ಪಡಬೇಕು ಎಂಬುದು ಇಂಗಿತ. ಪಾಶ್ಚಿಮಾತ್ಯ ಶಿಕ್ಷಣ ತಜ್ಞರೆಲ್ಲರೂ ಬಹುತೇಕವಾಗಿ ಮನೋವೈಜ್ಞಾನಿಕ ಹಿನ್ನೆಲೆಯನ್ನಾಧರಿಸಿ ಸಲಹೆ ನೀಡಿದ್ದಾರೆ. ಅಂತಹ ಕೆಲವು ವಿಚಾರಗಳು ಇಂದು ಚರಿತ್ರೆ ಪಠ್ಯಪುಸ್ತಕಗಳಲ್ಲಿ ಕಾಣಬರುತ್ತವೆ.

ಭಾರತೀಯ ಪ್ರಸಿದ್ಧ ಕೆಲವು ಶಿಕ್ಷಣ ತಜ್ಞರು ಭಾರತದ ಸ್ಥಿತಿಗತಿಗೆ ಅನುಗುಣವಾದ ಉಪಯುಕ್ತ ರೀತಿಯ ಸಲಹೆ-ಸೂಚನೆಗಳನ್ನು ಚರಿತ್ರೆ ಪಠ್ಯಪುಸ್ತಕದ ಬಗ್ಗೆ ನೀಡಿದ್ದಾರೆ. ಅವರಲ್ಲಿ

ಸ್ವಾಮಿ ವಿವೇಕಾನಂದ, ಅರವಿಂದ ಘೋಷ್, ರವೀಂದ್ರನಾಥ ಟಾಗೋರ್‌ರಂಥವರು ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಚರಿತ್ರೆ ಪಠ್ಯಪುಸ್ತಕಗಳು ಹೊರಹೊಮ್ಮಬೇಕು ಎಂಬುದು ಅವರ ಅಭಿಲಾಷೆಯಾಗಿತ್ತು. ಆದರೆ ಮಹಾತ್ಮ ಗಾಂಧಿಯವರ ವಿಷಯಗಳನ್ನು ಮಕ್ಕಳಿಗೆ ಪಠ್ಯಪುಸ್ತಕದ ಮೂಲಕ ಹೇಳಕೊಡಬಯಸಿದರು. ಅಂಬೇಡ್ಕರ್, ಜ್ಯೋತಿಬಾ ಫುಲೆ, ನಾರಾಯಣಗುರು ಮೊದಲಾದ ಶಿಕ್ಷಣತಜ್ಞರ ಆಲೋಚನೆಗಳು ಅವರೆಲ್ಲರಿಗಿಂತ ಭಿನ್ನವಾಗಿರುವುದು ಕಂಡು ಬಂದಿದೆ. ಇವರೆಲ್ಲರೂ ಕೇವಲ ಮೇಲ್ವರ್ಗದ ಚರಿತ್ರೆಗಳು ಮಾತ್ರ ಚರಿತ್ರೆಯ ಪಾಠಗಳಾಗಬಾರದು ಜನಸಾಮಾನ್ಯರ ಚರಿತ್ರೆಯೂ ಚರಿತ್ರೆಯಾಗಿ ಸೇರ್ಪಡೆಯಾಗಬೇಕು ಎಂಬುದು ಇವರ ನಿಲುವು ಆಗಿತ್ತು. ಎಡಪಂಥೀಯ ಚಿಂತಕರಾಗಿ ಗುರುತಿಸಿಕೊಂಡು ಇವರು ಶಿಕ್ಷಣ ಮತ್ತು ಪಠ್ಯಪುಸ್ತಕದ ಬಗ್ಗೆ ಗಾಢವಾದ ಚಿಂತನೆ ನಡೆಸಿಕೊಂಡು ಬಂದರು. ಆದರೆ ಇಂದು ಸಹ ಅಂಥ ವಿಚಾರಗಳು ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ದಾಖಲಾಗದೆ ಇರುವುದು ತಿಳಿದುಬಂದಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರು ಈ ದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದರಿಂದ ಸಮಗ್ರ ಭಾರತದ ಆಡಳಿತ, ನ್ಯಾಯ, ಶಿಕ್ಷಣ ಇತ್ಯಾದಿ ಎಲ್ಲಾ ಕ್ಷೇತ್ರಗಳ ಬಗ್ಗೆ ಗಮನಹರಿಸಿದ್ದಾರೆ. ಶಿಕ್ಷಣದಲ್ಲಿ ಉತ್ತಮವಾದ ಬದಲಾವಣೆ ಮಾಡುವತ್ತ ಮಹತ್ವದ ಹೆಜ್ಜೆಗಳನ್ನು ಇಡಲು ಪ್ರಯತ್ನ ಮಾಡಿದ್ದಾರೆ. ಆ ದಿಸೆಯಲ್ಲಿ ಅಂದು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆಯ ಪಠ್ಯಪುಸ್ತಕಗಳನ್ನು ರಚಿಸುವ ಜವಾಬ್ದಾರಿ ಸರ್ಕಾರದ ಹೊಣೆಯಾಗಿತ್ತು. ಹೀಗಾಗಿ ಅವರು ಕರ್ನಾಟಕದ ಮೈಸೂರು ಸಂಸ್ಥಾನ, ಹೈದರಾಬಾದ್ ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ ಮತ್ತು ಬಾಂಬೆ ಪ್ರಾಂತ್ಯಗಳಿಗೆ ಹೆಚ್ಚು ವಿಭಿನ್ನವಲ್ಲದ ಚರಿತ್ರೆ ಪಠ್ಯಪುಸ್ತಕಗಳನ್ನು ರಚಿಸಿ ಸರಬರಾಜು ಮಾಡುತ್ತಿದ್ದರು. ಈ ಪಠ್ಯಪುಸ್ತಕಗಳನ್ನು ಅವರು ಸ್ಥಳೀಯವಾಗಿ ಆಯಾ ವಿಷಯಗಳಲ್ಲಿ ಪಾಂಡಿತ್ಯ ಪಡೆದುಕೊಂಡ ಬಹುಭಾಷಿಕರಿಂದ ಬರೆಸುತ್ತಿದ್ದರು. ಈ ಪಂಡಿತರು ಅಂದು ಬ್ರಿಟಿಷ್ ಪ್ರಭುತ್ವದ ಸೂಚನೆಗಳಿಗೆ ಅನುಸಾರವಾಗಿ ಚರಿತ್ರೆ ಪಠ್ಯಪುಸ್ತಕಗಳನ್ನು ರಚಿಸಿಕೊಡುತ್ತಿದ್ದರು. ಚರಿತ್ರೆ ಪಠ್ಯಪುಸ್ತಕವನ್ನು ರಚಿಸಲು ಅಂದು ನಿರ್ದಿಷ್ಟ ಸಮಿತಿಗಳು ಇಲ್ಲದೇ ಇದ್ದರೂ ಒಂದಕ್ಕಿಂತ ಹೆಚ್ಚಿನ ಪಂಡಿತರಿಂದ ಒಂದು ತರಗತಿಯ ಪಠ್ಯಪುಸ್ತಕಗಳನ್ನು ಬರೆಸುತ್ತಿದ್ದರು. ಅವರಲ್ಲಿ ವಸಾಹತುಶಾಹಿ ನೀತಿಯನ್ನು ಓಲೈಸಿ ರಚಿಸಿದಂತಹ ಚರಿತ್ರೆ ಪಠ್ಯಪುಸ್ತಕಗಳನ್ನು ಆಯ್ಕೆ ಮಾಡಿ ಅಭ್ಯಾಸ ಮಾಡಲು ನಿಗದಿಪಡಿಸಲಾಗುತ್ತಿತ್ತು. ಹೀಗಾಗಿ ಬಹುತೇಕ ವಿಷಯ ಪಂಡಿತರು ಸ್ವಾತಂತ್ರ್ಯಪೂರ್ವದಲ್ಲಿ ವಸಾಹತುಶಾಹಿ ನೀತಿಯನುಸಾರ ಚರಿತ್ರೆಯ ಪಾಠಗಳನ್ನು ಬರೆಯಲು ಮುಂದಾಗಿರುವುದು ಗಮನಕ್ಕೆ ಬಂದಿದೆ. ಏಕೆಂದರೆ ಅವರು ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬಂದರೂ, ಭಾರತದ ಚರಿತ್ರೆಯನ್ನು ತಿರುಚುವ ಪ್ರಯತ್ನ ನಡೆದರೂ, ವಾಸ್ತವಾಂಶಗಳನ್ನು ತಿಳಿಸಲು ಬಯಸಿದರೂ ಅವರಿಂದ ಸಾಧ್ಯವಾಗದೇ ಈ ಕಾರ್ಯವನ್ನು ಮಾಡಿಕೊಡುತ್ತಿದ್ದರು. ಇಂತಹ ಹಲವಾರು ಅಂಶಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬೆಳಕಿಗೆ ತರಲಾಗಿದೆ. ಒಟ್ಟಾರೆ ಸ್ವಾತಂತ್ರ್ಯಪೂರ್ವದಲ್ಲಿ ಚರಿತ್ರೆ ಪಠ್ಯಪುಸ್ತಕಗಳನ್ನು ರಚಿಸಿದವರು ಭಾರತೀಯರಾದರೂ ಅವರು ವಸಾಹತು ಧೋರಣೆಯ ಮನೋಭಾವನೆಯಿಂದ ಬರೆದಿರುವುದು ಸ್ಪಷ್ಟವಾಗುತ್ತದೆ. ಇದನ್ನು ನಮ್ಮವರ ಅಸಹಾಯಕತೆ

ಎನ್ನಬೇಕೋ? ಅಥವಾ ಬ್ರಿಟಿಷರನ್ನು ಮೆಚ್ಚಿಸಲೆಂದು ಬರೆದಿದ್ದಾರೋ ಎಂಬ ಸಂಗತಿ ಪ್ರಶ್ನಾತೀತವಾಗಿದೆ.

ಸ್ವಾತಂತ್ರ್ಯೋತ್ತರ ಕರ್ನಾಟಕದ ಸಂದರ್ಭದಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಬದಲಾವಣೆಯಾಗಿರುವುದು ತಿಳಿದುಬಂದಿದೆ. ಸ್ವಾತಂತ್ರ್ಯ ಬಂದ ಹಲವು ವರ್ಷಗಳ ಕಾಲ ಹಿಂದಿನ ಪಠ್ಯಪುಸ್ತಕಗಳೇ ಮುಂದುವರೆಸಲ್ಪಟ್ಟಿದ್ದವು. ಸ್ವಾತಂತ್ರ್ಯ ಪಡೆದ ಆರಂಭದ ವರ್ಷಗಳಲ್ಲಿ ಅಂದಿನ ಸರ್ಕಾರಗಳು ಸಾಕಷ್ಟು ಕ್ಷೇತ್ರಗಳಲ್ಲಿ ಬದಲಾವಣೆಗಳನ್ನು ಮಾಡುವ ಪ್ರಯತ್ನ ಮಾಡಿದ್ದಾರೆ. ಅದೇ ರೀತಿಯಾಗಿ ಶಿಕ್ಷಣದಲ್ಲಿ ಒಂದು ಏಕರೂಪವನ್ನು ತರುವುದಕ್ಕೆ ಪ್ರಯತ್ನಿಸಿದ್ದ ೧೯೬೪ರಲ್ಲಿ ರಾಜ್ಯ ಪುನರ್‌ವಿಂಗಡನೆಯ ನಂತರ ಕರ್ನಾಟಕದಲ್ಲಿ ಏಕರೀತಿಯ ಶಿಕ್ಷಣ ವ್ಯವಸ್ಥೆ ಜಾರಿಗೊಂಡಿತು. ಇದೇ ಸಂದರ್ಭದಲ್ಲಿ ಭಾರತೀಯ ಶಿಕ್ಷಣ ಆಯೋಗವು ಶಿಕ್ಷಣದ ಬದಲಾವಣೆಯ ಸೂಚಿಯಲ್ಲಿ ಪಠ್ಯಪುಸ್ತಕಗಳ ಬಗ್ಗೆ ತನ್ನದೇ ಆದ ಶಿಫಾರಸ್ಸುಗಳನ್ನು ನೀಡಿತು. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೯೬೪ರಲ್ಲಿ ಮೊದಲಬಾರಿಗೆ ಚರಿತ್ರೆ ಪಠ್ಯಪುಸ್ತಕ ಸ್ವಾತಂತ್ರ್ಯನಂತರ ಬದಲಾವಣೆಗೊಂಡಿರುವುದು ಕಂಡುಬಂದಿದೆ. ಇದು ಹಂತಹಂತವಾಗಿ ಎಲ್ಲಾ ತರಗತಿಗೆ ಅನ್ವಯವಾಗುತ್ತ ಹೋಗಿದೆ. ಈ ಸಂದರ್ಭದಲ್ಲಿ ಆರಂಭದ ಕೆಲವು ತರಗತಿಗಳಲ್ಲಿ ಇನ್ನೂ ವಸಾಹತುಶಾಹಿ ಮನೋಭಾವನೆಯ ಚರಿತ್ರೆಯ ವಿಷಯಗಳು ಅಲ್ಲಲ್ಲಿ ಇರುವುದು ಕಂಡುಬಂದಿದೆ. ಪ್ರಾಥಮಿಕ ತರಗತಿಯ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ರಾಷ್ಟ್ರೀಯ ಮನೋಭಾವನೆ ಬೆಳಸುವಂತಹ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರೀಯ ಲಾಂಛನ, ರಾಷ್ಟ್ರೀಯ ಹಬ್ಬಗಳು, ರಾಷ್ಟ್ರೀಯ ನಾಯಕರ ಪಾಠಗಳು ಮೂಡಿಬಂದಿವೆ. ಇದರಿಂದ ಸ್ವಲ್ಪಮಟ್ಟಿನ ಬದಲಾವಣೆಗಳು ನಂತರದಲ್ಲಿ ಆಗಿರುವುದು ಪಠ್ಯಪುಸ್ತಕಗಳಲ್ಲಿ ಕಂಡುಬರುತ್ತದೆ. ಈ ಪಠ್ಯಪುಸ್ತಕಗಳನ್ನು ರಚಿಸಲು ಅಂದಿನ ಮೈಸೂರು ಸರ್ಕಾರವು ಕೆಲವು ಸಮಿತಿಗಳನ್ನು ನೇಮಕ ಮಾಡಿತು. ಈ ಸಮಿತಿಯ ಸದಸ್ಯರೆಲ್ಲರೂ ಕಾಲೇಜುಗಳ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದವರು ಆಗಿದ್ದರು. ಈ ಸಮಿತಿಗಳಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಲ್ಲಿ ಬೋಧನೆ ಮಾಡಿದ ಅನುಭವವಿರುವ ಯಾವೊಬ್ಬ ಸದಸ್ಯರು ಇರಲಿಲ್ಲ. ಆದ್ದರಿಂದ ಅವರು ಈ ಹಂತದ ಶಾಲಾ ಮಕ್ಕಳ ಮನೋಸಾಮರ್ಥ್ಯ, ತರಗತಿಯ ಪ್ರಕ್ರಿಯೆಯಲ್ಲಿ ಎದುರಾಗಬಹುದಾದ ಸಮಸ್ಯೆಗಳನ್ನು ಸ್ಪಷ್ಟವಾಗಿ ಅರಿವಿಲ್ಲದವರೂ ಆಗಿದ್ದರು. ಆದರೆ ವಿಷಯ ಪಾಂಡಿತ್ಯವನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ತಮ್ಮ ವಿಷಯ ಪಾಂಡಿತ್ಯವನ್ನು ಆಧರಿಸಿ ಅಂದು ಬಹು ಹೊರೆ ಎನ್ನಿಸುವ ವಿಷಯಗಳನ್ನು ಚರಿತ್ರೆಯ ಪಾಠಗಳಾಗಿ ರಚಿಸಿಕೊಟ್ಟಿದ್ದಾರೆ. ಕ್ರಿ.ಶ. ೧೯೬೪ರ ರಾಷ್ಟ್ರೀಯ ಶಿಕ್ಷಣ ಆಯೋಗದ ನಂತರ ಬಂದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ಭಾರತದ ರಾಜಮನೆತನಗಳ ರಾಜಕೀಯ ಅಂಶಗಳನ್ನು ಪ್ರಧಾನವಾಗಿ ತಿಳಿಯಪಡಿಸುವ ಕಾರ್ಯ ಮಾಡಿದ್ದಾರೆ. ಕೆಲವು ಮನೆತನಗಳ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಕಲೆಯ ಎಂದೆರಡು ವಿಷಯಗಳನ್ನು ಸೇರ್ಪಡೆಗೊಳಿಸಿದ್ದಾರೆ. ಇದರಿಂದ ಅಂದಿನ ಚರಿತ್ರೆಯ ಪಠ್ಯಪುಸ್ತಕ ಭಾರತೀಯ ರಾಜಕೀಯ ಚರಿತ್ರೆಯನ್ನಾಧರಿಸಿದ ಸ್ವರೂಪವನ್ನು ಹೊಂದಿದ್ದವು. ಈ ಸಂದರ್ಭದಲ್ಲಿ ಇದ್ದಂತಹ ಸಮಿತಿಯ ಸದಸ್ಯರೆಲ್ಲರೂ ಮೇಲ್ವರ್ಗದ ಜನ(ಬ್ರಾಹ್ಮಣ)ರಾಗಿದ್ದರಿಂದ ಅವರು ಭಾರತೀಯ

ವೈದಿಕ ಸಂಸ್ಕೃತಿಯನ್ನು ಎತ್ತಿಹಿಡಿಯುವ ಏಕಮುಖಿ ಚರಿತ್ರೆಯ ಪಠ್ಯಪುಸ್ತಕ ರಚನೆಯ ಕಡೆಗೆ ಒಲವು ತೋರಿರುವುದು ಕಂಡುಬಂದಿದೆ.

ಕ್ರಿ.ಶ. ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯೂ ಜಾರಿಗೆ ಬಂದಿತು. ಈ ಸಮಯದಲ್ಲಿ ದೇಶದೆಲ್ಲೆಡೆಯಲ್ಲೂ ಶಿಕ್ಷಣದಲ್ಲಿ ಕ್ರಾಂತಿಯನ್ನುಂಟುಮಾಡಿತು. ಅದರಲ್ಲೂ ಪ್ರಾಥಮಿಕ ಶಿಕ್ಷಣದಲ್ಲಿ ಸಾಕಷ್ಟು ಬದಲಾವಣೆಗೆ ಆದ್ಯತೆ ನೀಡಿತು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದ ಪಠ್ಯಪುಸ್ತಕ ಬದಲಾವಣೆಗೆ ಗಮನ ನೀಡಲಾಯಿತು. ಈ ಸಮಿತಿಯ ಪಠ್ಯಪುಸ್ತಕದ ಕೆಲವು ಶಿಫಾರಸ್ಸುಗಳನ್ನು ಅನ್ವಯಿಸಿಕೊಂಡು ಮತ್ತೆ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಬದಲಾವಣೆಗೆ ಒಳಗಾದವು. ಆದರೆ ಈ ಬದಲಾವಣೆಯೂ ಅಂತಹ ಮಹತ್ತರವಾದುದೇನು ಆಗಿರಲಿಲ್ಲ. ಏಕೆಂದರೆ ಈ ಹಿಂದೆ ಇದ್ದ ಪಠ್ಯಪುಸ್ತಕದ ದೋಷಗಳನ್ನು ತಿದ್ದುವ ಪ್ರಯತ್ನ ನಡೆದರೂ ಕೂಡ ಈ ಪಠ್ಯಪುಸ್ತಕಗಳೂ ಸಾಕಷ್ಟು ದೋಷಗಳಿಂದ ಕೂಡಿರುವುದು ಕಂಡುಬಂದಿದೆ. ಅವುಗಳಲ್ಲಿ ಪ್ರಮುಖವಾಗಿ ಪ್ರಾಥಮಿಕದ ೩ನೆಯ ತರಗತಿಯಲ್ಲಿ ಪ್ರತಿ ಜಿಲ್ಲೆಯ ಚರಿತ್ರೆಯ ಪ್ರಮುಖ ಘಟನಾವಳಿಗಳು ಐತಿಹಾಸಿಕ ಸ್ಥಳಗಳು, ವ್ಯಕ್ತಿಗಳ ಬಗ್ಗೆ ಸಾಕಷ್ಟು ವಿಷಯ ನೀಡಿದ್ದರು. ಆದರೆ ಈ ಹಂತದಲ್ಲಿ ಸ್ಥಳೀಯ ಚರಿತ್ರೆಯ ಪ್ರಾಮುಖ್ಯತೆಯನ್ನು ಕಡೆಗಣಿಸಿ ಅವುಗಳ ಬದಲಾವಣೆಗೆ ಮುಂದಾಯಿತು. ರಾಷ್ಟ್ರೀಯ ಐಕ್ಯತೆಗಳ ಸಂಕೇತಗಳಾದ ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರಲಾಂಛನಗಳ ವಿಷಯಗಳನ್ನು ಪಠ್ಯಪುಸ್ತಕಗಳಿಂದ ಕೈಬಿಡಲಾಗಿದೆ. ಇದಕ್ಕೆ ಪ್ರಮುಖ ಕಾರಣಗಳನ್ನು ಅರಿಯುವ ಪ್ರಯತ್ನಗಳು ನಡೆಸಿದಾಗ ಸರ್ಕಾರ ಧ್ಯೇಯ-ಧೋರಣೆಗಳು ಸೂಕ್ಷ್ಮವಾಗಿ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ನುಸುಳಿಕೊಂಡಿರುವುದು ಕಂಡುಬರುತ್ತದೆ. ಭಾರತ ಒಂದು ಸರ್ವಧರ್ಮ ಸಮನ್ವಯಗಳ ಜಾತ್ಯಾತೀತ ರಾಷ್ಟ್ರವೆಂಬುದು ಅರಿತ ವಿಚಾರ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಧರ್ಮದ ಸಾರವನ್ನು ತಿಳಿಸುವುದು ಚರಿತ್ರೆ ಪಠ್ಯಪುಸ್ತಕದ ಮುಖ್ಯ ಧ್ಯೇಯವಾಗಿರಬೇಕು. ಆದರೆ ಈ ಸಂದರ್ಭದಲ್ಲಿ ಬದಲಾವಣೆಗೊಂಡ ಪಠ್ಯಪುಸ್ತಕಗಳಲ್ಲಿ ಹಿಂದೂ, ಜೈನ, ಬೌದ್ಧ, ಇಸ್ಲಾಂ ಧರ್ಮಗಳ ಸಾರವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆಯಾದರೂ ಕ್ರೈಸ್ತ ಧರ್ಮವನ್ನು ಮರೆತಂತೆ ಕಂಡುಬಂದಿದೆ. ಹೀಗೆ ಇಲ್ಲಿ ಒಂದು ರೀತಿಯಾದ ಕೋಮು ಮನೋಭಾವನೆಯ ವಿಷಕಾರಿ ಬೀಜವನ್ನು ಬಿತ್ತುವ ಪ್ರಯತ್ನಗಳು ನಡೆದಿರಲು ಸಾಧ್ಯವಿದೆ ಎಂದು ಕಂಡುಬಂದಿದೆ. ಇಲ್ಲಿಯೂ ಸಹ ಚರಿತ್ರೆಯ ಪಠ್ಯಪುಸ್ತಕಗಳಲ್ಲಿ ರಾಜಕೀಯ ವಿಷಯಗಳಿಗೆ ಪ್ರಾಧಾನ್ಯತೆ ನೀಡಿರುವುದು ಕಂಡುಬಂದಿದೆ.

ಕ್ರಿ.ಶ. ೨೦೦೦ದಲ್ಲಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟನ್ನು ಆಧರಿಸಿ ಕರ್ನಾಟಕದಲ್ಲಿ ಪ್ರಾಥಮಿಕ ಹಂತದಿಂದ ಪ್ರೌಢ ಹಂತದವರೆಗೆ ಚರಿತ್ರೆ ಪಠ್ಯಪುಸ್ತಕಗಳು ಬದಲಾವಣೆಗೊಂಡವು. ಈ ಸಮಯದಲ್ಲಿ ಪ್ರಾಥಮಿಕ ಶಾಲಾ ತರಗತಿಯ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಬದಲಾವಣೆಗೆ ಅವಕಾಶ ನೀಡಲಾಯಿತು. ಆದರೂ ಸಹ ಅದರಲ್ಲಿ ಚರಿತ್ರೆ ವಿಷಯವನ್ನು ಒಳಗೊಂಡಿದ್ದ ಪಠ್ಯಪುಸ್ತಕಕ್ಕೆ ಪರಿಸರ ಅಧ್ಯಯನ ಎಂಬ ಶೀರ್ಷಿಕೆಯನ್ನು ನೀಡಲಾಯಿತು. ಈ ಶೀರ್ಷಿಕೆಯೂ ಸಾಕಷ್ಟು ಬದಲಾವಣೆ ಆಗುತ್ತಾ ಬಂದಿರುವುದು ಅಧ್ಯಯನದಿಂದ ಕಂಡುಬಂದಿದೆ. ಆದರೆ ಇದು ಸಮಾಜ ಅಲ್ಲ ಎಂಬುದನ್ನು, ಚರಿತ್ರೆಗೆ ಸೂಕ್ತವಾದ ಶೀರ್ಷಿಕೆ ಇಡಬೇಕೆಂದು ಗೊಂದಲ ಉಂಟಾಯಿತು. ಆದರೆ ಸುಪ್ರಿಂಕೋರ್ಟಿನ

ಆದೇಶದ ಅನ್ವಯ ಪರಿಸರ ಜಾಗೃತಿ ವಿಚಾರಗಳು ಪ್ರಾಥಮಿಕ ಹಂತದಲ್ಲಿ ಇರಬೇಕೆಂಬ ಆದೇಶದ ಅನ್ವಯ, ಪರಿಸರ ಅಧ್ಯಯನ ಎಂಬ ಹೆಸರಿನಲ್ಲಿ ಸಮಾಜ ವಿಜ್ಞಾನದ ವಿಷಯಗಳು ಬಂದಿವೆ.

ಎನ್‌ಸಿಎಫ್ ೨೦೦೦ರ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ಬದಲಾಯಿಸಿದಾಗ ಮಕ್ಕಳ ಸಮಾನ ನಾಗರಿಕತೆ ಹಾಗೂ ವೈವಿಧ್ಯತೆಗೆ ಗೌರವ ನೀಡುವ ಆದರ್ಶ ಮತ್ತು ಮೌಲ್ಯಗಳನ್ನು ಗ್ರಹಿಸಿಕೊಳ್ಳಬಹುದಾದ, ರಾಷ್ಟ್ರೀಯ ಅಸ್ಮಿತೆಯನ್ನು, ಸಂಸ್ಕೃತಿಯನ್ನು ಮತ್ತು ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಿಕೊಳ್ಳುವ ಪ್ರಕ್ರಿಯೆಗೆ ದೊಡ್ಡ ಹಿನ್ನೆಡೆ ಉಂಟಾಯಿತು. ಚರಿತ್ರೆ ಪಠ್ಯಪುಸ್ತಕಗಳು ಅಲ್ಪಸಂಖ್ಯಾತರ, ಆದಿವಾಸಿಗಳ, ದಲಿತರ ಮತ್ತು ಮಹಿಳೆಯರ ವಿಷಯಗಳಲ್ಲಿ ಈಗಿರುವ ಸಮಾನತೆಗಳನ್ನು ಗಟ್ಟಿಗೊಳಿಸಿ ಅವನ್ನು ಮುಂದುವರೆಸಿಕೊಂಡು ಬಂದವು. ಕೆಲವು ರಾಜಕೀಯ ಪಕ್ಷಗಳ ಮತ್ತು ನಿರ್ದಿಷ್ಟ ಸಂಸ್ಥೆಗಳ ಸಿದ್ಧಾಂತಗಳಿಗೆ ಅನುಗುಣವಾದ ಸಂಕುಚಿತ ರಾಜಕೀಯ ಉದ್ದೇಶಗಳಿಗಾಗಿ ಶಿಕ್ಷಣವನ್ನು ಬಳಸಿಕೊಳ್ಳುತ್ತಿರುವುದನ್ನು ಪೋಷಕರು ಸಮ್ಮತಿಸಿಲ್ಲ. ಪೋಷಕರಲ್ಲದೇ ಶಿಕ್ಷಣ ತಜ್ಞರು, ವಿದ್ವಾಂಸರ ನಡುವಿನಲ್ಲೂ ದಿಗಲು, ದಿಗ್ಭ್ರಾಂತಿ ಮೂಡಿಸಿದವು. ಇದಲ್ಲದೆ. ಕೋಮುವಾದಿ ನಿಲುವುಗಳು ಕಂಡುಬಂದಾಗ ಸಾರ್ವಜನಿಕರು ರೊಚ್ಚಿಗೆದ್ದರು. ಆಗ ೨೦೦೨ರಲ್ಲಿ ಡಿ.ಎಸ್.ಈ.ಆರ್.ಟಿ ಪಠ್ಯಪುಸ್ತಕಗಳ ಬಗ್ಗೆ ಜೋನ್‌ಸಾಹಿ ಮತ್ತು ಇಂದಿರಾ ವಿಜಯಸಿಂಹ ಜಂಟಿಯಾಗಿ ತಯಾರಿಸಿದ 'ಕರ್ನಾಟಕ ಶಾಲಾ ಪಠ್ಯಪುಸ್ತಕಗಳಲ್ಲಿ ಕೋಮುವಾದಿ ಪಕ್ಷಪಾತಗಳು' ಎಂಬ ವರದಿ ಹಿಂದಿ ಪಠ್ಯಪುಸ್ತಕಗಳಲ್ಲಿದ್ದ ಉತ್ತಮ ಅಂಶಗಳನ್ನು ಸಂಪೂರ್ಣವಾಗಿ ಕೈಬಿಡಲು ಹೇಳಿತು.

ಧಾರ್ಮಿಕ ಮತ್ತು ಸಾಮಾಜಿಕ ಸಂಸ್ಥೆಗಳು ಪಠ್ಯಪುಸ್ತಕಗಳನ್ನು ತಯಾರಿಸುತ್ತಿರುವಾಗ ಸರ್ಕಾರಿ ಪಠ್ಯ ಪುಸ್ತಕಗಳಲ್ಲಿರುವ ಚರಿತ್ರೆಗೆ ಪೂರಕ ಅಂಶಗಳನ್ನು ಸೇರಿಸುವ ಮತ್ತು ತಿದ್ದುವ ಕೆಲಸ ನಡೆಯುತ್ತದೆ. ಉದಾ:- ಗಾಂಧಿ ಮತ್ತು ನೆಹರು ರಾಷ್ಟ್ರೀಯ ನಾಯಕರೆಂದು ಹೇಳುವುದರ ಜೊತೆಗೆ ಹಿಂದುತ್ವದ ಮುಖಂಡರಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಲಾಗುತ್ತಿದೆ. ಸ್ವಾತಂತ್ರ್ಯ ಹೋರಾಟದ ಮುಖ್ಯವಾಹಿನಿಯಿಂದ ಹೇಗೆ ಮುಸ್ಲಿಂ ಕೋಮುವಾದಿ ಮುಖಂಡರು ಪ್ರತ್ಯೇಕಿಸಲ್ಪಟ್ಟರೋ ಅದೇ ರೀತಿ ಹಿಂದುತ್ವ ಮುಖಂಡರೂ ಸ್ವಾತಂತ್ರ್ಯ ಹೋರಾಟದಿಂದ ಹೊರಗುಳಿದಿದ್ದರೆಂಬುದು ಸರ್ವವಿಧಿತ. ಆದುದರಿಂದ ಅಂತಹ ಮುಖಂಡರಿಗೆ ಗಾಂಧಿ, ನೆಹರೂರವರಿಗೆ ನೀಡಿದ ಸ್ಥಾನಮಾನ ನೀಡುವುದು ಚಾರಿತ್ರಿಕ ಸತ್ಯಗಳನ್ನು ತಿರುಚಿದಂತಾಗುತ್ತದೆ. ಆದ್ದರಿಂದ ಅಂತಹ ವ್ಯಕ್ತಿಗಳನ್ನು ಜಾತ್ಯಾತೀತ ಗಣತಂತ್ರವೊಂದರ ಪಠ್ಯಪುಸ್ತಕಗಳಲ್ಲಿ ನಾಯಕರಾಗಿ ಬಿಂಬಿಸಬಾರದು.

ಸತ್ಯ, ಕಲ್ಪನೆ ಮತ್ತು ಪುರಾಣಗಳ ನಡುವೆ ಚರಿತ್ರೆ ಪಠ್ಯಪುಸ್ತಕಗಳಲ್ಲಿ ವ್ಯತ್ಯಾಸಗಳೇ ಇಲ್ಲ. ಚರಿತ್ರೆ ಪಠ್ಯಪುಸ್ತಕಗಳ ಪ್ರಧಾನ ಗುರಿ ಭಾರತ ಹಿಂದಿನಿಂದಲೂ ಒಂದು ಹಿಂದೂ ರಾಷ್ಟ್ರವಾಗಿತ್ತೆನ್ನುವ ಹಿಂದೂ ಕೋಮುವಾದಿ ಕಲ್ಪನೆಯನ್ನು ಮಕ್ಕಳಲ್ಲಿ ತುಂಬಿಸಿ ಹರಡುವುದಾಗಿದೆ. ಹಿಂದೂ ರಾಜರ ಆಳ್ವಿಕೆಯಲ್ಲಿ ಭಾರತ ಅತ್ಯಂತ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತಲ್ಲದೆ ಮುಸ್ಲಿಂ ಆಡಳಿತ ಅವಧಿಗಿಂತ ಮಹತ್ತರವಾದ ಸಾಧನೆಗಳನ್ನು ಮಾಡಲಾಯಿತೆಂದು ಬಿಂಬಿಸಲಾಗಿದೆ. ಆದರೆ

ಭಾರತ ಪ್ರಾಚೀನ ಕಾಲದಿಂದಲೂ ಒಂದು ಬಹುಸಂಸ್ಕೃತಿ, ಬಹುಧರ್ಮಗಳ ಸಮ್ಮಿಲನ ಸಮಾಜವಾಗಿತ್ತೆಂಬ ವಿಷಯಕ್ಕೆ ಈ ಪಠ್ಯಪುಸ್ತಕಗಳು ಒತ್ತು ನೀಡಿಲ್ಲ. ಚರಿತ್ರೆ ಪಠ್ಯಪುಸ್ತಕಗಳಲ್ಲಿ ಮುಸ್ಲಿಮರನ್ನು ಮತ್ತು ಕ್ರೈಸ್ತರನ್ನು ಋಣಾತ್ಮಕವಾಗಿ ಚಿತ್ರಿಸಲಾಗಿದೆ. ಬ್ರಾಹ್ಮಣ ಸಮುದಾಯಕ್ಕೆ ಅನಗತ್ಯ ಪ್ರಾಮುಖ್ಯತೆ ನೀಡಲಾಗಿದೆ. ಜಾತಿ ತಾರತಮ್ಯ, ವರ್ಗಭೇದಗಳ ವಿಷಯದಲ್ಲಿ ಅನುಚಿತ, ಅಸಭ್ಯ ಹಾಗೂ ಕೆಲವೊಮ್ಮೆ ಅವಮಾನಕರ ಅಂಶಗಳು ಸೇರ್ಪಡೆಗೊಂಡಿವೆ. ಶ್ರೇಷ್ಠ ವರ್ಗಗಳ ಮತ್ತು ಪುರುಷ ಪ್ರಧಾನ ದೃಷ್ಟಿಕೋನದಿಂದ ಬರೆದಂತಹ ಈ ಪುಸ್ತಕಗಳಲ್ಲಿ ಭಾರತದ ಗ್ರಾಮಗಳು, ದಲಿತರು, ಆದಿವಾಸಿಗಳು, ಕಾರ್ಮಿಕರು, ಮಹಿಳೆಯರು ಮುಂತಾದ ವಿಷಯಗಳ ಕುರಿತು ಸಾಕಷ್ಟು ಪ್ರಾಮುಖ್ಯತೆಯನ್ನು ನೀಡಲಾಗಿಲ್ಲ. ಸರ್ಕಾರಿ ಪಠ್ಯಪುಸ್ತಕಗಳು ಕೂಡ ಧಾರ್ಮಿಕ, ಪ್ರಾದೇಶಿಕ ಮತ್ತು ಲಿಂಗ ಪಕ್ಷಪಾತಗಳನ್ನು ಒಂದು ಸೂಕ್ಷ್ಮವಾದ ರೀತಿಯಲ್ಲಿ ಮುಂದುವರೆಸಿಕೊಂಡು ಹೋಗಿವೆ. ಆದರೆ ಇಂತಹ ಪಠ್ಯಪುಸ್ತಕ ಕೆಲವೊಂದು ಸತ್ಯಾಂಶಗಳನ್ನು ಸೇರಿಸಿ ವೈಜ್ಞಾನಿಕ ಗುಣಮಟ್ಟವನ್ನು, ಶಿಕ್ಷಣದ ಪಾಂಡಿತ್ಯದ ಮಹತ್ವವನ್ನು ತಗ್ಗಿಸುವುದರಿಂದ ಅಂತಿಮವಾಗಿ ದೇಶದ ಭವಿಷ್ಯಕ್ಕೆ ಅಪಾರ ಹಾನಿಯುಂಟಾಗುತ್ತದೆ. ಸಂವಿಧಾನದ ಆಶಯವಾಗಿರುವ ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಗಣತಂತ್ರ ಭಾರತವನ್ನು ನಾಶಪಡಿಸುವ ಇಂತಹ ಅಪಾಯಕಾರಿ ವಿಚಾರಗಳನ್ನು ಪಠ್ಯಪುಸ್ತಕಗಳಲ್ಲಿ ತಡೆಯುವ ಅಗತ್ಯತೆ ಇದೆ.

ಇಂತಹ ಎಲ್ಲಾ ದೋಷಗಳನ್ನು ಒಳಗೊಂಡ ಪಠ್ಯಪುಸ್ತಕಗಳಲ್ಲಿ ಬದಲಾವಣೆಯನ್ನು ತರಲು ಕೇಂದ್ರ ಶಿಕ್ಷಣ ಸಲಹಾ ಮಂಡಳಿಯು ೨೦೦೫ರಲ್ಲಿ ಕೆಲವು ಶಿಫಾರಸ್ಸುಗಳನ್ನು ನೀಡಿತು. ಆದರೆ ಕರ್ನಾಟಕದಲ್ಲಿ ಅದು ತಡವಾಗಿ ೨೦೧೨-೧೩ನೇ ಸಾಲಿನಿಂದ ಬಂದಿದೆ. ಈ ಪಠ್ಯಪುಸ್ತಕಗಳು ಸಹ ಬದಲಾವಣೆಗೆ ಆದ್ಯತೆ ನೀಡುವ ಉದ್ದೇಶದಿಂದ ಸಾಕಷ್ಟು ಪ್ರಯತ್ನಗಳನ್ನು ಮಾಡಿದವು. ಈ ಪಠ್ಯಪುಸ್ತಕಗಳು ರಾಷ್ಟ್ರೀಯ ಪಠ್ಯ ಚೌಕಟ್ಟು ೨೦೦೫ರ ನಿಯಮಗಳನ್ನು ಆಧಾರವಾಗಿರಿಸಿಕೊಂಡು ರೂಪುಗೊಂಡಿವೆ. ಅದರಲ್ಲಿ ೫ನೆಯ ತರಗತಿ ಮೊದಲ ಸೆಮಿಸ್ಟರ್ ಸಮಾಜ ವಿಜ್ಞಾನ ಕೋರ್ ವಿಷಯದಲ್ಲಿ ಚರಿತ್ರೆ ಪಠ್ಯವಿಷಯಗಳಲ್ಲಿ ಮೊದಲ ಅಧ್ಯಾಯ ಬದಲಾವಣೆ ಆಗಿದೆ. ಇದು ಕರ್ನಾಟಕ ವಿಭಾಗೀಯ ಸ್ಥಳೀಯ ಚರಿತ್ರೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಸೇರಿಸುವ ಪ್ರಯತ್ನ ನಡೆದಿದೆ. ಆದರೆ ಈ ಚರಿತ್ರೆ ಪಠ್ಯಪುಸ್ತಕವು ಕೇಸರೀಕರಣಗೊಂಡಿದೆ ಎಂದು ರಾಜ್ಯದ ದೊಡ್ಡ ದೋಷಾರೋಪಗಳು, ಚರ್ಚೆಗಳು, ಹೋರಾಟಗಳು ನಡೆದವು. ಇಂತಹ ಹೋರಾಟಗಳು ಸಣ್ಣ ಪ್ರಮಾಣದ ಬದಲಾವಣೆಯನ್ನು ಪಠ್ಯಪುಸ್ತಕಗಳಲ್ಲಿ ಮಾಡುವ ಪ್ರಯತ್ನವನ್ನು ಮಾಡಿವೆ. ಇದರಿಂದ ಇಂದು ಕೇವಲ ಮಕ್ಕಳು, ಶಿಕ್ಷಕರು, ಪೋಷಕರು ಮಾತ್ರವೇ ಚರಿತ್ರೆಯ ಪಠ್ಯಪುಸ್ತಕಗಳನ್ನು ಅಭ್ಯಾಸ ಮಾಡುವುದಿಲ್ಲ. ಸಾಹಿತಿಗಳು, ವಿದ್ವಾಂಸರು, ವಿಚಾರವಂತರು ಹೀಗೆ ಅನೇಕರು ಪಠ್ಯಪುಸ್ತಕಗಳನ್ನು ಗಮನಿಸುತ್ತಿರುತ್ತಾರೆ. ಆದ್ದರಿಂದ ಅವರ ವಿಚಾರವಂತಿಕೆಗೆ ಎಲ್ಲಿಯೂ ದೋಷಗಳು ಕಂಡು ಬಾರದ ರೀತಿಯಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಹೊರಬರಬೇಕಿದೆ. ಈ ಪಠ್ಯಪುಸ್ತಕಗಳಲ್ಲಿ ಶಾಲಾ ತರಗತಿಯಲ್ಲಿ ಬೋಧನೆ ಮಾಡುವ ಅನುಭವಿ ಶಿಕ್ಷಕರಿಗೆ ಚರಿತ್ರೆ ಪಠ್ಯಪುಸ್ತಕಗಳನ್ನು ರಚಿಸುವ ಹೆಚ್ಚಿನ ಹೊಣೆಗಾರಿಕೆಯನ್ನು ನೀಡಲಾಗಿದೆ. ಆದ್ದರಿಂದ ಅವರು ಮಕ್ಕಳ ವಯೋಮಾನ ಸಾಮರ್ಥ್ಯಕ್ಕೆ ಅನುಗುಣವಾದ ವಿಷಯಗಳನ್ನು ಸೇರ್ಪಡೆ ಮಾಡಿದ್ದಾರೆ.

## ಅಧ್ಯಯನದ ಫಲಿತಗಳು

* ಸ್ವಾತಂತ್ರ್ಯಪೂರ್ವದಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಭಾರತೀಯ ವಿದ್ಯಾವಂತ ವರ್ಗದಿಂದ ಬರೆಯಲ್ಪಟ್ಟಿದ್ದರೂ ಅವರು ವಸಾಹಾತುಶಾಹಿ ನೀತಿಯ ಮನೋಭಾವನೆಯಿಂದ ಪಠ್ಯಪುಸ್ತಕಗಳನ್ನು ಬರೆದಿರುವುದು ಕಂಡುಬಂದಿದೆ.

* ಸ್ವಾತಂತ್ರ್ಯಪೂರ್ವದಲ್ಲಿ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಮಾಧ್ಯಮಿಕ ಶಾಲಾ ತರಗತಿಯಲ್ಲಿ ಬ್ರಿಟಿಷ್ ಅಧಿಕಾರಿ ವರ್ಗದವರ ಸಾಧನೆಗಳನ್ನು ಚಿತ್ರಿಸುವ ಪ್ರಯತ್ನ ನಡೆದಿರುವುದು ಕಂಡುಬಂದಿದೆ.

* ಸ್ವಾತಂತ್ರ್ಯಪೂರ್ವದಲ್ಲಿ ಕರ್ನಾಟಕದ ಎಲ್ಲಾ ಭಾಗಗಳಿಗೂ ಏಕರೂಪವಾದ ಚರಿತ್ರೆ ಪಠ್ಯಪುಸ್ತಕಗಳು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಲ್ಲಿ ಇಲ್ಲದಿರುವುದು ಕಂಡುಬಂದಿದೆ. ಆದರೆ ಹೆಚ್ಚಿನ ಭಿನ್ನತೆಗಳು ಇರಲಿಲ್ಲ.

* ಸ್ವಾತಂತ್ರ್ಯೋತ್ತರದಲ್ಲಿ ೧೯೬೪ರ ನಂತರ ಕರ್ನಾಟಕದಲ್ಲಿ ಎಲ್ಲಾ ತರಗತಿಗೆ ಏಕ ಸ್ವರೂಪದ ಪಠ್ಯಪುಸ್ತಕಗಳನ್ನು ರಚಿಸಲು ತೀರ್ಮಾನ ಕೈಗೊಂಡಿದ್ದು ಅದರಂತೆ ಹಂತ ಹಂತವಾಗಿ ಜಾರಿಗೆ ಬಂದಿರುವುದು ಕಂಡುಬಂದಿದೆ.

* ಈ ಸಂದರ್ಭದಲ್ಲಿ ರಚನಗೊಂಡ ಕೆಲವು ತರಗತಿಯ ಚರಿತ್ರೆ ಪಠ್ಯಪುಸ್ತಕಗಳಲ್ಲಿ ವಸಾಹತುಶಾಹಿ ಚರಿತ್ರೆಯ ಬರವಣಿಗೆಯ ಅಂಶಗಳು ಅಲ್ಲಲ್ಲಿ ಉಳಿದುಕೊಂಡಿರುವ ಅಂಶಗಳು ಗಮನಕ್ಕೆ ಬಂದಿವೆ.

* ಪ್ರಾಥಮಿಕ ಮೂರನೆಯ ತರಗತಿಗೆ ಇದ್ದ ಚರಿತ್ರೆ ಪಠ್ಯಪುಸ್ತಕಗಳು ಪ್ರತಿ ಜಿಲ್ಲೆಗೆ ಒಂದರಂತೆ ಪ್ರತ್ಯೇಕವಾದ ಪಠ್ಯಪುಸ್ತಕಗಳನ್ನು ಒಳಗೊಂಡಿರುವುದು ತಿಳಿದುಬಂದಿದೆ. ಈ ಪಠ್ಯಪುಸ್ತಕಗಳಲ್ಲಿ ಆ ಜಿಲ್ಲೆಗಳ ಸ್ಥಳೀಯ ಐತಿಹಾಸಿಕ ವ್ಯಕ್ತಿಗಳ, ಸ್ಮಾರಕಗಳ ಬಗ್ಗೆ ಅಷ್ಟೇ ಅಲ್ಲದೆ ಮಠಾಧೀಶರ ಬಗ್ಗೆ ಮಾಹಿತಿ ನೀಡಿ, ಮುಸ್ಲಿಂ, ಕ್ರಿಶ್ಚಿಯನ್, ಜೈನ, ಬೌದ್ಧ ಇತರೆ ಧರ್ಮಾಧೀಶರುಗಳನ್ನು ಕಡೆಗಣನೆ ಮಾಡಲಾಗಿದೆ.

* ಸ್ವಾತಂತ್ರ್ಯ ಬಂದ ನಂತರದಲ್ಲಿ ಮೊದಲ ಬಾರಿಗೆ ಚರಿತ್ರೆ ಪಠ್ಯಪುಸ್ತಕಗಳು ಬದಲಾದಾಗ ಅವುಗಳಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸುವ ಅಂಶಗಳ ಕಡೆಗೆ ಹೆಚ್ಚು ಒತ್ತನ್ನು ನೀಡಿರುವ ಅಂಶಗಳು ಬೆಳಕಿಗೆ ಬಂದಿವೆ. ಆದರೆ ಮುಂದಿನ ಪಠ್ಯಪುಸ್ತಕಗಳಲ್ಲಿ ಈ ಅಂಶಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿಲ್ಲ.

* ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಶಿಫಾರಸ್ಸಿನ ಅನ್ವಯ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಬದಲಾವಣೆಗೊಂಡಿವೆ. ಬದಲಾದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಮಹತ್ವದ ಬದಲಾವಣೆಗಳು ಹೆಚ್ಚೇನೂ ಆಗದಿದ್ದರೂ ಹಿಂದೆ ಇದ್ದ ಕೆಲವು ಒಳ್ಳೆಯ ಅಂಶಗಳನ್ನು ಕೈಬಿಡುವ ಮತ್ತು ಕೆಲವನ್ನು ಸೇರ್ಪಡೆಗೊಳಿಸುವ ಕಾರ್ಯ ನಡೆದಿದೆ.

* ೨೦೦೨ರ ನಂತರ ಬದಲಾದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳ ಪಠ್ಯಗಳು ಮತ್ತೆ ಹೆಚ್ಚು ಕೋಮು ಮನೋಭಾವನೆ ಮೂಡಿಸುವಂತಹ, ಜಾತ್ಯಾತೀತ

ವಿಚಾರಗಳಿಗೆ ಹೆಚ್ಚು ಒತ್ತನ್ನು ನೀಡದೇ ಇರುವುದು ಕಂಡುಬಂದಿದೆ. ಆದರೆ ನಂತರದಲ್ಲಿ ಕೆಲವು ಧ್ವನಿಗಳು ಈ ಪಠ್ಯಪುಸ್ತಕದ ವಿರುದ್ಧ ಎದ್ದಾಗ ಅಂತಹ ಅಂಶಗಳನ್ನು ಕೈಬಿಟ್ಟಿರುವುದು ಬೆಳಕಿಗೆ ಬಂದಿದೆ.

೨೦೧೨-೧೩ರಲ್ಲಿ ಎನ್.ಸಿ.ಎಫ್-೨೦೦೫ರ ರಾಷ್ಟ್ರೀಯ ಪಠ್ಯ ಚೌಕಟ್ಟಿನ ನೆಲೆಗಟ್ಟಿನಲ್ಲಿ ಪಠ್ಯಪುಸ್ತಕಗಳು ಬದಲಾದವು. ಈ ಪಠ್ಯಪುಸ್ತಕಗಳಲ್ಲಿ ವಿಭಾಗವಾರು ಚರಿತ್ರೆಯ ಐತಿಹಾಸಿಕ ಮಹತ್ವದ ಘಟನೆಗಳು, ಸಾಹಿತಿಗಳು, ಕವಿಗಳು, ನಾಟಕಕಾರರು, ಸಂಸ್ಕೃತಿ ಮುಂತಾದ ವಿಚಾರ ಬಗ್ಗೆ ೫ನೆಯ ತರಗತಿಯ ಮೊದಲ ಅಧ್ಯಾಯದಲ್ಲಿ ಅಳವಡಿಸಲಾಯಿತು. ಆದರೆ ಇಲ್ಲಿ ಗುಲಬರ್ಗಾ ವಿಭಾಗದಲ್ಲಿ ಮುಸ್ಲಿಂ ಮುಖಂಡರಿಗೆ ಹೆಚ್ಚಿನ ಪ್ರಾಶಸ್ತ್ಯ ಸಿಕ್ಕಿಲ್ಲ ಎಂಬ ಆಪಾದನೆ ಕಂಡುಬಂದಿದೆ.

೨೦೧೨-೧೩ರಲ್ಲಿ ಹೊರಬಂದ ಐದನೆಯ ತರಗತಿಯ ಚರಿತ್ರೆ ಪಠ್ಯಪುಸ್ತಕವು ಕೇಸರೀಕರಣಗೊಂಡಿದೆ ಎಂದು ಆಪಾದನೆ ಮಾಡಿ ಅನೇಕ ಪ್ರತಿಭಟನೆ ಮತ್ತು ಹೋರಾಟಗಳು ನಡೆದವು. ಆದರೆ ಈ ಪ್ರತಿಭಟನೆಗಳು ರಾಜಕೀಯ ಪ್ರೇರೇಪಿತವಾದ ಉದ್ದೇಶವನ್ನು ಒಳಗೊಂಡು ನಡೆಸಿದವು. ಆದರೆ ಅವರು ಆಪಾದನೆ ಮಾಡಿದ ವಿಚಾರಗಳು ಸತ್ಯಕ್ಕೆ ದೂರವಾದ ಅಂಶಗಳಾಗಿದ್ದವು. ಇವರ ಬಗ್ಗೆ ಸೂಕ್ತ ಪ್ರತಿಕ್ರಿಯೆಯು ಪಠ್ಯಪುಸ್ತಕ ರಚನಾ ಮಂಡಳಿಯಿಂದ ದೊರಕಿತು.

ಪಠ್ಯಪುಸ್ತಕಗಳನ್ನು ರಚಿಸಲು ಸರ್ಕಾರವು ರಚನಾ ಮಂಡಳಿಯ ನಿರ್ದೇಶಕರನ್ನು ಆಯ್ಕೆ ಮಾಡುತ್ತದೆ. ಇವರು ಪ್ರತ್ಯೇಕ ವಿಷಯಕ್ಕೆ ಅನುಗುಣವಾದ ಪಠ್ಯಪುಸ್ತಕ ರಚನಾ ಸಮಿತಿಯನ್ನು ತಯಾರಿಸಿ ಸರ್ಕಾರದಿಂದ ಅನುಮೋದನೆ ಪಡೆದುಕೊಳ್ಳುತ್ತಾರೆ. ಆದರೆ ಹಿಂದಿನ ಎಲ್ಲಾ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಕಾಲೇಜು ಉಪನ್ಯಾಸಕರು, ಪಠ್ಯಪುಸ್ತಕ ರಚನಾ ಮಂಡಳಿಯ ಸದಸ್ಯರಿರುವುದು ಕಂಡುಬಂದಿದೆ. ಇವರು ಮಕ್ಕಳ ವಯೋಸಾಮರ್ಥ್ಯಕ್ಕೆ ಹೆಚ್ಚಿನ ಆದ್ಯತೆ ನೀಡಿ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಲು ಸಮರ್ಥರಾಗುವುದಿಲ್ಲ. ಹಾಗಾಗಿ ಬದಲಾದ ಸಮಿತಿಯಲ್ಲಿ ಶಾಲಾ ಶಿಕ್ಷಕರಿಗೆ ಅವಕಾಶ ಕಲ್ಪಿಸಬೇಕಾಗಿದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದಲ್ಲಿ ಬದಲಾದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಪ್ರಭುತ್ವಗಳ ಅಜೆಂಡಾಗಳು ಸೂಕ್ಷ್ಮವಾಗಿ ನುಸುಳಿಸಿಕೊಂಡಿರುವ ಅಂಶಗಳು ಬೆಳಕಿಗೆ ಬಂದಿವೆ. ಆದ್ದರಿಂದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಪ್ರಭುತ್ವಗಳು ತಮ್ಮ ಧ್ಯೇಯ-ಧೋರಣೆಗಳನ್ನು ಬದಿಗೊತ್ತಿ ಜಾತ್ಯಾತೀತ, ಸರ್ವಧರ್ಮ ಸಮನ್ವಯ, ಸಂವಿಧಾನ ಆಧಾರಿತ ಚರಿತ್ರೆ ಪಠ್ಯಪುಸ್ತಕಗಳ ರಚನೆ ಬಗ್ಗೆ ಗಮನಹರಿಸಬೇಕಿದೆ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಗಳಲ್ಲಿ ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ವಸಾಹತುಶಾಹಿವಾದಿ, ಜಾತ್ಯಾತೀತವಾದಿ, ಎಡಪಂಥೀಯ ಮತ್ತು ಬಲಬಂಥೀಯ ಎಂಬ ಚರಿತ್ರೆ ರಚನಾಕ್ರಮವು ಮುಖ್ಯವಲ್ಲ. ಏಕೆಂದರೆ ಈ ಹಂತದಲ್ಲಿ ಹೇಳುವ ಚರಿತ್ರೆಯೂ ಮಕ್ಕಳ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯುವುದರಿಂದ ಹಿಂದೆ ಬಂದಿರುವ ಎಲ್ಲಾ

ಬಲಪಂಥೀಯ ಚರಿತ್ರೆಯ ಬರವಣಿಗೆಯ ವಿಚಾರಗಳ ಜೊತೆಗೆ ಎಡಪಂಥೀಯ ವಿಚಾರಗಳಿಗೆ ಸೂಕ್ತ ಆದ್ಯತೆ ನೀಡಿ ದೋಷಮುಕ್ತವಾಗಿ ಮಾಡುವ ಸವಾಲು ಮುಂದಿದೆ.

* ಇದುವರೆಗೆ ಬಂದಿರುವ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ತರಗತಿಯ ಪಠ್ಯಪುಸ್ತಕಗಳಲ್ಲಿ ಸ್ಥಳೀಯ ಚರಿತ್ರೆ, ಮಹಿಳಾ ಚರಿತ್ರೆ, ಜನಸಾಮಾನ್ಯರ ಚರಿತ್ರೆಗೆ ಹೆಚ್ಚಿನ ಆದ್ಯತೆ ಕಂಡುಬಂದಿಲ್ಲ. ಆದ್ದರಿಂದ ಈ ವಿಷಯಗಳ ಕಡೆಗೆ ಇನ್ನೂ ಹೆಚ್ಚಿನ ಗಮನಹರಿಸಿ ಅಂತಹ ವಿಚಾರಗಳನ್ನು ಶೀಘ್ರವಾಗಿ ಸೇರ್ಪಡೆಗೊಳಿಸಬೇಕಿದೆ.

* ೨೦೧೨ರಲ್ಲಿ ಬದಲಾದ ೫ನೇ ತರಗತಿಯಿಂದ ೭ನೇ ತರಗತಿವರೆಗಿನ ಪಠ್ಯಪುಸ್ತಕಗಳು ಪಠ್ಯಸೂಚಿಯಲ್ಲಿನ ಉದ್ದೇಶಗಳು ಮತ್ತು ಚಟುವಟಿಕೆಗಳನ್ನು ಪರಿಪೂರ್ಣವಾಗಿ ಆಧಾರವಾಗಿಟ್ಟು ಕೊಂಡು ರಚಿಸುವಲ್ಲಿ ವಿಫಲತೆಗೊಂಡಿರುವುದು ಕಂಡುಬರುತ್ತದೆ.

ಪ್ರಸ್ತುತ ಶಾಲಾ ತರಗತಿಯ ಚರಿತ್ರೆ ಪಠ್ಯಪುಸ್ತಕಗಳ ಬಗ್ಗೆ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಪೋಷಕರ ಅಭಿಪ್ರಾಯದಲ್ಲಿ ಬೌದ್ಧಿಕ ಸಾಮರ್ಥ್ಯ ಹೊರೆಯಾಗಿರುವುದು, ಸ್ಥಳೀಯ ಚರಿತ್ರೆಗೆ ಪ್ರಾಧ್ಯಾನತೆ ನೀಡುವ ಬಗ್ಗೆ, ಸಾಂಸ್ಕೃತಿಕ ವಿಚಾರ ಸೇರ್ಪಡೆಯ ಬಗ್ಗೆ ಪಠ್ಯಪುಸ್ತಕಗಳು ಬದಲಾಗಬೇಕು ಎಂದು ತಿಳಿಸಿದ್ದಾರೆ. ಆದರೆ ಶಿಕ್ಷಕರು ತಾವು ಬೋಧನೆ ಮಾಡುವುದಕ್ಕಿಂತ, ಇಂದು ಶಿಕ್ಷಣದ ಆಡಳಿತ ವಿಚಾರದಲ್ಲಿ ಹಾಗೂ ಹೆಚ್ಚು ಹೊಸ ಹೊಸ ಯೋಜನೆಗಳ ಜವಾಬ್ದಾರಿಯನ್ನು ನೀಡುತ್ತಿರುವುದರಿಂದ ಅವರಿಗೆ ಈ ಪಠ್ಯಪುಸ್ತಕಗಳು ಕಠಿಣ ಎನಿಸಿವೆ. ಆದರೆ ಸೂಕ್ತವಾಗಿ ಗಮನಹರಿಸಿದರೆ ಇದು ಕಠಿಣವಲ್ಲ. ಮಕ್ಕಳಿಗೂ ಕಷ್ಟವಾಗಲಾರದು. ಏಕೆಂದರೆ ಐ.ಸಿ.ಎಸ್.ಸಿ. ಮತ್ತು ಸಿ.ಬಿ.ಎಸ್.ಸಿ. ಪುಸ್ತಕಗಳಿಗೆ ಹೋಲಿಸಿದರೆ ಕಠಿಣ ಇಲ್ಲವೆಂದು ಹೇಳಬಹುದು.

ಪಠ್ಯಪುಸ್ತಕಗಳಿಂದಲೇ ಎಲ್ಲಾ ಆಗುವುದಿಲ್ಲ. ತುಂಬ ಇತಿಮಿತಿಗಳಿವೆ ಎಂಬುದು ನಿಜ. ಆದರೆ ಪರ್ಯಾಯ ಕಲಿಕೆಯ ಸಾಮಗ್ರಿಗಳಿಲ್ಲದ ಗ್ರಾಮೀಣ ಪ್ರದೇಶಗಳಲ್ಲಿ ಮಕ್ಕಳಿಗೆ ಪಠ್ಯಪುಸ್ತಕಗಳೇ ಸರ್ವಸ್ವ. ಪಠ್ಯಪುಸ್ತಕಗಳು ಈ ಮಕ್ಕಳ ವಿಮೋಚನೆಯ ಸಾಧನವೆಂದರೂ ಉತ್ಪ್ರೇಕ್ಷೆಯಲ್ಲ. ಏನೇ ಆಗಲಿ ಪಠ್ಯಪುಸ್ತಕಗಳು ಪಠ್ಯಕ್ರಮದ ಆಶಯಗಳಿಗೆ ಮೂರ್ತ ಸ್ವರೂಪ ನೀಡುವುದೇ ಮಾಧ್ಯಮ. ಪಠ್ಯಪುಸ್ತಕಗಳ ರಚನೆಯಂತಹ ಕಾರ್ಯದಲ್ಲಿ ಭಾಗವಹಿಸುವವರೆಲ್ಲರ ನಿಲುವುಗಳು ಕೇಸರೀಕರಣ, ಹಸಿರೀಕರಣ, ಎಡ, ಬಲ ಮೊದಲಾದ ಪೂರ್ವಗ್ರಹಗಳಿಂದ ಮುಕ್ತವಾಗಿರಬೇಕು. ಸಾಮಾಜಿಕ ಚಿಂತನೆ ವೈಚಾರಿಕತೆಯ ನೆಲೆಗಟ್ಟು ಹಾಗೂ ಆರೋಗ್ಯಕರ ಚರ್ಚೆಗಳ ಆಧಾರದ ಮೇಲೆ ಈ ಕಾರ್ಯ ನಡೆಯಬೇಕಿದೆ. ಭಾರತದ ಭವಿಷ್ಯ ಶಾಲೆ ಕೊಠಡಿಯಲ್ಲಿ ಅಡಗಿದ್ದರೆ, ಅಭಿವೃದ್ಧಿ, ಪ್ರಗತಿ ವಿದ್ಯಾರ್ಥಿಗಳಿಂದ ಸಾಧ್ಯ. ಅದಕ್ಕೆ ಪಠ್ಯಕ್ರಮ ಕಾರಣ. ಉತ್ತಮ ಪಠ್ಯಗಳಿದ್ದರೆ ಒಳ್ಳೆಯ ದೇಶ ನಿರ್ಮಾಣ, ನಾಗರಿಕತೆ, ಸಂಸ್ಕೃತಿ, ಅಜ್ಞಾನ ನಿವಾರಣೆ, ನಿರುದ್ಯೋಗ ನಿವಾರಣೆ, ಸಮೃದ್ಧಿಯನ್ನು, ಪ್ರಗತಿಯನ್ನು ಸಾಧಿಸಲು ಸಾಧ್ಯ.

ಸ್ವಾತಂತ್ರ್ಯಗೊಂಡ ನಂತರ ಕ್ರಿ.ಶ. ೧೯೬೪ರ ನಂತರ ಕರ್ನಾಟಕದಲ್ಲಿ ಚರಿತ್ರೆ ಪಠ್ಯಪುಸ್ತಕಗಳು ಶೈಕ್ಷಣಿಕವಾಗಿ ಏಕಸ್ವರೂಪವನ್ನು ಪಡೆದುಕೊಂಡವು. ಈ ಸಂದರ್ಭದಲ್ಲಿ ಬಂದಂತಹ ಪಠ್ಯಪುಸ್ತಕಗಳು ಸ್ವಾತಂತ್ರ್ಯಪೂರ್ವದಲ್ಲಿದ್ದ ಕೆಲವು ವಿಷಯಗಳನ್ನು ಮುಂದುವರೆಸಿಕೊಂಡು ಬದಲಾವಣೆ

ಮಾಡಿಕೊಂಡವು. ಈ ಸಂದರ್ಭದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ರಾಷ್ಟ್ರೀಯ ಲಾಂಛನ, ರಾಷ್ಟ್ರಧ್ವಜ, ರಾಷ್ಟ್ರೀಯ ಚಿನ್ಹೆ, ರಾಷ್ಟ್ರೀಯ ಹೋರಾಟರರ ಬಗ್ಗೆ ಹೆಚ್ಚು ತಿಳಿಸುವ ಪ್ರಯತ್ನವನ್ನು ಪಠ್ಯಪುಸ್ತಕ ರಚನಾ ಸಮಿತಿ ಮಾಡಿದೆ. ಇದಕ್ಕೆ ಅಂದಿನ ಪ್ರಭುತ್ವಗಳ ಒತ್ತಡಗಳು ಪ್ರಮುಖವಾಗಿ ಕಂಡು ಬರುತ್ತದೆ. ೧೯೭೪ರ ನಂತರ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಹಿನ್ನೆಲೆಯಲ್ಲಿ ಪುನಃ ಚರಿತ್ರೆ ಪಠ್ಯಪುಸ್ತಕಗಳು ಬದಲಾದವು. ಈ ಪಠ್ಯಪುಸ್ತಕಗಳ ಸ್ವರೂಪದಲ್ಲಿ ಮಹತ್ವದ ಬದಲಾವಣೆ ಮಾಡಿರುವುದನ್ನು ಅಧ್ಯಾಯ ೫ರಲ್ಲಿ ಗುರುತಿಸಿದ್ದು ಸ್ಪಷ್ಟ. ಈ ಸಂದರ್ಭದಲ್ಲಿ ಪ್ರಮುಖವಾಗಿ ಸ್ಥಳೀಯ, ಪ್ರಾದೇಶಿಕ ವಿಷಯಗಳನ್ನು ಅಳವಡಿಸಿರುವುದು ಗಮನಾರ್ಹ. ಇದಲ್ಲದೆ ಹಿಂದಿನ ಕೆಲವು ಚರಿತ್ರೆ ಸಂಗತಿಗಳನ್ನು ಕೈಬಿಡಲಾಗಿದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಒಲವುಗಳನ್ನು ಈ ಚರಿತ್ರೆ ಪಠ್ಯಪುಸ್ತಕಗಳು ಸಂಪೂರ್ಣವಾಗಿ ಈಡೇರಿಸುವ ಪ್ರಯತ್ನ ಮಾಡಿಲ್ಲದಿರುವುದು ಕಂಡು ಬರುತ್ತದೆ. ೧೯೮೬ರ ನಂತರ ೨೦೦೨ರ ಎನ್.ಸಿ.ಎಫ್‌ನ ಆಶಯದಂತೆ ಪುನಃ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಹಿಂದಿನ ಪಠ್ಯಪುಸ್ತಕದ ವಿಷಯಗಳಲ್ಲಿನ ಸ್ವರೂಪವನ್ನು ಆಧಾರವಾಗಿಟ್ಟುಕೊಂಡು ಸ್ವಲ್ಪಮಟ್ಟಿನ ಬದಲಾವಣೆ ಮಾಡಲಾಗಿದೆ. ಇದರಲ್ಲಿ ಚಿತ್ರಗಳಿಗೆ, ನಕ್ಷೆಗಳಿಗೆ, ಚಟುವಟಿಕೆಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡಲಾಗಿದೆ. ಇದಲ್ಲದೆ ಕಾಲ, ಸ್ಥಳದ ಬಗ್ಗೆ ಈ ಸಂದರ್ಭದ ಚರಿತ್ರೆ ಪಠ್ಯಪುಸ್ತಕಗಳು ಆಕರ್ಷಿಸುವಂತೆ ಬದಲಾವಣೆಗೊಂಡಿವೆ. ೨೦೦೨ರ ನಂತರ ಮತ್ತು ೨೦೦೫ರ ಎನ್.ಸಿ.ಎಫ್‌ನ ಆಶಯದಂತೆ ೨೦೧೨ರಲ್ಲಿ ಪುನಃ ಪಠ್ಯಪುಸ್ತಕಗಳ ಸ್ವರೂಪದಲ್ಲಿ ಬದಲಾವಣೆ ಮಾಡಲಾಗಿದೆ. ಈ ಪಠ್ಯಪುಸ್ತಕಗಳು ನಿರ್ದಿಷ್ಟ ಸಮಿತಿಯು ರಚಿಸಿದ ಪಠ್ಯಸೂಚಿಗೆ ಅನುಗುಣವಾಗಿ ಪಠ್ಯಪುಸ್ತಕ ರಚಿಸುವ ಕಾರ್ಯ ಮಾಡಿದೆ. ೨೦೧೨ರಲ್ಲಿ ಹೊರಬಂದ ಐದನೆಯ ತರಗತಿಯ ಚರಿತ್ರೆಯ ಮೊದಲ ಅಧ್ಯಾಯದಲ್ಲಿ ರಾಜ್ಯದ ನಾಲ್ಕು ವಿಭಾಗಗಳಿಗೆ ವಿಭಿನ್ನವಾದ ಚರಿತ್ರೆಯನ್ನು ಅಳವಡಿಸಿದೆ. ಪ್ರತಿಯೊಂದು ವಿಭಾಗ ಪ್ರಾದೇಶಿಕ ಮಹತ್ವ ತಿಳಿಸುವ ಪ್ರಯತ್ನದಿಂದಾಗಿ ಐತಿಹಾಸಿಕ ಸ್ಥಳಗಳು, ವ್ಯಕ್ತಿಗಳು, ಕವಿಗಳು, ಸಾಹಿತಿಗಳು, ನಾಟಕಕಾರರು, ಸಿನಿಮಾ ನಾಯಕರು, ವನ್ಯಧಾಮ, ಪಕ್ಷಿಧಾಮ ಇತ್ಯಾದಿ ವಿಷಯಗಳಿಗೆ ಆದ್ಯತೆ ನೀಡಿದ್ದಾರೆ. ಇದು ಪಠ್ಯಪುಸ್ತಕ ರಚನಾ ಸ್ವರೂಪ ಪ್ರಮುಖ ಬದಲಾವಣೆಯಾಗಿದೆ. ಆದರೂ ಸಹ ೧೯೭೪-೨೦೧೨ರವರೆಗಿನ ಬದಲಾದ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಆರಂಭದಲ್ಲಿ ರಾಜಮನೆತನಗಳ ರಾಜಕೀಯ ಚರಿತ್ರೆಗೆ ಹೆಚ್ಚು ಒತ್ತಡ ನೀಡುತ್ತಿದ್ದರು. ಆದರೆ ಬದಲಾದ ಪಠ್ಯಪುಸ್ತಕಗಳಲ್ಲಿ ರಾಜಕೀಯ ಚರಿತ್ರೆಯ ಜೊತೆಗೆ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಕಲೆ, ವಾಸ್ತುಶಿಲ್ಪದಂತಹ ವಿಷಯಗಳು ಸೇರ್ಪಡೆಗೊಂಡಿರುವುದು ಪ್ರಮುಖ ಬದಲಾವಣೆಯ ಸ್ವರೂಪವಾಗಿದೆ. ಆದರೂ ಕೆಲ ಅಲಕ್ಷಿತ ಸಮುದಾಯ, ಲಿಂಗ, ಹಿಂದುಳಿದ ಪ್ರದೇಶಗಳು ಶ್ರೀ ಸಾಮಾನ್ಯರ ಚರಿತ್ರೆಯನ್ನು ಅಳವಡಿಸಿಕೊಳ್ಳುವ ಅಗತ್ಯತೆ ಕಂಡುಬರುತ್ತದೆ.

ಪಠ್ಯಪುಸ್ತಕ ರಚನೆಗೊಳ್ಳುವ ಮೊದಲು ರಾಷ್ಟ್ರೀಯ ಮಟ್ಟದ ಪಠ್ಯಕ್ರಮವನ್ನು ಪ್ರತಿ ರಾಜ್ಯಗಳಿಗೆ ರವಾನಿಸಿರುತ್ತದೆ. ಈ ಪಠ್ಯಕ್ರಮವನ್ನು ಆಧರಿಸಿ ಪ್ರತಿ ರಾಜ್ಯಗಳಲೂ ಸಿಲೆಬಸ್ ಸಿದ್ಧಪಡಿಸುತ್ತವೆ. ಸಿಲೆಬಸ್ ಸಿದ್ಧಪಡಿಸಲು ರಾಜ್ಯ ಸರ್ಕಾರವು ಅನುಭವಿ, ನುರಿತ, ಪಾಂಡಿತ್ಯವುಳ್ಳ ಸದಸ್ಯರನ್ನು

ಪಠ್ಯಪುಸ್ತಕ ರಚನಾ ಸಮಿತಿಗೆ ನೇಮಿಸುತ್ತದೆ. ಈ ಸಿಲೆಬಸ್ ಸಿದ್ಧಪಡಿಸುವ ಸಂದರ್ಭದಲ್ಲಿ ರಾಜ್ಯ ಸರ್ಕಾರದ ಆಡಳಿತ ಪಕ್ಷದ ಒಲವು, ಧೋರಣೆಗಳು, ಆಶಯಗಳನ್ನು ಅಳವಡಿಸಿಕೊಳ್ಳುವಂತೆ ಕೆಲವು ಅಂಶಗಳನ್ನು ತಿಳಿಸಿರುತ್ತದೆ. ಈ ವಿಷಯಗಳು ಸರ್ಕಾರ ಮತ್ತು ರಚನಾ ಸಮಿತಿಯ ಮಧ್ಯೆ ಗೌಪ್ಯವಾಗಿರುತ್ತದೆ. ಇಂತಹ ಕೆಲವು ಪ್ರಸಂಗಗಳನ್ನು ಅಧ್ಯಯನ ಸಂದರ್ಶನದಲ್ಲಿ ಬೆಳಕಿಗೆ ತರಲಾಗಿದೆ. ಇನ್ನೂ ಅಂತಹ ಅನೇಕ ಗೌಪ್ಯ ವಿಷಯಗಳು ಹಾಗೆಯೇ ಉಳಿದಿವೆ. ಏಕೆಂದರೆ ಅಂತಹ ವಿಷಯಗಳು ಹೆಚ್ಚು ಚರ್ಚೆಗೆ, ವಿಮರ್ಶೆಗೆ, ವಿವಾದಗಳಿಗೆ ದಾರಿ ಮಾಡಿಕೊಡುತ್ತವೆ. ಪಠ್ಯಸೂಚಿಯ ರೂಪರೇಷೆಯ ಹಿನ್ನೆಲೆಯಲ್ಲಿ ಪಠ್ಯಪುಸ್ತಕಗಳನ್ನು ರಚಿಸುವಾಗ ಪಠ್ಯಪುಸ್ತಕ ರಚನಾ ಸಮಿತಿ ಹಾಗೂ ಸರ್ಕಾರಗಳ ಮಧ್ಯ ಲಿಖಿತ ಮತ್ತು ಅಲಿಖಿತ ಒಪ್ಪಂದಗಳು ಏರ್ಪಟ್ಟಿರುತ್ತವೆ. ಈ ಒಪ್ಪಂದಗಳು ಗೌಪ್ಯವಾಗಿರುವುದರಿಂದ ಅಂತಹ ಸೂಕ್ಷ್ಮ ವಿಷಯಗಳನ್ನು ಇಲ್ಲಿ ಹೊರತರುವ ಪ್ರಯತ್ನವನ್ನು ಮಾಡಲಾಗಿಲ್ಲ. ಇಂತಹ ವಿಷಯಗಳು ಮುಂದಿನ ಸಂಶೋಧನೆಗಳಿಗೆ ದಾರಿ ಮಾಡಿ ಕೊಡುತ್ತವೆ.

ಪ್ರಸ್ತುತ ಚರಿತ್ರೆ ಪಠ್ಯಪುಸ್ತಕಗಳ ಬಗ್ಗೆ ಶಿಕ್ಷಕರು, ಪೋಷಕರು ಹಾಗೂ ವಿದ್ಯಾರ್ಥಿಗಳ ಒಲವುಗಳು ಈ ರೀತಿ ಇವೆ. ಚರಿತ್ರೆ ಪಠ್ಯಪುಸ್ತಕಗಳು ಸರಳವಾಗಿರಬೇಕು, ವರ್ಣರಂಜಿತ ಚಿತ್ರಗಳಿಂದ ಕೂಡಿರಬೇಕು, ಆಧಾರ ಗ್ರಂಥಗಳನ್ನು ನೀಡಿರಬೇಕು, ಗ್ರಾಮೀಣ ಜೀವನ ಬದುಕಿನ ಚಿತ್ರಣವಿರಬೇಕು ಎಂದು ಬಯಸುತ್ತಾರೆ. ಇದಲ್ಲದೆ ಚರಿತ್ರೆ ಪಠ್ಯಪುಸ್ತಕಗಳಲ್ಲಿ ಶ್ರೀಸಾಮಾನ್ಯರ ಬದುಕು, ನೋವು, ನಲಿವು, ಕಷ್ಟ, ಹೋರಾಟದ ಹಾದಿಗಳು ಹಾಗೂ ಅದರಿಂದಾದ ಪರಿಣಾಮಗಳು ಸೇರ್ಪಡೆಯಾಗಬೇಕಾದ ಅವಶ್ಯಕತೆ ಇದೆ. ಇಂತಹ ವಿಷಯಗಳಲ್ಲದೆ ತಮ್ಮ ಸ್ಥಳೀಯ ವ್ಯಕ್ತಿ, ಐತಿಹಾಸಿಕ ಘಟನೆಗಳು, ಸ್ಥಳಗಳ ಬಗ್ಗೆ ಮಾಹಿತಿಯನ್ನು ಇನ್ನು ಉತ್ತಮವಾಗಿ ಸೇರ್ಪಡೆಗೊಳಿಸಬೇಕು. ಇಲ್ಲದೆ ಮಹಿಳಾ ಚರಿತ್ರೆಯ ಬಗ್ಗೆ ಕೆಲವೇ ಕೆಲವು ವಿಷಯಗಳು ಮಾತ್ರ ಸೇರ್ಪಡೆಗೊಂಡಿವೆ. ಅಂತಹ ಅನೇಕ ಮಹಿಳೆಯ ಚರಿತ್ರೆಗಳು ದಾಖಲಾಗಿ ಲಿಂಗ ಸಮಾನತೆ ತರುವ ಅವಶ್ಯಕತೆ ಇದೆ ಎಂದು ಒಲವನ್ನು ಹೊಂದಿದ್ದಾರೆ. ಆದರೆ ಇಂತಹ ವಿಷಯಗಳಿಗೆ ಬದಲಾದ ಪಠ್ಯಪುಸ್ತಕಗಳಲ್ಲಿ ತಕ್ಕ ಪ್ರಾಶಸ್ತ್ಯ ನೀಡಲಾಗಿದೆ. ಪಠ್ಯಪುಸ್ತಕಗಳು ಎಲ್ಲಿಯವರೆಗೆ ಪ್ರಭುತ್ವ ಮುಖಿಯಾಗಿ ರಚನೆಗೊಳ್ಳುತ್ತವೆಯೋ ಅಲ್ಲಿಯವರೆಗೆ ಪ್ರಭುತ್ವ ಕೇಂದ್ರಿತ ಪಠ್ಯಪುಸ್ತಕಗಳು ಹೊರಬರುತ್ತಲಿರುತ್ತವೆ. ಪಠ್ಯಪುಸ್ತಕಗಳು ಸಮಾಜಮುಖಿ ಕೇಂದ್ರಿತವಾಗಿ ಹೊರಬರಬೇಕು. ಈ ರೀತಿ ಹೊರಬರದವರೆಗೆ ಪಠ್ಯಪುಸ್ತಕಗಳಲ್ಲಿ ಒಂದಲ್ಲಾ ಒಂದು ತೊಡಕುಗಳು ಕಂಡುಬರುತ್ತಾ ಇರುತ್ತವೆ. ಆದ್ದರಿಂದ ಪಠ್ಯಕ್ರಮ ಆಶಯದಂತೆ ಸಮಾಜಮುಖಿ ಕೇಂದ್ರಿತ ಪಠ್ಯಪುಸ್ತಕಗಳಾಗಿ ಇರಬೇಕು.

□□

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು
೨. ವಕ್ತೃಗಳ ಮಾಹಿತಿ
೩. ನಕ್ಷೆ ಮತ್ತು ಛಾಯಾಚಿತ್ರಗಳು

# ೧. ಪರಾಮರ್ಶನ ಗ್ರಂಥಗಳು

೧. ಅನಸೂಯ ವಿ. ಪರಗಿ, ೨೦೦೫, ಮಾತೃಭಾಷೆ ಕನ್ನಡ, ತತ್ವ ಮತ್ತು ಬೋಧನಾ ಮಾರ್ಗ, ವಿವೇಕ ಪ್ರಕಾಶನ, ಚಿಕ್ಕಬಳ್ಳಾಪುರ.

೨. ಅಶೋಕ ಜಿ.ಎಸ್., ೨೦೦೯, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ನವನೀತ ಪ್ರಕಾಶನ, ದಾವಣಗೆರೆ.

೩. ಅಹಲ್ಯ ಎಸ್.ಭಟ್, ೧೯೯೭-೯೮, ದಾವಣಗೆರೆ ಜಿಲ್ಲೆಯ ಅಂಕಿ-ಅಂಶಗಳ ನೋಟ.

೪. ಇರ್ಫಾನ್ ಹಬೀಬ್, (ಕನ್ನಡಕ್ಕೆ) ಪ್ರದೀಪ್ ಬೆಳಗಲ್, ೨೦೦೪, ಪೂರ್ವೇತಿಹಾಸ, ಚೇತನ ಪುಸ್ತಕ, ಬೆಂಗಳೂರು.

೫. ಈಶ್ವರಪ್ಪ ಎಂ.ಜಿ. (ಸಂ), ೨೦೦೧, ಶತಮಾನದ ದಾವಣಗೆರೆ, ಚಂಪಲಾಲ್ ಬಿ. ಡೆಲ್ಲರಿಯಾ.

೬. ಓಂಕಾರಪ್ಪ ಕೆ.ಸಿ., ೨೦೦೧, ಮಹರ್ಷಿ ಅರವಿಂದರು, ಬಾಲಾಜಿ ಪ್ರಕಾಶನ, ಪಾರ್ಥಸಾರಥಿ, ಹೊಳೆನರಸೀಪುರ.

೭. ಓಬಳೇಶ್ವರ ಘಟ್ಟಿ ಆರ್., ೨೦೦೩, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಶಿವಗಂಗಾ, ವಿದ್ಯಾನಿಧಿ ಪ್ರಕಾಶನ, ಗದಗ.

೮. ಓಬಳೇಶ್ವರ ಘಟ್ಟಿ ಆರ್., ೨೦೦೮, ವಿಷಯಾಧಾರಿತ ಬೋಧನಾ ಪದ್ಧತಿ, ಸಮಾಜ ವಿಜ್ಞಾನ, ವಿದ್ಯಾನಿಧಿ ಪ್ರಕಾಶನ, ಗದಗ,

೯. ಕಲಬುರ್ಗಿ ಎಂ.ಎಂ., ೨೦೦೨, ಮಾರ್ಗ-೪, ಸಪ್ನಬುಕ್‌ಹೌಸ್, ಬೆಂಗಳೂರು.

೧೦. ಕಾಮತ್ ಸೂರ್ಯನಾಥ (ಸಂ), ೧೯೯೧, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ-೧, ಗೀತಾ ಬುಕ್‌ಹೌಸ್, ಮೈಸೂರು.

೧೧. ಕುಮಾರ್ ಬಿ.ಪಿ., ದಾವಣಗೆರೆ ಹತ್ತಿಗಿರಿಣಿಯ ಕಾರ್ಮಿಕರ ಚಳುವಳಿಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨ ಕೊಂಗವಾಡ ಎನ್.ಬಿ., ೨೦೦೨, ಇತಿಹಾಸ ಮತ್ತು ಪೌರನೀತಿ ಬೋಧನೆ, ವಿದ್ಯಾನಿಧಿ ಪ್ರಕಾಶನ, ಗದಗ.

೧೩. ಕೊಂಗವಾಡ ಎನ್.ಬಿ., ೧೯೫೨, **ಕರ್ನಾಟಕದ ಶೈಕ್ಷಣಿಕ ಇತಿಹಾಸ,** ಸುದರ್ಶನಂ ಅಂಡ್ ಕಂಪನಿ, ಬೆಂಗಳೂರು.

೧೪. ಗಿರಿಜಾ ಟಿ. ಮತ್ತು ಹೆಚ್.ಜಿ. ಶೋಭಾ (ಸಂ), ೨೦೦೨, **ಕರ್ಪೂರ ಸ್ಮರಣ ಸಂಚಿಕೆ, ದಾವಣಗೆರೆ.**

೧೫. ಗಿರಿಜಾ ಟಿ., ೨೦೦೦, **ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ,** ಇತಿಹಾಸ ದರ್ಶನ ಸಂ. ೧೫, ಕರ್ನಾಟ ಇತಿಹಾಸ ಅಕಾಡೆಮಿ, ಬೆಂಗಳೂರು.

೧೬. ಗಿರಿಜಾ ಟಿ., ೨೦೦೧, **ದಾವಣಗೆರೆ ಇದು ನಮ್ಮ ಜಿಲ್ಲೆ,** ರೇಖಾ ಪ್ರಕಾಶನ, ದಾವಣಗೆರೆ.

೧೭. ಗಿರಿಜಾ ಟಿ., ೧೯೯೧, **ಚಿತ್ರದುರ್ಗದ ದರ್ಶಿನಿ,** ರೇಖಾ ಪ್ರಕಾಶನ, ದಾವಣಗೆರೆ.

೧೮. ಗುಡ್ಡಳ್ಳಿ ಎಸ್.ಎಂ., ೨೦೦೮, **ಶಿಕ್ಷಣದ ಆಧಾರಗಳು,** ಭಾರತ ಪ್ರಕಾಶನ, ಮೈಸೂರು.

೧೯. ಗೋಪಾಲಕೃಷ್ಣಯ್ಯ ಕೆ.ಎಲ್., ೨೦೦೨, **ಇತಿಹಾಸದ ರಾಜಕೀಯ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೦. ಗೋಪಾಲರಾವ್ ಎಚ್.ಎಸ್., ೨೦೦೫, **ಇತಿಹಾಸದ ಪರಾಮರ್ಶೆ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೧. ಗೋಪಾಲ ಬಿ., ೨೦೧೦, **ಸಮಾಜ ಪರಿವರ್ತನಕಾರ-ಮಹಾತ್ಮ-ಜ್ಯೋತಿಬಾ ಫುಲೆ,** ಸರ್ವಜ್ಞನ ಪ್ರಕಾಶನ, ಬೆಂಗಳೂರು.

೨೨. ಗೋಪಾಲ ಆರ್ (ಸಂ), ೨೦೦೫, **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಕರ್ನಾಟಕ ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

೨೩. ಚಂದ್ರಶೇಖರ ಎಸ್. (ಕನ್ನಡಕ್ಕೆ) ಸಿ. ನಾಗಣ್ಣ, **ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಚಂದ್ರಶೇಖರ ಟಿ.ಆರ್., **ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಚಂದ್ರ ಪೂಜಾರಿ ಎಂ., ೨೦೦೮, **ಸಂಶೋಧನ ಜವಾಬ್ದಾರಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಚೆನ್ನಸ್ವಾಮಿ ಸೋಸಲೆ ಎನ್., ೨೦೦೮, **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಚೆನ್ನಸ್ವಾಮಿ ಸೋಸಲೆ ಎನ್., ೨೦೦೦, **ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ,** ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು.

೨೮. ಚೆನ್ನಬಸಪ್ಪ ಕೋ., ೨೦೦೭, **ಕರ್ನಾಟಕ ಏಕೀಕರಣ: ಬಳ್ಳಾರಿ ಜಿಲ್ಲೆ ಹಿನ್ನೆಲೆಯಲ್ಲಿ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೨೯. ಜಗನ್ನಾಥರಾವ್ ಡಿ., ೨೦೦೮, **ಕರ್ನಾಟಕದಲ್ಲಿ ಶಿಕ್ಷಣದ ಅವಲೋಕನ**, ಭಾರತ ಸಂಸ್ಕೃತಿ ಪ್ರಕಾಶನ, ಮೈಸೂರು.

೩೦. ಜಯಣ್ಣ ಸಿ.ವಿ. ಮತ್ತು ವಿ.ಸಿ. ರುದ್ರಾಣಿ, ೨೦೦೬, **ಪಠ್ಯಕ್ರಮ ಕಾರ್ಯಾಚರಣೆ ತತ್ವಗಳು**, ಸಪ್ನ ಬುಕ್‌ಹೌಸ್, ಬೆಂಗಳೂರು.

೩೧. ಜಯಣ್ಣ ಸಿ.ವಿ., ೨೦೦೭, **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ**, ಸಪ್ನ ಬುಕ್‌ಹೌಸ್, ಬೆಂಗಳೂರು.

೩೨. ಜವರೇಗೌಡ ದೇ., ೧೯೭೧, **ಕುವೆಂಪು ಅವರ ತತ್ವವಿಚಾರ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೩. ಜೇವೂರ ಎಸ್.ವಿ., ೧೯೫೨, **ಕರ್ನಾಟಕದ ಶೈಕ್ಷಣಿಕ ಇತಿಹಾಸ**, ಸುದರ್ಶನಂ ಅಂಡ್ ಕಂಪನಿ, ಬೆಂಗಳೂರು.

೩೪. ದೇವರಕೊಂಡಾರೆಡ್ಡಿ (ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ೨೦೦೬, **ಪ್ರಾಚೀನ ಭಾರತದಲ್ಲಿ ಭೌತಿಕವಾದ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೬. ದೇ.ಜ.ಗೌ., ೨೦೧೦, **ಯುದ್ಧ ಮತ್ತು ಶಾಂತಿ, ತೃತೀಯ ಸಂಪುಟ**, ವಿನೂತ ಪ್ರಕಾಶನ, ಶಿವಮೊಗ್ಗ.

೩೭. ದೊಡ್ಡಣ್ಣವರ, ೨೦೦೨, **ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ವಿವೇಚಕರು**, ವಿದ್ಯಾನಿಧಿ ಪ್ರಕಾಶನ, ಗದಗ.

೩೮. ದಿವಾಕರ ರಂ.ರಾ., ೧೯೯೨, **ಕರ್ನಾಟಕ ಏಕೀಕರಣ ಕಥೆ**, ಲೋಕಶಿಕ್ಷಣ ಗ್ರಂಥಮಾಲೆ, ಹುಬ್ಬಳ್ಳಿ.

೩೯. ನಾಗರಾಜ ಎಂ.ಜಿ., ೨೦೧೧, **ಸಂಶೋಧನ ತೆನೆಗಳು**, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ, ಗುಲಬರ್ಗಾ.

೪೦. ನಾಗರಾಜ್ ಎಚ್.ಎಸ್., ೧೯೮೮-೮೯, **ಚಿತ್ರದುರ್ಗ ಜಿಲ್ಲೆಯ ಅಂಕಿ-ಅಂಶಗಳ ನೋಟ**, ಚಿತ್ರದುರ್ಗ.

೪೧. ನಾಗಯ್ಯ ಜೆ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ.

೪೨. ನಿರುಪಮಾ (ಕನ್ನಡಕ್ಕೆ), ೨೦೧೦, ಶ್ರೀಕೃಷ್ಣದೇವರಾಯನ ಆಮುಕ್ತಮಾಲ್ಯದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಪ್ರಭು ಆರ್.ಜಿ. ೨೦೦೭, **ವಿಷಯಾಧಾರಿತ ಬೋಧನಾ ಪದ್ಧತಿ, ಇತಿಹಾಸ ಮತ್ತು ಪೌರನೀತಿ,** ವಿಜೇತ ಪ್ರಕಾಶನ, ಗದಗ.

೪೪. ಪ್ರಹ್ಲಾದ್ ನೆರೆಗಲ್ಲ, ೨೦೦೬, **ಗುರುದೇವ,** ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೪೫. ಪ್ರಶಾಂತ್ ಎಚ್.ಡಿ., ೨೦೦೫, **ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ಪ್ರಧಾನ ಗುರುದತ್ತ (ಪ್ರಸಂ.), ೨೧೧೦, **ಬಾಬಾಸಾಹೇಬ್ ಅಂಬೇಡ್ಕರ್‌ರವರ ಸಮಗ್ರ ಬರಹಗಳು ಮತ್ತು ಭಾಷಣಗಳು, ಸಂಪುಟ ೩, ೪, ೫,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೭. ಪುರಾಣಿಕ ಎಸ್.ಡಿ., ೧೯೮೯, **ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ತಜ್ಞರು,** ಧಾರವಾಡ, ಸಮಾಜ ಪುಸ್ತಕಾಲಯ, ಧಾರವಾಡ.

೪೮. ಪೌರಾಣಿಕ ಎಸ್.ಡಿ., ೧೯೮೯, **ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ತಜ್ಞರು,** ಸಮಾಜ ಪುಸ್ತಕಾಲಯ, ಧಾರವಾಡ.

೪೯. ಫ್ರಾನ್ಸಿಸ್ ಬುಕಾನನ್, ೧೯೮೮, **ಎ ಜರ್ನಿ ಫ್ರಮ್ ದಿ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು,** ಕೆನರ ಅಂಡ್ ಮಲಬಾರ್, ಸಂಪುಟ ೧, ಬೆಂಗಳೂರು.

೫೦. ಬಸಪ್ಪ ಎ., ೨೦೦೮, **ಭಾರತೀಯ ಸಮಗ್ರ ಶಿಕ್ಷಣ,** ಮದಕರಿ ಪ್ರಕಾಶನ, ಚಿತ್ರದುರ್ಗ.

೫೧. ಬಿಪಿನ್‌ಚಂದ್ರ (ಕನ್ನಡಕ್ಕೆ) ಎಚ್.ಎಸ್. ಗೋಪಾಲರಾವ್, ೨೦೦೯, **ಆಧುನಿಕ ಭಾರತದ ಇತಿಹಾಸ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೨. ಭಟ್‌ಸೂರಿ ಕೆ.ಜಿ. (ಸಂ), **ಕರ್ನಾಟಕ ಶಾಸನ ಸಂಶೋಧನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಭುವನೇಶ್ವರ ಪ್ರಸಾದ್ ಎಂ.ಪಿ., ೨೦೦೪, **ಗಾಂಧೀ ವಿಚಾರಧಾರೆ,** ಶಿಖರಿಮಲಯ್ ಬುಕ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೫೪. ಮಂಚಯ್ಯ ಎಸ್., ೧೯೯೯, **ಶಿಕ್ಷಣ-ಆಡಳಿತ,** ಶೈಕ್ಷಣಿಕ, ಸಾಹಿತ್ಯ ಪ್ರಕಾಶನ, ಜಯನಗರ, ಬೆಂಗಳೂರು.

೫೫. ಮುಕರ್ಜಿ ಆರ್.ಕೆ. (ಮೂಲ), ಆಯ್.ಎಸ್. ಬಿದರಿ (ಅನುವಾದ), ೧೯೭೮, **ಪ್ರಾಚೀನ ಭಾರತದ ಶಿಕ್ಷಣ,** ಸಿ.ಎಸ್. ಕನ್ವಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೬. ಮಂಜುಳಾದೇವಿ, ೨೦೦೪, **ವಿನೋಬಾ ಭಾವೆ,** ಅಖಿಲಾ ಏಜೆನ್ಸೀಸ್, ಮೈಸೂರು.

೫೭. ಮುಜುಮದಾರ್ ಪಿ.ಆರ್., ಆರ್.ಕೆ. ಭಾರದ್ವಾಜ್, ಆರ್‌ಸಿ. ಚೌದರಿ, ೧೯೯೭, **ಭಾರತದ ಪ್ರೌಢ ಇತಿಹಾಸ,** ಲಕ್ಷ್ಮಿ ಬುಕ್‌ಹೌಸ್, ಕಾಳಮ್ಮಗುಡಿ ರಸ್ತೆ, ಮೈಸೂರು.

೫೮. ಮುಜುಮದಾರ್ ಪಿ.ಆರ್., ಆರ್.ಕೆ. ಭಾರದ್ವಾಜ್, ಆರ್‌ಸಿ. ಚೌದರಿ, ೨೦೦೯, ಇತಿಹಾಸ **ಸಂಶೋಧನಾ ಮಾರ್ಗ**, ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಕೇಷನ್, ಮೈಸೂರು.

೫೯. ಮೂರ್ತಿ ಎಂ.ಸಿ., ೨೦೦೪, **ವಿಷಯಾಧಾರಿತ ಬೋಧನಾ ವಿಧಾನ**, ವಿದ್ಯಾನಿಧಿ ಪ್ರಕಾಶನ, ಗದಗ.

೬೦. ಮೋಹನ್‌ಕೃಷ್ಣ ರೈ ಕೆ., ೨೦೦೬, **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೧. ಯದುರಾಜನ್ ಎಸ್.ಎಸ್. (ಅನು), ೨೦೦೫, **ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು**, ಡಿ.ಎಸ್.ಈ.ಆರ್.ಟಿ.., ಬೆಂಗಳೂರು.

೬೨. ಯಶೋಧರ ಕೆ., ೧೯೯೫, **ಶಿಕ್ಷಣದಲ್ಲಿ ಸಂಖ್ಯಾಶಾಸ್ತ್ರ**, ಶಿಖಾ ಪ್ರಕಾಶನ, ಮೈಸೂರು.

೬೩. ಯಾದವಾಡ ಎನ್.ಬಿ., ೨೦೦೪, **ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ**, ವಿದ್ಯಾನಿಧಿ ಪ್ರಕಾಶನ, ಗದಗ.

೬೪. ರಮೇಶ ನಾಯಕ (ಸಂ), ೨೦೦೭, **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ರಾಜಶೇಖರಪ್ಪ ಬಿ., ೨೦೦೩, **ಇತಿಹಾಸ ಕಥನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೬. ರಾಬರ್ಟ್ ಸಿವೆಲ್, (ಅನು) ಸದಾನಂದ ಕನವಳ್ಳಿ, ೨೦೧೦, **ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ರಾಮಣ್ಣ ಕೆ. (ಸಂ), ೨೦೦೮, **ಸೋಲಿಲ್ಲದ ಸರದಾರರು-ಸ್ವಾತಂತ್ರ್ಯಕ್ಕಾಗಿ ದುಡಿದ ಧೀರರು**, ಭಾರತೀ ಪ್ರಕಾಶನ, ಮೈಸೂರು.

೬೮. ರಾಚಪ್ಪಾಜಿ, ೨೦೧೦, **ಅಂಬೇಡ್ಕರ್ ಮತ್ತು ಪರಿವರ್ತನೆಯ ಚಿಂತನೆಗಳು**, ಎಂ. ರಾಚಪ್ಪಾಜಿ ಪ್ರಕಾಶನ, ದೀಕ್ಷಭೂಮಿ, ಚಾಮರಾಜನಗರ.

೬೯. ರಾಜಾರಾಮ ಹೆಗಡೆ, ೨೦೦೮, **ವಸಾಹತುಪೂರ್ವ ಕರ್ನಾಟಕದ ರಾಜ್ಯಪದ್ಧತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೦. ರಾಯಮನೆ ಎಮ್.ಎಲ್., ೨೦೧೦, **ಭಾರತರತ್ನ ಡಾ. ಬಾಬಾಸಾಹೇಬ್ ಅಂಬೇಡ್ಕರ್**, ದಿವ್ಯ ಚಂದ್ರ ಪ್ರಕಾಶನ, ಬೆಂಗಳೂರು.

೭೧. ರೊಮಿಲ ಥಾಪರ್, ಹರ್ಬನ್ಸ್ ಮುಖಿಯ ಮತ್ತು ಬಿಪಿನ್‌ಚಂದ್ರ, ೨೦೧೦, **ಕೋಮುವಾದ ಹಾಗೂ ಭಾರತೀಯ** ಇತಿಹಾಸ ಲೇಖನ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೭೨. ಲಕ್ಷ್ಮಣ್ ತೆಲಗಾವಿ (ಸಂ), ೨೦೦೩, **ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕ ಮತ್ತು ಸ್ವರೂಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೩. ಲಕ್ಷ್ಮಣ್ ತೆಲಗಾವಿ, ೨೦೦೪, **ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನ ವ್ಯಾಪಕತೆ ಮತ್ತು ಸಾಧ್ಯತೆ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ ಪ್ರಕಾಶನ, ಚಿತ್ರದುರ್ಗ.

೭೪. ಲಕ್ಷ್ಮೀನಾರಾಯಣ ಅರೋರಾ ಮತ್ತು ಡಾ. ಉಮಾ ಸರಸ್ವತಿ, ೨೦೧೦, **ಲೋಹಿಯಾ ಸಾಂಸ್ಕೃತಿಕ ಚಿಂತನೆ,** ಮಂಗಳ ಪ್ರಕಾಶನ, ಬೆಂಗಳೂರು.

೭೫. ವಿಜಯ್ ಪೂಣಚ್ಚ ತಂಬಂಡ, ೨೦೦೯, **ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, **ಬಳ್ಳಾರಿ ಜಿಲ್ಲೆಯ ಪಾಳೆಯಗಾರರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೯. ವಿವೇಕ ರೈ ಬಿ.ಎ., ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೦. ವೆಂಕಟರತ್ನಂ ಎ.ವಿ. ಮತ್ತು ಡಾ. ಎಂ.ಬಿ. ಪದ್ಮ, ೧೯೮೫, **ಇತಿಹಾಸ ಸಂಶೋಧನಾ ಮಾರ್ಗ,** ಬಾಪ್ಕೊ ಪ್ರಕಾಶನ, ಮೈಸೂರು.

೮೧. ವೇಮಣ್ಣ, ೨೦೦೭, **ಪೆರಿಯಾರ್ ಜೀವನ ಚರಿತ್ರೆ,** ವಿ.ಆರ್.ವಿ. ಪಬ್ಲಿಕೇಷನ್, ಬೆಂಗಳೂರು.

೮೨. ವೆಂಕಟೇಶ್ ಎಂ., ೨೦೧೦, **ಸಮಗ್ರ ಚಿಂತನಕಾರ-ದೇಜಗೌ,** ವಿನೂತ ಪ್ರಕಾಶನ, ಶಿವಮೊಗ್ಗ.

೮೩. ಶಂಕರಗೌಡ ಕೆ.ವಿ. (ಪ.ಸಂ.), ೧೯೭೫, **ಕಬ್ಬಿನ ಹಾಲು(ಅ.ಗ.),** ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

೮೪. ಶರ್ಮ ಆರ್.ಎಸ್., ೧೯೯೬, **ಪ್ರಾಚೀನ ಭಾರತ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೮೫. ಶರ್ಮ ಆರ್.ಎಸ್., ೨೦೦೯, **ಪ್ರಾಚೀನ ಭಾರತದಲ್ಲಿ ಶೂದ್ರರು,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೮೬. ಶಂಕರನಾರಾಯಣ ಎನ್.ಪಿ., ೨೦೦೮, **ಸ್ವಾತಂತ್ರ್ಯ** ಗಂಗೆಯ ಸಾವಿರ **ತೊರೆಗಳು,** ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೮೭. ಶಂಕರಲಿಂಗ ಜಿ. ಹೆಂಬಾಡಿ, ೨೦೦೮, **ಶ್ರೇಷ್ಠ ಶಿಕ್ಷಣ ತಜ್ಞರು,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮು, ಗುಲಬರ್ಗಾ.

೮೮. ಶಿವಯ್ಯ ಎಸ್., ೨೦೦೭, **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ,** ಪೂಜಾ ಪ್ರಕಾಶನ, ದಾವಣಗೆರೆ.

೮೯. ಶಿವರಾಂ ಎನ್.ಆರ್., ೨೦೧೦, **ಡಾ. ಅಂಬೇಡ್ಕರ್ ದರ್ಶನ,** ಜೈಭೀಮ್ ಪ್ರಕಾಶನ, ನಗರನಹಳ್ಳಿ.

೯೦. ಶ್ರೀನಿವಾಸಮೂರ್ತಿ ಎ.ಪಿ., ೧೯೫೭, **ಭಾರತದ ಸ್ವಾತಂತ್ರ್ಯ ಚಳುವಳಿ,** ಅಭ್ಯುದಯ ಪ್ರಕಾಶನ, ಬೆಂಗಳೂರು.

೯೧. ಷೇಕ್‌ಅಲಿ ಬಿ. (ಪ್ರ.ಸಂ.), ೧೯೯೭, **ಕರ್ನಾಟಕ ಚರಿತ್ರೆ ಸಂಪುಟ ೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೨. ಸದಾಶಿಪ್ಪ ಕುಂಬಾ, ೧೯೯೦, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,** ಮಾಲತೇಶ ಪ್ರಕಾಶನ, ಕುಂಚೂರು.

೯೩. ಸದಾಶಿವಪ್ಪ, ೧೯೯೬, **ಹರಪನಹಳ್ಳಿ ಪಾಳೆಯಗಾರರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯೪. ಸತ್ಯನ್ ಬಿ.ಎನ್., ೧೯೬೭, **ಗೆಜಿಟಿಯರ್ ಆಫ್ ಇಂಡಿಯಾ,** ಕರ್ನಾಟಕ ಸರ್ಕಾರ, ಚಿತ್ರದುರ್ಗ ಜಿಲ್ಲೆ.

೯೫. ಸದಾಶಿವಯ್ಯ ಕೆ.ಎಸ್., ೧೯೮೧, **ಪತ್ಯರಚನಾ ವಿನ್ಯಾಸ,** ವಿಶ್ವನಾಥ ಪ್ರಕಾಶನ, ಸರಸ್ವತೀಪುರಂ, ಮೈಸೂರು.

೯೬. ಸಿದ್ರಾಮ ಕಾರಣಿಕ, ೨೦೧೦, **ದಲಿತ ಬಂಡಾಯ ಕಥಾ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ,** ಜ್ಯೋತಿ ಪ್ರಕಾಶನ, ಮೈಸೂರು.

೯೭. ಸುದರ್ಶನ ಸ.ರ., ೨೦೦೬, **ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯೮. ಸೂರ್ಯನಾಥ ಯು. ಕಾಮತ್ (ಸಂ), ೧೯೮೩, **ಕರ್ನಾಟಕ ಸ್ಟೇಟ್ ಗೆಜೆಟಿಯರ್,** ಕರ್ನಾಟಕ ಸರ್ಕಾರ, ಭಾಗ-II.

೯೯. ಸೂರ್ಯನಾಥ ಕಾಮತ್ (ಮು.ಸ), ೧೯೮೯, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-II,** ಕರ್ನಾಟಕ ರಾಜ್ಯ ಸರ್ಕಾರ.

೧೦೦. ಹನುಮಂತರೆಡ್ಡಿ ಜೆ., ೨೦೦೭, **ತತ್ವಶಾಸ್ತ್ರ ಆಧಾರಿತ ಶಿಕ್ಷಣ,** ಚೇತನ ಬುಕ್‌ಹೌಸ್, ಮೈಸೂರು.

೧೦೧. ಹುಲ್ಲೂರು ಶ್ರೀನಿವಾಸ ಜೋಯಿಸರು (ಸಂ), ೧೯೯೮, **ಚಿತ್ರದುರ್ಗ ಬಖೈರು,** ತಳುಕಿನ ವೆಂಕಣ್ಣ ಸ್ಮಾರಕ ಗ್ರಂಥಮಾಲೆ, ಚಿತ್ರದುರ್ಗ.

## ಇಂಗ್ಲಿಷ್ ಗ್ರಂಥಗಳು


1. Appointment of a Committee to Examine Text book in use in Schools, 1872-73.
2. Appointment in the Education Department of Myosre - 1857.
3. Basham, A.L. (Ed), The Legancy Of India, Oxford - 1975.
4. Basham, A.L., Studies in India History and Culture, Culcutta, 1964.
5. Bhattacharrya S. and Thapar R. (Eds), Sitiating Indian History, New Delhi-1986.
6. Bipin Chandra - History of modern India, Orient Lackswan private Limited, New Delhi - 2009.
7. Colling wood. R.G., The Ideal of History, Surjeet Publication - 2009.
8. Datta B.B. and Singh A.N., History of Hindu Mathematics Lalore - 1935.
9. Desai, History of Karnataka form Pre History to Unification, Dharwad.
10. Draft Rules writing of the text book committee on Mysore - 1918.
11. Education in Karnataka - An Analytical Report - 2011-12, Govt. of Karnataka.
12. Gaben J. Saylor/William M. Alexander - Planning curriculm for schools, library of congress cataloging in publication Data, saylor, John galen-1902.
13. John W. Best and James V. Kahn - Research in Education Seventh Edition Published by Ashoke Ghosh, Prentice of India Private Limited, March 2004.
14. John Kelsall (Bellary Manual) and W. Francis (Bellary Gazatteer) - Bellary, Government of Karnataka - 2004.
15. Jyotsna Kamat Dr., Education in Karnataka Though the ages - Publisher The Mythic Society, Bangalore - 2009.
16. Kosambi D.D., An Introduction of the Study of Indian History, repr, Delhi - 1970.
17. Kosambi D.D., Combined Method in Indology and Other writing edited by B.D. Chattopadyayah, Delhi - 2002.
18. Kumaraswami A.K., History of India and Indonesian Art, repr. Delhi - 1972.
19. Kulari Singh Sidhu, School Orgainsation and Administration, Sterling Publisher, New Delhi - 2004.
20. Law B.C., Historical Geography of Ancient India, Paris - 1954.

21. Lokesh Koul - Methodology of Education Research Third revised Edition - Vikas publishing house Pvt.Ltd.-2008.

22. Maclean C.D., 1987, Manual of the Administration, Madras preridency (Vol-1) Asian Education Services, New Delhi.

23. Michel globy, Jane Greenwald and Ruthwest, Curriculum Design Croom helm ltd., 2-10 John's Rood, London-1979.

24. Minor Gwynn J., Curriculum Principles and Social trends, Third Edition- Printed in the United company Newyourk- 1960.

25. Mujumdar and Srivastva, 2001, History of Modern India, (From 1707, A.D. 50 1858 A.D.), I.S.B.D. Publisher, Delhi.

26. Nilakanta Sastri K.A., A History of South Indian, 4th Edn, Madras - 1974.

27. Pratronage for the publication called the education at Policy of the state in India - 1903.

28. Robert S. Fleming - Curriculum for Todays boys and grils, New Jersey - 1954.

29. Robert S. Fleming - Curriculum for Todays boys and grils, New Jersey - 1954.

30. Romila Thapar, 2002, Early Inida, Published by the Penduin group.

31. Robert Dottrens - The Primary Schools Curriculm Unesco - 1962.

32. Sharma R.S. Research in History of Education - 1994.

33. Sumit Sarkar - Modern India (1885-1947), Macmillan Publisers India Limited-2009.

34. Sheik Ali Prof. B., Tippusultan - Kannada and Sanstruti Department, Bangalore.

35. Smith V., Early History of India from 600 B.C. to the Muhammadan Conquest, 4th Edn. Oxford - 1957.

36. Swell Robert - Indian before the English - Asian Education services, New Delhi.

**ಚರಿತ್ರೆ ಪಠ್ಯಪುಸ್ತಕಗಳು**

೧. ಮಕ್ಕಳ ಸಮಾಜಶಾಸ್ತ್ರ, ಭಾಗ-೩, ೩ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೬೫.

೨. ಸಮಾಜ ಪರಿಚಯ ಪಾಠಗಳು, ೩ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೭೦.

೩. ಸಮಾಜ ಪಾಠಗಳು, ಭಾಗ-೧, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೪. ಸಮಾಜ ಪಾಠಗಳು (ದಕ್ಷಿಣ ಕನ್ನಡ ಶಾಲೆ), ಭಾಗ-೨, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೫. ಸಮಾಜ ಪಾಠಗಳು, ಭಾಗ-೨, ಮಂಡ್ಯ ಜಿಲ್ಲೆ, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೬. ಸಮಾಜ ಪಾಠಗಳು, ಭಾಗ-೨, ಮೈಸೂರು ಜಿಲ್ಲೆ, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೭. ಸಮಾಜ ಪಾಠಗಳು, ಭಾಗ-೨, ಚಿಕ್ಕಮಗಳೂರು ಜಿಲ್ಲೆ, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೮. ಸಮಾಜ ಪಾಠಗಳು, ಭಾಗ-೨, ಗುಲಬರ್ಗಾ ಜಿಲ್ಲೆ, ೩ನೇ ತರಗತಿ, ಕರ್ನಾಟಕ ಸರ್ಕಾರ-೧೯೭೫.

೯. ಸಮಾಜ ಪಾಠಗಳು, ಭಾಗ-೨, ಚಿತ್ರದುರ್ಗ ಜಿಲ್ಲೆ, ೩ನೇ ತರಗತಿ, ಕರ್ನಾಟಕ ಸರ್ಕಾರ - ೧೯೭೫.

೧೦. ಪರಿಸರ ಅಧ್ಯಯನ, ೩ನೇ ತರಗತಿ, ಕರ್ನಾಟಕ ಸರ್ಕಾರ-೨೦೧೦.

೧೧. ಸಮಾಜ ಪರಿಚಯ, ೪ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೬೪.

೧೨. ಸಮಾಜ ಪರಿಚಯ, ೪ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೭೦.

೧೩. ಸಮಾಜ ಪರಿಚಯ, ೪ನೇ ತರಗತಿ, ಕರ್ನಾಟಕ ಸರ್ಕಾರ-೧೯೭೬.

೧೪. ಸಮಾಜ ಪಾಠಗಳು, ೪ನೇ ತರಗತಿ, ಕರ್ನಾಟಕ ಸರ್ಕಾರ-೧೯೮೬.

೧೫. ಸಮಾಜ ಪಾಠಗಳು, ಪರಿಷ್ಕೃತ ಮುದ್ರಣ, ೪ನೇ ತರಗತಿ, ಕರ್ನಾಟಕ ಸರ್ಕಾರ-೧೯೯೦.

೧೬. ಸಮಾಜ ವಿಜ್ಞಾನ, ೪ನೇ ತರಗತಿ, ಕರ್ನಾಟಕ ಸರ್ಕಾರ-೧೯೯೪.

೧೭. ಪರಿಸರ ಅಧ್ಯಯನ, ೪ನೇ ತರಗತಿ, ಕರ್ನಾಟಕ ಸರ್ಕಾರ-೨೦೦೯.

೧೮. ಸಮಾಜ ಪರಿಚಯ ಪಾಠಗಳು, ೫ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೭೧.

೧೯. ಸಮಾಜ ಪರಿಚಯ ಪಾಠಗಳು, ೫ನೇ ತರಗತಿ, ಕರ್ನಾಟಕ ಸರ್ಕಾರ-೧೯೮೭.

೨೦. ಸಮಾಜ ವಿಜ್ಞಾನ, ೫ನೇ ತರಗತಿ, ಕರ್ನಾಟಕ ಸರ್ಕಾರ-೧೯೯೩.

೨೧. ಸಮಾಜ ವಿಜ್ಞಾನ, ಮೊದಲನೆಯ ಸೆಮಿಸ್ಟರ್, ೫ನೇ ತರಗತಿ, ಕರ್ನಾಟಕ ಸರ್ಕಾರ-೨೦೦೮.

೨೨. ಸಮಾಜ ವಿಜ್ಞಾನ, ಎರಡನೆಯ ಸೆಮಿಸ್ಟರ್, ೫ನೇ ತರಗತಿ, ಕರ್ನಾಟಕ ಸರ್ಕಾರ-೨೦೦೮.

೨೩. ಸಮಾಜ ವಿಜ್ಞಾನ, ಮೊದಲನೆಯ ಸೆಮಿಸ್ಟರ್, ೫ನೇ ತರಗತಿ, ಕರ್ನಾಟಕ ಸರ್ಕಾರ-೨೦೧೨.

೨೪. ಸಮಾಜ ವಿಜ್ಞಾನ, ಎರಡನೆಯ ಸೆಮಿಸ್ಟರ್, ೫ನೇ ತರಗತಿ, ಕರ್ನಾಟಕ ಸರ್ಕಾರ-೨೦೧೨.

೨೫. ಸಮಾಜ ಪರಿಚಯ ಪಾಠಗಳು, ೬ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೬೯.

೨೬. ಸಮಾಜ ಪರಿಚಯ ಪಾಠಗಳು, ೬ನೇ ತರಗತಿ, ಕರ್ನಾಟಕ ಸರ್ಕಾರ-೧೯೭೯.

೨೭. ಸಮಾಜ ವಿಜ್ಞಾನ, ೬ನೇ ತರಗತಿ, ಕರ್ನಾಟಕ ಸರ್ಕಾರ-೧೯೯೪.

೨೮. ಸಮಾಜ ವಿಜ್ಞಾನ, ೬ನೇ ತರಗತಿ, ಕರ್ನಾಟಕ ಸರ್ಕಾರ-೨೦೦೫.

೨೯. ಸಮಾಜ ವಿಜ್ಞಾನ, ಮೊದಲನೆಯ ಸೆಮಿಸ್ಟರ್, ೬ನೇ ತರಗತಿ, ಕರ್ನಾಟಕ ಸರ್ಕಾರ-೨೦೧೧.

೩೦. ಸಮಾಜ ವಿಜ್ಞಾನ, ಎರಡನೆಯ ಸೆಮಿಸ್ಟರ್, ೬ನೇ ತರಗತಿ, ಕರ್ನಾಟಕ ಸರ್ಕಾರ-೨೦೧೧.

೩೦. ಸಮಾಜ ವಿಜ್ಞಾನ, ಮೊದಲನೆಯ ಸೆಮಿಸ್ಟರ್, ೬ನೇ ತರಗತಿ-೨೦೧೩.

೩೧. ಸಮಾಜ ವಿಜ್ಞಾನ, ಎರಡನೆಯ ಸೆಮಿಸ್ಟರ್, ೬ನೇ ತರಗತಿ-೨೦೧೩.

೩೨. ಸಮಾಜ ಅಭ್ಯಾಸ, ೭ನೇ ತರಗತಿ, ಶಂಭುಲಿಂಗಪ್ಪ, ಶಿವರುದ್ರಪ್ಪ ಕುಲಕರ್ಣಿ, ಧಾರವಾಡ-೧೯೬೫.

೩೩. ಸಮಾಜ ಪರಿಚಯ ಪಾಠಗಳು, ೭ನೇ ತರಗತಿ, ಕೆ.ವಿ. ಸುಬ್ಬರಾವ್, ಬಿ.ಎ., ಬಿಜ್ಜಳ, ಕರ್ನಾಟಕ ಪಬ್ಲಿಕೇಷನ್, ಬಾಗಲಕೋಟೆ, ೧೯೬೫.

೩೪. ಸಮಾಜಶಾಸ್ತ್ರ ಪಾಠಗಳು, ೭ನೇ ತರಗತಿ, ಬಿ.ಎನ್. ರಾಮಯ್ಯ ಬಿ.ಕೆ. ಮಾಧವಮೂರ್ತಿ, ಸುದರ್ಶನ ಅಂಡ್ ಕಂಪನಿ, ಬೆಂಗಳೂರು.

೩೫. ಸಮಾಜ ಪರಿಚಯ ಪಾಠಗಳು, ೭ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೬೯.

೩೬. ಸಮಾಜ ಪರಿಚಯ ಪಾಠಗಳು, ೭ನೇ ತರಗತಿ, ಮೈಸೂರು ವಿದ್ಯಾ ಇಲಾಖೆ-೧೯೭೧.

೩೭. ಸಮಾಜ ವಿಜ್ಞಾನ, ೭ನೇ ತರಗತಿ, ಕರ್ನಾಟಕ ಸರ್ಕಾರ-೧೯೭೧.

೩೮. ಸಮಾಜ ವಿಜ್ಞಾನ, ೭ನೇ ತರಗತಿ, ಕರ್ನಾಟಕ ಸರ್ಕಾರ-೨೦೦೯.

೩೯. ಸಮಾಜ ವಿಜ್ಞಾನ, ೭ನೇ ತರಗತಿ, ಮೊದಲನೇ ಸೆಮಿಸ್ಟರ್, ಕರ್ನಾಟಕ ಸರ್ಕಾರ-೨೦೧೪.

೪೦. ಸಮಾಜ ವಿಜ್ಞಾನ, ೭ನೇ ತರಗತಿ, ಎರಡನೇ ಸೆಮಿಸ್ಟರ್, ಕರ್ನಾಟಕ ಸರ್ಕಾರ-೨೦೧೪.

**ದಿನಪತ್ರಿಕೆಗಳು**

೧. ಕನ್ನಡ ಪ್ರಭ, ದಿನಾಂಕ ೫.೩.೨೦೧೨, ೪.೩.೨೦೧೩.

೨. ಉದಯವಾಣಿ, ದಿನಾಂಕ ೧೦.೨.೨೦೧೨.

೩. ಪ್ರಜಾವಾಣಿ, ದಿನಾಂಕ ೯.೧.೨೦೧೨, ೨೦.೫.೨೦೧೩.

೩. ವಿಜಯಕರ್ನಾಟಕ, ದಿನಾಂಕ ೯.೮.೨೦೧೩.

೫. ವಿಜಯವಾಣಿ, ೯.೮.೨೦೧೩, ೩೧.೭.೨೦೧೩.

೬. ಸಂಯುಕ್ತ ಕರ್ನಾಟಕ, ೧೨.೧೧.೨೦೦೯.

**ಮಾಸಪತ್ರಿಕೆ/ನಿಯತಕಾಲಿಕೆಗಳು**

೧. ಚರಿತ್ರೆ ಅಧ್ಯಯನ

೨. ಪ್ರಬುದ್ಧ ಕರ್ನಾಟಕ

೩. ವಿಶ್ವವಿದ್ಯಾಲಯದ ನಿಯತಕಾಲಿಕೆಗಳು

೪. ಸಂಕ್ರಮಣ

೫. ಹೊಸತು

□□

## ೨. ವಕ್ತೃಗಳ ಮಾಹಿತಿ

೧. ವಿದ್ಯಾರ್ಥಿಗಳ ಮಾಹಿತಿ ವಿವರ

| ಕ್ರ.ಸಂ. | ಹೆಸರು | ವಯಸ್ಸು | ತರಗತಿ | ಶಾಲೆಯ ವಿಳಾಸ |
|---|---|---|---|---|
| ೧. | ವಿಜಯಕುಮಾರ್ .ಆರ್. | ೧೦ | ೫ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ದಾವಣಗೆರೆ |
| ೨. | ರಾಕೇಶ್ .ಕೆ. | ೧೨ | ೬ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ದಾವಣಗೆರೆ |
| ೩. | ಆದರ್ಶ .ವಿ. | ೧೩ | ೭ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ದಾವಣಗೆರೆ |
| ೪. | ದರ್ಶನ .ಜಿ. | ೧೦ | ೫ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಸಾಪುರ |
| ೫. | ಸುಚೇತನ ಕುಮಾರ್ | ೧೧ | ೬ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಸಾಪುರ |
| ೬ | ರಾಜೇಶ್ .ಎಂ.ವಿ. | ೧೨ | ೭ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬಸಾಪುರ |
| ೭ | ಆನಂದ .ಎಂ.ಕೆ. | ೧೧ | ೫ | ಶ್ರೀ ದುರ್ಗಾಂಬಿಕ ಹಿರಿಯ ಪ್ರಾಥಮಿಕ ಶಾಲೆ, ಅಣಜಿ |
| ೮. | ಸಂತೋಷ ಕುಮಾರ್ | ೧೨ | ೬ | ಶ್ರೀ ದುರ್ಗಾಂಬಿಕ ಹಿರಿಯ ಪ್ರಾಥಮಿಕ ಶಾಲೆ, ಅಣಜಿ |
| ೯. | ಕಾರ್ತಿಕ್ ಎಸ್.ಪಿ. | ೧೩ | ೭ | ಶ್ರೀ ದುರ್ಗಾಂಬಿಕ ಹಿರಿಯ ಪ್ರಾಥಮಿಕ ಶಾಲೆ, ಅಣಜಿ |
| ೧೦. | ದಿನೇಶ್ ನಾಯ್ಕ | ೧೩ | ೭ | ಮಾನಸ ಕಾನ್ವೆಂಟ್ ಕಂಚಿಕೆರೆ |
| ೧೧. | ಪೃಥ್ವಿ .ಎಂ.ಸಿ. | ೧೩ | ೭ | ಮಾನಸ ಕಾನ್ವೆಂಟ್ ಕಂಚಿಕೆರೆ |
| ೧೨. | ಕುಮಾರ .ಎನ್. | ೧೨ | ೬ | ಮಾನಸ ಕಾನ್ವೆಂಟ್ ಕಂಚಿಕೆರೆ |
| ೧೩. | ಕೇಶವ .ಸಿ.ಕೆ. | ೧೧ | ೫ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಲೋಕಿಕೆರೆ |

